# ಸಂಸ್ಕೃತಕವಿಚರಿತೆ

## ಪ್ರಥಮ ಸಂಪುಟ

(ಕ್ರಿ. ಪೂ. ಮತ್ತು ಕ್ರಿ. ಶ. ೧ ರಿಂದ ೮ ಶತಮಾನಗಳು)

ಎಮ್. ಎನ್. ಶ್ರೀನಿವಾಸ ಅಯ್ಯಂಗಾರ್

ಪ್ರಥಮ ಮುದ್ರಣ



1928

ಬೆಂಗಳೂರು ಸಿಟಿ

ಬಿ. ಬಿ. ಡಿ. ಪವರ್ ಪ್ರೆಸ್, ಅರಳೀಪೇಟೆ

ಸತ್ಯಶೋಧನಾ ಪುಸ್ತಕ ಭಂಡಾರ

ಬೆಂಗಳೂರು ನಗರ

ಶ್ರೀಃ

# ಪೀಠಿಕೆ



**ದೇಶ—** ನಾವು ವಾಸಮಾಡುತ್ತಿರುವ ಭೂಭಾಗವನ್ನು ಭರತಖಂಡವೆಂದು ಹೇಳುವ ಮೊದಲು ಈ ಹೆಸರು ಹೇಗೆ ಬಂದುದೆಂಬ ವಿಚಾರವನ್ನು ತಿಳಿಯಹೇಳುವುದು ಅಪ್ರಸಕ್ತವಾಗದು. ಭರತನೆಂಬ ಹೆಸರು ಪ್ರಾಚೀನೇತಿಹಾಸಗಳಲ್ಲಿಯೂ ಋಗ್ವೇದದಲ್ಲಿಯೂ ಕಂಡುಬರುವುದು. ಈ ಭೂಭಾಗವನ್ನಾಳಿ ಪ್ರಖ್ಯಾತನಾಮಕನಾದ ಭರತನ ವಂಶಾವಳಿಯೂ ವಿಶ್ವವಿಭಜನೆಯೂ ಹೀಗಿರುವುದು.




ಸ್ವಾಯಂಭುವಮನುವಿನ ಮಗನಾದ ಪ್ರಿಯವ್ರತನಿಗೆ ಬರ್ಹಿಷ್ಮತಿಯಿಂದುತ್ಪನ್ನರಾದ ಹತ್ತುಜನ ಗಂಡುಮಕ್ಕಳಲ್ಲಿ ಮಹಾವೀರ, ಸವನ, ಮತ್ತು ಕವಿಯೆಂಬ ಮೂವರು ಪರಮಹಂಸರಾಗಿ ಹೋದುದರಿಂದ ಉಳಿದ ಏಳುಜನ ಕುವರರಿಗೆ ವಿಶ್ವವನ್ನು ಸಪ್ತಸಮುದ್ರಾವೃತವಾದ ಸಪ್ತ ದ್ವೀಪಗಳನ್ನಾಗಿ ಭಾಗಿಸಿ ಹಿರಿಯವನಾದ ಅಗ್ನೀಧ್ರನಿಗೆ ಜಂಬೂದ್ವೀಪವನ್ನು ಕೊಟ್ಟನು.

ಅಗ್ನೀಧ್ರನು ಬಹುಕಾಲ ರಾಜ್ಯವಾಳಿ ಪೂರ್ವಚಿತ್ತಿಯೆಂಬ ಅಪ್ಸರೆಯಲ್ಲಿ ಒಂಭತ್ತು ಜನ ಗಂಡುಮಕ್ಕಳನ್ನು ಪಡೆದು ಸಂಸಾರವಿರಕ್ತನಾಗಿ ರಾಜ್ಯವನ್ನು ಒಂಭತ್ತು ಭಾಗ ಮಾಡಿಕೊಟ್ಟು ಸತ್ಯಲೋಕಕ್ಕೆ ಹೊರಟು ಹೋದನು. ಕಾಲಕ್ರಮ ದಲ್ಲಿ ಈ ಹುಡುಗರು ಬಲಾಢ್ಯರಾಗಿ ತಮ್ಮ ತಂದೆಯಿಂದ ಹಂಚಿಕೊಡಲ್ಪಟ್ಟ ಜಂಬೂದ್ವೀಪದ ಬೇರೆಬೇರೆ ಭಾಗಗಳನ್ನು ಪಾಲಿಸುತ್ತಾ ಬಂದರು. ಈ ದೇಶ ಭಾಗಗಳೆಲ್ಲವೂ ಕಡೆಗೆ ಅವರವರ ಹೆಸರಿನಿಂದಲೇ ಪ್ರಖ್ಯಾತಗಳಾಗಿ 'ವರ್ಷ'ಗ ಳೆಂದು ಕರೆಯಲ್ಪಟ್ಟವು.

ಜಂಬೂದ್ವೀಪೇಶ್ವರೋ ಯಸ್ತು । ಅಗ್ನೀಧ್ರೋ ಮುನಿಸತ್ತಮ ॥
ತಸ್ಯ ಪುತ್ರಾ ಬಭೂವುಸ್ತೇ । ಪ್ರಜಾಪತಿಸಮಾ ನವ ॥
ನಾಭಿಃ ಕಿಂಪುರುಷಶ್ಚೈವ । ಹರಿವರ್ಷ ಇಲಾವೃತಃ ॥
ರಮ್ಯೋ ಹಿರಣ್ವಾನ್ ಷಷ್ಠಶ್ಚ । ಕುರುರ್ಭದ್ರಾಶ್ವ ಏವ ಚ ॥
ಕೇತುಮಾಲಸ್ತಥೈವಾನ್ಯಃ । ಸಾಧುಜ್ಯೇಷ್ಠೋ ನೃಪೋಽಭವತ್ ॥

ನಾಭಿಯು ಮೇರುವಿನ ಜ್ಯೇಷ್ಠಪುತ್ರಿಯಾದ ಮೇರುವಿನೊಡನೆ ಬಹು ಕಾಲ ರಾಜ್ಯವಾಳಿ ಋಷಭನೆಂಬ ಮಗನನ್ನು ಪಡೆದು ನಾಭಿವರ್ಷವನ್ನು ಇವನಿಗೆ ಕೊಟ್ಟು ಮುಕ್ತನಾದನು. ಋಷಭನು ಜಯಂತಿ ಎಂಬವಳೊಡನೆ ಬಹು ಧರ್ಮದಿಂದ ರಾಜ್ಯಭಾರವನ್ನು ಮಾಡಿ, ಒಂದುನೂರು ಮಕ್ಕಳನ್ನು ಪಡೆದು ಹಿರಿಯನೂ ಗುಣಾಢ್ಯನೂ, ಮಹಾಯೋಗಿಯೂ ಆದ '**ಭರತ**' ನಿಗೆ ರಾಜ್ಯಭಾರವನ್ನು ವಹಿಸಿ ಮುಕ್ತನಾದನು. ಭರತನಾಳ್ವಿಕೆಯ ಅಂದಿ ನಿಂದ ಇದಕ್ಕೆ 'ಭರತವರ್ಷ' ವೆಂದು ಹೆಸರು ಬಂದಿತು. ಹೀಗಾಗಿ ಹಿಮಾಲಯ ಪರ್ವತವನ್ನೊಳಕೊಂಡ ದಕ್ಷಿಣಭಾಗವೆಲ್ಲವೂ ಭರತನಾಡಳಿತಕ್ಕೊಳಪಟ್ಟಿದ್ದ ರಿಂದ ಭರತವರ್ಷವೆನಿಸಿಕೊಂಡಿತು.

ಹಿಮಾಹ್ವಂ ದಕ್ಷಿಣಂ ವರ್ಷಂ । ಭರತಾಯ ದದೌ ಪಿತಾ ॥
ತಸ್ಮಾಚ್ಚ ಭಾರತಂ ವರ್ಷಂ । ತಸ್ಯ ನಾಮ್ನಾ ಮಹಾತ್ಮನಃ ॥

ಭರತವರ್ಷ ಎಂದರೆ 'ಭಾರತಂ ಭರತ ಸಂಬಂಧಿ ವರ್ಷಮಿತಿ' ಎಂದು, ಭರತವರ್ಷದ ನವಭಾಗಗಳಲ್ಲಿ ಭರತನ ಪಾಲಿಗೆ ಬಂದ ಭಾಗಕ್ಕೆ 'ಭರತಖಂಡ' ವೆಂದೂ ಇದಕ್ಕೆ 'ಕುಮಾರಿಕಾಖಂಡ' ವೆಂಬ ಅಪರನಾಮವಿತ್ತೆಂದೂ ಸ್ಕಾಂದ ಪುರಾಣದಲ್ಲಿ ಹೇಳಲ್ಪಟ್ಟಿದೆ. 'ಭರತಖಂಡಂ ಭಾರತ ವರ್ಷಾಂತರ್ಗತ ಕುಮಾರಿ ಕಾಖಂಡಂ'.

ಕುಮಾರಿಕೇತಿ ವಿಖ್ಯಾತಾ | ಯಸ್ಯಾ ನಾಮ್ನಾ ಪ್ರಕಥ್ಯತೇ |
ಇದಂ ಕುಮಾರಿಕಾಖಂಡಂ | ಯಥಾ ಸಮ್ಯಕ್ ಪ್ರಕಲ್ಪಿತಂ ||
( ಇತಿ ಸ್ಕಾಂದೇ ಕುಮಾರಿಕಾಖಂಡೇ ಭೂಸಂಸ್ಥಿತಿನಾಮಾಧ್ಯಾಯಃ )

ಪ್ರಾಚೀನಭರತಖಂಡವು ಈಗ ನಾವು ಕರೆಯುವ ಹಿಂದೂದೇಶಕ್ಕಿಂತ ದೊಡ್ಡದಾಗಿ ಗಂಗಾಮುಖದಿಂದ ನೈಲ್ * ನದಿಯ ಜನ್ಮಸ್ಥಳದವರೆಗೂ ಇದ್ದಿತು. ನೈಲ್‌ನದಿಗೆ ನೀಲಾ, ಕಾಲಿಮಾ ಮತ್ತು ಕೃಷ್ಣಾನದಿಯೆಂದೂ ಹೆಸರುಗಳುಂಟು. ಈ ನದಿಯು ಪರಮಪವಿತ್ರವೆಂದೂ ಅಮರಸರಸ್ಸಿಗೆ ದಕ್ಷಿಣದಲ್ಲಿರುವ ಸೋಮ(ಚಂದ್ರ)ಗಿರಿಯಲ್ಲಿ ಹುಟ್ಟಿದುದೆಂದೂ ಪುರಾಣಗಳಿಂದ ತಿಳಿದುಬರುತ್ತದೆ. ನೈಲ್‌ನದಿಯ ಜನ್ಮಸ್ಥಳವನ್ನು ಕ್ರಿ. ಶ. ೧೮೬೦ರಲ್ಲಿ ಎರಡನೆಯ ಸಲ ಕಂಡುಹಿಡಿಯಲೆತ್ನಿಸಿದ ಶೋಧಕನೊಬ್ಬನು ಪುರಾಣದ ವರ್ಣನೆಗಳಂತೆ ಭೂಪಟವನ್ನು ತಯಾರಿಸಿ ಅದರಂತೆ ಶೋಧನೆಮಾಡಿ ನೈಲ್‌ನದಿಯ ಜನ್ಮಸ್ಥಳವನ್ನು ಕಂಡುಹಿಡಿದು ಅದನ್ನು 'ವಿಕ್ಟೋರಿಯಾನ್ಯಾಂಸ' ಎಂದು ಕರೆದುದಾಗಿ ತನ್ನ ಪ್ರವಾಸಪತ್ರಗಳಲ್ಲಿ ಉಲ್ಲೇಖಿಸಿರುವನು. ಹಾಗೆ ಕರೆದಾಗ್ಯೂ ಆ ದೇಶೀಯರು ಇದನ್ನು 'ಅಮರಸರೋವರ'ವೆಂದೂ ಅದರ ಸುತ್ತುಮುತ್ತಲಿರುವ ಪರ್ವತ ಸಮುದಾಯವನ್ನು 'ಸೋಮಗಿರಿ' (Mountains of the Moon) ಎಂದೂ ಈಗಲೂ ಕರೆಯುವರು. ಕಮಲಪುಷ್ಪವು ಪವಿತ್ರವೆಂದೂ, ಪುಷ್ಪಶ್ರೇಷ್ಠವೆಂದೂ ಭಾರತೀಯರು ಹೇಳುವಹಾಗೆ ಈಜಿಪ್ಟರೂ ಹೇಳುವರು. 'ಹೃ ಹರಣೆ' ಎಂಬ ಧಾತುವಿನಿಂದಾದ 'ಹರಿ' ಶಬ್ದಕ್ಕೆ 'ಸರ್ವ ಪಾಪಗಳನ್ನು ಹರಣಮಾಡುವುದು' ಎಂದು ವ್ಯಾಖ್ಯಾನ ಮಾಡುವಂತೆ ಈಜಿಪ್ಟರು 'ಹೋರಸ' (Horus) ಎಂಬ ಪದಕ್ಕೆ ಹಾಗೆಯೇ ವ್ಯಾಖಾನವನ್ನು ಮಾಡುವರು. ಹೀಗೆ ಉಭಯ ದೇಶಗಳ ಧಾರ್ಮಿಕಗ್ರಂಥಗಳ ಪರಿಶೀಲನದಿಂದ ಈಗಣ ಹಿಂದೂ ಮತ್ತು ಈಜಿಪ್ಟ ದೇಶಗಳು ಆಗ ಒಂದೇ ಆಗಿ 'ಭರತಖಂಡದ ಭಾಗವಾಗಿದ್ದಿರ

---

* ಇದು ಆಫ್ರಿಕಾದಲ್ಲಿರುವುದು. ಇದು ವಿಕ್ಟೋರಿಯಾನ್ಯಾಂಸ ಸರೋವರದ ದಕ್ಷಿಣದಲ್ಲಿ ಹುಟ್ಟಿ ಆ ಸರೋವರವನ್ನೇ ಹೊಕ್ಕು ಉತ್ತರಕ್ಕೆ ಹರಿಯುವುದು. ಇದು 'ಬಿಳಿಯ ನೈಲ್' ಎಂದೂ ಅಬಿಸೀನಿಯಾ ಪ್ರಸ್ಥಭೂಮಿಯಿಂದ ವೇಗವಾಗಿ ಹರಿದು ಬರುತ್ತ ನೀಲಬಣ್ಣದ ಮಣ್ಣನ್ನು ತರುವುದರಿಂದ ನೀಲನೈಲ್ ಎಂದೂ ಹೆಸರುಗೊಂಡಿರುವುದಾಗಿ ದೇಶೀಯ ಭೂವಿವರಣೆಯು ಹೇಳುವುದು.

ಬೇಕೆಂದು ಬೋಧೆಯಾಗುತ್ತದೆ. * ಇದಲ್ಲದೆ ಆರ್ಯರು ಕಾಲಕ್ರಮದಲ್ಲಿ ದೊಡ್ಡದಾದ ಆಸಿಯಾ (Asia) ಖಂಡದ ಬಹುತರ ನಾಡುಗಳನ್ನು ನಾಗರಿಕತೆಯು ಬೀಡನ್ನಾಗಿ ಮಾಡಿ ವಾಯುವ್ಯ ಭಾಗದಿಂದ ಈಗಣ ಯುರೋಪ್ ಖಂಡವನ್ನು ಹೊಕ್ಕು ಭರತಖಂಡದ ಕಲಾಕೌಶಲ ನಾಗರಿಕತೆಯನ್ನು ವಿಸ್ತರಿಸಿ ಸನಾಮುಕರಾಗಿ ಬಾಳಿದುದಾಗಿಯೂ ಹೇಳಲ್ಪಟ್ಟಿದೆ. †

ಈ ಕಾರಣಗಳಿಂದ ಆಧುನಿಕ ಭೂಗೋಳಶಾಸ್ತ್ರವಿಶಾರದರಿಂದ ಹೇಳಲ್ಪಡುವ ಪಾಶ್ಚಾತ್ಯ ಇತರ ಖಂಡಗಳು ಭರತಖಂಡ ಅಥವಾ ಭರತವರ್ಷದ ಭಾಗಗಳಾಗಿರಬೇಕೆಂದೂ ಅಲ್ಲಿನ ಮೂಲ ನಿವಾಸಿಗಳೆಲ್ಲರೂ ಆರ್ಯಸಂತಾನರಾಗಿರಬೇಕೆಂದೂ ಸ್ಪಷ್ಟವಾಗುವುದು.

ಸಂಸ್ಕೃತದಲ್ಲಿನ 'ಸ' ಕಾರವು ಕೆಲವು ಸಂದರ್ಭಗಳಲ್ಲಿ 'ಹ' ಕಾರವಾಗುತ್ತದೆ. ಉದಾಹರಣೆಗಾಗಿ 'ಸಪ್ತ' ಎಂಬುದಕ್ಕೆ 'ಹಪ್ತಾ'‡ ಎಂದೂ 'ಸಪ್ತಾರ್ಷಿ' ಎಂಬುದು 'ಹೆಪ್ಟಾರ್ಕಿ' § ಎಂದೂ ಆಗುವುದು. ಸಂಸ್ಕೃತ ಭಾಷೆಯ 'ಕೇಸರೀ' ಎಂಬ ಶಬ್ದವು ಪ್ರಾಚೀನ ಹಿಂದೀಭಾಷೆ (Old Hindi) ಯಲ್ಲಿ 'ಕೇಹರೀ' ಎಂದೂ 'ಸರಸ್ವತೀ' ಎಂಬುದು ಪರ್ಷಿಯನ್ ಭಾಷೆಯಲ್ಲಿ 'ಹರವತೀ' ಎಂದೂ 'ಅಸುರ' ಎಂಬುದು 'ಅಹುರ' ಎಂದೂ ಹೇಳಲ್ಪಡುವುದರಿಂದಲೂ ಪ್ರಾಚೀನ ಪರ್ಷಿಯನರ ಗ್ರಂಥವಾದ ಅವೆಸ್ಟ (Avesta) ಎಂಬುದರಲ್ಲಿ 'ಹಿಂದೂ' ಎಂಬ ಶಬ್ದಪ್ರಯೋಗವಿರುವುದರಿಂದಲೂ ಹಿಂದುಶಬ್ದವು ಬಹು ಪ್ರಾಚೀನ ಕಾಲದಿಂದಲೂ ಪ್ರಾಚುರ್ಯದಲ್ಲಿದ್ದಿರಬೇಕಾಗಿ ಬೋಧೆಯಾಗುವುದಲ್ಲದೆ ಈ ಹಿಂದೂ ಶಬ್ದವೇ ಕಾಲಕ್ರಮದಲ್ಲಿ ಮಾರ್ಪಟ್ಟು ಇಂಡಿಯಾ ಎಂಬುದಾಗಿ ಪಾಶ್ಚಾತ್ಯರಿಂದ ಸಂಬೋಧಿಸಲ್ಪಟ್ಟುದಾಗಿರುವುದು.

---

* Hinduism the World ideal by Harendra Nath Mitra P. 4—5.

† Rig-Vedic India by Abinas Chandra Das, Vol. I P. 305–337.

‡ ಹಪ್ತೆ:—ಮುಸಲ್ಮಾನರ ಭಾಷೆಯಲ್ಲಿ 'ವಾರ' ವೆಂದು ಹೇಳಲ್ಪಡುವುದು.

§ ಹೆಪ್ಟಾರ್ಕಿ (Heptarchy) ಏಳುಜನ ಅಥವಾ ಏಳುಜನರಿಂದಾಳಲ್ಪಡುವ ದೇಶ. ಮುಖ್ಯವಾಗಿ ಈಗಣ ಇಂಗ್ಲೆಂಡು ಆಂಗ್ಲೋಸ್ಯಾಕ್ಸನ್ (Anglo-Saxon) ದೇಶಗಳೆಂದು ೭ ಭಾಗಗಳಾಗಿದ್ದಾಗ ಈ ಹೆಸರು ಬಂದಿತು.

**ಭಾಷೆ:—** ವೇದವು ಅನಾದಿಯೆಂದು ಪ್ರತಿಯೊಬ್ಬ ಭಾರತೀಯನ ನಂಬುಗೆಯಿರುವುದು. ವೇದವು ಗೀರ್ವಾಣಭಾಷೆಯಲ್ಲಿ ಬರೆಯಲ್ಪಟ್ಟಿರುವುದು. ಸಂಹಿತೆ, ಬ್ರಾಹ್ಮಣ, ಉಪನಿಷತ್ತು, ಶ್ರೌತಧರ್ಮ, ಗೃಹ್ಯಸೂತ್ರಗಳೂ, ಪುರಾಣಪ್ರವಚನಾದಿಗಳೆಲ್ಲವೂ ಗೀರ್ವಾಣಭಾಷೆಯಲ್ಲಿ ಬರೆಯಲ್ಪಟ್ಟಿರುವವು. ಪ್ರಕೃತ ನಿಖಿಲಭಾಷಾವರ್ಣಿನಿಸೀಮೂರ್ಧನ್ಯವಾದುದು ಯಾವ ಭಾಷೆಯೋ, ಯಾವ ಭಾಷೆಯ ಬೆಂಬಲದಿಂದ ಇತರ ಭಾಷೆಗಳು ಜೀವನ ಧಾರಣಮಾಡಿಕೊಂಡಿರುವುವೋ, ಪ್ರತ್ಯಕ್ಷರ, ಪದ, ವಾಕ್ಯಗಳಿಗೆ ವಿಧವಿಧವಾದ ಅರ್ಥಗಳು ಯಾವ ಭಾಷೆಯಲ್ಲಿ ದೊರಕುವುವೋ, ನೈಘಂಟುಕರಾದ ಹೇಮಚಂದ್ರ, ಹಲಾಯುಧ, ಮೇದಿನಿ, ಅಮರ, ಯಾದವನೇ ಮೊದಲಾದವರು ಅಕ್ಷರ, ಶಬ್ದ, ವಾಕ್ಯಾರ್ಥಗಳನ್ನು ಯಾವ ಭಾಷೆಯಲ್ಲಿ ಬರೆದು ಕೀರ್ತಿಶೇಷರಾಗಿರುವರೋ ಅಂತಹ ಭಾಷೆಯು ಗೀರ್ವಾಣಭಾಷೆಯೆಂದೂ ಅದೇ ಭರತಖಂಡದ ಪ್ರಾಚೀನ ಭಾಷೆಯೆಂದೂ ವ್ಯಕ್ತವಾಗುವುದು.

ಮ್ಲೇಚ್ಛೇತರಭಾಷೆಗಳು ಸಂಸ್ಕೃತಭಾಷಾಜನ್ಯಗಳೆಂಬುದು ಈ ಕೆಳಗಣ ಶ್ಲೋಕಗಳಿಂದ ವ್ಯಕ್ತವಾಗುತ್ತದೆ.

**ಸಂಸ್ಕೃತಸ್ಯೈವ ವಾಣೀ ತು । ಭಾರತಂ ವರ್ಷಮುಹ್ಯತಾಂ ॥**
**ಅನ್ಯಖಂಡೇ ಗತಾ ಸೈವ । ಮ್ಲೇಚ್ಛಾಹ್ಯಾನಂದಿನೋಽಭವನ್ ॥**
**ಪಿತೃಪೈತರ ಭ್ರಾತಾ ಚ । ಬಾದರಃಪತಿರೇವಚ ॥**
**ಸೇತಿ ಸಾ ಯಾವನೀ ಭಾಷಾ । ಹ್ಯಶ್ವಶ್ಚಾಸ್ಯಸ್ತಥಾ ಪುನಃ ॥**
**ಜಾನುಸ್ಥಾನೇ ಜೈನಶಬ್ದಃ । ಸಪ್ತಸಿಂಧುಸ್ತಥೈವ ಚ ॥**
**ಹಪ್ತಹಿಂದುರ್ಯಾವನೀ ಚ । ಪುನರ್ಜ್ಞೇಯಾ ಗುರುಂಡಿಕಾ ॥**

**( ಭವಿಷ್ಯಪುರಾಣ ಪ್ರತಿಸರ್ಗಪರ್ವ ೫. )**

**ಭಾರತೀಯ ಪ್ರಾಚೀನ ವಾಙ್ಮಯ ಸಾಹಿತ್ಯವಿವರಣ :—** ಪ್ರಾಚೀನ ಭರತಖಂಡವು ಸಕಲವಿಧವಾದ ಕಲೆಗಳಿಗೆ ಉಚ್ಚಸ್ಥಾನವನ್ನು ಪಡೆದಿತ್ತೆಂದು ಹೇಳಬೇಕಾದುದಿಲ್ಲ. ಈ ವಿಚಾರದಲ್ಲಿ ಪ್ರಕೃತ ಮೈಸೂರು ದೇಶದ ಸಕಲ ವಿದ್ಯಾನಿಲಯದ ವೈಸ್‌ಛಾನ್ಸಲರ್ ಆಗಿರುವ ಡಾ. ಸೀಲ್‌ರವರ ಅಭಿಪ್ರಾಯವು ಹೀಗಿರುವುದು.

" ಖಗೋಳ ಮತ್ತು ಗಣಿತಶಾಸ್ತ್ರಗಳ ನೈಪುಣ್ಯದಲ್ಲಿ ಜಗದ್ವಿಖ್ಯಾತರಾದ ಟೈಕೋ, ಬರ್ಹೆ, ಕಾರ್ಡನ್ ಮತ್ತು ಫರಮ್ಯಾಟ್ ಎಂಬವರಿಗಿಂತ ಭಾರತೀಯರು ಅಗ್ರಸ್ಥಾನವನ್ನು ಹೊಂದಿದ್ದರೇಹೊರತು ಕಡಮೆಯಾದವರಾಗಿರಲಿಲ್ಲ.

ಭಾರತೀಯರ ಶರೀರಶಾಸ್ತ್ರವು ಪ್ರಖ್ಯಾತನಾಮಕನಾದ ವೆಸಾಲಿಯುಸ್‌ನ ಶರೀರಶಾಸ್ತ್ರದೊಂದಿಗೆ ಸರಿಗಟ್ಟುತ್ತಿತ್ತು. ನ್ಯಾಯಶಾಸ್ತ್ರವು ರಾಮುಸ್ ಎಂಬವನ ಶಾಸ್ತ್ರವನ್ನು ಮೀರಿಸಿ ಬೇಕನ್ನನ ನ್ಯಾಯಶಾಸ್ತ್ರಕ್ಕೆ ಸಮವಾಗಿದ್ದಿತು.

ಭೌತಿಕ ಮತ್ತು ರಸಾಯನಶಾಸ್ತ್ರತತ್ವಕೋವಿದರೆಂದು ಹೆಸರುಗೊಂಡಿರುವ ವ್ಯಾನ್‌ಹೆಲ್ಮಂಟ್ ಅಥವಾ ಸ್ಟಹಲ್ ಎಂಬವರಿಗಿಂತಲೂ ತತ್ಪೂರ್ವವೇ ಭಾರತೀಯರು ಅಗ್ನ್ಯುತ್ಪತ್ತಿ, ಉಷ್ಣ, ಮತ್ತು ರಸಾಯನ ಸಂಬಂಧವಾದ ವಿಷಯಗಳನ್ನು ತೊಡಕಿಲ್ಲದೆ ಸೂಕ್ಷ್ಮವಾಗಿ ಗ್ರಹಿಸಲು ಸಾಧ್ಯವಾಗುವಂತೆ ಬರೆದಿಟ್ಟಿದ್ದರು.

ಮಹಾವೈಯ್ಯಾಕರಣರಾದ ಬಾಪ್, ರಾಸ್ಕ್ ಮತ್ತು ಗ್ರಿಂವರ ವ್ಯಾಕರಣ ಗ್ರಂಥಗಳಿಗಿಂತಲೂ ಸಂಸ್ಕೃತ ಅಥವಾ ಪ್ರಾಕೃತದಲ್ಲಿ ಭಾರತೀಯರಿಂದ ವ್ಯಾಕರಣವು ಎಷ್ಟೋ ಹಿಂದೆ ವಿಶದವಾಗಿ ಬರೆಯಲ್ಪಟ್ಟು ವಿಶ್ವಮನ್ನಣೆಯನ್ನು ಹೊಂದಿದ್ದಿತು." *

ವೇದ ಸಾಹಿತ್ಯ **(Vedic Literature)**—ಸಂಹಿತೆ

ವೇದಗಳಲ್ಲದೆ
- ೧. ಬ್ರಾಹ್ಮಣ
- ೨. ಉಪನಿಷತ್ತು
- ೩. ಸೂತ್ರ

ಸಂಸ್ಕೃತ ಸಾಹಿತ್ಯ. **(Samskrit Literature)**

i. Epic poetry
- ೧. ಇತಿಹಾಸ.
- ೨. ಪುರಾಣ.
- ೩. ಕಾವ್ಯ.

* Dr. P. C. Ray's History of Hindu Chemistry. Introduction. p. 7

ii. ದೃಶ್ಯಕಾವ್ಯ (Dramatic Poetry).

iii. ಗೀತಕಾವ್ಯ (Lyric).

iv. ಧರ್ಮಮೂಲವಾದ ನೀತಿಕಾವ್ಯ (Ethico Didactic Poetry).

v. ಚರಿತ್ರೆ ಮತ್ತು ಭೂಗೋಳ (History and Geography).

ವಿಜ್ಞಾನ ಮತ್ತು ಕಲೆ (Science and Art).

i. ಭಾಷಾಶಾಸ್ತ್ರ (Science of Language).

1. ವ್ಯಾಕರಣ (Grammar).
2. ನಿಘಂಟು (Lexicography).
3. ಛಂದಸ್ಸು, ಕವಿತೆ, ಮತ್ತು ಅಲಂಕಾರ (Metre, Poetics and Rhetoric).

ii. ವೇದಾಂತ ಮತ್ತು ತರ್ಕ (Philosophy including Logic).

iii. ಖಗೋಳಶಾಸ್ತ್ರ (Astronomy) ರೇಖಾಗಣಿತ (Geometry) ಗಣಿತ (Arithmetic) ಬೀಜಗಣಿತ (Algebra) ತ್ರಿಕೋಣಮಿತಿ (Trigonometry).

iv. ವೈದ್ಯಶಾಸ್ತ್ರ. (Medical science)

v. ದಂಡನೀತಿ (Art of war) ಸಂಗೀತ (Music). ರಚನೆ ಮತ್ತು ಪಾರಿಭಾಷಿಕ ಕಲೆ (Formative and Technical Arts).

ಧರ್ಮಶಾಸ್ತ್ರ (Works of Law) ಆಚಾರ, ಮತ್ತು ಪೂಜಾಕ್ರಮಶಾಸ್ತ್ರ (Custom and Religious Worship)

**ವೇದಗಳು ನಾಲ್ಕು** :—ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ.

**ಋಗ್ವೇದ**:—ಇದರಲ್ಲಿ ದೇವತಾಸ್ತುತಿಗಳೂ ಸ್ತುತಿಪರ ಮಂತ್ರಗಳೂ, ಋಷಿಜನರ ಕಥೆಗಳೂ ಇರುವುವು.

**ಯಜುರ್ವೇದ**:—ಇದರಲ್ಲಿ ಯಾಗಾದಿ ಕರ್ಮಗಳ ನಿರೂಪಣವಿರುವುದು.

**ಸಾಮವೇದ**:—ಇದರಲ್ಲಿ ಗಾನಯುಕ್ತ ಈಶಸ್ತುತಿಯಿರುವುದು.

**ಅಥರ್ವಣವೇದ**:—ಇದರಲ್ಲಿ ಮಾಂತ್ರಿಕ, ಇಂದ್ರಜಾಲವೇ ಮೊದಲಾದ ವಿಚಾರಗಳಿರುವುವು. ಋಕ್ಸಾಮಾಥರ್ವಣ ವೇದಗಳು ಶ್ಲೋಕ ಬದ್ಧವಾಗಿಯೂ, ಯಜುರ್ವೇದವು ವಾಕ್ಯರೂಪವಾಗಿಯೂ ಇರುವುದು. ವೇದಗಳಲ್ಲಿ ಮಂತ್ರ, (ಸಂಹಿತೆ) ಬ್ರಾಹ್ಮಣ, ಉಪನಿಷತ್ತು ಎಂದು ಮೂರು ಭಾಗಗಳಿರುವುವು.

**ಮಂತ್ರ (ಸಂಹಿತೆ)** :—ಯಾವ ಕಾಲದಲ್ಲಿಯೂ ಸ್ವರ, ವರ್ಣ ಮೊದಲಾದವು ಬೇರೆಯಾಗದೆ ಸರ್ವದೇಶ ಸರ್ವ ಶಾಖೆಗಳಲ್ಲಿಯೂ ಒಂದೇ ರೀತಿಯಾಗಿರುವುವೇ ಮಂತ್ರಗಳು. ಇವುಗಳ ಜೋಡಣೆಗೆ ಸಂಹಿತೆಯೆನ್ನುವರು.

**ಬ್ರಾಹ್ಮಣ** :—ಸಂಹಿತೆಗಳ ಟೀಕಾರೂಪವೇ ಬ್ರಾಹ್ಮಣಗಳು.

**ಉಪನಿಷತ್ತು**:—ಇವುಗಳಿಗೆ ಆರಣ್ಯಕಗಳೆಂದೂ ಹೆಸರು. ಬ್ರಹ್ಮವೇ ಸತ್ಯ, ಜಗನ್ಮಿಥ್ಯಾ ಎಂಬುದೇ ಉಪನಿಷತ್ತಿನ ತಾತ್ಪರ್ಯವೆಂದು ತತ್ವಜ್ಞರ ಮತವಿರುವುದು.

**ಸೂತ್ರಗಳು** :—ಈ ಮೇಲ್ಕಂಡವುಗಳನ್ನು ಜ್ಞಾಪಕದಲ್ಲಿಡಲು ಅನುಕೂಲಿಸುವಂತೆ ಬಹ್ವರ್ಥಗಳಿಂದ ಕೂಡಿದ ಸಣ್ಣಸಣ್ಣ ಸೂತ್ರಗಳು ಹುಟ್ಟಿದವು.

**ಇತಿಹಾಸ** :—ರಾಮಾಯಣ ಮತ್ತು ಭಾರತ ಗ್ರಂಥಗಳು.

**ಪುರಾಣ**:—ಸೃಷ್ಟಿಸ್ಥಿತಿಲಯಗಳ ವಿಚಾರ ಮತ್ತು ವೇದದಲ್ಲಿ ಪ್ರಸಿದ್ಧರಾದ ಮನು, ಹರಿಶ್ಚಂದ್ರ ಮೊದಲಾದ ಮಹಾತ್ಮರ ಚರಿತೆಗಳಿಂದ

ಕೂಡಿರುವುವು. ಇವುಗಳಲ್ಲಿ ಕೆಲವು ಪ್ರಾಚೀನವಾಗಿರುವುವು, ಕೆಲವು ಅರ್ವಾಚೀನವಾಗಿರುವುವು, ಕೆಲವು ಈಗ ಪ್ರಚಾರದಲ್ಲೇ ಇಲ್ಲ.

**ಕಾವ್ಯ**:— 'ವಾಕ್ಯಂ ರಸಾತ್ಮಕಂ ಕಾವ್ಯಂ' ರಸಾತ್ಮಕವಾದ ವಾಕ್ಯಗಳ ಅಧಿಷ್ಠಾನಸಮುದಾಯವೇ ಕಾವ್ಯವೆಂದು ಹೇಳಲ್ಪಡುವುದು.

**ಶಿಕ್ಷಾ**:—(Phonetics) ಅಕಾರಾದೀನಾಂ ವರ್ಣಾನಾಂ ಸ್ಥಾನಪ್ರಯತ್ನ ಬೋಧಿಕಯಾ ಅನಯಾಶಿಕ್ಷ್ಯತೇ ವರ್ಣಾದಿರಿತಿ ಶಿಕ್ಷಾ–ಶಿಕ್ಷಾ ವಿದ್ಯೋಪಾದಾನೇ. ಅಕಾರಾದಿ ವರ್ಣಗಳ ಆಯಾಯ ಸ್ಥಾನವಿಧಾನ ರೀತಿಗಳನ್ನು ಬೋಧಿಸುವುದು. ವೇದೋಚ್ಚಾರ ಸ್ವರಗಳ ರೀತಿಯು ಇದರಲ್ಲಿ ವರ್ಣಿತವಾಗಿರುವುದು.

**ವ್ಯಾಕರಣ** (Grammar) ವಿಶೇಷೇಣ ಆಕ್ರಿಯಂತೇ ವ್ಯುತ್ಪಾದ್ಯಂತೇ ಶಬ್ದಾ ಅನೇನೇತಿ ವ್ಯಾಕರಣಂ. ಶಬ್ದಗಳ ವ್ಯುತ್ಪತ್ತಿಯನ್ನು ಹೇಳುವುದು.

**ಛಂದಸ್ಸು** (Metre):— ಛಂದಸಾಂ ಪದ್ಯಾನಾಂ ಶಾಸ್ತ್ರಚ್ಛಂದಃ. ಈ ಶಾಸ್ತ್ರದಲ್ಲಿ ಗಾಯಿತ್ರಿಯೇ ಮೊದಲಾದ ಛಂದೋಲಕ್ಷಣಗಳೂ ಮ. ಯ. ರ. ಸ. ತ. ಜ. ಭ. ನ. ಗಣಗಳೂ ಗುರು ಲಘು ವರ್ಣಗಳೂ ವಿವರಿಸಲ್ಪಟ್ಟಿರುವುವು. ಛಂದಶ್ಶಾಸ್ತ್ರದ ಒಂದು ಗ್ರಂಥವನ್ನು ಮೊದಲು ಬರೆದವನು ಪಿಂಗಳನು.

**ನಿರುಕ್ತ** (Etymology):—ವರ್ಣಾಗಮೋ ವರ್ಣವಿಪರ್ಯಯಶ್ಚೇತ್ಯಾದಿ ನಿಶ್ಚಯೇನೋಕ್ತಂ ನಿರುಕ್ತಂ. ವೈದಿಕ ಪದಾರ್ಥಗಳನ್ನು ನಿರೂಪಿಸುವಶಾಸ್ತ್ರ. ಇದನ್ನು ೧೭ ಜನರು ಬರೆದಿರುವರು.

**ಜ್ಯೋತಿಷ** (Astrology):— ಗ್ರಹನಕ್ಷತ್ರಾಣಾಮುದಯಾಸ್ತಮಯಾದಿ ಪ್ರತಿಪಾದಕಂ ಜ್ಯೋತಿಷಂ. ಗ್ರಹ ಮತ್ತು ನಕ್ಷತ್ರಗಳ ಉದಯಾಸ್ತಮಯಗಳನ್ನು ಪ್ರತಿಪಾದಿಸುವುದೇ ಜ್ಯೋತಿಷ. ಯಜ್ಞ ಪ್ರಾರಂಭದ ಸಲುವಾಗಿ ಮಂಗಳದಿವಸವನ್ನು ಹುಡುಕುವುದೇ ಈ ಶಾಸ್ತ್ರದ ಪ್ರಯೋಜನ. ಇದನ್ನು ಗರ್ಗಾಚಾರ್ಯರು ರಚಿಸಿದರು. ಮೂಲ ಜ್ಯೋತಿಷ ಗ್ರಂಥವು ೨೭ ಶ್ಲೋಕಗಳಲ್ಲಿ ಬರೆಯಲ್ಪಟ್ಟಿರುವುದಾಗಿ ತಿಳಿಯಬರುತ್ತದೆ. ಪ್ರಾಚೀನ ಜ್ಯೋತಿಷಕಾರನಾದ ಆರ್ಯಭಟ್ಟನು ಬರೆದಿರುವ ಸೂರ್ಯ ಸಿದ್ಧಾಂತಕ್ಕೆ ಮಹಾ ಜ್ಯೋತಿಷಶಾಸ್ತ್ರಪ್ರವರ್ತಕನಾದ ಸೂರ್ಯದೇವನು ಟೀಕೆಯನ್ನು ಬರೆದಿರುವನು.

**ಕಲ್ಪ** (Religious Practices) :—ಕಲ್ಪ್ಯತೇ ಪ್ರಭವತಿ ಯಾಗಾದಿ ಕ್ರಿಯಾ ಯಾಮಿತಿ ಕಲ್ಪಃ. ವೇದದಲ್ಲಿ ಹೇಳಿರುವ ಕರ್ಮಗಳನ್ನು ವಿಸ್ತಾರವಾಗಿಯೂ ಕ್ರಮವಾಗಿಯೂ ಕಲ್ಪಿಸಿ ಹೇಳುವ ಶಾಸ್ತ್ರ.

**ಧರ್ಮಶಾಸ್ತ್ರಗಳು** :— ಇವುಗಳು ಗೃಹಸ್ಥಿತಿ, ನಿತ್ಯಾಚಾರ, ಖಾದ್ಯಪೇಯಾದಿ ನಿಯಮ, ಮನಸ್ಸಂಯಮನ, ಲೋಕಶಿಕ್ಷಣ, ಸದಾಚಾರಸಂಪತ್ತಿ ಮೊದಲಾದುವುಗಳನ್ನು ವಿವರಿಸುವುವು. ಇಂತಹವುಗಳನ್ನು ಬರೆದಿರುವುದರಲ್ಲಿ ೨೦ ಜನರು ಮುಖ್ಯರು. ಇವರಲ್ಲಿ ಮನುವು ಅತ್ಯಂತ ಪ್ರಾಚೀನನು.

**ಗಣಿತ** ( Arithmetic ):— ಇದು ಪೂರ್ವದಲ್ಲಿ ದಶಮಾಂಶವರ್ತನದ (Decimal notation)ಸಹಾಯವಿಲ್ಲದೆ ಗಣಿತಭಾಗವು ಬಹು ಕಷ್ಟಸಾಧ್ಯವಾಗಿದ್ದಿತು. ಇದನ್ನು ಮೊದಲು ಕಂಡು ಹಿಡಿದವರು ಹಿಂದುಗಳು. ಇವರಿಂದ ಅರಬೀಯರು ಕಲಿತು ಅನಂತರ ಯೂರೋಪಿಯನರಿಗೆ ತಿಳಿಸಿದರು. *

**ಬೀಜಗಣಿತ** (Algebra):— ಹಿಂದುಗಳು ಇದರಲ್ಲಿ ಅಸದೃಶ ಪಂಡಿತರಾಗಿದ್ದರು. ಕ್ರಿ. ಶ. ೪೭೬ ರಲ್ಲಿದ್ದ ಆರ್ಯಭಟ್ಟನು ಬೀಜಗಣಿತವನ್ನು ಮೊದಲು ಬರೆದನು. ಕ್ರಿ. ಶ. ೧೧೧೪ ರಲ್ಲಿ ಭಾಸ್ಕರಾಚಾರ್ಯನು ಬೇರೊಂದು ಗ್ರಂಥವನ್ನು ಬರೆದನು. ಯೂರೋಪಿನಲ್ಲಿ ಸುಮಾರು ಕ್ರಿ. ಶ. ೧೭—೧೮ ನೆಯ ಶತಮಾನಗಳ ವರೆಗೂ ತಿಳಿಯದೆ ಇದ್ದ ಬೀಜಗಣಿತದ ಅನೇಕ ಭಾಗಗಳು ಇದರಲ್ಲಿರುವುವು. ಜ್ಯೋತಿಷಶಾಸ್ತ್ರಕ್ಕೆ ಬೀಜಗಣಿತದ ಸಹಾಯವನ್ನು ಹೊಂದಿಸಿಕೊಳ್ಳಬಹುದೆಂಬುದನ್ನು ಕಂಡುಹಿಡಿದವರೇ ಹಿಂದುಗಳು.

**ರೇಖಾಗಣಿತ** (Geometry) :— ಇದು ಹಿಂದುಗಳಿಂದ ಮೊದಲು ಕಟ್ಟೋಣಗಳ ರಚನೆಗಾಗಿ ಬರೆಯಲ್ಪಟ್ಟಿತು. ಯಾವಾಗ ಬೀಜಗಣಿತದ ಸಹಾಯದಿಂದ ರೇಖಾಗಣಿತದ ಅನೇಕ ಹೊಸ ಹೊಸ ಭಾಗಗಳನ್ನು ಕಂಡುಹಿಡಿಯಬಹುದಾಗಿ ನೇರ್ಪಟ್ಟಿತೋ ಅಂದಿನಿಂದ ರೇಖಾಗಣಿತದ ಹೆಚ್ಚು ಪ್ರಾಶಸ್ತ್ಯವು ಭಾರತಭೂಮಿಯಲ್ಲಿ ಕಡಿಮೆಯಾಗಿ ಯೂರೋಪಿನಲ್ಲಿ ಅಭಿವೃದ್ಧಿಯನ್ನು ಹೊಂದುತ್ತ ಬಂದಿತು.

**ತ್ರಿಕೋಣಮಿತಿ** (Trigonometry) ಇದನ್ನು ಮೊದಲು ಕಂಡುಹಿಡಿದವರು ಹಿಂದುಗಳು. ಇದರ ವಿಚಾರವಾಗಿ ಹೆಚ್ಚು ವಿಶದಪಡಿಸಿ ಹೇಳಿದವನು ಭಾಸ್ಕರಾಚಾರ್ಯನು.

---

* Macdonell's History of Sanskrit Literature and R. C. Dutt's Civilization in Ancient India.

**ಖಗೋಳಶಾಸ್ತ್ರ** ( Astronomy ) :— ಇದು ವೇದಕಾಲದಿಂದಲೂ ಇದ್ದಿತು. ಇದರಲ್ಲಿ ಮೊದಲು ಗ್ರಂಥವನ್ನು ಬರೆದವನು ಆರ್ಯಭಟ್ಟನು. ಇವನು ಗೋಳಪಾದವೆಂಬ ಮುಖ್ಯ ಗ್ರಂಥವನ್ನು ಬರೆದಿರುವನು. ಆರ್ಯಭಟ್ಟೀಯ, ದಶಗೀತಿಕಾ, ಆರ್ಯಾಷ್ಟವೆಂಬ ಗ್ರಂಥಗಳೂ ಇವನಿಂದ ಬರೆಯಲ್ಪಟ್ಟುವು. ವರಾಹ ಮಿಹಿರನು ಕ್ರಿ. ಶ. ೫೦೫ ರಲ್ಲಿ ಬೃಹಜ್ಜಾತಕ, ಲಘುಜಾತಕ, ಬೃಹತ್ಸಂಹಿತೆ ಇವುಗಳನ್ನು ಬರೆದನು. ಬ್ರಹ್ಮಗುಪ್ತನು ಗಣಿತಕುಟ್ಟುಕವೆಂಬ (ಕುಟ್ಟುಕ = ಬೀಜಗಣಿತ ) ಬ್ರಹ್ಮಸಿದ್ಧಾಂತವನ್ನು ಬರೆದನು. ಭಾಸ್ಕರಾಚಾರ್ಯನು ಬೀಜಗಣಿತ, ಲೀಲಾವತಿ, ಸಿದ್ಧಾಂತಶಿರೋಮಣಿ ಇವುಗಳನ್ನು ಬರೆದನು. ಕ್ರಿ. ಶ. ೮–೯ ನೆಯ ಶತಮಾನಗಳಲ್ಲಿ ಅರಬ್ಬಿಯರು ಹಿಂದುಗಳ ಶಿಷ್ಯವೃತ್ತಿಯಲ್ಲಿ ಸೂರ್ಯಸಿದ್ಧಾಂತವನ್ನು ತಮ್ಮ ಭಾಷೆಗೆ ಪರಿವರ್ತನಮಾಡಿದರು.

**ವೈದ್ಯಶಾಸ್ತ್ರ** :— ದೇವವೈದ್ಯರಾದ ಅಶ್ವಿನೀದೇವತೆಗಳು ಸ್ತುತಿಸಲ್ಪಟ್ಟವರಾಗಿ ಕುರುಡನಿಗೆ ಕಣ್ಣನ್ನೂ ಕುಂಟನಿಗೆ ಕಾಲನ್ನೂ ಕೊಟ್ಟುದಾಗಿ ಋಗ್ವೇದವು ಹೇಳುತ್ತದೆ. ಇದು ಅಥರ್ವಣವೇದದ ಭಾಗವಾಗಿದ್ದರೂ ಋಗ್ವೇದದಲ್ಲಿ ಹಿಂದೂ ಔಷಧಗಳ ವಿಚಾರವು ಕಂಡುಬರುತ್ತದೆ. ಕೆಲವರು ಅಥರ್ವಣ ವೇದವು ಅರ್ವಾಚೀನವೆಂದೂ ಉಳಿದ ಮೂರುವೇದಗಳೊಡನೆ ಸೇರತಕ್ಕದ್ದಲ್ಲವೆಂದೂ ಹೇಳುವರು. ಆಪಸ್ತಂಬ, ವಿಷ್ಣು, ಯಾಜ್ಞವಲ್ಕ್ಯ ಮತ್ತು ಮನು ಮುಂತಾದವರಾರೂ ಇದನ್ನು ಒಪ್ಪುವುದಿಲ್ಲ. ಆಯುರ್ವೇದವು ಅಥರ್ವಣ ವೇದದ ಉಪಾಂಗವಾಗಿ ಎಣಿಸಲ್ಪಟ್ಟಿದೆ.* ಚರಕನು ಬುದ್ಧನಿಗಿಂತ ಪ್ರಾಚೀನನು. ಚರಕ, ಸುಶ್ರುತ, ವಾಗ್ಭಟ ಇವರು ಪ್ರಸಿದ್ಧ ವೈದ್ಯಶಾಸ್ತ್ರಜ್ಞರು. ಹಾವುಕಡಿದುದನ್ನು ಗುಣಪಡಿಸುವುದರಲ್ಲಿ ಹಿಂದುಗಳು ಅಪ್ರತಿಮರಾಗಿದ್ದರು. ಶಸ್ತ್ರಶಾಸ್ತ್ರದಲ್ಲಿ ಹಿಂದುಗಳು ಹೆಚ್ಚು ಪ್ರಶಸ್ತಿಯನ್ನು ಹೊಂದಿದ್ದರು. ಯೂರೋಪಿಯನರು (Rhinoplasty) ಎಂಬ ಶಸ್ತ್ರಚಿಕಿತ್ಸಾಪಾಠವನ್ನು ಹಿಂದುಗಳಿಂದ ಎರವು ತೆಗೆದುಕೊಂಡಿರುವರು. ಕ್ರಿ. ಶ. ೮ ನೆಯ ಶತಮಾನದಲ್ಲಿ ಚರಕ, ಸುಶ್ರುತರ ಗ್ರಂಥಗಳು ಅರಬೀಭಾಷೆಗೆ ಪರಿವರ್ತಿಸಲ್ಪಟ್ಟವು. ಹೀಗೆ ಪ್ರಾಚೀನ ಭಾರತೀಯವಾಙ್ಮಯವಿಭಜನೆಯನ್ನು ಸೂಚೀಕಟಾಹನ್ಯಾಯದಂತೆ ತೋರಿಸಿರುವುದಾಗಿದೆ. ಭಾರತೀಯರು ಒಂದೊಂದು ವಿಷಯವನ್ನೂ ತೆಗೆದುಕೊಂಡು ನೂರಾರು ಗ್ರಂಥಗಳನ್ನು ಬರೆದಿರುವರು. ಅವುಗಳೆಲ್ಲವನ್ನೂ ಓದಿ ಬರೆದು ತೋರಿಸಲು ಮಾನವಜೀವಿತವು ಸಾಲದು.

* Dr. P. C. Ray's The History of Hindu Chemistry.

**ಭಿನ್ನಭಿನ್ನಕಾಲಗಳಲ್ಲಿನ ಸಂಸ್ಕೃತಭಾಷಾಸ್ಥಿತಿ** :— ಕಾಲನಿಯತಿಯು ಭಿನ್ನಿಸಿದ ಹಾಗೆಲ್ಲಾ ಭಾಷಾಶುದ್ಧತೆಯೂಕೂಡ ಭಿನ್ನವಿಸಿರುವುದಾಗಿ ತೋರುತ್ತದೆ. ಮಹಾತ್ಮನಾದ ಪಾಣಿನಿಯು 'ಅಷ್ಟಾಧ್ಯಾಯಿ' ಎಂಬ ವ್ಯಾಕರಣವನ್ನು ಬರೆದು ಭಾಷೆಯನ್ನು ಸಂಸ್ಕರಿಸಿರುವನು. ಭೋಜರಾಜನು ಬರೆದಿರುವ 'ಸರಸ್ವತೀ ಕಂಠಾಭರಣ' ವೆಂಬ ಅಲಂಕಾರಗ್ರಂಥದಲ್ಲಿ 'ತೇ ಭೂವನ್ನಾಢ್ಯ ರಾಜಸ್ಯ । ರಾಜ್ಯೇ ಪ್ರಾಕೃತ ಭಾಷಿಣಃ ॥ ಕಾಲೇ ಶ್ರೀ ಸಾಹಸಾಂಕಸ್ಯ । ತೇಸ ಸಂಸ್ಕೃತ ಭಾಷಿಣಃ ॥' ಎಂದು ಹೇಳಿರುವುದರಿಂದ ಸಂಸ್ಕೃತ ಭಾಷಾಪ್ರಾಬಲ್ಯವು ಕ್ರಿ. ಶ, ೧೦ ನೆಯ ಶತಮಾನದವರೆಗೆ ಬಹು ಉಚ್ಛ್ರಾಯ ಸ್ಥಿತಿಯಲ್ಲಿದ್ದುದಾಗಿ ತಿಳಿಯಬರುತ್ತದೆ.

ಯೂರೋಪುದೇಶದ ಚರಿತ್ರೆಯನ್ನು ಪ್ರಾಚೀನ (Ancient) ಮಧ್ಯ (Medieval) ಮತ್ತು ಆಧುನಿಕ (Modern) ಎಂದು ಭಾಗಿಸಿರುವಂತೆ ಹಿಂದೂದೇಶದ ಚರಿತ್ರೆಯನ್ನೂ ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು. ವೇದಗಳಕಾಲಮೊದಲು ಕ್ರಿ. ಶ. ೭ ನೆಯ ಶತಮಾನದವರೆಗೆ **ಪ್ರಾಚೀನ**ಕಾಲವೆಂದೂ, ಹರ್ಷವರ್ಧನನ ರಾಜ್ಯಾಳ್ವಿಕೆಯನಂತರ ಎಂದರೆ ಕ್ರಿ. ಶ. ೬೪೭ ರಿಂದ ಆಂಗ್ಲೇಯ ರಾಜ್ಯಾಧಿಕಾರವು ಹಿಂದೂದೇಶದಲ್ಲಿ ಮೊದಲಾದವರೆಗೂ ಎಂದರೆ ಸುಮಾರು ಕ್ರಿ. ಶ. ೧೮ ನೆಯ ಶತಮಾನದವರೆಗೆ **ಮಧ್ಯಕಾಲ**ವೆಂದೂ ಅಲ್ಲಿಂದೀಚಿನ ಕಾಲವನ್ನು **ಆಧುನಿಕ**ವೆಂದೂ ಹೇಳಬಹುದಾಗಿದೆ.

**ಪ್ರಾಚೀನ ಕಾಲ** :— ಇದರಲ್ಲಿ ಪೂರ್ವಭಾಗವೆಂದೂ ಉತ್ತರಭಾಗವೆಂದೂ ಭಾಗಿಸಿಕೊಳ್ಳಬಹುದು. **ಪೂರ್ವಭಾಗ** :– ಕ್ರಿ. ಪೂ. ೨೦೦ ವರ್ಷಗಳವರೆಗೆ. ಈ ಕಾಲದಲ್ಲಿ ಕೇವಲ ಧರ್ಮಸಂಬಂಧವಾದ ಕೃತಿಗಳೂ (Religious works) ನ್ಯಾಯ (Law) ಮತ್ತು ವೇದಾಂತನಿಗೂಢತತ್ವಗಳೂ (Philosophy) ಹೆಸರುಗೊಂಡವು. ವೇದಮಂತ್ರಗಳೂ (Vedic Hymns) ಬ್ರಾಹ್ಮಣ ಮತ್ತು ಇದಕ್ಕೆ ಸಂಬಂಧಿಸಿದ ಆರಣ್ಯಕೋಪನಿಷತ್ಸೂತ್ರಾದಿಗಳೂ ಬರೆಯಲ್ಪಟ್ಟುವಲ್ಲದೆ ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಇವು ರೂಪಿಸಲ್ಪಟ್ಟುವು. ಸೂತ್ರಗಳ ರೀತಿಯ ಬರವಣಿಗೆಯು ಸುಮಾರು ಬುದ್ಧನ ಕಾಲದವರೆಗೆ ಪ್ರಾಶಸ್ತ್ಯವನ್ನು ಹೊಂದಿದ್ದುದಾಗಿ ತಿಳಿಯಬರುತ್ತದೆ. ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಬುದ್ಧಮತವು ಭರತಖಂಡದ ಮುಖ್ಯಧರ್ಮವೆಂದೆಣಿಸಲ್ಪಟ್ಟಿದ್ದಿತು. ನಾನಾವಿಧವಾದ ಕಲಾಕೌಶಲ ವಿಜ್ಞಾನಶಾಸ್ತ್ರಗಳನೇಕಗಳು ಈ ಕಾಲದಲ್ಲಿಯೇ ತಲೆಯೆತ್ತಿದುವು.

ಇಂತಹ ವಿಧವಿಧಶಾಸ್ತ್ರಬೋಧನದಲ್ಲಿ **ತಕ್ಷಶಿಲೆಯು** ಸರ್ವಕಲಾಶಾಲೆಯು ಹೆಸರುಗೊಂಡಿದ್ದಿತು. ಇಲ್ಲಿ ಹದಿನಾರುವಿಧವಾದ ಕಲೆಗಳನ್ನು ಬೋಧಿಸುತ್ತಿದ್ದಂತೆಯೂ ಪ್ರತಿಯೊಂದಕ್ಕೂ ಒಬ್ಬೊಬ್ಬ ಬೋಧಕನಿದ್ದಂತೆಯೂ ಹೇಳಲ್ಪಟ್ಟಿದೆ. ಮಹಾವೈಯಾಕರಣನಾದ ಪಾಣಿನಿ, ಚಂದ್ರಗುಪ್ತನ ಮುಖ್ಯಾಶ್ರಯದಾತನಾದ ಚಾಣಕ್ಯ ಇವರೀರ್ವರೂ ಇಲ್ಲಿ ವ್ಯಾಸಂಗಮಾಡಿದವರು.* ರಾಜವೈದ್ಯನಾದ ಜೀವಕನು ಇಲ್ಲಿ ಮಹಾಪ್ರಸಿದ್ಧನಾಗಿದ್ದ ಆತ್ರೇಯನ ಬಳಿಯಲ್ಲಿ ವೈದ್ಯವಿದ್ಯಾವ್ಯಾಸಂಗವನ್ನು ಮಾಡಿದನು.† ಆಗಣ ಕಲೆಗಳಲ್ಲಿ ವೈದ್ಯಭಾಗವು ಅತ್ಯಂತ ಮುಖ್ಯವಾಗಿ ಎಣಿಸಲ್ಪಡುತ್ತಿದ್ದಿತು. ಚಿತ್ರಿಸುವುದು (Painting)ಕಲ್ಲು ಕೆತ್ತನೆ (Sculpture) ವಿಗ್ರಹಗಳ ಕೆತ್ತನೆ (Image making) ಮತ್ತು ಇತರ ವಿಧವಾದ ಕುಶಲ ಕೈಗಾರಿಕೆಗಳು (Hand-crafts) ಕೂಡಾ ಬೋಧಿಸಲ್ಪಡುತ್ತಿದ್ದುವು. ಈ ಕಾಲದಲ್ಲಿ ಜನರು ಹೆಚ್ಚಾಗಿ ಜ್ಯೋತಿಷವನ್ನು ವ್ಯಾಸಂಗ ಮಾಡುತ್ತಿದ್ದರು. ಮಹಾಪ್ರಸಿದ್ಧವಾದ ಉಜ್ಜಯಿನಿಯು ಜ್ಯೋತಿಷಶಾಸ್ತ್ರದ ಕೇಂದ್ರಸ್ಥಾನವಾಗಿದ್ದಿತು. ಈ ಸರ್ವಕಲಾಶಾಲೆಯು ಅಶೋಕನ ಕಾಲದಲ್ಲಿಯೂ ಪ್ರಸಿದ್ಧವಾಗಿದ್ದಿತು. ಇದಲ್ಲದೆ **ಶ್ರೀಧನ್ಯಕಟಕ**ವೆಂಬ ಸರ್ವಕಲಾಶಾಲೆಯು ವಿದರ್ಭ(ಈಗಣ ಅಮರಾವತಿ) ದೇಶದಲ್ಲಿ ಕೃಷ್ಣಾನದಿಯ ದಡದಲ್ಲಿದ್ದು ಶಾಸ್ತ್ರಸಿದ್ಧನಾದ ಸಿದ್ಧನಾಗಾರ್ಜುನನ ಕಾಲದಲ್ಲಿ ಬ್ರಾಹ್ಮಣ ಮತ್ತು ಬೌದ್ಧ ಸಾಹಿತ್ಯಗಳ ನಿರ್ಮಾಣವಾಗಿ ಅತ್ಯಂತೋತ್ಕರ್ಷಸ್ಥಿತಿಯಲ್ಲಿದ್ದಿತು. ಅಶೋಕನ ಕಾಲದಲ್ಲಿ ಪಶುವೈದ್ಯಶಾಸ್ತ್ರವು (Veterinary Science) ಪ್ರಾಚುರ್ಯಗೊಂಡಿತು. **ಉತ್ತರಭಾಗ**:- ಸುಮಾರು ಕ್ರಿ. ಪೂ. ೨ ನೆಯ ಶತಮಾನದಿಂದ ಕ್ರಿ. ಶ. ೭ ನೆಯ ಶತಮಾನದವರೆಗೆ. ಕ್ರಿ. ಪೂ. ೧೮೫ ರಿಂದ ಸಂಗರಾಜರ ಕಾಲವು ಪ್ರಾರಂಭವಾದುದು. ಇದುವರೆಗೆ ಬುದ್ಧಧರ್ಮದ ಕಡೆಗೆ ಇದ್ದ ಜನರ ಲಕ್ಷ್ಯವು ತಿರೋಹಿತವಾಗಿ ಬ್ರಾಹ್ಮಣಧರ್ಮದ ಕಡೆಗೆ ತಿರುಗಿತು. ಗೀರ್ವಾಣಭಾಷೆಯ ಗ್ರಂಥಗಳು ಕ್ರಮವಾಗಿ ಭಾವನಾಕಾವ್ಯ ಅಥವಾ ಶ್ರೇಷ್ಠತರದ ಕಾವ್ಯಗಳು (Classical Sanskrit) ಎಂಬ ಸಂಸ್ಕಾರವನ್ನು ಹೊಂದಿದುವು. ಈ ಕಾಲದಲ್ಲಿಯೂ ಅನೇಕ ವಿಧವಾದ ಕಲೆಗಳು ಪ್ರಾಚುರ್ಯಗೊಂಡುವಲ್ಲದೆ ಲೌಕಿಕವಿಚಾರ (Secular subjects) ಗಳನ್ನು ಹೇಳುವ ಗ್ರಂಥಗಳೂ

---

* History of Education in Ancient India by N. N. Mazumdar p, 89.

† Ibid p. 90.

ಸಾಮಾಜಿಕ (National) ಆಸ್ಥಾನಿಕ (Court epic) ಗೀತ (Lyric) ಕಾವ್ಯಗಳನೇಕಗಳು ಬರೆಯಲ್ಪಟ್ಟವು. ಮುಖ್ಯವಾಗಿ ನೀತಿಬೋಧಕವಾದ (Didactic Poetry) ಗ್ರಂಥಗಳು ಹೇರಳವಾಗಿ, ನಾಟಕ, ಕಥೆ, ಇತಿಹಾಸವೇ ಮೊದಲಾದ ಗ್ರಂಥಗಳು ನೀತಿಯ ನೆಲೆಗಟ್ಟಿನಮೇಲೆ ಬರೆಯಲ್ಪಟ್ಟುವು. ಜಗದ್ವಿಖ್ಯಾತನೂ ಯಶಶ್ಶರೀರಿಯೂ ಶಾಕುಂತಲಾದಿ ನಾಟಕಕಾರನೂ ಆದ ಕಾಳಿದಾಸನು ಈ ಕಾಲದಲ್ಲಿದ್ದವನು. ಕ್ರಿ. ಶ. ೩೨೦ ರಿಂದ ೪೫೫ ರ ವರೆಗೆ ಆಳಿದ ಗುಪ್ತರಾಜರೂ ಕ್ರಿ. ಶ. ೬೦೬ ರಿಂದ ೬೪೭ ರ ವರೆಗೆ ಆಳಿದ ಹರ್ಷರಾಜ (ಹರ್ಷವರ್ಧನ ಶಿಲಾದಿತ್ಯ) ನೂ ಸಂಸ್ಕೃತ ಭಾಷೋತ್ತೇಜಕರಾಗಿ ಕವಿಗಳಿಗೆ ಆಶ್ರಯದಾತರಾಗಿದ್ದರು. ಈ ಹರ್ಷನ ಕಾಲದಲ್ಲಿಯೇ ಬಿಹಾರಿನಲ್ಲಿದ್ದ **ನಾಳಂದ** ಸರ್ವಕಲಾಶಾಲೆಯು ಹೆಸರುವಾಸಿಗೆ ಬಂದಿತು. ಇದಕ್ಕೆ 'ಧರ್ಮಗಂಜ' ವೆಂದೂ ಹೆಸರು. ಚೈನಾಪ್ರವಾಸಿಯಾದ ಹುಯೆನ್‌ತ್ಸಾಂಗನು ತನ್ನ ಪ್ರವಾಸಚರಿತದಲ್ಲಿ ನಾಳಂದ ಸರ್ವಕಲಾಶಾಲೆಯ ವಿಚಾರವಾಗಿ ಬರೆಯುವಾಗ ಇಲ್ಲಿ ವ್ಯಾಕರಣ, ಅಲಂಕಾರ, ತರ್ಕ, ಗಣಿತ, ರೇಖಾಗಣಿತ, ಜ್ಯೋತಿಷ ಮತ್ತು ಸಂಗೀತ ಶಾಸ್ತ್ರಾಧ್ಯಯನಗಳನ್ನು ಮಾಡುತ್ತಿದ್ದ ಹತ್ತುಸಾವಿರ ವಿದ್ಯಾರ್ಥಿಗಳಿದ್ದುದಾಗಿಯೂ ವೈದ್ಯಶಾಸ್ತ್ರವೂ ಸಂಸ್ಕೃತ ಮತ್ತು ಪಾಲಿಭಾಷೆಯ ಗದ್ಯಪ್ರಬಂಧಗಳೂ ಅಭ್ಯಸಿಸಲ್ಪಡುತ್ತಿದ್ದುದಾಗಿಯೂ ಹೇಳಿರುವನು. ನಾಳಂದ ಸರ್ವಕಲಾಶಾಲೆಯು ಕ್ರಿ. ಶ. ೩೦೦ ರಿಂದ ೮೫೦ ರವರೆಗೆ ಉತ್ಕರ್ಷತೆಯನ್ನು ಹೊಂದಿದ್ದಿತು. ಕ್ರಿ. ಶ. ೩೦೦ರಲ್ಲಿದ್ದ ನಾಗಾರ್ಜುನ, ಕ್ರಿ. ಶ. ೩೨೦ ರಲ್ಲಿದ್ದ ಆರ್ಯದೇವ ಇವರು ಈ ಕಲಾಶಾಲೆಯ ಪ್ರಾಚೀನವಿದ್ಯಾವಂತರೂ ಬೋಧಕರೂ ಆಗಿದ್ದರು. ಇಲ್ಲಿ ವಿನಯಪಿಟಿಕವನ್ನು ಎಲ್ಲರೂ ಅನುಸರಿಸುತ್ತಿದ್ದರು. ಆದುದರಿಂದ ಈ ಕಾಲವನ್ನು ಅಥೇನಿನ ಪೆರಿಕ್ಲೀಸ್ (Periclean)ನ ಕಾಲವೆಂದಾಗಲಿ ಅಥವಾ ರೋಂ ನಗರದ ಅಗಸ್ಟಸ್ (Augustin) ನ ಕಾಲವೆಂದಾಗಲಿ ಅಥವಾ ವಿ. ವಿನ್‌ಸೆಂಟ್ ಸ್ಮಿತ್‌ರು ಹೇಳುವಂತೆ ಎಲಿಜಬೆತ್ತಿನ ಅಥವಾ ಇಂಗ್ಲೆಂಡಿನ ಸ್ಟ್ಯೂಯಾರ್ಟಿನ ಕಾಲವೆಂದಾಗಲಿ ಕರೆಯಬಹುದು.

**ಮಧ್ಯಕಾಲ:**—ಇದನ್ನೂ ಎರಡು ಭಾಗಗಳಾಗಿ ಮಾಡಿಕೊಂಡು ಕ್ರಿ.ಶ. ೬೪೮ ರಿಂದ ೧೨೦೦ ರ ವರೆಗೆ ಪೂರ್ವಾರ್ಧವೆಂದೂ ೧೩ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಉತ್ತರಾರ್ಧವೆಂದೂ ಹೇಳಬಹುದು. **ಪೂರ್ವಾರ್ಧ:**— ಹರ್ಷವರ್ಧನ(ಶಿಲಾದಿತ್ಯ)ನ ಅನಂತರ ಪ್ರಬಲರಾದ ಅರಸರಾರೂ

ಸಿಂಹಾಸನವನ್ನೇರಲಿಲ್ಲ. ಉತ್ತರ ಹಿಂದೂಸ್ಥಾನದಲ್ಲಿ ಧಾಳಿಯೆದ್ದು ಬಂದವ ರೊಡನೆ ಸರಿನಿಂತು ಕದನಮಾಡಿ ಗೆಲ್ಲುವರಾರೂ ಇರಲಿಲ್ಲ. ಈಕಾಲದಲ್ಲಿಯೂ ಸಂಸ್ಕೃತಸಾಹಿತ್ಯವು ಕಳೆಗುಂದಲಿಲ್ಲ. ಕ್ರಿ. ಶ. ೮ ನೆಯ ಶತಮಾನದಲ್ಲಿ ಕೆನೂ ಜಿನಲ್ಲಾಳಿದ ಯಶೋವರ್ಮನ ಆಳ್ವಿಕೆಯಲ್ಲಿ ಸಂಸ್ಕೃತಸಾಹಿತ್ಯವು ಕಳಕಳಿ ಸುತ್ತಿದ್ದಿತು. ಮಾಲತೀಮಾಧವವನ್ನು ಬರೆದ ಪ್ರಸಿದ್ಧಕವಿಯಾದ ಭವ ಭೂತಿಯು ಇವನ ಆಶ್ರಯದಲ್ಲಿದ್ದನು. ಈ ಕಾಲದಲ್ಲಿಯೇ **ವಿಕ್ರಮಶಿಲಾ** ಸರ್ವಕಲಾಶಾಲೆಯು ಅತ್ಯಂತ ಪ್ರಸಿದ್ಧವಾಗಿದ್ದಿತು. ಇದರ ಕಾಲವು ಸುಮಾರು ಕ್ರಿ. ಶ. ೮೦೦ ರಿಂದ ೧೨೦೦ ರ ವರೆಗೆಂದು ಹೇಳಬಹುದು. ಇದನ್ನು ಧರ್ಮ ಪಾಲನು ಕಟ್ಟಿಸಿದನು. ಆಗ ಆಚಾರ್ಯಶುದ್ಧಜ್ಞಾನಪಾದನು ಇದರ ಚಾಲಕ ನಾಗಿದ್ದನು. ಕ್ರಿ. ಶ. ೧೦೩೪ ರಿಂದ ೧೦೩೮ ರ ವರೆಗೆ ದೀಪಂಕರನೆಂಬುವನು ಇದರ ಮುಖ್ಯಾಧ್ಯಾಪಕನಾಗಿಯೂ ಸ್ಥವಿರರತ್ನಾಕರನೆಂಬುವನು ವಿಹಾರದ ಮುಖ್ಯಾಧಿಕಾರಿಯಾಗಿಯೂ ಇದ್ದರು. ದೀಪಂಕರನನ್ನು ಕರೆದುಕೊಂಡು ಹೋಗಲು ಬಂದಿದ್ದ ಟಿಬೆಟ್ಟಿನ ಮಹಾವಿದ್ವಾಂಸನಾದ 'ನಾಗರಿಕ್ಪೊಲೋ ಕ್ಸನು' ಇಲ್ಲಿ ಮೂರು ವರ್ಷಗಳ ಕಾಲ (ಕ್ರಿ. ಶ. ೧೦೩೫–೧೦೩೮) ಇದ್ದನು. ಮಹಾಪ್ರಸಿದ್ಧರಾದ ಕಮಲಕುಲಿಶ, ನರೇಂದ್ರ, ಶ್ರೀಜ್ಞಾನ, ದಾನರಕ್ಷಿತ, ಅಭಯಂಕರಗುಪ್ತ, ಶುಭಕರಗುಪ್ತ, ಸುನಾಯಕ, ಶ್ರೀಧರ್ಮಾಕರಶಾಂತಿ, ಶಾಕ್ಯ, ಶ್ರೀಪಂಡಿತ ಇವರೆಲ್ಲರೂ ಈಸರ್ವಕಲಾಶಾಲೆಗೆ ಸೇರಿದವರು. ಕ್ರಿ. ಶ.೮ ನೆಯ ಶತಮಾನದವರಾದ ಶಂಕರಾಚಾರ್ಯರು ಕಾಶಿಯಲ್ಲಿ ವಿದ್ಯಾಭ್ಯಾಸವನ್ನು ಮಾಡಿದುದಾಗಿ ತಿಳಿಯಬರುತ್ತದೆ. ಇದಲ್ಲದೆ ವೀರದೇವನೆಂಬುವನು ಸಾಂಗ ವೇದಾಧ್ಯಾಯಿಯಾಗಿ ಸಕಲಶಾಸ್ತ್ರಾಭ್ಯಾಸಾನಂತರ ಕ್ರಿ. ಶ. ೯ ನೆಯ ಶತಮಾನ ದಲ್ಲಿ ಪಿಷಾವರ್‌ಬಳಿಯಲ್ಲಿದ್ದ 'ಕನಿಷ್ಕ ಮಹಾವಿಹಾರ'ಕ್ಕೆ ಓದುವುದಕ್ಕೆ ಹೋದು ದಾಗಿ ಹೇಳಲ್ಪಟ್ಟಿದೆ. ಇದರಿಂದ ಆಗಣ ಕಾಲಕ್ಕೆ ಕೆನೂಜ್, ಕಾಶಿ, ಪಿಷಾವರ್ ಇವು ಸಂಸ್ಕೃತ ಸಾಹಿತ್ಯದ ಕೇಂದ್ರಸ್ಥಾನಗಳಾಗಿದ್ದಿರಬೇಕಾಗಿ ತೋರುತ್ತದೆ. ವಿಕ್ರಮಶಿಲಾ ಸರ್ವಕಲಾಶಾಲೆಯು ಕ್ರಿ. ಶ. ೧೨೦೩ರಲ್ಲಿ ಭಕ್ತ್ಯಾರ್‌ಖಿಲ್ಜಿ ಎಂಬ ಮಹಮ್ಮದೀಯನಿಂದ ನಾಶಪಡಿಸಲ್ಪಟ್ಟುದಾಗಿ ತಿಳಿಯಬರುತ್ತದೆ. ನವ ದ್ವೀಪವು ಬಂಗಾಳದಲ್ಲಾಳಿದ ಸೇನರಾಜರ ಪೋಷಣೆಯಲ್ಲಿ ಸಂಸ್ಕೃತಸಾಹಿತ್ಯ ವಿದ್ಯಾವೈಖರಿಯಿಂದ ದೇದೀಪ್ಯಮಾನವಾಗಿದ್ದಿತು. ನಾಳಂದ ಕಲಾಶಾಲೆಯು ಕ್ಷೀಣದೆಸೆಗೆ ಬರುತ್ತಿರುವಾಗ ಓದಂತಪುರಿ ( ಬಿಹಾರ )ಯ ಸರ್ವಕಲಾಶಾಲೆ ಯು ಪ್ರಸಿದ್ಧಿಗೆ ಬರುತ್ತಿತ್ತು. ಇದು ಸುಮಾರು ಕ್ರಿ. ಶ ೭೮೦ ರಲ್ಲಿ ಆಳಿದ ಗೋಪಾಲಕ ಅಥವಾ ಲೋಕಪಾಲಕನೆಂಬುವನಿಂದ ಕಟ್ಟಿಸಲ್ಪಟ್ಟು ಬ್ರಾಹ್ಮಣ

ಮತ್ತು ಬೌದ್ಧ ಸಾಹಿತ್ಯಗಳ ಭಂಡಾರವನ್ನುಳ್ಳುದಾಗಿದ್ದಿತು. ಕ್ರಿ. ಶ. ೧೧೯೭ ರ ಸುಮಾರಿನಲ್ಲಿ ಇದು ಮುಹಮ್ಮದೀಯರಿಂದ ನಾಶಪಡಿಸಲ್ಪಟ್ಟಿತು. ನವದ್ವೀಪವೂ ಮುಹಮದೀಯರಿಂದ ನಾಶಪಡಿಸಲ್ಪಟ್ಟುದಾದರೂ ಪ್ರಾಚೀನ ಸಂಸ್ಕೃತಸಾಹಿತ್ಯವಿದ್ಯಾವೈಭವವನ್ನು ಆಧುನಿಕರಿಗೆ ತೋರಿಸುತ್ತಿರುವುದೋ ಎಂಬಂತೆ ಈಗಲೂ ಉಳಿದುಕೊಂಡು ಭಾರತೀಯರ ಸಾಹಿತ್ಯಕೌತುಕವನ್ನು ಬೀರುತ್ತಿರುವುದು. ಈ ಕಾಲದಲ್ಲಿ ಜೈಮಿನಿಯ ಕರ್ಮಮೀಮಾಂಸಾ ಸೂತ್ರಕ್ಕೆ ವ್ಯಾಖ್ಯಾನಕಾರನಾದ ಕುಮಾರಿಲನ ವಾರ್ತಿಕೆಯೂ ಶಂಕರಾಚಾರ್ಯರ ವೇದಾಂತಸೂತ್ರಭಾಷ್ಯ ಮತ್ತು ಭಗವದ್ಗೀತಾ ಭಾಷ್ಯವೂ ಸುಮಾರು ಕ್ರಿ. ಶ. ೧೧೦೦ ರಲ್ಲಿದ್ದ ರಾಮಾನುಜಾಚಾರ್ಯರ ಮತ್ತೊಂದು ಗೀತಾ ಭಾಷ್ಯವೂ ಹೆಸರಾದವುಗಳು. ಬೀಜಗಣಿತ, ಜ್ಯೋತಿಷ ಸಂಬಂಧವಾದ ಅನೇಕ ಗ್ರಂಥಗಳು ಈ ಕಾಲದಲ್ಲಿ ಬರೆಯಲ್ಪಟ್ಟವು. ವಿಜ್ಞಾನಶಾಸ್ತ್ರಗಳ ಪ್ರಾಚುರ್ಯವು ಹೆಚ್ಚಾಗಿದ್ದಿತು. **ಉತ್ತರಾರ್ಧ:—** ಕ್ರಿ. ಶ. ೧೨೦೦ ರಿಂದ ೧೭೬೪ರ ವರೆಗೆ. ಈಕಾಲವು ಉತ್ತರಹಿಂದೂಸ್ಥಾನದಲ್ಲಿ ಮುಹಮದೀಯರ ಪ್ರಾದುರ್ಭಾವಸ್ಥಿತಿಯನ್ನೂ ಮತ್ತು ಹಿಂದೂರಾಜ್ಯಗಳ ನಾಶವನ್ನೂ ಸೂಚಿಸುವುದಾಗಿದೆ. ಸಂಸ್ಕೃತಸಾಹಿತ್ಯಪೋಷಕರಾದ ಹಿಂದೂ ಅರಸರು ಗತಾಯುಗಳಾಗಿ ಮತಲುಬ್ಧರಾದ ಮುಹಮ್ಮದೀಯರ ಧರ್ಮಪ್ರಸರಣಾವಸರದಲ್ಲಿ ಹಿಂದೂಮತವು ಕಳೆಗುಂದಿ ದೇವಾಲಯಗಳು ಚೂರ್ಣೀಕೃತವಾಗಿ ಭವ್ಯವಾದ ಸಕಲವಿದ್ಯಾನಿಲಯಗಳೂ ವಿಹಾರಗಳೂ ನಾಶವಾಗಿ ಬೋಧಕಸಂತತಿಯು ಆಶ್ರಯಹೀನವಾಗಿ ಉತ್ತೇಜನವಿಲ್ಲದೆ ಹೋದುದು. ಈ ಕಾರಣಗಳಿಂದ ಉತ್ತರ ಹಿಂದೂಸ್ಥಾನದಲ್ಲಿ ಬಹುಕಾಲದವರೆಗೆ ಸಂಸ್ಕೃತಸಾಹಿತ್ಯವು ತಲೆಯೆತ್ತದೆ ಆಯಾಯ ದೇಶಭಾಷೆಗಳು ಹೇರಳಗೊಂಡುವು. ಈ ಕಾಲದಲ್ಲಿಯೇ ಬಿಹಾರೀ ಭಾಷೆಯಲ್ಲಿ ಮಹಾಕವಿವಿದ್ಯಾಪತಿಯೂ ವಂಗಭಾಷೆಯಲ್ಲಿ ಚಂಡೀದಾಸನೂ ರಾಜಪುಟಾಣದ ಮೀರಾಬಾಯಿಯೂ ದೇಶಭಾಷೆಗಳಲ್ಲಿ ಸರ್ವಸುಂದರವಾದ ಕವಿತೆಗಳನ್ನುಮಾಡಿ ಕೀರ್ತಿಶೇಷರಾದರು. ಸುಮಾರು ಕ್ರಿ. ಶ. ೧೨೦೨ರಲ್ಲಿ ಟಿಬೆಟ್ಟಿನಲ್ಲಿ 'ಸಕ್ಯ'ವೆಂಬ ಕಲಾಶಾಲೆಯೂ ದಕ್ಷಿಣದಲ್ಲಿ ಕ್ರಿ. ಶ. ೧೪ ನೆಯ ಶತಮಾನದಲ್ಲಿ ವಿಜಯನಗರವೂ ಸಂಸ್ಕೃತಸಾಹಿತ್ಯ ಮತ್ತು ದೇಶೀಯವಿದ್ಯಾಕೌಶಲಗಳಿಗೆ ಸಹಾಯಭೂತಗಳಾಗಿದ್ದುವು. ಆದರೂ ಸರಿಯಾದ ಆಶ್ರಯ ಮತ್ತು ಉತ್ತೇಜನವಿಲ್ಲದೆ ಸಂಸ್ಕೃತಸಾಹಿತ್ಯಾಭಿರುಚಿಯು ಜನರಲ್ಲಿ ಮಾಲಿನ್ಯವನ್ನು ಹೊಂದಿ ಹೇಳನಾಸ್ಪದವಾಗಿ ಹೋಯಿತು.

**ಆಧುನಿಕಕಾಲ:—**ಕ್ರಿ. ಶ. ೧೮ ನೆಯ ಶತಮಾನದಿಂದ ೨೦ ನೆಯ ಶತಮಾನದ ವರೆಗೆ.

ಸಂಸ್ಕೃತಸಾಹಿತ್ಯದಲ್ಲಿ ರುಚಿಗೊಂಡ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಪಂಡಿತೋತ್ತಮರ ಅವಿಶ್ರಾಂತ ಶೋಧನದಿಂದಲೂ ಮತ್ತು ಸಿಗೂಢಮೈತ್ರಿಯಿಂದಲೂ, ರಾಜಕೀಯಸಹಾನುಭೂತಿಯಿಂದಲೂ, ಮುದ್ರಾಯಂತ್ರಗಳ ಸಹಾಯದಿಂದಲೂ, ಈ ಕಾಲವನ್ನು ಸಂಸ್ಕೃತಸಾಹಿತ್ಯದ ಪುನರುಜ್ಜೀವನ ಕಾಲವೆಂದು ಹೇಳಬಹುದು. ಇದು ಇತರ ಭಾಷೆಗಳ ಘರ್ಷಣದಲ್ಲಿ ಎಷ್ಟು ಸಿಲುಕಿದರೂ ಇದರಲ್ಲಿರುವ ನಾಟಕ, ಕಾವ್ಯವೇ ಮೊದಲಾದ ಚತುಷ್ಷಷ್ಟಿ ಕಲಾವಿಚಾರವಾದ ಲಕ್ಷೋಪಲಕ್ಷಗ್ರಂಥಗಳಲ್ಲಿ ಹೋಗುವುದು ಹೋಗಿ ಉಳಿದುಕೊಂಡಿರುವಷ್ಟು ಗ್ರಂಥಗಳನ್ನಾದರೂ ಇತರಭಾಷೆಗಳು ದೊರಕಿಸಲಾರವು. ಇಂತಹ ಭಾಷೆಯನ್ನು ಮುಳುಗಿಸಿಕೊಳ್ಳತಕ್ಕ ಸಮುದ್ರಗಳಾಗಲಿ, ಜೀರ್ಣಿಸಿಕೊಳ್ಳತಕ್ಕ ಇತರ ಭಾಷೆಗಳಾಗಲಿ, ಕೀರ್ತಿವೈಖರಿಯನ್ನಡ್ಡಗಿಸುವ ಶೈಲಶೃಂಗಗಳಾಗಲಿ ಈ ವಿಶ್ವದಲ್ಲಿರದು. ಈ ವಿಚಾರದಲ್ಲಿ ಮಹಾಪ್ರಸಿದ್ಧನೂ ಸಂಸ್ಕೃತಕವಿಯೂ ಆದ ಮಹೇಶಚಂದ್ರತರ್ಕಚೂಡಾಮಣಿಯ ಹೇಳಿಕೆಯು ಹೀಗೆ ಇರುವುದು.

ಯಾವದಸ್ತಿ ತ್ರಯೀ ಲೋಕೇ । ಚತುರ್ಮುಖಮುಖೋದ್ಭವಾ ॥
ಯಾವದ್ವಾ ರಾಮಚರಿತಂ । ವಾಲ್ಮೀಕಿಕವಿಚಿತ್ರಿತಂ ॥
ಕ್ಷರಂತ್ಯಮೃತಧಾರಾ ವಾ । ಯಾವದ್ವ್ಯಾಸಸ್ಯ ಸೂಕ್ತಯಃ ॥
ವಾಗ್ದೇವ್ಯಾ ವರಪುತ್ರಸ್ಯ । ಕಾಲಿದಾಸಸ್ಯ ವಾ ಗಿರಃ ॥
ತಾವದೇಷಾ ದೇವಭಾಷಾ । ದೇವೀ ಸ್ಥಾಸ್ಯತಿ ಭೂತಲೇ ।
ಯಾವಚ್ಚ ವಂಶೋಽಸ್ತ್ಯಾರ್ಯಾಣಾಂ । ತಾವದೇಷಾ ಧ್ರುವಂ ಧ್ರುವಾ ॥

ಪ್ರಾಚೀನಾರ್ಯಸಂಸ್ಕೃತಿಯ ಗತವೈಭವವನ್ನೂ ಸಂಸ್ಕೃತ ಭಾಷೆಯ ಈಗಣ ವಿಲಕ್ಷಣ ಸ್ಥಿತಿಗತಿಗಳನ್ನೂ, ಅಲ್ಲಲ್ಲಿ ದೊರೆಯಬಹುದಾದ ಸಂಸ್ಕೃತ ಗ್ರಂಥಗಳನ್ನೂ, ಪರಸ್ಪರ ಸಹೃದಯದಿಂದ ತೋಲನಮಾಡಿ ನೋಡುವ ಭಾಷಾವತ್ಸಲನಾದ ಪ್ರತಿಯೊಬ್ಬನೂ ಕಣ್ಣೀರನ್ನು ಸುರಿಸದಿರನು. ಎಲ್ಲವೂ ಕಾಲಾಧೀನ. ಪ್ರಕೃತ ಇಷ್ಟೇ ಸಮಾಧಾನ.

ಯಾವುದಾದರೊಂದು ಗ್ರಂಥವನ್ನು ನೋಡಿ ಓದಿ ಆನಂದರಸಾಸ್ವಾದನ ಮಾಡುವ ಪ್ರತಿಯೊಬ್ಬನಿಗೂ ಗ್ರಂಥಕಾರನ ಕಾಲದೇಶಸ್ಥಿತಿಗತಿಗಳನ್ನರಿಯ

ಬೇಕೆಂಬ ಕುತೂಹಲವು ಸಹಜವಾದುದಾಗಿರುವುದು. ಆದರೆ ಇಂತಹ ಕುತೂ ಹಲಪ್ರಾಪ್ತಿಗೆ ಸಾಧನಗಳನ್ನೊದಗಿಸಿಕೊಳ್ಳದ ನಮ್ಮಲ್ಲಿ ಕುತೂಹಲ ಮಾತ್ರವೇ ಉಳಿದಿರುವುದು. ಇದನ್ನು ತಿಳಿದವರು ಅನಾಸ್ಥೆಯೆನ್ನುವರು. ದೇಶೀಯ ಭಾಷಾಸಕ್ತಿಯು ತಪ್ಪಿ, ವಿದೇಶಭಾಷಾಸಕ್ತಿಯೂ ಸತ್ತ್ವತೆಯೂ ಹೆಚ್ಚಿ, ಗೀರ್ವಾಣಭಾಷಾಪುಸ್ತಕಗಳ ಬದಲು ಇತರಭಾಷಾ ಪುಸ್ತಕಗಳು ಪುಸ್ತಕ ಭಂಡಾರಗಳನ್ನಲಂಕರಿಸುವಂತಾದವು. ಕಳೆದುಳಿದ ಗೀರ್ವಾಣಭಾಷಾ ಪುಸ್ತಕ ಗಳು ತಾಳವಾಲೆಯಲ್ಲಡಗಿ ಧೂಳೀಧೂಸರಿತವಾಗಿ ಕ್ರಿಮಿಕೀಟಗಳಿಗಾಹಾರ ವಾಗಿ ಯಾವುದೋ ಒಂದು ಅವ್ಯಕ್ತಮೂಲೆಯಲ್ಲಡಗಿ ಯೋಗನಿದ್ರಾಮುದ್ರಿತ ವಾಗಿರುವಂತಾದುವು. ಆಲಸ್ಯಕ್ಕೆಡೆಗೊಟ್ಟ ನಮ್ಮವರು ವಿದೇಶೀಯರ ಆಸ್ಥೆ ಮತ್ತು ಕೌಶಲವನ್ನು ನೋಡಿ ಹಿಗ್ಗಿ ಜಗ್ಗಿಹಾಕಿದರೇ ಹೊರತು ದೇಶ ಭಾಷೋನ್ನತಿಗೆ ನಿಜವಾದ ಮಾರ್ಗದರ್ಶಿಗಳಾಗಲಿಲ್ಲ. ಹೀಗಾಗಿ ದೇಶೀಯ ಸುಭಾಷಿತಕಾವ್ಯಗಳನೇಕಗಳು ನಿರ್ನಾಮವಾದುವು. ದೇಶೀಯಕಥೇತಿಹಾ ಸಾದಿಗಳು ಕಟ್ಟುಕಥೆಗಳೆಂದೂ ಚಾರಿತ್ರಕವಲ್ಲವೆಂದೂ ಹೇಳಿ ಕೃತವಿದ್ಯರ ನೇಕರು ಕೈಬಿಟ್ಟರು. ಭಾಷಾಸೇವೆಯು ಕಾರ್ಯತಃ ಶೂನ್ಯವಾಗಿ ಹಳೆಯ ಬಟ್ಟೆಗೆ ಬಣ್ಣಬಳಿದಂತೆ ವಾಗಾಡಂಬರದಲ್ಲಿ ಮುಕ್ತಾಯವಾದುದು. ಸರ್. ವಿಲಿಯಂಜೋನ್ಸ್, ಕೋಲ್‌ಬ್ರೂಕ್, ಕೊವೆಲ್, ವಿಲ್ಸನ್, ರಾತ್, ಪ್ರೊ. ಮ್ಯಾಕ್ಸ್‌ಮುಲ್ಲರ್ ಮೊದಲಾದ ವಿದೇಶೀಯಪಂಡಿತೋತ್ತಮರು ಗೀರ್ವಾಣ ಭಾಷಾಸುಧೆಯನ್ನು ಸವಿದಂದಿನಿಂದ ನಮ್ಮಲ್ಲಿ ಕಟ್ಟಿಡಲ್ಪಟ್ಟು ಧೂಳೀಧೂಸರಿತ ವಾಗಿ ಅವ್ಯಕ್ತಗಳಾಗಿದ್ದ ಗ್ರಂಥಗಳು ಅವರ ಪುಸ್ತಕಭಂಡಾರಗಳನ್ನು ಅಲಂ ಕರಿಸುವಂತಾದುವು. ವೇದಪಾಠಪ್ರವಚನಗಳ ಆ ಮನಮೋಹನ ಘೋಷವು ಥೇಮ್ಸ್, ಮಿಸಿಸಿಪ್ಪಿ, ರ್ಹೈನ್ ನದಿಗಳ ಮಳಲೊಡ್ಡುಗಳಲ್ಲಿ ಕೇಳಿಬರುವಂತಾ ದುವು. ಇವುಗಳೆಲ್ಲಕ್ಕೂ ನಮ್ಮ ಔದಾಸೀನ್ಯವೇ ಕಾರಣವಲ್ಲವೆ?

ಪಾಣಿನ್ಯಾದಿ ಶಾಸ್ತ್ರಕಾರರ ಪಾತಂಜಲಾದಿ ಭಾಷ್ಯಕಾರರ ಭಾಸಕಾಳಿ ದಾಸಾದಿ ನಾಟಕಕಾರರ ಮತ್ತು ಕಾವ್ಯಕಾರರನೇಕರ ವಿಚಾರವಾಗಿ ಹೆಚ್ಚಾಗಿ ತಿಳಿಯಬೇಕಾಗಿರುವ ಭಾರತೀಯರೇ ವಿರಳರಾಗಿರುವಾಗ ದೇಶೀಯಭಾಷಾ ಜ್ಞಾನತರಾದ ವಿದೇಶೀಯರು ತಮ್ಮ ಅಧ್ಯವಸಾಯದಿಂದ ತಮ್ಮ ಜೀವಿತವನ್ನು ವಿನಾಸಲಾಗಿಟ್ಟು ನಮಗೆ ಮಾರ್ಗದರ್ಶಿಗಳಾಗಿ ನಮ್ಮನ್ನು ಚಿರಋಣಿಗಳನ್ನಾಗಿ ಮಾಡಿರುವರೆಂದರೆ ಅತ್ಯುಕ್ತಿಯಾಗದು. ಸಂಸ್ಕೃತಸಾಹಿತ್ಯವು ಅಂತಹ ಮಧುರ ರಸ ಪೂರ್ಣವಾದುದಾದುದರಿಂದಲೇ ಪ್ರತಿಯೊಬ್ಬರೂ

ದ್ರಾಕ್ಷಾ ಮ್ಲಾನಮುಖೀ ಜಾತಾ । ಶರ್ಕರಾಪ್ಯಶ್ಮತಾಂ ಗತಾ ॥
ಸುಭಾಷಿತರಸಸ್ಯಾಗ್ರೇ । ಸುಧಾ ಭೀತಾ ದಿವಂ ಗತಾ ॥
ಸುಭಾಷಿತೇನ ಗೀತೇನ । ಯುವತೀನಾಂ ಚ ಲೀಲಯಾ ॥
ಮನೋ ನ ಭಿದ್ಯತೇ ಯಸ್ಯ । ಸ ಯೋಗೀ ಹ್ಯಥವಾ ಪಶುಃ ॥

ಎಂದು ಸಾರುತ್ತಿರುವಂತೆ ಮಾಡಿರುವುದು ಏನೂ ಅರಿದಲ್ಲ.

**ಪ್ರಾಚೀನಭಾರತೀಯರು ತಮ್ಮ ಕಾಲದ ಇತಿಹಾಸವನ್ನು ಬರೆಯದೆ ಇರಲು ತೋರಿಬರುವ ಮುಖ್ಯ ಕಾರಣಗಳು**:—ಪಾರಲೌಕಿಕಾವಸ್ಥೆಯಿಂದ ದೂರರಾಗಿ ಕೇವಲ ಲೌಕಿಕವ್ಯವಹಾರಾತುರತೆಯಿಂದಿರುವ ಸಾಂಪ್ರತಕಾಲದವರಿಗೆ ಸಾಧನಭೂತಗಳಾದ ಶಾಸ್ತ್ರಗಳೂ ಕುಶಲವಿದ್ಯೆಗಳನೇಕಗಳೂ ಅರ್ವಾಚೀನಶಿಕ್ಷಣಕ್ಕಾಗಿ ತಲೆದೋರಿರುವುವಾದರೂ ಪ್ರಾಚೀನ ಭರತಖಂಡವು ಇಂತಹ ಅವಸ್ಥೆ ಮತ್ತು ಅನಾಸ್ಥೆಗಳಿಂದ ದೂರವಾಗಿ ಜೀವನಧಾರಣಕ್ಕೆ ಬೇಕಾದ ಸಕಲಸಲಕರಣೆಗಳು ಪುಷ್ಕಲವಾಗಿ ಪ್ರಯಾಸವಿಲ್ಲದೆ ದೊರೆಯುತ್ತಿದ್ದುದರಿಂದ ಆಗಣ ಭಾರತೀಯರಿಗೆ ಪಾರಲೌಕಿಕವೇ ಋಜುಮಾರ್ಗವೆಂದು ತೋರಿಬಂದು ಕೇವಲ ಧಾರ್ಮಿಕಗ್ರಂಥಗಳನ್ನೇ ಬರೆದು ಕೀರ್ತಿಶೇಷರಾದರು. ವೇದವಿದ್ಯಾಧೀತರಾದ ಬ್ರಾಹ್ಮಣರ ಧ್ಯೇಯವು ಆಗ "ಈಶ್ವರಸತ್ಯ ಜಗನ್ಮಿಥ್ಯಾ" ಎಂದಿದ್ದು ನಶ್ವರವಿಷಯಗಳಿಗೆ ಮನಕೊಡಲಿಲ್ಲವಾಗಿ ಬೋಧೆಯಾಗುತ್ತದೆ. ಪಾರಲೌಕಿಕಸುಖಾಪೇಕ್ಷೆಯೇ ಪ್ರಾಚೀನ ಭಾರತೀಯರ ಅಭಿಪ್ರಾಯವಾಗಿ ಆಮುಷ್ಮಿಕಸಾಧನೆ ಮತ್ತು ಸತ್ಯರೂಪನಾದ ಈಶ್ವರನನ್ನು ತಿಳಿಯುವಿಕೆ, ಇವೆರಡೇ ತಮ್ಮ ಕರ್ತವ್ಯವೆಂದೆಣಿಸುತ್ತಿದ್ದುದಾಗಿ ತಿಳಿಯಬರುತ್ತದೆ. ಪರ್ಷಿಯಾ, ಗ್ರೀಸ್, ರೋಮ್ ದೇಶಗಳಲ್ಲಿ ರಾಜಕೀಯಚಳುವಳಿಯುಂಟಾಗಿ ನಾನಾವಿಧವಾದ ಕೋಟಲೆಗಳಿಗೀಡಾದಂತೆ ಪ್ರಾಚೀನಭರತಖಂಡವು ಅಂತಹ ತೊಂದರೆಗಳಿಗೊಳಪಟ್ಟಿರಲಿಲ್ಲ. ನಮ್ಮ ಪೂರ್ವಿಕರು ಪ್ರಾಚೀನ ಗ್ರೀಕ್ ಮತ್ತು ರೋಮನ್ ಜನರಿಗಿಂತ ಸಕಲವಿದ್ಯಾಕೌಶಲದಲ್ಲಿಯೂ ಮುಂದಾಳುಗಳಾಗಿದ್ದರಾದರೂ ಹಿರಾಡಟಸ್ ಜಿನೋಷನ್, ಥುಸಿಡುಟಸ್ ಇವರಹಾಗೆ ದೇಶವಿದೇಶ ಪರ್ಯಟನಮಾಡದುದರಿಂದಲೋ ಅಥವಾ ಸರಸ್ತುತಿಯು ಕೇವಲ ಜಘನ್ಯವಾದುದೆಂದು ತಿಳಿದುದರಿಂದಲೋ ಅಥವಾ ಅಭಿಮಾನಶೂನ್ಯತೆಯಿಂದಲೋ ಅಂತೂ ಹೇಗೋ ತಮ್ಮ ಕಾಲದ ಚರಿತೆಯನ್ನು ಬರೆದಿಡದೆಹೋದುದರಿಂದ ಪ್ರಾಚೀನೇತಿಹಾಸವು ಅತಲ ಜಲದಲ್ಲಿ ಮುಳುಗಿಹೋಗಿ ನಿಜವಾದ ಇತಿಹಾಸವನ್ನು ತಿಳಿಯಬೇಕೆ

ಸ್ನ್ನುಪ ನನುಗೆ ಸಾಧಸಶೂನ್ಯವಾಗಿ ಹೋಗಿರುವುದು. ಅಥೆನ್ಸು ನಗರದಲ್ಲಿ ಅರಿಸ್ಟೋಫೆನಿಸ್ ಎಂಬುವನಿಂದ ಬರೆಯಲ್ಪಟ್ಟ 'ಮೇಘಮಾಲಾ' ಎಂಬ ಪ್ರಹಸನವು ಈಗಲೂ ಪ್ರಸಿದ್ಧವಾಗಿದೆ. ಇದು ನಮ್ಮ 'ಪ್ರಬೋಧಚಂದ್ರೋದಯ' ದಹಾಗೆ ಇತಿಹಾಸಶೂನ್ಯವಾದುದಾಗಿದ್ದರೆ ಯಾರೂ ಮೆಚ್ಚುತ್ತಿರಲಿಲ್ಲ. ರಾಜತರಂಗಿಣಿಯಂತಹ ಗ್ರಂಥಗಳಿಂದ ಪ್ರಸಂಗವಶಾತ್ ಸ್ವಲ್ಪ ಉಪಯೋಗವಾಗಬಹುದಾದರೂ ಇದನ್ನು "ಇತಿಹಾಸ" ವೆಂದು ಕರೆಯಲಾಗುವುದಿಲ್ಲ. ಇದು ಕಾಲಕ್ರಮ, ದೇಶಜ್ಞಾನವೇ ಮೊದಲಾದ ವಿಚಾರಗಳಿಂದ ದೂರವಾಗಿ ಕೇವಲ ಕಾವ್ಯಸರಣಿಯಲ್ಲಿ ಬರೆಯಲ್ಪಟ್ಟಿರುವುದು. ಭರತಖಂಡವು ಬಹಳ ವಿಸ್ತಾರವಾದ ದೇಶ. ಬೇರೆಬೇರೆ ಪ್ರಾಂತಗಳಲ್ಲಿ ರಾಜರು ಅರಸುತನವನ್ನು ಮಾಡುತ್ತ ತಮ್ಮ ತಮ್ಮ ಮನೋವೃತ್ತಿಯಂತೆ ಅನೇಕ ಶಕಗಳನ್ನಾರಂಭಿಸಿದುದರಿಂದಲೂ ಗ್ರಂಥಕಾರರು ಕೆಲವು ಗ್ರಂಥಗಳಲ್ಲಿ ಶಕವನ್ನು ಹೇಳಿಯೂ ಮತ್ತೆ ಕೆಲವುಗಳಲ್ಲಿ ಹೇಳದೆಯೂ ಇರುವುದರಿಂದಲೂ ಕವಿಗಳ ಕಾಲನಿರ್ಣಯಮಾಡುವುದು ಬಹು ದುರ್ಧರಪ್ರಸಂಗವಾಗಿರುವುದು. ಇದಲ್ಲದೆ ಒಂದೇ ಹೆಸರಿನ ರಾಜರನೇಕರೂ ಗ್ರಂಥಕಾರರನೇಕರೂ ದೊರೆಯುವರು. ಅವರವರ ಗ್ರಂಥಗಳೂ ಕಾಲಗಳೂ ಭಿನ್ನಭಿನ್ನವಾಗಿರುವುವು. ಇದಕ್ಕೆ ವಿಕ್ರಮಾದಿತ್ಯ, ಕಾಳಿದಾಸ ಇವರೀರ್ವರ ಉದಾಹರಣೆಯೇ ಸಾಕಾಗಿರುವುದು.

ಆದರೆ ಕೆಲವು ದೇಶೀಯ ಪಂಡಿತರು ದೇಶೀಯಸಾಹಿತ್ಯಚರಿತವಿಲ್ಲವೆಂಬುದು ಸರಿಯಲ್ಲವೆಂದೂ ವೇದ, ವೇದಾಂಗ, ದರ್ಶನ ಉಪನಿಷದಾದಿಗಳಿಂದಲೂ, ಪುರಾಣಗಳಿಂದಲೂ, ಇತಿಹಾಸಗಳಿಂದಲೂ ಆಗಣಕಾಲದ ವಿದ್ಯಮಾನಗಳನ್ನು ತಿಳಿಯಬಹುದಾಗಿದೆಯೆಂದೂ, ಪ್ರಾಚೀನಾರ್ಯರು ಸಪ್ತಸಿಂಧು ಪ್ರಾಂತ್ಯದಲ್ಲಿ ವಸತಿಗಳನ್ನು ಕಲ್ಪಿಸಿ ಎದುರುಬಿದ್ದ ದಸ್ಯು, ಬರ್ಬರ, ಕಿರಾತರೇಮೊದಲಾದವರನ್ನು ಪರಾಸ್ತಮಾಡಿ ಗುಟ್ಟಬೆಟ್ಟಗಳಿಗೆ ಅಟ್ಟಿ ಹೇಗೆ ರಾಜ್ಯಸ್ಥಾಪನ ಮಾಡಿದರೆಂಬುದನ್ನು ಋಗ್ವೇದದ ಋಕ್ಕುಗಳಿಂದ ತಿಳಿಯಬಹುದೆಂದೂ, ಬ್ರಹ್ಮಾವರ್ತದ ಪ್ರಾಚೀನಾರ್ಯರು ಶತದ್ರುನದಿಯನ್ನು ದಾಟಿ ಗಂಗಾಯಮುನಾತೀರದಲ್ಲಿ ಅನೇಕರಾಜ್ಯಸ್ಥಾಪನಮಾಡಿದರೆಂಬುದನ್ನು ಬ್ರಾಹ್ಮಣ ಮತ್ತು ಉಪನಿಷದ್ಗ್ರಂಥಗಳಿಂದ ತಿಳಿಯಬಹುದೆಂದೂ, ಯಾವಕಾಲದಲ್ಲಿ ಕುರು, ಪಾಂಚಾಲ, ವಿದೇಹ ಮತ್ತು ಕಾಶಿಯವರು ತಮ್ಮ ಬಾಹುಬಲದಿಂದ ಗಂಡಕೀನದಿಯ ಪರ್ಯಂತವಿರುವ ದೇಶಗಳನ್ನು ಅಧಿಕೃತಮಾಡಿಕೊಂಡರೆಂಬುದನ್ನು ರಾಮಾಯಣಮಹಾಭಾರತಾದಿಗ್ರಂಥಗಳಿಂದ ತಿಳಿಯಬಹುದೆಂದೂ, ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಬೌದ್ಧತ್ರಿಪಿಟಿಕಗಳು, ಗ್ರೀಕರು ಬರೆ

ದಿಟ್ಟಿರುವ ಪ್ರಾಚೀನಭರತವರ್ಷದಉಲ್ಲೇಖಗಳು, ಚೀಣಾಪ್ರವಾಸಿಗಳು ಬರೆದಿಟ್ಟಿರುವ ಚರಿತೆಗಳು, ಕಾಳಿದಾಸಾದಿಮಹಾಕವಿಗಳ ಕಾವ್ಯಗಳು ಇವೇ ಮೊದಲಾದುವುಗಳಿಂದ ಮಗಧರಾಜ್ಯವು ಆರ್ಯಧರ್ಮಗ್ರಹಣ ಮಾಡಿ ಹೇಗೆ ಪ್ರಸಿದ್ಧಿಗೆ ಬಂದಿತೆಂಬುದನ್ನೂ ಕಪಿಲ, ಗೌತಮ, ಕಣಾದ ಮುಂತಾದ ಮಹರ್ಷಿಗಳು ಷಡ್ದರ್ಶನಗಳನ್ನು ರಚಿಸಿದರೆಂಬುದನ್ನೂ ಮಹಾತ್ಮನಾದ ಬುದ್ಧನು ಹೇಗೆ ತನ್ನ ಮತವನ್ನು ಪ್ರಸರಿಸಿದನೆಂಬುದನ್ನೂ ಮುರಾಪುತ್ರನಾದ ಚಂದ್ರಗುಪ್ತನು ಏಕಚ್ಛತ್ರಾಧಿಪತ್ಯವನ್ನು ಪಡೆಸಿ ಹೇಗೆ ಭರತಖಂಡವನ್ನಾಳಿದನೆಂಬುದನ್ನೂ, ಅಲ್ಲಲ್ಲಿ ದೊರೆಯುವ ಶಿಲಾಶಾಸನಗಳಿಂದ ಅಶೋಕನು ಹೇಗೆ ಬುದ್ಧಧರ್ಮಕ್ಕೆ ಉತ್ತೇಜನಕೊಟ್ಟನೆಂಬುದನ್ನೂ ಮೌರ್ಯವಂಶದ ನಂತರ ದಕ್ಷಿಣಾಪಥದ ಆಂಧ್ರರಾಜರೂ ಕನ್ಯಾಕುಬ್ಜದ ಗುಪ್ತವಂಶೀಯರೂ ಹೇಗೆ ಪ್ರಖ್ಯಾತರಾಗಿದ್ದರೆಂಬುದನ್ನೂ ಆಗಣಸಾಮಾಜಿಕ ನಡೆವಳಿಕೆಗಳು ಹೇಗಿತ್ತೆಂಬುದನ್ನೂ ಅನಂತರ ಪ್ರಾಚೀನಹಿಂದೂರಾಜ್ಯವು ಧ್ವಂಸವಾಗಿ ಮುಸಲ್ಮಾನರ ಮೂಲಕ ಹೇಗೆ ಆಂಗ್ಲರ ವಶವರ್ತಿಯಾದುದೆಂಬುದನ್ನೂ ತಿಳಿಯಬಹುದೆಂದು ಹೇಳುವರು. ಆದರೂ ಇವು ಚಾರಿತ್ರಕಶಬ್ದಾರ್ಥಕ್ಕೆ ಬೇಕಾದ ಸಂಪೂರ್ಣ ವಿವರಣಗಳನ್ನೊಳಕೊಂಡಿಲ್ಲದ್ದರಿಂದಲೂ ಈಗಣ ಚಾರಿತ್ರಕದೃಷ್ಟಿಯಿಂದ ಸಂಶಯಕ್ಕಾಸ್ಪದವಿಲ್ಲದೆ ಹೇಳಲು ಬೇಕಾದ ಸಾಧನಗಳು ದೊರೆಯದುದರಿಂದಲೂ ಮೇಲೆ ಹೇಳಿದ ನಾಸ್ತಿಕವಾದವನ್ನೇ ಸಮರ್ಥಿಸಬೇಕಾದ ನಮ್ಮ ದುರ್ದೈವವನ್ನು ಕುರಿತು ವಿಷಾದಿಸಬೇಕಾಗಿದೆ.

ಭಾಣಗಳನ್ನು ಕೇವಲ ಶೃಂಗಾರರಸಪ್ರಧಾನಗಳೆಂದು ಪಂಡಿತರನೇಕರು ಓದುವುದಿಲ್ಲ. ಅವುಗಳಲ್ಲಿ ದೇಶ, ಕಾಲ, ಸಾಂಘಿಕ ವಿಚಾರಗಳು ಸಮ್ಯಗ್ವರ್ಣಿತವಾಗಿರುವುದರಿಂದ ಚರಿತ್ರಕಾರರಿಗೆ ಇವು ಬಹಳ ಸಹಕಾರಿಗಳಾಗಿರುತ್ತವೆ. ಇಂತಹ ಎಷ್ಟೋ ನಾಟಕಗಳೂ ಭಾಣಪ್ರಹಸನಗಳೂ ಕಾವ್ಯಗಳೂ ಹೆಸರಿಗೆಮಾತ್ರ ದೊರೆಯುವುವು. ಅವುಗಳಲ್ಲಿ ಕೆಲವನ್ನು ಕೊಟ್ಟಿದೆ.

**ಭಾಣಗಳು** :—ಅಂಬಾಲ, ಅನಂಗತಿಲಕ, ಅನಂಗಬ್ರಹ್ಮವಿದ್ಯಾವಿಲಾಸ, ಅನಂಗಜೀವನ, ಅನಂಗಮಂಗಳ ಅನಂಗಸರ್ವಸ್ವ, ಅನಂಗವಿಜಯ, ಕೋಲ, ಗೋಪಾಲಲೀಲಾರ್ಣವ, ಹರಿವಿಲಾಸ, ಕಾಮವಿಲಾಸ, ಕಂದರ್ಪದರ್ಪಣ, ಕೇರಳಾಭರಣ, ಲೀಲಾಮಧುಕರ, ಮದನಭೂಷಣ, ಮದನಗೋಪಾಲವಿಲಾಸ, ಮಹೇಶಮಂಗಳ, ಮಾಲಮಂಗಳ, ಮಿಶ್ರಭಾಣ, ಪಂಚಾ

ಯುಧಪ್ರಪಂಚ, ಪ್ರದ್ಯುಮ್ನಾನಂದ, ರಸವಿಲಾಸ, ರಸಿಕಜನ ರಸೋಲ್ಲಾಸ, ರಸಿಕರಂಜನ, ರಸೋಲ್ಲಾಸ, ಶಾರದಾನಂದ, ಶಾರದಾತಿಲಕ, ಸರಸಕವಿಕುಲಾನಂದ, ಶ್ರೀರಂಗರಾಜ, ಶೃಂಗಾರಚಂದ್ರಿಕ, ಶೃಂಗಾರದೀಪಿಕ, ಶೃಂಗಾರಜೀವನ, ಶೃಂಗಾರಕೋಶ, ಶೃಂಗಾರಮಂಜರಿ, ಶೃಂಗಾರಶೃಂಗಾಟಕ, ಶೃಂಗಾರಸ್ತಬಕ, ಶೃಂಗಾರಸುಧಾಕರ, ಶೃಂಗಾರರಸೋದಯ, ವಸಂತಭೂಷಣ.

**ಭಾಣಿಕೆಗಳು:**—ದಾನಕೇಳಿಕೌಮುದಿ, ಕಾಮದತ್ತಾ,

**ಛಾಯಾನಾಟಕಗಳು:**—ಹರಿದೂತ, ಪಾಂಡವಾಭ್ಯುದಯ, ರಾಮಾಭ್ಯುದಯ, ಸಾವಿತ್ರೀಚರಿತ್ರ, ಸುಭದ್ರಾಪರಿಣಯ.

**ಡಿಮ:**—ಮನ್ಮಥೋನ್ಮಥನ. ತ್ರಿಪುರದಾಹ, ವೀರಭದ್ರವಿಜೃಂಭಣ.

**ದುರಮಲ್ಲಿಕಾ:**—ಬಿಂದುಮತಿ.

**ಗೋಷ್ಠಿ:**—ರೈವತಮದನಿಕಾ.

**ಹಲ್ಲಿಸ:**—ಕೇಳಿರೈವತಕ.

**ಇಹಾಮೃಗ:**—ಕುಸುಮಶೇಖರವಿಜಯ, ಮಾಯಾಕುರಂಗಿಕಾ, ವೀರವಿಜಯ.

**ಕಾವ್ಯ:**—ಯಾದವೋದಯ.

**ನಾಟಕ:**— ಜ್ಞಾನಸೂರ್ಯೋದಯ, ಲಲಿತವಿಗ್ರಹರಾಜನಾಟಕ, ಮಂಗಳ, ಮಂಜುಳನೈಷಧ, ಮಧುರಾನಾಟಕ, ರಾಮಾಭ್ಯುದಯ, ರಾಮಚಂದ್ರನಾಟಕ, ರಾಮನಾಟಕ, ರುಕ್ಮಿಣೀನಾಟಕ, ರಾಮಾಯಣನಾಟಕ, ತುಂಬುರನಾಟಕ.

**ನಾಟಿಕ:**—ಚಂದ್ರಕಳಾ, ಚಂದ್ರಪ್ರಭಾ, ಕೃಷ್ಣಲೀಲಾ, ಕುವಲಯವಟಿ, ಮೃಗಾಂಕಲೇಖಾ, ರಾಮಾಂಕ, ರಂಭಾಮಂಜರಿ, ಶೃಂಗಾರವಾಪಿಕಾ, ಉಷಾರಾಗೋದಯ, ವಸಂತಿಕಾ.

**ನಾಟ್ಯರಾಸಕ:**—ನರ್ಮವತೀ, ವಿಲಾಸವತೀ.

**ಪ್ರಹಸನ:**—ಅದ್ಭುತರಂಗ, ಆನಂದಕೋಶ, ಭಾಸುಪ್ರಬಂಧ, ಬೃಹತ್ಸೌಭದ್ರಕ, ದೇವದುರ್ಗತಿ, ಧೂರ್ತಚರಿತ, ಧೂರ್ತಸಮಾಗಮ, ಧೂರ್ತವಿಡಂಬನ, ಹೃದಯವಿನೋದ, ಕಾಳೀಕುತೂಹಲ, ಕಾಳಿದಾಸಪ್ರಹಸನ, ಕಲಿಕೇಳಿಪ್ರಹಸನ, ಕಂದರ್ಪಕೇಳಿ, ಕಾಶೀದಾಸಪ್ರಹಸನ, ಕೌತುಕರತ್ನಾಕರ, ಕೌತುಕಸರ್ವಸ್ವ, ಮಿಥ್ಯಾಚಾರ, ಮುಂದಿತ, ನಾಟವಾಟ, ಪಲಾಂಡುಮುಂಡನ, ಪಾಷಂಡವಿಡಂಬನ, ಪಯೋಧಿಮರ್ಧನ, ಸಾಂದ್ರಕೌತೂಹಲ, ಸೋಮವಲ್ಲೀಯೋಗಾನಂದ, ಸುಭಗಾನಂದ, ಉನ್ಮತ್ತ, ವೆಂಕಟೇಶ, ವಿನೋದರಂಗ, ಯೋಗಾನಂಗ.

**ಪ್ರಕರಣ:**—ಕಾಮುದತ್ತ, ಧೂರ್ತಪ್ರಕರಣ, ಕೌಮುದೀಸುಧಾಕರ, ಪುಷ್ಪಭೂಷಿತ, ಪುಷ್ಪದೂಷಿತಕ, ತರಂಗದತ್ತ, ವಕ್ರತುಂಡಗಣನಾಯಕ.

**ಪ್ರಸ್ಥಾನ:**—ಶೃಂಗಾರತಿಲಕ.

**ಪ್ರೇಕ್ಷಣಿಕ:**—ಕೃಷ್ಣಾಭ್ಯುದಯ.

**ಪ್ರೇಂಖಣ:**—ವಾಲಿವಧ.

**ರಾಸಕ:**—ಮೇನಕಾಹಿತ.

**ತ್ರೋಟಕ:**—ಸ್ತಂಭಿತಾರಂಭ.

**ಉಲ್ಲಾಪ್ಯ:**—ದೇವೀಮಹಾದೇವ.

**ಉತ್ಸೃಷ್ಟಿಕಾಂಕ:**—ಶರ್ಮಿಷ್ಠಾಯಯಾತಿ.

**ವೀಥಿಕಾ:**—ಮಾಧವೀ.

**ಸಂಲಾಪಕ:**—ಮಾಯಾ ಕಾಪಾಲಿಕಾ.

**ಶತಕ:**—ಆನಂದಸುಂದರಿ, ಶೃಂಗಾರಮಂಜರಿ.

**ಶಿಲ್ಪಿಕ:**—ಕನಕಾವತೀ ಮಾಧವ.

**ಶ್ರೀಗದಿತ:**—ಕ್ರೀಡಾರಸಾತಲ, ಸುಭದ್ರಾಹರಣ.

**ವ್ಯಾಯೋಗ :**—ಭೀಮವಿಕ್ರಮ, ಜಾಮದಗ್ನ್ಯಜಯ; ನರಕಾಸುರ ವಿಜಯ, ನಿರ್ಭಯಭೀಮ, ಪ್ರಚಂಡಭೈರವ, ಪ್ರಚಂಡ ಗರುಡ, ಸೌಗಂಧಿಕಾಹರಣ, ವಿನತಾನಂದ.

## ಗ್ರಂಥಗಳು ದೊರೆಯದೆ ಹೆಸರುಮಾತ್ರದಿಂದ ಪ್ರಸಿದ್ಧವಾಗಿರುವ ನಾಟ್ಯಶಾಸ್ತ್ರಗಳು.

**ಧನಂಜಯ:**—ದಶರೂಪ.

**ನಂದಿ:**—ಅಭಿನಯದರ್ಪಣ, ನಾಟಕಚಂದ್ರಿಕಾ, ನಾಟಕಲಕ್ಷಣ, ನಾಟಕರತ್ನಕೋಶ, ನಾಟಕಾವತಾರ, ನಾದಸೂತ್ರ, ನಾಟ್ಯ ದರ್ಪಣ, ನಾಟ್ಯಲಕ್ಷಣ, ನಾಟ್ಯಾ (ವ) ಲೋಕನ, ನಾಟ್ಯ ಶಾಸ್ತ್ರ.

**ಪುಂಡರೀಕ:**—ನಾಟಕಲಕ್ಷಣ.

**ರೂಪಗೋಸ್ವಾಮಿ:**—ನಾಟಕಚಂದ್ರಿಕಾಲಂಕಾರ.

**ರಾಮಚಂದ್ರ:**—ನಾಟ್ಯದರ್ಪಣ.

**ಸಿಂಗಧರಣೀಶ:**—ನಾಟ್ಯಪರಿಭಾಷಾ.

**ಶ್ರೀಕಂಠ:**—ರಸಕೌಮುದೀ ನಾಟ್ಯಶಾಸ್ತ್ರ

**ಸುಂದರಮಿಶ್ರ:**—ನಾಟ್ಯಪ್ರದೀಪ.

**ತ್ರಿಲೋಕಾದಿತ್ಯ:**—ನಾಟ್ಯಾಲೋಕನ.

**ತ್ರ್ಯಂಬಕ:**—ನಾಟಕದೀಪ.

**ವಸಂತರಾಜ:**—ನಾಟ್ಯಶಾಸ್ತ್ರ.

ಇವೇ ಮೊದಲಾದುವು ಎಷ್ಟೋ ಇರುವುವು. ಗ್ರಂಥವಿಸ್ತರಭಯದಿಂದ ವಿರಮಿಸಬೇಕಾಗಿರುವುದು. ಸಾರ್ವಭೌಮನ ರತ್ನಭಂಡಾರದಲ್ಲಿರುವ ನವ ರತ್ನಗಳನ್ನು ತಂದು ತೋರಿಸಬೇಕೆಂಬ ರತ್ನಪರೀಕ್ಷಕನು ತನಗೆ ದೊರಕುವಷ್ಟು –ಒಂದು ಹಿಡಿಯನ್ನು–ಮಾತ್ರವೇ ಹೊರತಂದು ತೋರಿಸುವಂತೆ ಕವಿಸಾರ್ವ ಭೌಮನ ಕಾವ್ಯಭಂಡಾರದಲ್ಲಿರುವ ವಿಧವಿಧವಾದ ಶ್ಲೋಕರತ್ನಗಳಲ್ಲಿ ನಮಗೆ ತೋರಿದ ಕೆಲವನ್ನುಮಾತ್ರವೇ ಈ ಗ್ರಂಥದಲ್ಲಿ ಹೇಳಿ ತೋರಿಸಿದೆ. "ಭಿನ್ನ

ರುಚಿರ್ಹಿ ಲೋಕಃ " ಎಂಬುದನ್ನು ಮರೆತಿಲ್ಲ. ಚರ್ಚಾಸ್ಪದರಾದ ಪ್ರವರಸೇನ, ಮಾತೃಗುಪ್ತ, ಕಾಳಿದಾಸ, ಹರ್ಷ, ಭಾಸ ಮತ್ತು ಪ್ರಕೃತ ಭಾಸನದೆಂದು ಹೇಳುವ ಗ್ರಂಥಗಳ ವಿಚಾರವಾಗಿ ಆಯಾ ಕವಿಗಳ ಚರಿತೆಯಲ್ಲೇ ವಿವೇಚಿಸಿದೆ.

ಕಥೆಗಳನ್ನು ಹೇಳಿ ಮನಸರಂಜನಮಾಡುವುದರಲ್ಲಿ ಭಾರತೀಯರು ಅದ್ವಿತೀಯರು. ಉದಾಹರಣೆಗಾಗಿ ನಮ್ಮಲ್ಲಿ ಪ್ರಚಲಿತವಾಗಿರುವ ಕಾಳಿದಾಸ, ವಿಕ್ರಮಾದಿತ್ಯ ಮೊದಲಾದವರ ಕಥೆಗಳೇ ಸಾಕೆಂದು ತೋರುವುದು. ಇಂತಹ ಮನೋರಂಜಕಕಲ್ಪಿತಕಥೆಗಳೇ ಪ್ರಚಾರದಲ್ಲಿರುವುದು ಹೊರತು ಅವುಗಳ ತಥ್ಯಾಂಶದ ಕಡೆಗೆ ಲಕ್ಷ್ಯಕೊಟ್ಟು ಅವರವರ ಕಾಲದೇಶ ಸ್ಥಿತಿಗತಿಗಳನ್ನು ವಿಮರ್ಶಿಸಿ ಬರೆಯಲ್ಪಟ್ಟಿರುವ ದೇಶೀಯಸಾಹಿತ್ಯವು ಯಾವುದೂ ಕಂಡುಬರುವುದಿಲ್ಲ. ಇಂತಹ ಚಾರಿತ್ರಿಕ ಗ್ರಂಥರಚನೆಗೆ ವಿದೇಶೀಯಪಂಡಿತರು ನಮಗೆ ಮಾರ್ಗದರ್ಶಕರಾಗಿರುವರು. ಭಾಷಾಪ್ರೇಮಿಗಳಾದ ದೇಶೀಯಪಂಡಿತರೂ ಆಯಾ ಭಾಷೆಗಳ ಮತ್ತು ಕವಿಗಳ ವಿಚಾರವಾಗಿ ಈಚೆಗೆ ಗ್ರಂಥಗಳನ್ನು ಬರೆಯತೊಡಗಿರುವರು. ಅತ್ಯಂತ ಅಲ್ಪವಾದ ಕೀಟಕ್ಕೂ ಕೂಡ ಅದರ ಯೋಗ್ಯತೆಗೆ ತಕ್ಕಂತೆ ಮಾಡತಕ್ಕ ಕೆಲಸವಿದ್ದೇ ಇರುವುದು. ಈ ಅನಂತವಿಶ್ವಧಾಮದಲ್ಲಿ ಅಂತಹ ತಿರ್ಯಕ್ಪ್ರಾಣಿಗೂ ಕಾರ್ಯಕ್ಷೇತ್ರವಿರುವುದು. ಲೋಕರಂಜನವನ್ನುಂಟುಮಾಡಬೇಕೆಂದು ಎಲ್ಲರೂ ಅವರವರ ಯೋಗ್ಯತೆಗೆ ತಕ್ಕಂತೆ ಪ್ರಯತ್ನಪಡುವರು. ಸಂಸ್ಕೃತಸಾಹಿತ್ಯಪರಿಶೀಲನಪಟುಗಳಾದ ಪಾಶ್ಚಾತ್ಯವಿದ್ವನ್ಮಣಿಗಳು ಸಂಸ್ಕೃತಕವಿಜೀವಿತದ ವಿಚಾರವಾಗಿ ದೊರೆತಿರುವ ಅನೇಕ ವಿಷಯಗಳನ್ನು ಸಂಶೋಧಿಸಿ ಅವರವರ ಭಾಷೆಯಲ್ಲಿ ಬರೆದಿರುವರು. ಆದರೆ ಇವುಗಳಿಂದ ದೇಶೀಯ ವಿದ್ಯಾಸಂಸ್ಕೃತರಿಗೆ ಹೆಚ್ಚಾದ ಪ್ರಯೋಜನವು ದೊರೆಯದು. ದೊರೆತರೂ ಹಲವುಕಡೆ ಅನೇಕ ಕಾವ್ಯಗಳ ಹೆಸರೂ ತದಾತ್ಮಕ ವಿಮರ್ಶೆಯೂ ಲುಪ್ತವಾಗಿರುವುವು. ಇಂತಹ ನ್ಯೂನತೆಗಳನ್ನು ಸಾಧ್ಯವಾದ ಮಟ್ಟಿಗೂ ನಿವಾರಿಸಬೇಕೆಂದು ಯೋಚಿಸಿ ಈ **ಸಂಸ್ಕೃತ ಕವಿಚರಿತೆ**ಯನ್ನು ಸಂಸ್ಕೃತ ಮತ್ತು ಕನ್ನಡವನ್ನು ಬಲ್ಲ ಕನ್ನಡಿಗರಿಗಾಗಿ ಬರೆಯಲಾದುದು. ಭಾಷೆಯು ಜೀವಿತದ ಸರ್ವಸ್ವವು. ಭಾಷೋನ್ನತಿಗೆ ಕಾವ್ಯಗಳೇ ಮೂಲವು. ಕಾವ್ಯಸಮಾಲೋಕನ ಮತ್ತು ಸಮಾಲೋಚನದಿಂದ ಸಮಾಜದಲ್ಲಿ ರೂಢಮೂಲವಾಗಿರುವ ಅಸದ್ವ್ಯವಹಾರಗಳು ದೂರವಾಗಿ ಸಮಾಜವು ಸಂಸ್ಕಾರವನ್ನು ಹೊಂದಿ ಕೂಪಕೂರ್ಮಜ್ಞಾನದಿಂದುಂಟಾಗಿರುವ ಅಹಂಭಾವವು ಕಡಿಮೆಯಾಗಿ ಮುಂದೆ ಹತ್ತಬೇಕಾಗಿರುವ ಸಭ್ಯತೆಯ ಸೋಪಾನಗಳಿನ್ನೂ ಅನೇಕವಿರುವುದಾಗಿ ಕಂಡುಬರುವುದು. ಆದುದರಿಂದ ಇಂತಹ ಗ್ರಂಥ

ಗಳನ್ನು ಬರೆದು ಪ್ರಚುರಗೊಳಿಸತಕ್ಕದ್ದು ಸಕಲರ ಕರ್ತವ್ಯವಾಗಿರಬೇಕೆಂದು ತೋರಿಬಂದುದರಿಂದಲೂ ಈಚೆಗೆ ಸಂಸ್ಕೃತಸಾಹಿತ್ಯವು ಪುನರುಜ್ಜೀವನವಾಗುತ್ತಿರುವಾಗ ಯಥಾಶಕ್ತಿ ಭಾಷಾಸೇವೆಯನ್ನು ಮಾಡಬೇಕೆಂಬ ಕುತೂಹಲವುಂಟಾದುದರಿಂದಲೂ ಇದನ್ನು ಬರೆದು ಭಾಷಾಪ್ರೇಮಿಗಳ ಕಾಣಿಕೆಯಾಗಿರಲೆಂದು ಒಪ್ಪಿಸಿರುವುದಾಗಿದೆ. ಮನಮೋಹನಪುಷ್ಪವು ಅರಳಿ ವಿಶ್ವಶೋಭೆಯನ್ನು ಹೆಚ್ಚಿಸುವುದು. ಅತ್ಯಂತ ಶೀತಲವಾದ ಮಲಯಜಚಂದನವು ಘಮಘಮಿಸುತ್ತ ಲೋಕಾಮೋದಗೊಳಿಸುವುದು. ರಾಜಮುಕುಟಾಲಂಕಾರಯೋಗ್ಯವಾದ ರತ್ನರಾಶಿಯು ತನ್ನ ಕಾಂತಿಯಿಂದ ದಿಕ್ಕುದಿಕ್ಕುಗಳನ್ನು ಉಜ್ಜ್ವಲಮಾಡಿ ಬೆಳಗುವುದು. ಅಂತಹ ಸ್ಥಳಗಳಲ್ಲಿಯೂ ಕೆಲಸಕ್ಕೆಬಾರದ ಕಸಕಡ್ಡಿಗಳು ಇಲ್ಲದಿರವು. ನಾವು ಅಕಿಂಚನರೆಂದು ಹೇಳುವುದಕ್ಕೆ ಸ್ವಲ್ಪವೂ ಸಂಕೋಚವಿರದು. ನಮ್ಮ ಅಶಕ್ತತೆಯೂ ಅಪೂರ್ಣತೆಯೂ ಹೆಜ್ಜೆಹೆಜ್ಜೆಗೂ ಕಂಡು ಬರುತ್ತಿರುವುದೆಂದು ನಾವು ನಿಷ್ಕಪಟವಾಗಿಯೂ ನಿಸ್ಸಂಕೋಚವಾಗಿಯೂ ಒಪ್ಪಿಕೊಳ್ಳುವೆವು. ಸಹೃದಯ ಮತ್ತು ಸುಶಿಕ್ಷಿತಸಂಪ್ರದಾಯದವರ ಸಹಾಯ ಮತ್ತು ಸಹಾನುಭೂತಿಗಳಿದ್ದರೆ ಸಾಕು. ನಾವು ಕೃತಕಾರ್ಯರು.

ಬಹು ಶ್ರಮಸಾಧ್ಯದಿಂದಲೂ ಅತಿದ್ರವ್ಯವ್ಯಯದಿಂದಲೂ ಬರೆಯಲ್ಪಟ್ಟುದಾದ ಈ ನೂತನಗ್ರಂಥದಲ್ಲಿ ಪ್ರಮಾದಜನಿತದೋಷಗಳಿಲ್ಲವೆಂದು ಹೇಳಲಾಗುವುದಿಲ್ಲ. ಕ್ರಿ. ಶ. ಒಂದನೆಯ ಶತಮಾನದಿಂದ ಎಂಟನೆಯ ಶತಮಾನದವರೆಗೆ ಮುದ್ರಣವಾದನಂತರ ಕ್ರಿ. ಪೂ. ದ ಕವಿಜೀವಿತವು ಮುದ್ರಿಸಲ್ಪಟ್ಟುದಾದುದರಿಂದ ಕೆಲವೆಡೆಗಳಲ್ಲಿ ವ್ಯತ್ಯಾಸವು ಕಂಡು ಬರುವುದತಿಶಯವಲ್ಲ. ದೊರಕುವುದಾದ ತಪ್ಪುಗಳ ಶುದ್ಧಿಪತ್ರಿಕೆಯು ಕಡೆಯಲ್ಲಿ ಕೊಡಲ್ಪಟ್ಟಿರುವುದು. ಅದರ ಸಹಾಯದಿಂದ ಸುಶಿಕ್ಷಿತರು ತಿದ್ದಿಓದುವರೆಂದು ಭರವಸೆ. ಈ ಕವಿಸಂದಣಿಯಲ್ಲಿ ಸೇರಿಸಲಾಗದೆ ಉಳಿದುಹೋಗಿರುವ ಕೆಲವು ಕವಿಗಳ ಜೀವನಚರಿತೆಯು ಪರಿಶಿಷ್ಟದಲ್ಲಿ ಗ್ರಥಿತವಾಗಿರುವುದು. ಈ ಗ್ರಂಥವನ್ನು ಬರೆಯುವುದಕ್ಕೆ ಸಾಧಕಗಳಾದ ಅನೇಕ ಗ್ರಂಥಗಳನ್ನೊದಗಿಸಿ ಕೊಟ್ಟ ಭೈರಮಂಗಲದ ವೇ|| ಸುಬ್ಬನರಸಿಂಹಶಾಸ್ತ್ರಿಗಳವರಿಗೂ ರೇಷ್ಮೆವ್ಯಾಪಾರಿಗಳಾದ ಮ|| ಶ್ರೀ|| ಬಿ. ಪುಟ್ಟಸಾಮಯ್ಯನವರಿಗೂ ಉದ್ಯೋಗಧರ್ಮಕ್ಕಾಗಿ ಹಗಲಿರುಳು ದುಡಿದು ಬೇಸತ್ತಿದ್ದರೂ ಲೆಕ್ಕಿಸದೆ ಮುದ್ರಣದೋಲೆಗಳ ಶೋಧನೆ ( Proof-correction ) ಯನ್ನು ಮಾಡಿ ಸಮಯೋಚಿತ ಸಲಹೆಗಳನ್ನು

ಕೊಟ್ಟ ಬೆಂಗಳೂರು ಸೆಂಟ್ರಲ್‌ಕಾಲೇಜಿನ ಸಂಸ್ಕೃತ ಮುಖ್ಯಾಧ್ಯಾಪಕ ವಿದ್ಯಾವಾಚಸ್ಪತ್ಯಾದಿ ಪದವೀಭೂಷಣರಾದ ಶ್ರೀಮಾನ್ ಉ. ವೇ. ಪ್ರ. ರಾಜಗೋಪಾಲಚಕ್ರವರ್ತಿಗಳವರಿಗೂ, ಶೃಂಗಗಿರಿಯ ವೇ|| ಕವಿ ನರಸಿಂಹಭಟ್ಟರವರಿಗೂ, ವಿದ್ಯಾಖಾತೆಯಲ್ಲಿರುವ ನನ್ನ ತಮ್ಮ ಬಿ. ಕೆ. ಶ್ರೀನಿವಾಸಯ್ಯಂಗಾರ್ಯರಿಗೂ ಇನ್ನೂ ಅನೇಕಮಿತ್ರರಿಗೂ ಗ್ರಂಥಕಾರನ ಕೃತಜ್ಞತೆಯು ಸೂರ್ಯನಿಗೆ ಮಾಡಿದ ದೀಪೋಪಚಾರದಂತಿರುವುದು.

ದೋಷದುಷ್ಟಮಿದಮಿತ್ಯವಜ್ಞಯಾ |
ಹಾತುಮಿಚ್ಛತ ನ ಜಾತು ಸಾಧವಃ ||
ಶೈವಲಂ ಕಿಲ ವಿಹಾಯ ಕೇವಲಂ |
ನಿರ್ಮಲಂ ಕಿಮು ನ ಪೀಯತೇ ಜಲಂ ||

ಇತಿ—

ಕ್ರಿ. ಶ. ೧೯೨೮. ಎಂ. ಎ. ಶ್ರೀನಿವಾಸಯ್ಯಂಗಾರ್.

# Bibliography



1 R. C. Dutt's Civilisation in Ancient India.
2 R. G. Dutt's Ancient India.
3 R. P. H. Griffith's Ramayana of Valmiki
4 History of the Classical Sanskrit Literature
by Prof. M. Krishnamacharya.
5 Sri Ramakala Nirnayabodhini
by Venkatasundaracharya.
6 Hindu Astronomy.
7 Genealogy of the Hindus.
8 Asiatic Re-searches
9 Mahabharata–A Criticism by Mr. C. V. Vaidya.
10 Max Muller's Renascence of History of Sanskrit Litt.
11 Vicissitudes of Aryan Civilisation in India
by Mr. M. M. Kunte.
12 John Garrett's Classical Dictionary of India.
13 John Dowson's Classical Dict. of Hindu Mythology.
14 Theodore Goldstucker's Panini and his place in Sanskrit Literature.
15 Vincent A. Smith's Early History of India.
16 Dr. A. B. Keith's The Sanskrit Drama.
17 do Classical Sanskrit Literature.
18 Marsden's History of India.
19 Charitra Sangraha by Mr. M. B. Sreenivasaiengar.
20 The Age of Kumarajiva by Mr. Phanindar Nath Bose.
21 The Indian Theatre by E. P. Harrwitz.

22 Macdonell's History of Sanskrit Literature.
23 Prof. Max Muller's India what can it teach us.
24 Bhamaha by Pandit A. Ananthacharya.
25 The Life & Work of Buddhaghosha by B. C. Law.
26 Weber's History of Indian Literature.
27 Samskrita Kavi Jivithamu.
by Mr. Malladi Suryanarayana Sastry.
28 Dr. Fleet's Dynasties of the Canarese Districts.
29 Prabandha Chintamani by C. H. Tawney.
30 Kumaradasa & his place in Sanskrit Literature
by G. R. Nandargikar.
31 Samskrita Kavicharita in Marathi,
by Trymbaka Gurunatha Kale.
32 Epigraphica Indica Journals.
33 Cunningham's Archeological Survey Reports.
34 Indian Antiquaries.
35 Journals of Royal Asiatic Society.
36 Jeevatma in the Brahma Sutras, by A. K. Guha.
37 Essentials of Hindutva.
38 History of Education in Ancient India,
by N. N. Muzumdar.
39 An outline of the History of Sanskrit Literature
by Prof. Tarinicharan Chaudhari.
40 Dr. P. C. Ray's The History of Hindu Chemistry.
41 Hinduism the World ideal, by Harendra Nath Mitra.

&c

——:0:——

# ವಿಷಯಾನುಕ್ರಮಣಿಕೆ



## ಕ್ರಿಸ್ತಪೂರ್ವ



## ಕ್ರಿಸ್ತಶಕ

॥ ಶ್ರೀಃ ॥

# ಸಂಸ್ಕೃತಕವಿಚರಿತೆ

ವಲನ್ವೈರಿರತ್ನನೀಲಂ
ವಂದ್ಯಂ ವತ್ಸಾನುಪಾಲನಾಭಿಮತಂ ।
ವಸುದೇವಪುಣ್ಯರಾಶಿಂ
ವಲ್ಲವಡಿಂಭಾಕೃತಿಂ ಸದಾ ವಂದೇ ॥

## ಕ್ರಿಸ್ತಪೂರ್ವ

### ವಾಲ್ಮೀಕಿ

**ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಂ ।**
**ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಂ ॥**

ಇವನು ಮಹರ್ಷಿಯು, ಸಕಲವೇದಶಾಸ್ತ್ರಾರ್ಥಮರ್ಮಜ್ಞನು, ತಪೋಧನನು, ಮಹಾಕವಿ, ವಿಶ್ವಸೃಷ್ಟಿಗೆ ಪುರಾಣಪುರುಷನು ಹೇಗೆ ಮೊದಲನೆಯವನೋ ಹಾಗೆ ಕಾವ್ಯಸೃಷ್ಟಿಗೆ ಇವನು ಮೊದಲನೆಯುವನಾದುದರಿಂದ ಇವನನ್ನು '**ಆದಿಕವಿ**'ಯೆಂದು ಕರೆಯುವರು. ಇವನು ವಲ್ಮೀಕಜಾತನಾದುದರಿಂದ "**ವಾಲ್ಮೀಕಿ**"*ಯೆನಿಸಿಕೊಂಡುದಾಗಿಯೂ ಜನ್ಮತಃ ಬ್ರಾಹ್ಮಣನೆಂಬದಾಗಿಯೂ—

**ಅಹಂ ಪುರಾಕಿರಾತೇಷು ಕಿರಾತೈಸ್ಸಹವರ್ಧಿತಃ ।**
**ಜನ್ಮಮಾತ್ರಾದ್ದ್ವಿಜತ್ವಂ ಮೇ ಶೂದ್ರಾಚಾರರತಸ್ಸದಾ ॥**

**—ಅಧ್ಯಾತ್ಮರಾಮಾಯಣ. ಅಯೋಧ್ಯಾ. ೬—೬೫**

---

*** ಪ್ರತಿದ್ವಾಪರಯುಗದಲ್ಲಿಯೂ ವೇದಗಳನ್ನು ಕ್ರಮಪಡಿಸಿ ಹೆಸರುಗೊಂಡಿರುವ ಅನೇಕ ವ್ಯಾಸರುಗಳಲ್ಲಿ ಇಪ್ಪತ್ತನಾಲ್ಕನೆಯವನೂ ಭೃಗುವಂಶೀಯನೂ ಋಕ್ಷ ಮತ್ತು ವಾಲ್ಮೀಕಿ ಎಂಬ ಅಪರನಾಮಗಳನ್ನು ಹೊಂದಿದ್ದ ವಾಲ್ಮೀಕಿಯು ಇವನಲ್ಲ. (ವಿಷ್ಣು ಪುರಾಣ)**

ವಲ್ಮೀಕಾನ್ನಿರ್ಗತಶ್ಚಾಹಂ ನೀಹಾರಾದಿವ ಭಾಸ್ಕರಃ ।
ಮಾಮಪ್ಯಾಹುರ್ಮುನಿಗಣಾಃ 'ವಾಲ್ಮೀಕಿ'ಸ್ತ್ವಂ ಮುನೀಶ್ವರ ||
—ಅ. ರಾ. ಅಯೋ. ೬—೮೫

ಎಂಬ ಶ್ಲೋಕಗಳಿಂದ ತಿಳಿಯಬರುತ್ತದೆ. ಇವನು ವಲ್ಮೀಕಜಾತನಾಗುವ ಮೊದಲು ಯಾವ ಹೆಸರಿದ್ದಿತೆಂಬುದು ತಿಳಿಯದು.

ಇವನು ಬಹುಕಾಲದವರೆಗೆ ಮಹಾತಪಸ್ಸನ್ನು ಮಾಡುತ್ತಿರಲು ಇವನ ಮೇಲೆ ದೊಡ್ಡ ಹುತ್ತವು ಬೆಳೆದು ಕಾಣದಂತಾದನು. ಆಗವರುಣ(ಪ್ರಚೇತ)ನು ಮಳೆಯನ್ನು ಸುರಿಸಿ ಹುತ್ತವನ್ನು ಕರಗಿಸಿಬಿಟ್ಟನಾದುದರಿಂದ **ಪ್ರಾಚೇತಸ**ನೆಂದು ನಾಮಾಂತರವಿದ್ದುದಾಗಿ ತಿಳಿಯಬರುತ್ತದೆ. ಇವನು ಮಹಾತಪಸ್ವಿಯಾಗಿ ಶಮದಮಾದಿಗುಣಸಂಪನ್ನನಾಗಿದ್ದುದರಿಂದ "**ತಪಸ್ವಿ**" ಎಂಬ ಹೆಸರಿನಿಂದಲೇ ಪ್ರಸಿದ್ಧನಾಗಿರುವನು.

ಇವನ ಆಶ್ರಮವು ಚಿತ್ರಕೂಟಪರ್ವತದ ತಪ್ಪಲಿನಲ್ಲಿ ಗಂಗಾನದಿ*ಯ ದಡದಲ್ಲಿದ್ದುದಾಗಿ—

ತತಸ್ತೌ ಪಾದಚಾರೇಣ ಗಚ್ಛಂತೌ ಸಹಸೀತಯಾ ।
ರಮ್ಯಮಾಸೇದತುಃ ಶೈಲಂ ಚಿತ್ರಕೂಟಂ ಮನೋಹರಂ ||
—ವಾಲ್ಮೀಕಿರಾಮಾಯಣ ಅಯೋ. ೫೬—೧೨

. . . ತಂ ತು ಪರ್ವತಮಾಸಾದ್ಯ ನಾನಾಪಕ್ಷಿಗಣಾಯುತಂ || —೧೪
. . . ಅಭಿಗಮ್ಯಾಶ್ರಮಂ ಸರ್ವೇ ವಾಲ್ಮೀಕಿಮಭಿವಾದಯನ್ || —೧೬

ಎಂಬುದರಿಂದ ತಿಳಿಯಬರುತ್ತದೆ. ಇವನಿಗೂ ಕೋಸಲ ಮತ್ತು ವಿದೇಹ ರಾಜ್ಯದ ಅರಸರಿಗೂ ಪರಸ್ಪರ ಗೌರವವೂ ಭಕ್ತಿಯೂ ಪರಿಚಯವೂ ಇದ್ದುದಾಗಿ—

ತದೇತಜ್ಜಾಹ್ನವೀತೀರೇ ಬ್ರಹ್ಮರ್ಷೀಣಾಂ ತಪೋವನಂ ।
ಪುಣ್ಯಂ ಚ ರಮಣೀಯಂ ಚ ಮಾ ವಿಷಾದಂ ಕೃಥಾಃ ಶುಭೇ ||
—ಉತ್ತರ. ೪೭—೧೫

. . . ರಾಜ್ಞೋ ದಶರಥಸ್ಯೈವ ಪಿತುರ್ಮೇ ಮುನಿಪುಂಗವಃ || ೪೭—೧೬
. . . ಸಖಾ ಪರಮಕೋ ವಿಪ್ರೋ ವಾಲ್ಮೀಕಿಸ್ಸುಮಹಾಯಶಾಃ || ೪೭—೧೭

ಎಂಬ ಲಕ್ಷ್ಮಣನ ಹೇಳಿಕೆಯಿಂದಲೂ—

ಸ್ನುಷಾ ದಶರಥಸ್ಯ ತ್ವಂ ರಾಮಸ್ಯ ಮಹಿಷೀ ಪ್ರಿಯಾ ।
ಜನಕಸ್ಯ ಸುತಾ ರಾಜ್ಞಃ ಸ್ವಾಗತಂ ತೇ ಪತಿವ್ರತೇ ||—ಉತ್ತರ. ೪೯—೮
. . . . . . . . . . . . . . ।

* ಇದಕ್ಕೆ 'ಮಂದಾಕಿನೀ' ಎಂದೂ ಹೆಸರಿರುವುದು.

ಯಥಾ ಸ್ವರ್ಗಸಮಭ್ಯೇತ್ಯ ವಿಷಾದಂ ಚೈವ ಮಾ ಕೃಥಾಃ ॥　　—೧೨

ಎಂಬ ವಾಲ್ಮೀಕಿಯ ಹೇಳಿಕೆಯಿಂದಲೂ ವ್ಯಕ್ತಪಡುತ್ತದೆ.

ಕೋಸಲರೂ ವಿದೇಹರೂ ಮತ್ತು ಕಾಶೀಯರೂ ತಮ್ಮ ವಸತಿಗಳನ್ನು ಸ್ಥಾಪಿಸಲು ಕಾಡುಗಳನ್ನು ಕಡಿದು ಮುಂದರಿಯುತ್ತಾ ಯಮುನಾ ಮತ್ತು ಗಂಗಾನದಿಗಳ ಮಧ್ಯಪ್ರದೇಶಗಳಲ್ಲಿರುವ ಸ್ಥಳಗಳನ್ನು ಆಕ್ರಮಿಸಿಕೊಂಡರು. ಮತ್ತೆ ಕೆಲವರು ಗಂಗಾನದಿಯನ್ನು ದಾಟಿ ಅದರ ಪೂರ್ವದಿಕ್ಕಿನಲ್ಲಿ ತಮ್ಮ ವಸತಿಗಳನ್ನೂ ಹೊಸಹೊಸದಾದ ರಾಜ್ಯಗಳನ್ನೂ ಸ್ಥಾಪಿಸಿದರು. ಆಗಣ ಕೆಲವು ಗ್ರಂಥಾಧಾರಗಳಿಂದ ಈಗಣ ಅಯೋಧ್ಯೆಯೆನಿಸಿಕೊಳ್ಳುವ ಪ್ರದೇಶದಲ್ಲಿ ಕೋಸಲರೂ, ಬಿಹಾರಿನ ಉತ್ತರದಲ್ಲಿ ವಿದೇಹರೂ ಕಾಶಿಯ ಸುತ್ತಮುತ್ತಲಣ ಪ್ರದೇಶದಲ್ಲಿ ಕಾಶೀಯರೂ ಅತ್ಯಂತ ನಾಗರಿಕರಾಗಿ ವಿದ್ಯಾಕೌಶಲದಿಂದ ಅಪ್ರತಿಹತರಾಗಿದ್ದು ರಾಜ್ಯವಾಳಿದುದಾಗಿ ತಿಳಿಯಬರುತ್ತದೆ.

ಆರ್ಯರು ಗಂಗಾನದಿಯ ಪೂರ್ವಕ್ಕೆ ಬಂದು ಹೇಗೆ ರಾಜ್ಯಭಾರವನ್ನು ವಿಸ್ತರಿಸಿ ಆಳಿದರೆಂಬ ವಿಚಾರವಾಗಿ ಗ್ರಂಥಾಂತರಗಳಲ್ಲಿ ಅಲ್ಲಲ್ಲಿ ಕೊಂಚಕೊಂಚ ದೊರೆಯುವುದಲ್ಲದೆ ಶತಪಥಬ್ರಾಹ್ಮಣದಲ್ಲಿನ ಒಂದಾನೊಂದು ವಾಕ್ಯದಲ್ಲಿಯೂ ಹೇಳಲ್ಪಟ್ಟಿದೆ. ಇದರಿಂದ ಗಂಡಕೀ*ನದಿಯು ಕೋಸಲ ಮತ್ತು ವಿದೇಹರಾಜ್ಯಗಳ ಎಲ್ಲೆಯಾಗಿದ್ದಿತೆಂಬ ವಿಚಾರವು ಸ್ಪಷ್ಟಪಡುತ್ತದೆ. ಹೀಗಾಗಿ ಕೋಸಲರು ಗಂಡಕೀನದಿಯ ಪಶ್ಚಿಮದಲ್ಲಿಯೂ ವಿದೇಹರು ಗಂಡಕೀನದಿಯ ಪೂರ್ವದಿಕ್ಕಿನಲ್ಲಿಯೂ ರಾಜ್ಯವಾಳುತ್ತಿರುವಾಗ ಕಾಲಕ್ರಮದಲ್ಲಿ ಕೆಲವು ಶತಮಾನಗಳನಂತರ ಉತ್ತರ ಇಂಡಿಯಾದಲ್ಲಿ ವಿದೇಹರಾಜ್ಯವು ವಿದ್ಯಾವೈದುಷ್ಯದಲ್ಲಿಯೂ ಸಾಮರ್ಥ್ಯದಲ್ಲಿಯೂ ನಾಗರಿಕತೆಯಲ್ಲಿಯೂ ಅಸದೃಶವಾದ ರಾಜ್ಯವಾಗಿ ಪರಿಣಮಿಸಿ ಖ್ಯಾತಿಯನ್ನು ಹೊಂದಿತು.

ಭರತಖಂಡದಲ್ಲಿ ಆಳಿದ ವಿದೇಹದರಸರಲ್ಲಿ ಜನಕನು ಮುಖ್ಯನು. ಇವನು ವಿದ್ಯಾವೈದುಷ್ಯದಲ್ಲಿ ಹೇಗೆ ಅತುಲನೋ ಹಾಗೆಯೇ ಪರಾಕ್ರಮದಲ್ಲಿಯೂ ಹೆಸರುಗೊಂಡಿದ್ದನು. ಇವನ ಆಸ್ಥಾನವು ಪಂಡಿತವರ್ಯರಾದ ವಿದ್ವನ್ಮಣಿಗಳ ಕೇಂದ್ರಸ್ಥಾನವಾಗಿಯೂ ವಿಹಾರಭೂಮಿಯಾಗಿಯೂ ಇರುತ್ತಿದ್ದಿತು. ಜನಕನು ಈ ಪಂಡಿತರೊಡನೆ ಆತ್ಮಾನಾತ್ಮ ವಿಚಾರವನ್ನು ಮಾಡಿ ಚರ್ಚಿಸುವ ವಾಡಿಕೆಯು ಇದ್ದಿತು. ಆದುದರಿಂದ ವಿದ್ವಾಂಸರು ಯಾವಾಗಲೂ ಇವನೊಡನೆ ಎಡೆಬಿಡದೆ ಇರುತ್ತಿದ್ದರು. ಕಾಶೀರಾಜನಾದ ಅಜಾತಶತ್ರುವು ತಾನು

---

* ಇದಕ್ಕೆ 'ಸದಾನೀರ'ವೆಂದೂ ಹೆಸರುಂಟು.

ಮಹಾವಿದ್ಯಾವಂತನೂ ಪಂಡಿತಾಶ್ರಯನೂ ಆಗಿರುತ್ತಿದ್ದರೂ ಪಂಡಿತಪ್ರಕಾಂಡರೆಲ್ಲರೂ ಅವನನ್ನು ಬಿಟ್ಟು ಜನಕನ ಆಶ್ರಯವನ್ನು ಹೊಂದುತ್ತಿದ್ದುದಾಗಿ ಕೊರತೆಪಟ್ಟುದು ಬೃಹದಾರಣ್ಯಕೋಪನಿಷತ್ತಿನಿಂದ ವ್ಯಕ್ತವಾಗುತ್ತದೆ.¶

ಜನಕನ ಖ್ಯಾತಿಗೆ ಇವನ ಆಸ್ಥಾನಪುರೋಹಿತನಾದ (ಮಂತ್ರಿ?)ಯಾಜ್ಞವಲ್ಕ್ಯ ವಾಜಸನೇಯನೂ ಕಾರಣನಾಗಿದ್ದನು. ಇವನು ರಾಜನಾದ ಜನಕನ ಸಹಾಯದಿಂದ ಯಜುರ್ವೇದವನ್ನು ತಿದ್ದುಪಡಿಮಾಡಿ, "ಶುಕ್ಲಯಜುರ್ವೇದ"ವೆಂದು ಕರೆದನು. ಇದಕ್ಕೆ "ವಾಜಸನೇಯವೇದ"ವೆಂದೂ ಹೆಸರು. ಇದು ಕೊನೆಕೊನೆಗೆ ಹೆಚ್ಚು ವಿಶದವಾಗಿ ಬರೆಯಲ್ಪಟ್ಟು "ಶತಪಥಬ್ರಾಹ್ಮಣ"*ವೆಂದು ಕರೆಯಲ್ಪಟ್ಟಿರುವುದು. ಇದಕ್ಕಾಗಿ ಜನಕರಾಜನ ಸಭೆಯ ಪಂಡಿತರೆಲ್ಲರೂ ಬಹುಕಷ್ಟಪಟ್ಟರಾದರೂ ಇಂತಹ ಅಸಾಧ್ಯ ಗ್ರಂಥವನ್ನು ಪ್ರಾರಂಭಿಸಿದ ಕೀರ್ತಿಯು ಯಾಜ್ಞವಲ್ಕ್ಯವಾಜಸನೇಯನಿಗೆ ಸಲ್ಲತಕ್ಕದ್ದು. ಇಂತಿರುವಲ್ಲಿ ಅಧ್ಯಾತ್ಮ ವಿಚಾರದಲ್ಲಿ ಕ್ಷತ್ರಿಯರು ಕೂಡ ಈ ಪುರೋಹಿತರಿಗಿಂತ ಹೆಚ್ಚುಹೆಚ್ಚು ಮುಂದಾಗಲಸುವಾದರು.

ಇವರಲ್ಲಿ ಜನಕನು ಮುಖ್ಯನೆನಿಸಿಕೊಂಡನು. ಈ ವಿಚಾರಗಳು ಶತಪಥಬ್ರಾಹ್ಮಣ† ಛಾಂದೋಗ್ಯ‡ ಮತ್ತು ಬೃಹದಾರಣ್ಯಕೋಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ.$

**ರಾಮಾಯಣ ಕಾಲವಿಚಾರ:**— ಈ ವಿಚಾರದಲ್ಲಿ ಪಾಶ್ಚಾತ್ಯಪಂಡಿತರ ಹೇಳಿಕೆಯು ಹೀಗಿರುವುದು—

(೧) ಸರ್. ವಿಲಿಯಂ ಜೋನ್ಸ್‌ರವರು ಕ್ರಿ. ಪೂ. ೨೦೨೯ ವರ್ಷಗಳ ಹಿಂದೆ ರಾಮಾಯಣವು ಬರೆಯಲ್ಪಟ್ಟಿರಬೇಕೆಂದೂ–

(೨) ಮಿ. ಟಾಡ್‌ರವರು ಕ್ರಿ. ಪೂ. ೧೧೦೦ ವರ್ಷಗಳ ಹಿಂದಿನದೆಂದೂ–

(೩) ಮಿ. ಬೆಂಟ್ಲೀರವರು ಕ್ರಿ.ಪೂ.೯೫೦ ವರ್ಷಗಳ ಹಿಂದಿನದೆಂದೂ§

¶ ಬೃಹದಾರಣ್ಯಕೋಪನಿಷತ್ II 1. 1.

* ಶತಪಥಬ್ರಾಹ್ಮಣ XI. 4—5. X. 6—1—1.

† ಛಂದೋಗ್ಯ V. 3.

‡ Ibid. I. 8.

$ R. C. Dutt's Ancient India Chap. III, P. 141—146.

§ R. T. H. Griffith's *Ramayana of Valmiki* Intro. P. 2.

(೪) ಎಂ. ಗ್ಯಾರಿಸಿಯೋರವರು ಕ್ರಿ. ಪೂ. ೧೩೦೦ ವರ್ಷಗಳ ಹಿಂದಿನದೆಂದೂ ಹೇಳುವರು.

ಪಂಡಿತ ರಮೇಶಚಂದ್ರದತ್ತರವರು ಕ್ರಿ. ಪೂ. ೧೪೦೦ ರಿಂದ ೧೦೦೦ದ ವರೆಗಿನ ಹಿಂದಣದೆಂದು ಹೇಳುವರು.† ಈಚಿನ ಶೋಧಕರು ಬುದ್ಧನಿಗಿಂತ ಹಿಂದೆ ರಾಮಾಯಣವು ಬರೆಯಲ್ಪಟ್ಟಿರಬೇಕೆಂದೂ ಬುದ್ಧನು ಜನಿಸಿದುದು ಕ್ರಿ. ಪೂ. ೬ ರಿಂದ ೫ ನೆಯ ಶತಮಾನವೆಂದೂ ಹೇಳುವರು.

ಆದರೆ ಈ ಕೆಳಗೆ ಹೇಳಿರುವ ಆಧಾರಗಳಿಂದ ರಾಮಾಯಣವು ಮೇಲೆ ಹೇಳಿರುವ ಕಾಲಕ್ಕಿಂತಲೂ ಪ್ರಾಚೀನವಾದುದಾಗಿರಬೇಕೆಂದು ತಿಳಿಯಬರುತ್ತದೆ—

(೧) ಕ್ರಿ. ಪೂ. ೩ನೆಯ ಶತಮಾನದಲ್ಲಿದ್ದ ಮೆಗಾಸ್ತನೀಸನು ಮಗಧ ರಾಜ್ಯದಲ್ಲಿ ಸತಿಹೋಗುವುದು ಬಳಿಕೆಯಲ್ಲಿದ್ದಿತೆಂದು ಬರೆದಿರುವನು. ರಾಮಾಯಣದಲ್ಲಿ ಈ ವಿಚಾರವೇ ಇರುವುದಿಲ್ಲ.

(೨) ಬುದ್ಧನ ವಿಚಾರವು ರಾಮಾಯಣದಲ್ಲಿ ಎಲ್ಲಿಯೂ ಹೇಳಲ್ಪಟ್ಟಿರುವುದಿಲ್ಲ.

(೩) ಅಶೋಕನ ಶಾಸನದ ಪ್ರಕಾರ ಕ್ರಿ. ಪೂ. ೩ನೆಯ ಶತಮಾನದಲ್ಲಿ ಪ್ರಾಕೃತವು ದೇಶಭಾಷೆ(Vernacular)ಯಾಗಿದ್ದಿತು. ರಾಮಾಯಣಶೈಲಿಯು ಶುದ್ಧವಾದುದಾಗಿರುವುದು.

(೪) ಕ್ರಿ. ಶ. ೧ ನೆಯ ಶತಮಾನದಲ್ಲಿದ್ದ ಗ್ರೀಸುದೇಶದ ಡಯನ್ ಕ್ರೈಸಾಸ್ಟೋಮಸ್ ಎಂಬ ಲೇಖಕನೊಬ್ಬನು ರಾಮಾಯಣ ಮತ್ತು ಮಹಾಭಾರತಗ್ರಂಥಗಳು ಹೋಮರನ ಕಾವ್ಯವನ್ನು ಹೋಲುವುವಾಗಿಯೂ ಕ್ರಿ. ಪೂ. ೪ ನೆಯ ಶತಮಾನದಲ್ಲಿಯೂ ಮತ್ತು ಅದಕ್ಕೆ ಪೂರ್ವದಲ್ಲಿಯೂ ಹೆಚ್ಚು ಗೌರವದಿಂದ ವ್ಯವಹರಿಸಲ್ಪಡುತ್ತಿದ್ದಿತಾಗಿಯೂ ಹೇಳಿರುವನು.§

(೫) ಪಾಳೀಭಾಷೆಯಲ್ಲಿ ಬರೆಯಲ್ಪಟ್ಟಿರುವ 'ದಶರಥಜಾತಕ'ವೆಂಬುದರಲ್ಲಿ ರಾಮಾಯಣದ ಕಥೆಯು ಭಿನ್ನವಿಸಿ ಹೇಳಲ್ಪಟ್ಟಿರುವುದಲ್ಲದೆ ಇದರ ರಚನೆಯಲ್ಲಿ ಪ್ರಾಕೃತಶಬ್ದಜೋಡಣೆಯು ಅಲ್ಲಲ್ಲಿ ಕಂಡುಬರುವುದರಿಂದ ಬುದ್ಧನ ಜಾತಕಕಥೆಗಳಿಗಿಂತಲೂ ರಾಮಾಯಣವು ಪ್ರಾಚೀನವಾದುದು.

---

† R. C. Dutt's Ancient India Book II. Chap I P. 113.
§ The Classical Sanskrit Literature P. 9—10.

(೭) ಕೋಸಲದೇಶದ ರಾಜಧಾನಿಯು ಅಯೋಧ್ಯೆಯೆಂದು ರಾಮಾಯಣದಲ್ಲಿ ಹೇಳಲ್ಪಟ್ಟಿದೆ. ಬೌದ್ಧ ಮತ್ತು ಜೈನರಿಂದ 'ಸಾಕೇತ'ವೆಂದು ಕರೆಯಲ್ಪಟ್ಟಿದೆ.

(೭) ಲವನು ಶ್ರಾವಸ್ತೀನಗರದಲ್ಲಾಳುತ್ತಿದ್ದಾಗ ಕೋಸಲದೇಶದ ಪ್ರಾಚೀನರಾಜಧಾನಿಯು ಅಯೋಧ್ಯೆಯಾಗಿದ್ದಿತು. ಬುದ್ಧನ ಕಾಲದಲ್ಲಿ ಪ್ರಸೇನಜಿದ್ರಾಜನಿಗೆ ಕೋಸಲರಾಜಧಾನಿಯು ಶ್ರಾವಸ್ತಿಯಾಗಿದ್ದಿತು.

(೮) ರಾಮಾಯಣದಲ್ಲಿ 'ಮಿಥಿಲಾ' ಮತ್ತು 'ವಿಶಾಲಾ' ರಾಜ್ಯಗಳು ಬೇರೆ ಬೇರೆಯೆಂದು ಹೇಳಲ್ಪಟ್ಟಿದೆ. ಬುದ್ಧನ ಕಾಲದಲ್ಲಿ ಮಿಥಿಲೆಯು ವಿಶಾಲ ರಾಜ್ಯಕ್ಕೆ ಸೇರಿ ಒಂದಾಗಿಹೋಗಿದೆ.

(೯) ರಾಮಾಯಣದಲ್ಲಿ ಹೇಳಲ್ಪಟ್ಟಿರುವ ವಂಶಪಾರಂಪರ್ಯ ರಾಜ್ಯಭಾರವು ತಪ್ಪಿಹೋಗಿ ಕ್ರಿ. ಪೂ. ಐದನೆಯ ಶತಮಾನದಲ್ಲಿ ಬೇರೆ ಬೇರೆ ರಾಜರುಗಳು ಮತ್ತು ರಾಜಧಾನಿಗಳು ಆದುವಾಗಿ ತಿಳಿಯಬರುತ್ತದೆ.

(೧೦) ವಿಂಧ್ಯಪರ್ವತದ ದಕ್ಷಿಣವೆಲ್ಲವೂ ಮಹತ್ತರವಾದ ಅರಣ್ಯವೆಂದೂ ಅಲ್ಲಿ ಅತಿಬಲಿಷ್ಠರಾದ ಅನಾಗರಿಕ ಕಪಿರೂಪದ ಕಾಡುಜನರಿದ್ದುದಾಗಿಯೂ ವರ್ಣಿತವಾಗಿದೆ. ಆದರೆ ಕ್ರಿ. ಪೂ. ಎಷ್ಟೋಶತಮಾನಗಳ ಹಿಂದೆ ಆಂಧ್ರಾಭಿಧಾನದಿಂದ ಆರ್ಯರು ಗೋದಾವರೀ ಮತ್ತು ಕೃಷ್ಣಾನದಿಗಳ ಸುತ್ತುಮುತ್ತಲಿನ ಪ್ರದೇಶದಲ್ಲಿ ವಸತಿಗಳನ್ನು ಸ್ಥಾಪಿಸಿ ನಾಗರಿಕವಿದ್ಯಾಕೌಶಲಸಂಪನ್ನರಾಗಿ ಹೆಸರುಗೊಂಡಿದ್ದುದಾಗಿ ತಿಳಿಯಬರುತ್ತದೆ. ಇದರಿಂದ ಆರ್ಯರು ದಕ್ಷಿಣಇಂಡಿಯಾಕ್ಕೆ ಬಂದು ರಾಜ್ಯಸ್ಥಾಪನಮಾಡುವ ಎಷ್ಟೋ ಶತಮಾನಗಳ ಹಿಂದೆ ರಾಮಾಯಣವು ಬರೆಯಲ್ಪಟ್ಟುದಾಗಿರಬೇಕು.

ವಿಷ್ಣುವಿನ ಹತ್ತು ಅವತಾರಗಳು ಕ್ರಮವಾಗಿ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರಾಮ (ಪರಶು) ರಾಮ (ಶ್ರೀರಾಮ) ಬಲರಾಮ (ಕೃಷ್ಣನ ಅಣ್ಣ) ಬೌದ್ಧ, ಕಲ್ಕಿ ಆಗಿರುತ್ತವೆ. ಕೃಷ್ಣಾವತಾರವು ದ್ವಾಪರಯುಗದಲ್ಲಿ ಆದದ್ದು. ಇದಕ್ಕಿಂತ ಹಿಂದಿನದು ರಾಮಾವತಾರವು.

ಭವಿಷ್ಯೋತ್ತರ ಪುರಾಣದಲ್ಲಿ ಶಕನಾಯಕರ ಹೆಸರನ್ನು ಹೇಳುವಾಗ—

**ಮಾಂಧಾತಾಚ ದಿಲೀಪಶ್ಚ ರಘುಶ್ಚೈವಾಜಭೂಮಿಪಃ ।**
**ತತಃ ಪಶ್ಚಾದ್ರಥೋ ರಾಮಃ ತ್ರೇತಾಯಾಂ ಶಕನಾಯಕಾಃ ॥**

ಎಂದು ಹೇಳಿರುವುದರಿಂದ ತ್ರೇತಾಯುಗದಲ್ಲಿ ರಾಮನೇ ಕಡೆಯವನಾದ ಶಕನಾಯಕನು.

ಮತ್ತು—

ಫಾಲ್ಗುನೇ ಮಾಸಿ ದೇವಸ್ಯ ನಕ್ಷತ್ರೇ ಭಗದೈವತೇ ।
ಉತ್ಸವಾವಭೃತಂ ಚಕ್ರೇ ಪುತ್ರಪೌತ್ರೈಸ್ಸಮನ್ವಿತಃ ॥

ತ್ರೇತಾಯುಗೇ ಪಂಚಮೇ ತು ರಾಜಾ ದಶರಥೋಽನಘಃ ।
ಪುತ್ರಾರ್ಥಂ ಹಯಮೇಧೇನ ಯಷ್ಟುಂ ಸಮುಪಚಕ್ರಮೇ ॥

ಎಂದು ಹೇಳಿರುವುದರಿಂದ ಐದನೆಯ ತ್ರೇತಾಯುಗದಲ್ಲಿ ಪುತ್ರಕಾಮ್ಯಾರ್ಥ ವಾಗಿ ದಶರಥನು ಹಯಮೇಧವನ್ನು ಮಾಡಿದನೆಂದು ತಿಳಿಯಬರುತ್ತದೆ. ಆದು ದರಿಂದ ರಾಮನು ತ್ರೇತಾಯುಗದಲ್ಲಿದ್ದವನು.

ಮಹಾಭಾರತದಲ್ಲಿ ವನಪರ್ವದ ೨೭೩ ರಿಂದ ೨೯೨ ರ ವರೆಗಿನ ೧೯ ಅಧ್ಯಾಯಗಳಲ್ಲಿ ಶ್ರೀರಾಮಚರಿತವು ಹೇಳಲ್ಪಟ್ಟಿರುವುದು. ರಾಮಾಯಣದಲ್ಲಿ ಎಲ್ಲಿಯೂ ಮಹಾಭಾರತದ ವಿಚಾರವುಹೇಳಲ್ಪಟ್ಟಿರುವುದಿಲ್ಲ. ಇದರಿಂದ ಮಹಾ ಭಾರತಕ್ಕಿಂತಲೂ ರಾಮಾಯಣವು ಪ್ರಾಚೀನವೆಂಬುದು ಸ್ಪಷ್ಟವಾಗುವುದು.

ವಾಲ್ಮೀಕಿಯು—

ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಂ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ ॥
ಕೋನ್ವಸ್ಮಿನ್ಸಾಂಪ್ರತಂ ಲೋಕೇ ಗುಣವಾನ್ಕಶ್ಚ ವೀರ್ಯವಾನ್ ।
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥

(ಈಗ ಈ ಲೋಕದಲ್ಲಿ ಗುಣಾಢ್ಯನೂ, ಪರಾಕ್ರಮಿಯೂ, ಧರ್ಮಶೀಲನೂ, ಸತ್ಯವಾಕ್ಯನೂ, ದೃಢವ್ರತನೂ ಆಗಿರುವವನು ಯಾರು ಎಂದು ದೇವರ್ಷಿ ಯಾದ ನಾರದರನ್ನು ಕುರಿತು ಕೇಳಿದುದಕ್ಕೆ ನಾರದರು—

ಇಕ್ಷ್ವಾಕುವಂಶಪ್ರಭವೋ ರಾಮೋ ನಾಮ ಜನೈಶ್ಶ್ರುತಃ ।

(ಎಲೆ ವಾಲ್ಮೀಕಿ! ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಪ್ರಖ್ಯಾತಪುರುಷ ನಾದ ರಾಮನು ಈರೀತಿ ಇದ್ದುದಾಗಿ) ಶ್ರೀರಾಮನು ಹುಟ್ಟಿ ಬೆಳೆದುದು ಮೊದಲುಗೊಂಡು ರಾವಣವಧಾನಂತರ ಅಯೋಧ್ಯೆಗೆ ಬಂದು ರಾಜ್ಯಾಭಿಷಿಕ್ತ ನಾದನೆಂಬ ವರೆಗಿನ ಚರಿತೆಯನ್ನು ಭೂತಕಾಲ (Past tense) ಪ್ರಯೋಗ ಗಳಿಂದ ಹೇಳಿರುವರು.

ನಂದಿಗ್ರಾಮೇ ಜಟಾಂ ಹಿತ್ವಾ ಭ್ರಾತೃಭಿಸ್ಸಹಿತೋಽನಘಃ ।
ರಾಮಃ ಸೀತಾಮನುಪ್ರಾಪ್ಯ ರಾಜ್ಯಂ ಪುನರವಾಪ್ತವಾನ್ ॥

ಇಲ್ಲಿ 'ಆಪ್ತವಾನ್' ಎಂಬ ಪದಪ್ರಯೋಗದಿಂದ ಆ ಕಾಲಕ್ಕೆ ರಾಜ್ಯ ವನ್ನು ಹೊಂದಿದನೆಂಬುದು ಸ್ಪಷ್ಟವಾಗುವುದು. ಇದರಿಂದ ಮುಂದಣ ಕಥೆ ಯಲ್ಲಿ ಭವಿಷ್ಯತ್ಕಾಲ ಪ್ರಯೋಗಗಳಿರುವುವು.

ನ ಪುತ್ರಮರಣಂ ಕೇಚಿದ್ರಕ್ಷ್ಯಂತಿ ಪುರುಷಾಃ ಕ್ವಚಿತ್ ।
ನಾರ್ಯಶ್ಚಾವಿಧವಾ ನಿತ್ಯಂ ಭವಿಷ್ಯಂತಿ ಪತಿವ್ರತಾಃ ॥
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಪ್ರಯಾಸ್ಯತಿ ॥

ಹತ್ತುಸಾವಿರದ ಹತ್ತುನೂರು ವರ್ಷಗಳು ರಾಜ್ಯವನ್ನಾಳಿದನಂತರ ರಾಮನು ಬ್ರಹ್ಮಲೋಕವನ್ನು ಹೊಂದುವನು; ಎಂದು ಹೇಳಿರುವುದರಿಂದ ನಾರದರು ಮುಂದೆ ಆಗುವ ಸಮಾಚಾರಗಳನ್ನೂ ವಾಲ್ಮೀಕಿಗೆ ಹೇಳಿದುದಾಗಿ ಸ್ಪಷ್ಟಪಡುತ್ತದೆ.

ಪ್ರಾಪ್ತರಾಜ್ಯಸ್ಯ ರಾಮಸ್ಯ ವಾಲ್ಮೀಕಿರ್ಭಗವಾನ್ ಋಷಿಃ ।
ಚಕಾರ ಚರಿತಂ ಕೃತ್ಸ್ನಂ ವಿಚಿತ್ರಪದಮರ್ಥವತ್ ॥ ೪—೧

ಅನಾಗತಂ ಚ ಯತ್ಕಿಂಚಿದ್ರಾಮಸ್ಯ ವಸುಧಾತಲೇ ।
ತಚ್ಚಕಾರೋತ್ತರೇ ಕಾವ್ಯೇ ವಾಲ್ಮೀಕಿರ್ಭಗವಾನ್ ಋಷಿಃ ॥
—ವಾ. ರಾ. ಬಾ. ೩—೩೯

ಎಂದು ಹೇಳಿರುವುದರಿಂದ ವಾಲ್ಮೀಕಿಯು ರಾಮನು ರಾಜ್ಯಾರೋಹಣಮಾಡಿದ ಅನಂತರವೇ ರಾಮಾಯಣಕಾವ್ಯವನ್ನು ಬರೆದುದಾಗಿ ಸ್ಪಷ್ಟವಾಗುವುದು.

ರಾಮನು ರಾಜ್ಯವಾಳಿದುದು ಕೆಲವು ಕಡೆ—

"ದಶವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ ।" —ಯು. ಕಾ.

ಎಂದೂ

ಕೆಲವು ಕಡೆ—

ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ಕೃತ್ವಾ ವಾಸಸ್ಯ ನಿಯಮಂ ಸ್ವಯಮೇವಾತ್ಮನಾ ಪುರಾ ॥ ಎಂದೂ
—ಉ. ಕಾ. ಸ. ೧೦೪

ಒಂದು ಕಡೆ ರಾಮನು ರಾಜ್ಯವಾಳುತ್ತ ಸುಖದಿಂದಿರಲಾಗಿ ಮೃತ್ಯುವು ಋಷಿಯ ರೂಪವನ್ನು ಧರಿಸಿ ರಾಮನ ಬಳಿಗೆ ಬಂದು ಶ್ರೀರಾಮ! ನೀನು ನಿಯಮಿಸಿದಂತೆ ಇಲ್ಲಿಗೆ ಹನ್ನೊಂದುಸಹಸ್ರ ವರ್ಷಗಳಾದುವು. ನಿನ್ನ ರಾಜ್ಯಾವಧಿಯು ಮುಗಿದುದು. ಇದನ್ನು ನಿನಗೆ ಜ್ಞಾಪಕಕೊಡಲು ಬಂದಿರುವೆನು. ನೀನು ವೈಕುಂಠಧಾಮಕ್ಕೆ ತೆರಳುವನಾಗಬೇಕು. ಎಂದೂ,

ಮತ್ತೊಂದು ಕಡೆ

ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಗಮಿಷ್ಯತಿ॥ ಎಂದೂ
—ಉ. ಕಾ. ಸ.—೫೩

ಈ ಭವಿಷ್ಯವಾಣಿಯನ್ನು ದೂರ್ವಾಸಮುನಿಯು ದಶರಥನಿಗೆ ಹೇಳಿದುದಾಗಿಯೂ ಇರುವುದು.

**ಅನಾಗತಂ ಚ ಯತ್ಕಿಂಚಿದ್ರಾಮಸ್ಯ ವಸುಧಾತಲೇ ||**

ಎಂಬಲ್ಲಿ 'ಯತ್ಕಿಂಚಿತ್' ಎಂಬ ಶಬ್ದಕ್ಕೆ ವ್ಯಾಖ್ಯಾನಕಾರರು ಮುಂದೆ ನಡೆಯುವ ಸಂಗತಿಗಳು ಕೊಂಚವೆಂದು ಬರೆದಿರುವರು.

"ಯತ್ಕಿಂಚಿದತ್ಯನೇನ ಸೀತಾವಿಸರ್ಜನಾತ್ಪೂರ್ವಕಾಲಿಕಸ್ಯ ಭೂಯಸ್ತ್ವಮನಂತರಕಾಲಸ್ಯಾಲ್ಪತ್ವಂ ದ್ಯೋತ್ಯತ ಇತಿ"

ಇದರಿಂದ ಸೀತೆಯೊಡನೆ ರಾಮನು ಹತ್ತುಸಹಸ್ರ ವರ್ಷಗಳು ರಾಜ್ಯವಾಳಿ ಅನಂತರ ಅವಳನ್ನು ಬಿಟ್ಟಿದ್ದ ಕಾಲವು ಒಂದುಸಾವಿರ ವರ್ಷವೆಂತಲೇ ಅಥವಾ ರಾಮಾಯಣಕಥೆಯಂತೆ ಹತ್ತುಸಾವಿರ ವರ್ಷಗಳಿದ್ದು ಮುಂದಣ ಕಥಾಕಾಲವು ಒಂದುಸಾವಿರ ವರ್ಷವೆಂತಲೇ ಹೇಗೆಂಬುಗು ತಿಳಿಯದಾಗಿದೆ.*

ಇದಲ್ಲದೆ ಮೇಲೆ ಹೇಳಿದ—

**ದಶವರ್ಷ . . . . ಬ್ರಹ್ಮಲೋಕಂ ಗಮಿಷ್ಯತಿ |**

ಎಂಬ ಶ್ಲೋಕದಿಂದಲೂ—

**ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ |**
**ಕೃತ್ವಾ ವಾಸಸ್ಯ ನಿಯಮಂ ಸ್ವಯಮೇವಾತ್ಮನಾ ಪುರಾ ||**

ಎಂಬ ಶ್ಲೋಕದಿಂದಲೂ ರಾಮನ ಆಯುಷ್ಯವೇ ಹನ್ನೊಂದುಸಾವಿರ ವರ್ಷಗಳೆಂಬುದು ವ್ಯಕ್ತವಾಗುತ್ತದೆ. ಶ್ರೀರಾಮನಿಗೆ ರಾಜ್ಯವು ದೊರೆಕಿದಾಗ ಅಥವಾ ಸಿಂಹಾಸನಾರೂಢನಾದಾಗ ೩೦ ವರ್ಷಗಳ ವಯಸ್ಕನೆಂದು ತಿಳಿಯಬರುತ್ತದೆ. ಹೇಗೆಂದರೆ—ವಿಶ್ವಾಮಿತ್ರನು ಯಜ್ಞವಿಘ್ನನಿವಾರಣಾರ್ಥವಾಗಿ ಶ್ರೀರಾಮನನ್ನು ಕರೆದುಕೊಂಡು ಹೋಗಲು ಬಂದಾಗ ದಶರಥನು—

**ಊನಷೋಡಷವರ್ಷೋಽಯಂ ರಾಮೋ ರಾಜೀವಲೋಚನಃ |**

**—ಬಾಲ. ಕಾ. ಸ. ೨೦**

---

* ತ್ರಯೋದಶಾಬ್ದಸಾಹಸ್ರಮಗ್ನಿಹೋತ್ರಮಖಂಡಿತಂ |

(ರಾಮನು ನಿಯತಬ್ರಹ್ಮಚರ್ಯದಿಂದ ಹದಿಮೂರುಸಾವಿರವರ್ಷಗಳ ವರೆಗೂ ನಿರಂತರವಾಗಿ ಅಗ್ನಿಹೋತ್ರಗಳನ್ನು ನಡೆಯಿಸುತ್ತಿದ್ದನು.) —ಭಾಗವತಮಹಾಪುರಾಣ ೯-೧೧-೧೭.

ರಾಮಾಯಣದಲ್ಲಿ ಹನ್ನೊಂದುಸಾವಿರವರ್ಷಗಳೆಂದೂ ಇಲ್ಲಿ ಹದಿಮೂರುಸಾವಿರ ವರ್ಷಗಳೆಂದೂ ಹೇಳಿರುವುದು ಪರಸ್ಪರವಿರುದ್ಧವಾಗಿ ತೋರುವುದು. ಆದರೆ ಹತ್ತುಸಾವಿರ ವರ್ಷಗಳು ರಾಮನು ಸೀತೆಯೊಡನೆ ಸುಖವಾಗಿದ್ದನೆಂದೂ ಉಳಿದ ನೂರು ವರ್ಷಗಳು ಸೀತೆಯನ್ನಗಲಿ ಮೂವತ್ತುನೂರುವರ್ಷಗಳಂತೆ ಕಳೆದನೆಂದೂ ಭಾವನಾದುದರಿಂದ ಪರಸ್ಪರ ವಿರೋಧವಿಲ್ಲವೆಂದು ಕೆಲವರ ಅಭಿಪ್ರಾಯ.

ಎಂದು ಹೇಳಿರುವುದರಿಂದ ರಾಮನಿಗೆ ೧೬ ವರ್ಷಗಳು ಕೂಡ ತುಂಬಿರಲಿಲ್ಲ ವೆಂಬುದು ಸ್ಪಷ್ಟವಾಗುವುದು. ಅನಂತರ ಸೀತಾವಿವಾಹವಾಗಿ ವನವಾಸಕ್ಕೆ ಹೋಗುವಾಗ ಸುಮಾರು ೨೫ ವರ್ಷಗಳು.

> ಉಷಿತ್ವಾ ದ್ವಾದಶಸಮಾ ಇಕ್ಷ್ವಾಕೂಣಾಂ ನಿವೇಶನೇ ।
> ಭುಂಜಾನಾಮಾನುಷಾನ್ ಭೋಗಾನ್ ಸರ್ವಕಾಮಸಮೃದ್ಧಿನೀ ॥
> ತತಸ್ತ್ರಯೋದಶೇ ವರ್ಷೇ ರಾಜಾ ಮಂತ್ರಯುತಪ್ರಭುಃ ।
> ಅಭಿಷೇಚಯಿತುಂ ರಾಮಂ ಸಮೇತೋ ರಾಜಮಂತ್ರಿಭಿಃ ॥

ವನವಾಸವು ೧೪ ವರ್ಷಗಳು. ಅನಂತರ ರಾಜ್ಯವಾಳಿದುದು ೧೧,೦೦೦ ವರ್ಷಗಳು. ಒಟ್ಟು ರಾಮನಾಯುಷ್ಯವು ೧೧,೦೩೯(೨೫+೧೪+೧೧,೦೦೦) ಅಥವಾ ೧೧,೦೪೦ ವರ್ಷಗಳೆಂದು ಹೇಳಬೇಕಾಗಿದೆ.

ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕುಯುಗಗಳು ಸೇರಿದರೆ ಒಂದು ಮಹಾಯುಗವೆನಿಸಿಕೊಳ್ಳುವುದು. ಇಂತಹ ಎಪ್ಪತ್ತೊಂದು ಮಹಾಯುಗಗಳಿಗೆ ಒಂದು ಮನ್ವಂತರ, ಇದುವರೆಗೆ ೬ ಮನ್ವಂತರಗಳು ಕಳೆದುಹೋಗಿರುವುವು. ಈಗ ನಡೆಯುವುದಾದ ವೈವಸ್ವತಮನ್ವಂತರದಲ್ಲಿ ೨೮ ನೆಯ ಮಹಾಯುಗವು ನಡೆಯುತ್ತಿರುವುದು. ಈ ಮನ್ವಂತರದ ೫ ನೆಯ ಮಹಾಯುಗವು ಕಳೆದ ತ್ರೇತಾಯುಗದ ನಾಲ್ಕನೆಯ ಭಾಗದಲ್ಲಿ ವಿಲಂಬಿಸಂವತ್ಸರ ಚೈತ್ರ ಶುದ್ಧ ನವಮಿ ಶ್ರೀರಾಮಜನನ.

ಪರಾಭವ ಸಂವತ್ಸರದ ಫಾಲ್ಗುಣ ಶುದ್ಧದಲ್ಲಿ ಉಪನಯನ.

ಸೌಮ್ಯಸಂವತ್ಸರದ ಫಾಲ್ಗುಣ ಶುದ್ಧ ಪೂರ್ಣಿಮಾ ಉತ್ತರಫಲ್ಗುನೀ ನಕ್ಷತ್ರದಲ್ಲಿ ಸೀತಾವಿವಾಹ.

ದುಂದುಭಿಸಂವತ್ಸರ ಚೈತ್ರಶುದ್ಧ ಪಂಚಮಿ ರಾವಣವಧಾನಂತರ ಸೀತೆಯೊಡನೆ ಭರದ್ವಾಜಾಶ್ರಮವಾಸ,
,, ,, ಷಷ್ಠಿ— ನಂದಿಗ್ರಾಮ ಪ್ರವೇಶ,
,, ,, ಸಪ್ತಮಿ— ಶ್ರೀರಾಮಪಟ್ಟಾಭಿಷೇಕ.

| | | |
|---|---|---|
| ತ್ರೇತಾಯುಗಪ್ರಮಾಣ— | ೧೨,೯೬,೦೦೦ | ವರ್ಷಗಳು. |
| ಇದರ ೪ ನೆಯ ೩ ಭಾಗ— | ೯,೭೨,೦೦೦ | ,, |
| ಅನಂತರ ಶ್ರೀರಾಮಜನನ— | ೩,೨೪,೦೦೦ | ,, |
| ದ್ವಾಪರಯುಗಪ್ರಮಾಣ— | ೮,೬೪,೦೦೦ | ,, |
| ಕಲಿಯುಗವು ಹುಟ್ಟಿ ಈಗ್ಗೆ— | ೫,೦೨೯ | ,, |

ಶ್ರೀರಾಮಜನನವಾಗಿ ಈಗ್ಗೆ— ೧೧,೯೩,೦೨೯ ವರ್ಷಗಳಾದವು
ರಾಮನ ಆಯುಷ್ಯವು— ೧೧,೦೪೦ ,,

ರಾಮಾಯಣಕಾಲವು ಈಗ್ಗೆ— ೧೧,೮೧,೯೮೯ ವರ್ಷಗಳು.

ಇದರಲ್ಲಿ ಈಗ ನಡೆಯುವ ಕ್ರಿ. ಶ. ೨೦ನೆಯ ಶತಮಾನವನ್ನು ತಳ್ಳಿಹಾಕಿ ಬಿಟ್ಟರೆ ರಾಮಾಯಣವು ಕ್ರಿ. ಪೂ. ೧೧೮೧ ಶತಮಾನಗಳ ಹಿಂದೆ ಬರೆಯಲ್ಪಟ್ಟಿತೆಂದು ಸ್ಥೂಲಮಾನದಿಂದ ವ್ಯಕ್ತವಾಗುವುದು.*

ಈಗ ಪ್ರಚಾರದಲ್ಲಿರುವ ಎಷ್ಟೋ ರಾಮಾಯಣಗಳಲ್ಲಿ ವಾಲ್ಮೀಕಿರಾಮಾಯಣ, ವಾಸಿಷ್ಠರಾಮಾಯಣ, ಶೇಷರಾಮಾಯಣ, ಅದ್ಭುತರಾಮಾಯಣ ಅಧ್ಯಾತ್ಮರಾಮಾಯಣ, ಆನಂದರಾಮಾಯಣ ಇವು ಮುಖ್ಯವಾದುವು.

ಮಹಾಕವಿವಾಲ್ಮೀಕಿಯು ಶ್ರೀಮದ್ರಾಮಾಯಣವನ್ನು ಬರೆದನಾದುದರಿಂದ ಮಹಾಕಾವ್ಯಕಾರನೆಂದೂ ತನ್ನಾಶ್ರಮಕ್ಕೆ ಬಂದ ಅತಿಥಿಗಳ ಸಂತೋಷಾರ್ಥವಾಗಿ ರಂಗಭೂಮಿಯನ್ನೇರ್ಪಡಿಸಿ ಕುಶ-ಲವರಿಂದ ರಾಮಾಯಣ ನಾಟಕವಾಡಿಸಿದುದಾಗಿ ತಿಳಿಯಬರುವುದರಿಂದ ಮಹಾನಾಟಕಕಾರನೆಂದೂ ಬೋಧೆಯಾಗುತ್ತದೆ.

ರಾಮಾಯಣವು ಇತಿಹಾಸವಾದುದಾಗಿ ಕಾವ್ಯಮರ್ಯಾದೆಯಲ್ಲಿ ಬರೆಯಲ್ಪಟ್ಟಿರುವುದರಿಂದ ಇದನ್ನು 'ಐತಿಹಾಸಿಕ ಮಹಾಕಾವ್ಯ'ವೆಂದು ಹೇಳುವರು. ವಾಲ್ಮೀಕಿಯು **ರಾಮಚರಿತೆ**ಯನ್ನು ಬರೆಯಲು ಕಾರಣ:—

ಒಂದಾನೊಂದು ದಿವಸ ಮಹರ್ಷಿಯಾದ ವಾಲ್ಮೀಕಿಯು ದೇವರ್ಷಿಯಾದ ನಾರದರನ್ನು ಕುರಿತು ಮುನಿಕುಲಲಲಾಮ! ಧೀರೋದಾತ್ತಾದಿ ಸಕಲಕಲ್ಯಾಣ ಗುಣಗಳಿಂದ ರಾರಾಜಿಸುವರಾರಾದರೂ ಪ್ರಕೃತದೊರೆಯುವರೆ? ಎಂದು ಕೇಳಿದ ವಾಲ್ಮೀಕಿಗೆ ಪ್ರತ್ಯುತ್ತರವಾಗಿ ನಾರದರು ರಾಮಾಯಣಕಥೆಯನ್ನುಪದೇಶಿಸಿ ಇಂಥಾ ಮನುಷ್ಯನು ಶ್ರೀರಾಮನು ಹೊರತು ಅನ್ಯರಾರೂ ಇಲ್ಲವೆಂದು ಹೇಳಿ ಹೊರಟುಹೋದರು. ವಾಲ್ಮೀಕಿಯು ಕಥೆಯನ್ನು ಕೇಳಿ ಆನಂದದಿಂದ, ತಮಸಾ ನದಿಗೆ ಸ್ನಾನಕ್ಕೆ ಹೋಗುತ್ತಿರುವಾಗ ಮಾರ್ಗಮಧ್ಯದಲ್ಲಿ ಸಂತೋಷದಿಂದಿರುತ್ತಿದ್ದ ಕ್ರೌಂಚಮಿಥುನವನ್ನು ನೋಡುತ್ತಿದ್ದಾಗ ಒಬ್ಬಾನೊಬ್ಬ ವ್ಯಾಧನು ಬೇರೊಂದು ಕಡೆಯಿಂದ ಬಾಣವನ್ನು ಹೂಡಿ ಗಂಡು ಹಕ್ಕಿಯನ್ನು ಕೊಲ್ಲಲು ಹೆಣ್ಣು ಹಕ್ಕಿಯು ತನ್ನ ಸ್ವಾಮಿಯು ಗತಾಸುವಾಗಿ ಹೋದುದನ್ನೂ

* **ಶ್ರೀರಾಮಕಾಲನಿರ್ಣಯಬೋಧಿನೀ ಪುಟ.** ೧—೨

ತಾನು ಅನಾಥಳಾದುದನ್ನೂ ನೆನಿಸಿ ನೆನಿಸಿ ಹಂಬಲಿಸುತ್ತಿದ್ದುದನ್ನು ನೋಡಿ ವಾಲ್ಮೀಕಿಯು ಇಂತಹ ದುರಾಗತಕೃತ್ಯವನ್ನು ನಡೆಸಿದ ವ್ಯಾಧನನ್ನು ಶಪಿಸಿ ಹೊರಟುಹೋದನು. ಆ ಶಾಪವೇ

> ಮಾನಿಷಾದ! ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ |
> ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ||

ಎಂಬ ಒಂದು ಶ್ಲೋಕರೂಪವಾಗಿ ಪರಿಣಮಿಸಿತು.

ವಾಲ್ಮೀಕಿಯು ತನ್ನಾಶ್ರಮಕ್ಕೆ ಬರುವ ವೇಳೆಗೆ ಚತುರ್ಮುಖಬ್ರಹ್ಮನು ಪ್ರತ್ಯಕ್ಷನಾದನು. ವಾಲ್ಮೀಕಿಯು ಪರಬ್ರಹ್ಮನನ್ನು ಅರ್ಘ್ಯಪಾದ್ಯಾಚಮನ ಗಳಿಂದ ಸತ್ಕರಿಸಿದನಾದರೂ ಆ ಕ್ರೌಂಚಮಿಥುನ ಮತ್ತು ಶ್ಲೋಕವಿಚಾರ ವಾಗಿ ಅನ್ಯಮನಸ್ಕನಾಗಿದ್ದುದರಿಂದ ಅದನ್ನು ತಿಳಿದ ಚತುರ್ಮುಖನು ಎಲೆ! ವಾಲ್ಮೀಕಿ! ನೀನಿತ್ತ ಶಾಪವು ಶ್ಲೋಕರೂಪವಾದುದಕ್ಕೆ ನನ್ನ ಅನುಗ್ರಹವೇ ಕಾರಣವು. ಆದುದರಿಂದ ಲೋಕದಲ್ಲಿ ಈ ಶ್ಲೋಕವು ಪ್ರಸಿದ್ಧವಾದುದಾಗಲಿ, ನೀನು ಈ ವೃತ್ತದಲ್ಲಿಯೇ ಶ್ರೀಮದ್ರಾಮಾಯಣಕಥೆಯೆಲ್ಲವನ್ನೂ ಬರೆವನಾಗು; ಸೀತಾರಾಮಲಕ್ಷ್ಮಣರ ವಿಚಾರವಾಗಿ ನಿನಗೆ ತಿಳಿದುದೆಲ್ಲವನ್ನೂ ಬರೆ; ನಿನಗೆ ಸ್ಫೂರ್ತಿಸದ ಯಾವುದಾದರೂ ವಿಚಾರಗಳಿರುವುವಾದರೆ ನನ್ನನ್ನು ಧ್ಯಾನಿಸಿದರೆ ಗೋಚರಿಸುವುವು; ಎಂದು ಹೇಳಿ ಅಂತರ್ಧಾನವಾದನು. ಅನಂತರ ವಾಲ್ಮೀಕಿಯು ಶಿಷ್ಯರೊಡಗೂಡಿ ನಾರದೋಪದೇಶ ವಿಚಾರವಾಗಿ ಯೋಚಿಸುತ್ತಾ ಹಾಗೆಯೇ ಸಮಾಧಿಸ್ಥನಾದನು. ಹೀಗೆ ಸಮಾಧಿಸ್ಥನಾದ ವಾಲ್ಮೀಕಿಗೆ ಸುಕೃತವಿಶೇಷದಿಂದ ದಶರಥ ಅವನ ಪತ್ನಿಯರೇ ಮೊದಲಾದವರೂ ಸೀತಾರಾಮ ಲಕ್ಷ್ಮಣರೂ ಕೋಸಲದೇಶದ ಅಯೋಧ್ಯೆಯಲ್ಲಿ ಆಳುತ್ತಿದ್ದಂತೆಯೂ ಇವೇ ಮೊದಲಾದ ವಿಚಾರಗಳು ನಿಜವಾಗಿರುವಂತಾಗಿ ಎಲ್ಲವೂ ಕರತಲಾಮಲಕದಂತೆ ಕಂಡುಬಂದಿತು. ಅವನು ತನ್ನ ಯೋಗಮಹಿಮೆಯಿಂದ ಹಿಂದೆ ನಡೆದುದೆಲ್ಲ ವನ್ನೂ ನೋಡಿದನಲ್ಲದೆ ಭವಿಷ್ಯದಲ್ಲಾಗಬಹುದಾದ ವಿಚಾರಗಳೆಲ್ಲವನ್ನೂ ನೋಡಿದನು. ಹೀಗೆ ಬೇಕಾದ ಕಥಾಭಾಗವೆಲ್ಲವನ್ನೂ ಸಂಪೂರ್ಣವಾಗಿ ಅರಿತು ಅನಂತರ ಶ್ಲೋಕರೂಪದಲ್ಲಿ ಬರೆಯಲು ಪ್ರಾರಂಭಿಸಿ ಇಪ್ಪತ್ತನಾಲ್ಕುಸಾವಿರ ಶ್ಲೋಕಗಳಲ್ಲಿ ರಾಮಾಯಣವನ್ನು ಸಂಪೂರ್ಣಮಾಡಿದನು. ತಾನೇನೋ ಕಥೆ ಯನ್ನು ಬರೆದುದಾಯಿತು, ಈ ಕಥೆಯನ್ನು ಹರಡುವ ಬಗೆ ಹೇಗೆಂದು ಯೋಚಿಸಿ ಸುಂದರಕಾಯರೂ ಆಶ್ರಮಪಾಲಿತರೂ ಸಕಲವಿದ್ಯಾಧೀತಸಂಪನ್ನರೂ ಸೀತಾ ತ್ಮಜರೂ ಆದ ಕುಶಲವರು ತಕ್ಕವರೆಂದು ಯೋಚಿಸಿ ಅವರಿಗೆ ರಾಮಾಯಣ ವನ್ನು ಮೊದಲಿನಿಂದ ಕೊನೆಯವರೆಗೆ ಕಂಠಪಾಠಮಾಡಿಸಿ ಹೇಳಿಸಲು, ಇದ

ಸ್ನು ಕೇಳಿದವರೆಲ್ಲರಿಗೂ ರಾಮಾಯಣ ವಿಚಾರವು ನಿಜವಾಗಿಯೂ ಪ್ರತ್ಯಕ್ಷತಃ ನಡೆದಂತೆಯೂ ಬೋಧೆಯಾಗುತ್ತಿತ್ತು. ಅನಂತರ ಈ ಇಬ್ಬರು ಸಹೋದರರೂ ಋಷಿಕುಮಾರರ ವೇಷದಿಂದ ರಾಮನ ರಾಜಧಾನಿಯಾದ ಅಯೋಧ್ಯೆಗೆ ಹೋಗಿ ಶ್ರೀರಾಮನ ಸಭೆಯಲ್ಲಿ ರಾಮಾಯಣವನ್ನು ಹೇಳುವಂತೆ ಗೊತ್ತುಮಾಡಲ್ಪಟ್ಟರು.

ರಾಮಾಯಣಕ್ಕೆ "ಗೋವಿಂದರಾಜೀಯ" "ಮಹೇಶ್ವರತೀರ್ಥೀಯ" "ತನಿಶ್ಲೋಕಿ" ಮುಂತಾದ ವ್ಯಾಖ್ಯಾನಗಳಿರುವುವು.

ರಾಮಾಯಣದ ೨ ನೆಯ ಸರ್ಗದ ಕೊನೆಯಲ್ಲಿ—

"ರಘುವರಚರಿತಂ ಮುನಿಪ್ರಣೀತಂ
ದಶಶಿರಸಶ್ಚ ವಧಂ ನಿಶಾಮಯಧ್ವಂ ||

ಎಂಧಿರುವುದರಿಂದ ವಾಲ್ಮೀಕಿಯು ರಾಮಾಯಣಕಥೆಯನ್ನು ಅಯೋಧ್ಯಾಪುರವರ್ಣನೆಯಿಂದಲೇ ಪ್ರಾರಂಭಿಸಿರಬೇಕೆಂದೂ—

ವಾಲ್ಮೀಕಿಯಿಂದ ರಚಿಸಲ್ಪಟ್ಟಿರುವ ಕಾವ್ಯವನ್ನು ನೀವೆಲ್ಲರೂ ಕೇಳಿ ಎಂಬ ಸಂಬೋಧನಾರ್ಥವು ತೋರುವುದರಿಂದ ವಾಲ್ಮೀಕಿಯ ಶಿಷ್ಯರಲ್ಲಿ ಯಾವನೋ ಒಬ್ಬನು ರಾಮಾಯಣವೆಲ್ಲವನ್ನೂ ಗುರುಮುಖದಿಂದ ಕೇಳಿ ಅದರ ವೈಭವವನ್ನು ಜನರಿಗೆ ತಿಳಿಸುವುದಕ್ಕಾಗಿ ಮೊದಲಿನ ಮೂರು ಸರ್ಗಗಳನ್ನು ಬರೆದು ಸೇರಿಸಿರುವುದಾಗಿಯೂ ಕಂಡುಬರುತ್ತದೆ. ಹಾಗಲ್ಲದೆ ವಾಲ್ಮೀಕಿಯೇ ಬರೆದುದಾಗಿದ್ದರೆ "ಮುನಿಪ್ರಣೀತಂ" ಎಂದು ಹೇಳಬೇಕಾದವಶ್ಯಕತೆಯಿರಲಿಲ್ಲ.

ಇನ್ನು ರಾಮಾಯಣಕಥಾನಿಶ್ಚಯ ಮತ್ತು ಅದರಲ್ಲಿ ಕಂಡುಬರುವ ವ್ಯಕ್ತ್ಯರ್ಥ ವಿಚಾರವಾಗಿ ಬರೆದಿರುವ ಮುಖ್ಯಪಂಡಿತರ ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹಿಸಿದೆ—

(೧) **ಪ್ರೊ. ವೀಬರವರು:**—ಆರ್ಯರು ದಕ್ಷಿಣಕ್ಕೆ ಬಂದು ಸಿಂಹಳದ್ವೀಪದಲ್ಲಿ ತಮ್ಮ ನಾಗರಿಕತೆಯನ್ನು ಹೇಗೆ ಸ್ಥಾಪಿಸಿದರೆಂಬ ಭಾಗವು ಮಾತ್ರವೇ ಚಾರಿತ್ರಕವೆಂದೂ ಅದರಲ್ಲಿ ಕಂಡುಬರುವ ವ್ಯಕ್ತಿವಿಶೇಷಗಳು ಸಂದರ್ಭಕ್ಕೆತಕ್ಕ ಹಾಗೆ ಇರುವ ನಾಮಮಾತ್ರಗಳೆಂದೂ ಋಗ್ವೇದ ಮತ್ತು ಗೃಹ್ಯಸೂತ್ರಗಳಲ್ಲಿ ಕಂಡುಬರುವ 'ಸಿತೆ' ಶಬ್ದಕ್ಕೆ ಮನುಷ್ಯತ್ವವನ್ನಾರೋಪಿಸಿ 'ಸೀತೆ'ಯೆಂದು ಕರೆದು ಅವಳಲ್ಲಿ ದೇವತ್ವವನ್ನಾರೋಪಿಸಿರುವರೆಂದೂ, ರಾಮನೆಂಬುವನು ತಮ್ಮ ಅಭಿಪ್ರಾಯದಲ್ಲಿ (ಹಲಭೃತ್) ಹಲಾಯುಧ (ನೇಗಲನ್ನು ಧರಿಸಿರುವವ) ಬಲ

ರಾಮನೆಂದೂ ಆರ್ಯರ ಹೇಳಿಕೆಗೆ ಒಳಪಟ್ಟ ಕಾಡುಜನರನ್ನು ವಾನರರೆಂದು ಕರೆದಿರಬೇಕೆಂದೂ ಇವೇ ಮೊದಲಾಗಿ ಬರೆದುಕೊಂಡಿರುವರು.

(೨) ಪಂಡಿತ ರಮೇಶಚಂದ್ರದತ್ತರವರು:—'ಸೀತಾ' ಶಬ್ದವು ಋಗ್ವೇದ ಕಾಲದಿಂದಲೂ ದೇವಭಾವವುಳ್ಳುದಾಗಿ ಗೌರವಿಸಲ್ಪಡುತ್ತಿದ್ದಿತೆಂದೂ ಆರ್ಯರು ದಕ್ಷಿಣಕ್ಕೆ ಬರಬರುತ್ತ ಉಳುಮೆಯನ್ನು ಅಭಿವೃದ್ಧಿಪಡಿಸುತ್ತಾ ಬಂದಂತೆ 'ಸಿತ'ದ ವಿಚಾರದಲ್ಲಿ ದೇವತ್ವವನ್ನಾರೋಪಿಸಿ ಮಹಾಶಾಸ್ತ್ರನೇತ್ರನಾದ ವಿದೇಹರಾಜನಾದ ಜನಕನ ಮಗಳೆಂದು ಹೇಳಿ ಅವಳು ದಕ್ಷಿಣಕ್ಕೆ ಎಂದರೆ ಸಿಂಹಳ (ಲಂಕೆ)ಕ್ಕೆ ಒಯ್ಯಲ್ಪಟ್ಟಂತೆ ಕಾವ್ಯನಿರ್ಮಾಣ ಮಾಡಿರುವುದಾಗಿ ಹೇಳಿರುವರು. ಅಲ್ಲದೆ ಕೋಸಲರಾಜನೂ ಮತ್ತು ಸೀತೆಯ ಗಂಡನೂ ಆಗಿದ್ದ ರಾಮನಾರು? ಎಂಬ ವಿಚಾರದಲ್ಲಿ ಈಚಿನ ಪುರಾಣಗಳಲ್ಲಿ ರಾಮನು ವಿಷ್ಣುವಿನ ಅವತಾರವೆಂದು ಹೇಳಲ್ಪಟ್ಟಿದೆ. ಆದರೆ ನಾವು ಹೇಳುವ ಕಾಲದಲ್ಲಿ ವಿಷ್ಣುಶಬ್ದ ಪ್ರಸಿದ್ಧಿಯು ಅಷ್ಟಾಗಿರಲಿಲ್ಲ. ಆ ಕಾಲಕ್ಕೆ ಇಂದ್ರನೇ ದೇವತೆಗಳ ಮುಖ್ಯನು ಸೂತ್ರಗ್ರಂಥಗಳಲ್ಲಿ ಸೀತೆಯು ಇಂದ್ರನ ಹೆಂಡತಿಯೆಂದು ಹೇಳಲ್ಪಟ್ಟಿದೆ. ಹೀಗಿರುವುದರಿಂದ ಋಗ್ವೇದದಲ್ಲಿ ಹೇಳಲ್ಪಟ್ಟಿರುವ ಇಂದ್ರನಿಗೆ ರಾಮನೆಂಬ ಹೆಸರನ್ನು ಕೊಟ್ಟು ಕ್ಷಾಮಾಡಂಬರಗಳನ್ನು ರಾಕ್ಷಸರೆಂಬ ಹೆಸರಿನಿಂದ ಕರೆದು ಇರಬೇಕೆಂದೂ ಹೀಗಾಗಿ ಇಂದ್ರನ ವಿಚಾರವು ರಾಮಾಯಣದಲ್ಲಿ ನಾಮಾಂತರವನ್ನು ಹೊಂದಿ ಉತ್ತರಇಂಡಿಯದಲ್ಲಿ ನಡೆದ ಚಾರಿತ್ರಕಸಂಬಂಧವಾದ ಯುದ್ಧ ಚರಿತೆಗೆ ಮೂಲಕಾರಣವಾದುದೆಂದೂ ಹೇಳಿರುವರು.

(೩) ಪ್ರೊ. ಜಾಕೊಬಿಯವರು:—

ರಾಮಾಯಣದ ಮೂಲವು ದೈವಸಂಬಂಧವನ್ನೊಳಗೊಂಡ ಕಲ್ಪಿತಕಥೆಯೆಂದೂ ವೇದದಲ್ಲಿ ಕಂಡುಬರುವ ಕೆಲವು ವ್ಯಕ್ತಿವಿಶೇಷಗಳನ್ನು ತೆಗೆದುಕೊಂಡು ಭೂಲೋಕದ ಮಾನವಲೀಲೆಗೆ ಅಳವಡಿಸಿ ಕಥೆಯು ಬರೆಯಲ್ಪಟ್ಟಿರಬೇಕೆಂದೂ ಸೀತೆಯು ಋಗ್ವೇದದಲ್ಲಿ ಬಹು ಪೂಜ್ಯವಸ್ತುವೆಂದೂ ಕೆಲವು ಗೃಹ್ಯಸೂತ್ರಗಳಲ್ಲಿ ಸೀತೆಯು ಇಂದ್ರ ಅಥವಾ ಪರ್ಜನ್ಯನ ಪತ್ನಿಯೆಂದೂ ಅವಳು ಬಹು ಸುಂದರಿಯೆಂದೂ ಅವಳನ್ನು ವಿಧವಿಧವಾಗಿ ಸ್ತುತಿಸಲ್ಪಟ್ಟಿರುವುದೂ ಕಂಡು ಬರುವುದೆಂದೂ ಇವಳು ಜನಕನ ಯಜ್ಞದಲ್ಲಿ ನೇಗಿಲಿಗೆ ಸಿಲುಕಿ ಸೀತೆಯೆಂಬ ನಾಮಾಂತರವನ್ನು ಹೊಂದಿ ಜನಕನ ಮಗಳೆಂದು ಕರೆಯಿಸಿಕೊಂಡು ಕೊನೆಗೆ ಭೂಮಿಯಲ್ಲಿಯೇ ಐಕ್ಯವಾದಳೆಂದೂ ಇವಳ ಗಂಡನೆಂದು ಹೇಳುವ ರಾಮನು ಇಂದ್ರನಲ್ಲದೆ ಬೇರೆ ಯಾರೂ ಆಗಿರನೆಂದೂ ರಾಮರಾವಣರ ಯುದ್ಧವು ಇಂದ್ರ

ಮತ್ತು ವಜ್ರಾಸುರರ ಯುದ್ಧವನ್ನು ಹೋಲುವುದೆಂದೂ ಇದು ರಾವಣನ ಮಗ ನಾದ ಇಂದ್ರಜಿತ್ತುವಿನ ಹೆಸರಿನಿಂದ ಸ್ಪಷ್ಟಪಡುವುದೆಂದೂ ಇಂದ್ರಜಿತ್ ಎಂಬ ಹೆಸರು ಋಗ್ವೇದದಲ್ಲಿ ಹೇಳಿರುವ ವೃತ್ರಾಸುರನೆಂದೂ ಹೀಗೆ ಎಷ್ಟೋ ಹೇಳಿ ಕೊಂಡಿರುವರು.†

ಇವುಗಳನ್ನೆಲ್ಲಾ ಪರ್ಯಾಲೋಚಿಸಿದರೆ ಹಲಾಯುಧ (ಬಲರಾಮ)ನನ್ನು ಸೀತೆಯ ಗಂಡನೆನ್ನುವುದು ಯುಗಾಂತರದಲ್ಲಾದ ವಿಚಾರದಿಂದ ಅಸಮಂಜ ಸವಾಗಿ ಅಪಮಾರ್ಗದಂತೆ ಕ್ರಮಣಸಾಧ್ಯವಿಲ್ಲದುದಾಗಿರುವುದು.

'ಸೀತಾ'ಪದಪ್ರಯೋಜನವು ಹಲವು ತೆರನಾಗಿರುವುದಲ್ಲದೆ ಪುಂಖಾನು ಪುಂಖವಾದ ಅರ್ಥವಿವೇಚನೆಯಿಂದೊಡಗೂಡಿರುವುದು. ಇದನ್ನೇ ಧ್ಯೇಯವಾಗಿ ಇಟ್ಟುಕೊಂಡು ಮುಂದರಿಯುವುದಾದರೆ ರಾಮಾಯಣದಲ್ಲಿ ಕಂಡುಬರುವ ಇತರ ಮಹದ್ವಿಷಯಗಳಿಗೆ ಪ್ರತಿಕಲ್ಪನೆಯು ಹೇಗೆಂಬುದು ವಿಚಾರಾಸ್ಪದ ವಾಗುವುದು.

ಇಂದ್ರನೆಂಬ ಹೆಸರನ್ನು ಬಿಟ್ಟು ರಾಮಾಂಕಿತದಿಂದ ರಾಮಾಯಣವು ಬರೆ ಯಲ್ಪಟ್ಟಿರುವುದೆನ್ನುವುದಾದರೆ ಮಹರ್ಷಿಯೂ ಮತ್ತು ಮಹಾಕವಿಯೂ ಆದ ವಾಲ್ಮೀಕಿಯು ೨೪೦೦೦ ಶ್ಲೋಕಪರಿಮಿತಿಯುಳ್ಳ ಗ್ರಂಥವನ್ನು ಬರೆದು ಅದನ್ನು "ರಾಮಾಯಣ"ವೆಂದು ಕರೆಯುವುದಕ್ಕೆ ಬದಲು "ಇಂದ್ರಾಯಣ"ವೆಂದು ಕರೆಯಬಹುದಾಗಿದ್ದಿತು. ಇದು ಕಲ್ಪನಾಕಥೆಯೆಂದು ಮಹರ್ಷಿಯಾದವ ನಲ್ಲಾರೋಪಿಸುವುದು ದೂಷ್ಯವೆಂದೂ ಹಾಗೆ ಬರೆಯಲೇಬೇಕೆಂಬ ಅವಶ್ಯಕ ತೆಯು ವಾಲ್ಮೀಕಿಗೆ ಇರಲಿಲ್ಲವೆಂದೂ ಬೋಧೆಯಾಗುವುದು.

ವೃತ್ರಾಸುರ ಚರಿತವೂ ಮತ್ತು ಯುದ್ಧವೂ ರಾಮಾಯಣದ ಯಾವ ಭಾಗಕ್ಕೂ ಸರಿಗಟ್ಟದೆಂಬುದು ಪಂಡಿತರ ಮಾತಾಗಿರುವುದು.

**ರಾಮಾಯಣದ ಕಥಾವಿಚಾರ:—**

ಅಯೋಧ್ಯಾಧಿಪನಾದ ದಶರಥನಿಗೆ ಕೌಸಲ್ಯೆ, ಸುಮಿತ್ರೆ, ಮತ್ತು ಕೈಕೇಯಿ ಎಂಬ ಮೂವರು ರಾಣಿಯರಿದ್ದರು. ಕೌಸಲ್ಯೆಯಲ್ಲಿ ಹುಟ್ಟಿದವನೇ ಶ್ರೀರಾಮನು. ಸುಮಿತ್ರೆಯ ಮಕ್ಕಳೇ ಲಕ್ಷ್ಮಣನು ಮತ್ತು ಶತ್ರುಘ್ನನು, ಕೈಕೇಯಿಯ ಮಗ ಭರತನು. ರಾಮನು ರಾಜ್ಯವಾಳಲು ಸಮರ್ಥನಾಗಿರು

† The History of Classical Sanskrit Literature, P. 20.

ವುದನ್ನು ನೋಡಿ ದಶರಥನು ರಾಮುನಿಗೆ ರಾಜ್ಯಪಟ್ಟವನ್ನು ಕಟ್ಟಬೇಕೆಂದು ಯೋಚಿಸುತ್ತಿರುವಾಗ ಪ್ರೀತಿಪಾತ್ರಳೂ ಕಿರಿಯ ಹೆಂಡತಿಯೂ ಆದ ಕೈಕೇಯಿಯು ಮಂಥರೆಯ ಮಾತಿನಿಂದ ಪ್ರೇರಿತಳಾಗಿ ದಶರಥನಿಂದ ಪೂರ್ವವೇ ಕೊಡಲ್ಪಟ್ಟಿದ್ದ ಎರಡು ವರಗಳನ್ನು ಜ್ಞಾಪಿಸಿ ಅವುಗಳ ಫಲವಾಗಿ (೧) ರಾಮುನಿಗೆ ವನವಾಸವನ್ನೂ (೨) ಭರತನಿಗೆ ರಾಜ್ಯಾಭಿಷೇಕವನ್ನೂ ಕೋರಿದಳು. ಅದರಂತೆಯೇ ಶ್ರೀರಾಮನು ಸೀತಾಲಕ್ಷ್ಮಣರೊಡನೆ ವನಕ್ಕೆ ಹೊರಟು ಆಶ್ರಮದೊಳಿರುತ್ತಿರಲು ಎದುರಿನಲ್ಲಿ ಸುಳಿದಾಡಿದ ಹೇಮಮೃಗವನ್ನು ನೋಡಿ ಸೀತೆಯು ಅದನ್ನು ತಂದುಕೊಡೆಂದು ರಾಮನನ್ನು ಪ್ರಾರ್ಥಿಸಿದಳು. ರಾಮನು ಹೇಮಮೃಗವೇಷಾಂತರದಿಂದ ಬಂದಿದ್ದ ಮಾರೀಚನನ್ನು ಬೆನ್ನಟ್ಟಲು ಅವನು ಘಟ್ಟಿಯಾಗಿ ಲಕ್ಷ್ಮಣನ ಹೆಸರನ್ನು ಕೂಗುತ್ತಾ ಶ್ರೀರಾಮಬಾಣದಿಂದ ಪ್ರಾಣವನ್ನು ಬಿಟ್ಟನು. ಸೀತೆಯು ಈ ಶಬ್ದವನ್ನು ಕೇಳಿ ರಾಮನಿಗೇನಾದರೂ ವಿಪತ್ತು ಸಂಭವಿಸಿರಬಹುದೆಂದು ನೊಂದು ಸಹಾಯಕ್ಕೆ ಲಕ್ಷ್ಮಣನನ್ನು ಹೋಗುವಂತೆ ನಿರ್ಬಂಧಪಡಿಸಿ ಕಳುಹಿಸಿಕೊಟ್ಟಳು. ಈ ಸಮಯವನ್ನು ಕಾಯುತ್ತಿದ್ದ ರಾವಣನು ಸೀತೆಯನ್ನೆತ್ತಿಕೊಂಡು ಲಂಕೆಯನ್ನು ಕುರಿತು ಹೋಗುತ್ತಿರುವಾಗ ಎದುರುಬಿದ್ದ ಜಟಾಯುವಿನೊಡನೆ ಕಾದಾಡಿ ಅದರ ಪಕ್ಷಚ್ಛೇದನವನ್ನು ಮಾಡಿ ಕೆಳಗೆ ಬೀಳಿಸಿ ಸೀತೆಯನ್ನು ತೆಗೆದುಕೊಂಡು ಹೋಗಿ ಅಶೋಕವನದಲ್ಲಿರಿಸಿದನು. ಇಷ್ಟರಲ್ಲಿಯೇ ರಾಮನು ಮಾಯಾಮೃಗರೂಪಿಯಾದ ಮಾರೀಚನನ್ನು ಕೊಂದು ಹಿಂದಿರುಗಿ ಸೀತೆಯನ್ನು ಕಾಣದೆ ಹಂಬಲಿಸುತ್ತಾ ಹುಡುಕಿಕೊಂಡು ಬರುತ್ತಿರುವಾಗ ಪ್ರಾಣವನ್ನು ಬಿಡುತ್ತಿರುವ ಜಟಾಯುವಿನಿಂದ ಸೀತಾವೃತ್ತಾಂತವನ್ನು ತಿಳಿದವನಾಗಿ ಅದಕ್ಕೆ ಮೋಕ್ಷವನ್ನಿತ್ತು ಹಾಗೆಯೇ ಬರುತ್ತಾ ಕಿಷ್ಕಿಂಧೆಯನ್ನು ಸೇರಿ ಸುಗ್ರೀವನ ಮೊರೆಯನ್ನು ಲಾಲಿಸಿ ವಾಲಿಯನ್ನು ಕೊಂದು ಸುಗ್ರೀವನ ಮೈತ್ರಿಯ ಮೂಲಕ ಆಂಜನೇಯನ ದೌತ್ಯವನ್ನು ಸಂಪಾದಿಸಿ ಸೀತೆಯು ಇರುವ ಸ್ಥಳವನ್ನು ಅವನ ಮೂಲಕ ನಿರ್ಧರಪಡಿಸಿಕೊಂಡು ಲಂಕಾಪ್ರಯಾಣಕ್ಕಾಗಿ ಸೇತುಬಂಧನವನ್ನು ಮಾಡಿ ಲಂಕಾನಗರವನ್ನು ಮುತ್ತಿ ರಾವಣಕುಂಭಕರ್ಣರನ್ನು ವಧಿಸಿ ವಿಭೀಷಣನಿಗೆ ಲಂಕಾರಾಜ್ಯವನ್ನಿತ್ತು ಸೀತಾಸಮೇತನಾಗಿ ಅಯೋಧ್ಯೆಗೆ ಹಿಂದಿರುಗಿದನು.

ಬ್ರಹ್ಮಾಂಡಪುರಾಣದ ೧೪೭ ನೆಯ ಅಧ್ಯಾಯದಲ್ಲಿ ಬಾಲಕಾಂಡಾದಿ ಸಪ್ತಕಾಂಡಗಳ ಧ್ಯಾನಶ್ಲೋಕವು ಹೀಗೆ ಇರುವುದಲ್ಲದೆ ಪ್ರತಿಸರ್ಗದ ಕಥಾವಿಚಾರವೂ ಸೂಕ್ಷ್ಮವಾಗಿ ಹೇಳಲ್ಪಟ್ಟಿರುವುದು.

ಕಾಕಪಕ್ಷಧರಂ ದೇವಂ । ವನಮಾಲಾವಿಭೂಷಿತಂ ॥
ಶ್ರೀರಾಮಂ ಬಾಲಕಂ ಧ್ಯಾಯೇ । ದ್ಬಾಲಕಾಂಡೇ ಮುನೀಶ್ವರ ॥ ೧ ॥
ಸೀತಾದೇವಿಯುತಂ ವೀರಂ । ಸರ್ವಭೂಷಣಭೂಷಿತಂ ॥
ಪಿತೃಭಕ್ತಿಂ ಹರಿಂ ಧ್ಯಾಯೇ । ದಯೋಧ್ಯಾಕಾಂಡ ಉತ್ತಮೇ ॥ ೨ ॥
ಜಟಿಲಂ ಚೀರವಸನಂ । ದಂಡಕಾರಣ್ಯವಾಸಿನಂ ॥
ಮುನಿವೇಷಧರಂ ಧ್ಯಾಯೇ । ದರಣ್ಯೇ ಕಾಂಡ ಉತ್ತಮೇ ॥ ೩ ॥
ಸುಗ್ರೀವಾದಿಯುತಂ ಶ್ರೀಶಂ । ಭಸ್ಮಾಂಗಾವೃತಮೀಶ್ವರಂ ॥
ಮಹೇಶ್ವರಸಮಂ ಧ್ಯಾಯೇ । ತ್ಕಿಷ್ಕಿಂಧಾಕಾಂಡ ಉತ್ತಮೇ ॥ ೪ ॥
ಚಂದ್ರಬಿಂಬಸಮಾಕಾರಂ । ವಾಂಛಿತಾರ್ಥಪ್ರದಾಯಕಂ ॥
ಹನೂಮತ್ಸೇವಿತಂ ಧ್ಯಾಯೇ । ತ್ಸುಂದರೇ ಕಾಂಡ ಉತ್ತಮೇ ॥ ೫ ॥
ರಾವಣಾದಿನಿಹಂತಾರಂ । ಬ್ರಹ್ಮರುದ್ರಾದಿಸೇವಿತಂ ॥
ಸೀತಾದೇವಿಯುತಂ ಯುದ್ಧೇ । ರಾಮಂ ಧ್ಯಾಯೇದ್ಧೃದಂಬುಜೇ ॥ ೬ ॥
ಅಗಸ್ತ್ಯಾದಿಮುನಿಸ್ತುತ್ಯಂ । ವಾಂಛಿತಾರ್ಥಪ್ರದಾಯಕಂ ॥
ಸರ್ವದೇವೋತ್ತಮಂ ಧ್ಯಾಯೇ । ದುತ್ತರೇ ಕಾಂಡ ಉತ್ತಮೇ ॥ ೭ ॥

ರಾಮಾಯಣವು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕಗ್ರಂಥ ವಾಗಿರುವುದಲ್ಲದೆ ಸಂಸಾರಘಟನಾವಳಿಯ ಜೀವನಚಿತ್ರವೆಂದರೆ ಹೆಚ್ಚಾಗದು. ಇದರಲ್ಲಿ ಪ್ರತಿಯೊಂದು ಘಟನೆಯೂ ಸುಂದರವೂ ನೀತಿಬೋಧಕವೂ ಆಗಿರುವುದು.

ತಾಯಿತಂದೆಗಳು ತಮ್ಮ ತಮ್ಮ ಮಕ್ಕಳನ್ನು ಪ್ರೀತಿಸುವುದೂ ಯಾವಾಗಲೂ ಅವರ ಅಭ್ಯುದಯವನ್ನು ಆಶಿಸುತ್ತಿರುವುದೂ ಸೋದರರು ಪರಸ್ಪರ ವಿಶ್ವಾಸದಿಂದಿರುತ್ತಾ ಮಾತಾಪಿತೃಗಳಲ್ಲಿ ಭಕ್ತಿಯಿಂದಿರುವುದೂ ಹೆಂಗಸು ಪತಿಯ ಛಾಯಾನುವರ್ತಿಯಾಗಿರುವುದೂ ಸೇವ್ಯಸೇವಕಭಾವಗಳಿಗೆ ನ್ಯೂನತೆಯಾಗದಂತೆ ರಾಜಭಕ್ತಿ, ಪ್ರಜೆಗಳ ಹಿತಚಿಂತನೆಯೇ ಮೊದಲಾದ ನನ್ನಡತೆಗಳು ಸಾಂಸಾರಿಕ ಮತ್ತು ಶಿಷ್ಟಲೋಕದ ಶ್ರೇಷ್ಠನಡವಳಿಕೆಗಳಾಗಿರುವುವಾದರೂ ತನ್ನ ಮಗನ ಶುಭೋದಯವನ್ನು ಲಕ್ಷಿಸದೆ ವನವಾಸಕ್ಲೇಶಕಾತರಳಾಗದೆ ತನ್ನ ಸಾಪತ್ನಿಯ ಮಗನಾದ ರಾಮನೊಡನೆ ಹೊರಟುಹೋಗಲು ಯೋಗ್ಯನೀತಿಯನ್ನು ಬೋಧಿಸಿ ವನವಾಸಕ್ಕೆ ಅಟ್ಟಿದಳೆಂಬ ವಿಚಾರವು ಮೇಲೆ ಹೇಳಿದ ಎಲ್ಲದಕ್ಕಿಂತಲೂ ಅತಿಶಯವೂ ಲೋಕಾನುಸರಣೀಯವೂ ಅಲೌಕಿಕ ವರ್ತನವೂ ಆಗಿ ಈ ಅಪೂರ್ವಸೌಜನ್ಯವಿಶೇಷವು ಸುಮಿತ್ರೆಯಲ್ಲಿ ಮಾತ್ರವೇ ಕಂಡುಬರುವುದರಿಂದ ಆ ಶ್ಲೋಕಗಳು ಮಾತ್ರ ಇಲ್ಲಿ ಕೊಡಲ್ಪಟ್ಟಿರುವುವು.

ಲಕ್ಷ್ಮಣನು ರಾಮನ ಹಿಂದೆಯೇ ಹೊರಟುಹೋಗಲು ನಿಶ್ಚಯಿಸಿ ತಾಯಿಯ ಆಶೀರ್ವಾದವನ್ನು ಹೊಂದಲು ಬಂದು ನಮಸ್ಕರಿಸಿದಾಗ ಸುಮಿತ್ರೆಯು ಆಶೀರ್ವಾದಪುರಸ್ಸರವಾಗಿ ಹೇಳಿದ ಬುದ್ಧಿವಾದದ ಮಾತುಗಳು:—

"ಸೃಷ್ಟಸ್ತ್ವಂ ವನವಾಸಾಯ ಸ್ವನುರಕ್ತಃ ಸುಹೃಜ್ಜನೇ ।
ರಾಮೇ ಪ್ರಮಾದಂ ಮಾಕಾರ್ಷೀಃ ಪುತ್ರ! ಭ್ರಾತರಿ ಗಚ್ಛತಿ ॥
ವ್ಯಸನೀ ವಾ ಸಮೃದ್ಧೋ ವಾ ಗತಿರೇಷ ತವಾನಘ ।
ಏಷ ಲೋಕೇ ಸತಾಂ ಧರ್ಮೋ ಯಜ್ಜ್ಯೇಷ್ಠವಶಗೋ ಭವೇತ್ ॥
ಇದಂ ಹಿ ವೃತ್ತಮುಚಿತಂ ಕುಲಸ್ಯಾಸ್ಯ ಸನಾತನಂ ।
ದಾನಂ ದೀಕ್ಷಾ ಚ ಯಜ್ಞೇಷು ತನುತ್ಯಾಗೋ ಮೃಧೇಷು ಹಿ ॥
ಲಕ್ಷ್ಮಣಂ ತ್ವೇವಮುಕ್ತ್ವಾಸೌ ಸಂಸಿದ್ಧಂ ಪ್ರಿಯರಾಘವಂ ।
ಸುಮಿತ್ರಾ ಗಚ್ಛ ಗಚ್ಛೇತಿ ಪುನಃ ಪುನರುವಾಚ ತಂ ॥

"ಪುತ್ರ! ಲಕ್ಷ್ಮಣ! ನೀನು ವನವಾಸಕ್ಕಾಗಿಯೇ ಹುಟ್ಟಿರುವೆ! ಆದಕಾರಣ ನೀನು ಯಾವಾಗಲೂ ಮಹಾತ್ಮನಾದ ರಾಮನಲ್ಲಿ ಅನುರಕ್ತನಾಗಿರುತ್ತಾ ಅವನ ಸಂಚಾರಸಮಯದಲ್ಲಿ ಬಹು ಎಚ್ಚರಿಕೆಯಿಂದ ಇರಬೇಕಪ್ಪ! ಜ್ಯೇಷ್ಠಭ್ರಾತೃವು ಸಂಕಟದಲ್ಲಿರಲಿ ಅಥವಾ ಸಂತೋಷದಲ್ಲಿರಲಿ ತದಧೀನದಲ್ಲಿ ವಿಧೇಯತೆಯಿಂದಿರಬೇಕಾದುದು ಲೋಕದಲ್ಲಿ ಸತ್ಪುರುಷರ ಧರ್ಮವಾಗಿರುವುದು. ಜ್ಯೇಷ್ಠಾನುವರ್ತನವೂ, ದಾನಶೀಲತೆಯೂ, ಯಜ್ಞದೀಕ್ಷೆಯೂ, ರಣರಂಗಮೃತಿಯೂ ಇವುಗಳೆಲ್ಲವೂ ಈ ಸೂರ್ಯಕುಲದ ಸನಾತನಧರ್ಮವಾಗಿರುವುವು" ಎಂಬುದಾಗಿ ಅನೇಕವಿಧವಾಗಿ ಹೇಳಿ ರಾಮನ ಹಿಂದೆಯೇ ಹೋಗು ಹೋಗೆಂದು ಪುನಃಪುನಃ ಹೇಳಿದಳು. ಕೊನೆಗೆ ಅವನು ಅರಣ್ಯಕ್ಕೆ ರಾಮನೊಡನೆ ಹೋಗುವದೇ ಲೇಸೆಂಬುದನ್ನು ತೋರಿಸುತ್ತಾ ಈ ರೀತಿ ಹೇಳಿದಳು—

ಲಕ್ಷ್ಮಣ!

"ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ! ಯಥಾಸುಖಂ" ॥

(೧). ರಾಮನನ್ನು ತಂದೆಯಾದ ದಶರಥನೆಂದು ತಿಳಿ. ಜಾನಕಿಯನ್ನು ತಾಯಿಯಾದ ನಾನೆಂದು ತಿಳಿ. ಹೀಗೆ ಮಾತಾಪಿತೃಸ್ವರೂಪರಾದ ಸೀತಾರಾಮರಿಂದ ಸನಾಥವಾದ ಅರಣ್ಯವನ್ನು ಜನ್ಮಸ್ಥಳವಾದ ಅಯೋಧ್ಯೆಗಿಂತಲೂ ಮಿಗಿಲೆಂದು ಭಾವಿಸುತ್ತ ನಮ್ಮನ್ನೆಲ್ಲಾ ಅಗಲಿದ ದುಃಖವನ್ನು ಮರೆತು ಸುಖವಾಗಿ ಹೋಗಿಬಾರಪ್ಪ!

(೨). (ರಾಮಂ ದಶರಥಂ ಚ ವಿದ್ಧಿ) ರಾಮನನ್ನೂ ದಶರಥನನ್ನೂ ಹೋಲಿಸಿ ನೋಡು. ಇವರೀರ್ವರಲ್ಲಿ ನಿನಗೆ ಯಾರು ಪಿತಾಕಾಂಕ್ಷಿಗಳೆಂಬುದನ್ನು ವಿಚಾರಮಾಡಿನೋಡು ಹಾಗೆಯೇ (ಮಾಂ ವಿದ್ಧಿ ಜನಕಾತ್ಮಜಾಂ ಚ) ನನ್ನನ್ನೂ ಜನಕನಂದಿನಿಯನ್ನೂ ನೋಡು; ಮತ್ತು (ಅಯೋಧ್ಯಾಂ ಅಟವೀಂ ಚ ವಿದ್ಧಿ) ಸೀತಾ ರಾಮರಿಂದ ರಕ್ಷಿತವಾದ ಅಯೋಧ್ಯೆಯನ್ನೂ ಅರಣ್ಯವನ್ನೂ ಹೋಲಿಸಿನೋಡು, ಇದರಿಂದ ನಿನಗೆ ನಮಗಿಂತಲೂ ಸೀತಾರಾಮರೇ ಹಿತಕರರಾಗಿರುವುದರಿಂದಲೂ ತತ್ಸನಾಥವಾಗುವ ಅರಣ್ಯವೇ ನಿನಗೆ ಸುಖಕರವಾದುದರಿಂದಲೂ ನಮ್ಮಗಳಿಗಾಗಿ ವ್ಯಸನಪಡದೆ (ಗಚ್ಛ ತಾತ ಯಥಾ ಸುಖಂ) ಸುಖವಾಗಿ ಹೋಗಿಬಾರಪ್ಪ!

(೩). ಇದಲ್ಲದೆ ಮತ್ತೊಂದು ವಿಧವಾಗಿ ನೋಡಿದರೂ ನೀನು ರಾಮನನ್ನು ಅನುಸರಿಸಿ ಅರಣ್ಯಕ್ಕೆ ಹೋಗುವುದೇ ಮೇಲೆಂದು ತೋರುವುದು. ಹೇಗೆಂದರೆ:— (ರಾಮಂ ದಶರಥಂ ವಿದ್ಧಿ-ದಶರಥಂ ವಿರಾಮಂ ವಿದ್ಧಿ) ರಾಮನು ಅರಣ್ಯಗತನಾದ ಕೂಡಲೇ ಅವನಿಂದ ಕ್ಷಣಕಾಲವೂ ಅಗಲಿಬಾಳದ ದಶರಥನು ಮೃತನಾದನೆಂದೇ ತಿಳಿ. (ಮಾಂ ವಿದ್ಧಿ ಜನಕಾತ್ಮಜಾಂ) ನಾನು ಈ ಸವತಿಯರ ಮಧ್ಯದಲ್ಲಿದ್ದುಕೊಂಡು ಕಾಲ ಕಳೆಯುವವಳಾಗಿ ತಿಳಿಯದಿರು, ನಾನು ನನ್ನ ತಂದೆಯ ಮನೆಗೆ ಹೋಗಿಬಿಡುವೆನು. (ಅಯೋಧ್ಯಾಂ ಅಟವೀಂ ವಿದ್ಧಿ) ಆಗ ರಾಮನೂ ಇಲ್ಲದ ರಾಜನೂ ಇಲ್ಲದ ಅನಾಯಕವಾದ ಅಯೋಧ್ಯೆಯು ಅರಣ್ಯಸದೃಶವಾಗುವುದಾದಕಾರಣ ಇವುಗಳೆಲ್ಲವನ್ನೂ ಸಾವಧಾನದಿಂದ ಯೋಚಿಸಿ (ಗಚ್ಛ ತಾತ ಯಥಾಸುಖಂ) ನೀನು ಸುಖವಾಗಿ ರಾಮನೊಡನೆಯೇ ಹೋಗಪ್ಪಾ!

(೪). ಪುತ್ರ! ಸೀತಾರಾಮರು ನಮಗಿಂತಲೂ ಹಿತರಾಗಿರುವುದರಿಂದ ನೀನೇನೋ ಅವರನ್ನು ಹಿಂಬಾಲಿಸುವೆ! ಆದರೆ ನೀನು ಹಿಂದೆ—

ಅಹಂ ತಾವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ ।
ಭ್ರಾತಾ ಭರ್ತಾ ಚ ಬಂಧುಶ್ಚ ಪಿತಾ ಚ ಮಮ ರಾಘವಃ ॥
ವನಂ ನಗರಮೇವಾಸ್ತು ಯೇನ ಗಚ್ಛತಿ ರಾಘವಃ ।

ಎಂದು ಹೇಳಿದಂತೆ ನಮ್ಮೆಲ್ಲರನ್ನೂ ಮರೆಯಬೇಡಪ್ಪ! ನೀನು ರಾಮನನ್ನು ಕಾಣುವ ಹಾಗೆ ನಿನ್ನ ತಂದೆಯಾದ ದಶರಥನನ್ನೂ, ಸೀತೆಯನ್ನು ಭಾವಿಸುವ ಹಾಗೆ ನನ್ನನ್ನೂ ಜ್ಞಾಪಿಸಿಕೊಳ್ಳುತ್ತಿರುವುದಲ್ಲದೆ ಸೀತಾರಾಮಯುಕ್ತವಾದ ಅರಣ್ಯವನ್ನು ಸಂಭಾವಿಸುವಂತೆ ಜನ್ಮಭೂಮಿಯಾದ ಅಯೋಧ್ಯೆಯನ್ನೂ ಪ್ರೀತಿಸುತ್ತಿರು; ಮಗನೆ!

"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ"

ಎಂಬುದನ್ನು ಮರೆಯದಿರು.

(೫). ಸುಮಿತ್ರೆಯು ಮೊದಲು—

'ರಾಮೇ ಪ್ರಮಾದಂ ಮಾಕಾರ್ಷೀಃ ಪುತ್ರ! ಭ್ರಾತರಿ ಗಚ್ಛತಿ'

ಎಂದು ಹೇಳಿರುವಳಷ್ಟೆ!

ಈ ಮೂಲಕ ಲಕ್ಷ್ಮಣನು ಯಾವ ಯಾವ ಸಂದರ್ಭಗಳಲ್ಲಿ ಜಾಗರೂಕನಾಗಿರಬೇಕೆಂಬುದನ್ನೂ ಸೂಚಿಸುವಳು. ಹೇಗೆಂದರೆ:—(ರಾಮಂ ದಶರಥಂ ವಿದ್ಧಿ) ಈಗ ದಶರಥನು ಹೆಂಡತಿಯಾದ ಕೈಕೇಯಿಯ ಮಾತನ್ನು ಕೇಳಿಕೊಂಡು ಹೇಗೆ ಅನರ್ಥಕ್ಕೆ ಕಾರಣನಾದನೋ ಹಾಗೆಯೇ ಬಂದಾನೊಂದು (ಮಾಯಾಮೃಗವನ್ನು ತರುವುದಕ್ಕೆ ಹೋಗುವ) ಕಾಲದಲ್ಲಿ ರಾಮನೂ ಹೆಂಡತಿಯಾದ ಸೀತೆಯ ಮಾತಿಗೆ ಮರುಳಾಗಿ ಅನರ್ಥಕ್ಕೆ ಕಾರಣನಾಗಬಹುದು; ಆಗ ನೀನು ಬಹು ಜಾಗರೂಕನಾಗಿರತಕ್ಕದ್ದು. (ಮಾಂ ವಿದ್ಧಿ ಜನಕಾತ್ಮಜಾಂ) ನಾನು ಈಗ ಹೇಗೆ ನಿನ್ನನ್ನು ರಾಮನ ಹಿಂದೆಯೇ ಹೋಗೆಂದು ಪುನಃಪುನಃ ಹೇಳುತ್ತಿರುವೆನೋ ಹಾಗೆಯೇ ಬಂದಾನೊಂದುಕಾಲದಲ್ಲಿ(ಮಾರೀಚನ ರಾಮಸ್ವರದ ಆರ್ತಧ್ವನಿಯು ಕೇಳಿಸಿದಾಗ) ಸೀತೆಯು ನಿನ್ನನ್ನುರಾಮನ ಹಿಂದೆಯೇ ಹೋಗು ಹೋಗೆಂದು ನಿರ್ಬಂಧಿಸಬಹುದು; ಆಗ ನೀನು ಬಹು ಎಚ್ಚರಿಕೆಯಾಗಿರಬೇಕು. (ಅಯೋಧ್ಯಾಂ ಅಟವೀಂ ವಿದ್ಧಿ) ರಾಮನು ಈಗ ಅಯೋಧ್ಯೆಯನ್ನುಬಿಟ್ಟು ಅರಣ್ಯಕ್ಕೆ ಹೋಗುವಂತೆ ಮುಂದೆಯೂ ಒಂದು ವನದಿಂದ ಬೇರೊಂದು ವನಕ್ಕೆ ಹೋಗಬಹುದು. ಈ ಎಲ್ಲಾ ಸಂದರ್ಭಗಳಲ್ಲಿಯೂ ನೀನು ಮಾತ್ರ (ರಾಮೇ ಪ್ರಮಾದಂ ಮಾಕಾರ್ಷೀಃ) ಪ್ರಮತ್ತನಾಗದೆ ಬಹು ಜಾಗರೂಕತೆಯಿಂದ ವರ್ತಿಸಪ್ಪ! ಹೀಗೆ ಅನೇಕ ಪ್ರಕಾರದಿಂದ ಲಕ್ಷ್ಮಣನಿಗೆ ಅರಣ್ಯಗಮನವೇ ಹಿತವೆಂದು ಹೇಳಿ ಕೊನೆಯಲ್ಲಿ ಸುಮಿತ್ರೆಯು ತತ್ತ್ವಬೋಧೆಯನ್ನೂ ಮಾಡುವಳು. ಹೇಗೆಂದರೆ:—

(೬). (ರಾಮಂ ದಶರಥಂ ವಿದ್ಧಿ) ಲಕ್ಷ್ಮಣ! ರಾಮನನ್ನು ಸಾಮಾನ್ಯಮನುಷ್ಯನೆಂದು ಭಾವಿಸದೆ ಅವನನ್ನು ವಾಸ್ತವದಲ್ಲಿ, ದಶರಥಂ ವಿದ್ಧಿ—ಪಕ್ಷಿವಾಹನನಾದ ಆ ಮಹಾವಿಷ್ಣುವೆಂದೇ ತಿಳಿ; ಹಾಗೆಯೇ (ಜನಕಾತ್ಮಜಾಂ) ಸೀತೆಯನ್ನು ಕೇವಲ ಜನಕಪುತ್ರಿಯೆಂದು ಭಾವಿಸದೆ (ಮಾಂ ವಿದ್ಧಿ) ಮಹಾಲಕ್ಷ್ಮಿಯೆಂದು ತಿಳಿ; ಮತ್ತು (ಅಟವೀಂ) ಆ ಮಹಾವಿಷ್ಣುಲಕ್ಷ್ಮಿಯರು ಆಶ್ರಯಿಸಿರುವಂತಹ ಅರಣ್ಯವನ್ನು (ಅಯೋಧ್ಯಾಂ ವಿದ್ಧಿ) ಪ್ರವೇಶದುರ್ಲಭವಾದ ವೈಕುಂಠವೆಂದು ತಿಳಿ. (ನೀನು ಇಲ್ಲಿ ಇದ್ದುಕೊಂಡು ದಾಯಾದ ಸಂಬಂಧವಾದ ಕಲಹಗಳಲ್ಲಿ ಬಿದ್ದು ಕ್ಲೇಶಕರವಾದ ಸಂಸಾರಕಾರಾಗಾರವನ್ನನುಭವಿಸಲು

ಅನೇಕ ಜನ್ಮವನ್ನೆತ್ತುವ ಬದಲು) ಆ ಪರಮಾತ್ಮನ ಸೇವಾಸಿರತನಾಗಿದ್ದು ಕೊಂಡು ಜನ್ಮಸಾಫಲ್ಯವನ್ನೂ ಪುನರಾವೃತ್ತಿರಹಿತವಾದ ಮೋಕ್ಷವನ್ನೂ ಪಡೆ ಯಲು (ಗಚ್ಛ ತಾತ ಯಥಾ ಸುಖಂ) ಸುಖವಾಗಿ ಹೋಗಿಬಾರಪ್ಪ.



# ವ್ಯಾಸ

ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋನಮಃ ॥

ಇವನು ಪರಾಶರ* ಮತ್ತು ಸತ್ಯವತಿ†ಯರ ಮಗನು. ಇವನಿಗೆ ಕೃಷ್ಣ ನೆಂಬ ಹೆಸರೂ ಇದ್ದಿತು. ಅಲ್ಲದೆ—

ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಮಕಲ್ಮಷಂ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥

ಎಂಬುದರಿಂದ ಇವನು ವಸಿಷ್ಠನ ಮುಮ್ಮಗನಮಗನೂ, ಶಕ್ತಿಯ ಮುಮ್ಮಗನೂ ಪರಾಶರನ ಮಗನೂ ಶುಕನ ಪಿತನೂ ಆಗಿದ್ದನೆಂದು ವ್ಯಕ್ತವಾಗುತ್ತದೆ. ಇವನು ವೇದಗಳನ್ನು ಕ್ರಮಪಡಿಸಿ ಬರೆದನಾದುದರಿಂದ ವೇದವ್ಯಾಸನೆಂತಲೂ$ದ್ವೀಪ(?) ದಲ್ಲಿ ಜನಿಸಿದನಾದುದರಿಂದ ದ್ವೈಪಾಯನನೆಂತಲೂ ಪರಾಶರನ ಮಗನಾದುದ

---

* ಇವನು ವೈವಸ್ವತಮನ್ವಂತರದ ೨೬ನೆಯ ದ್ವಾಪರಯುಗದಲ್ಲಿ ವ್ಯಾಸನಾಮಾಂಕಿತನಾಗಿ ದ್ದುದಲ್ಲದೆ ಋಗ್ವೇದ ಮತ್ತು ಸಾಮವೇದಗಳ ಕೆಲವು ಭಾಗಗಳಿಗೆ ಶಿಕ್ಷಕನಾಗಿಯೂ ಇದ್ದನು. ಇವನಲ್ಲದೆ ಇದೇ ಹೆಸರಿನವರು ಮೂವರು ದೊರೆಯುವರು. (೧) ಧರ್ಮಶಾಸ್ತ್ರಕಾರನೊಬ್ಬ. (೨) ತಂತ್ರಶಾಸ್ತ್ರಕಾರನೊಬ್ಬ. (೩) ಖಗೋಳಶಾಸ್ತ್ರಕಾರನೊಬ್ಬ.

† ಸತ್ಯವತಿಗೆ ವಾಸವೀ ಗಂಧಕಾಲಿಕಾ ಎಂಬ ನಾಮಾಂತರಗಳಿರುವುವು.

$ ವೈವಸ್ವತಮನ್ವಂತರದ ಪ್ರತಿದ್ವಾಪರಯುಗದಲ್ಲಿಯೂ ವೇದಗಳು ಮಹರ್ಷಿಗಳಿಂದ ಕ್ರಮಪಡಿಸಲ್ಪಟ್ಟುವಾಗಿಯೂ ಇದುವರೆಗೆ ಇಪ್ಪತ್ತೇಳು ಜನ ವ್ಯಾಸರು (Compilers) ಆಗಿ ಹೋಗಿರುವರೆಂಬುದಾಗಿಯೂ ಕೃಷ್ಣದ್ವೈಪಾಯನನೇ ಇಪ್ಪತ್ತೆಂಟನೆಯ ವ್ಯಾಸನೆಂದೂ ಇವನೇ ಜಯೇತಿನಾಮಕಕಾವ್ಯ (ಮಹಾಭಾರತ)ವನ್ನು ಬರೆದವನೆಂದೂ ಮುಂದಣ ಎರಡು ದ್ವಾಪರ ಯುಗಗಳಲ್ಲಿ ದ್ರೋಣನ ಮಗ ದ್ರೌಣಿಯೆಂಬುವನೂ ಮುನಿಕೃಷ್ಣದ್ವೈಪಾಯನನೆಂಬುವನೂ ವ್ಯಾಸರಾಗುವರೆಂದೂ ವಿಷ್ಣುಪುರಾಣವು ಹೇಳುತ್ತದೆ. ಇದೇರೀತಿಯಾಗಿ ಕೂರ್ಮ ಮತ್ತು ವಾಯುಪುರಾಣಗಳಲ್ಲಿಯೂ ಹೇಳಲ್ಪಟ್ಟಿರುವುದು.

ರಿಂದ ಪಾರಾಶರ್ಯನೆಂತಲೂ ಕನ್ಯೆ‡ಯಲ್ಲಿ ಜನ್ಮಧಾರಣಮಾಡಿದನಾದುದರಿಂದ ಕಾನೀನನೆಂತಲೂ ಬದರಿಕಾಶ್ರಮದಲ್ಲಿದ್ದನಾದುದರಿಂದ ಬಾದರಾಯಣನೆಂತಲೂ, ಮಾಠರನೆಂತಲೂ ಹೆಸರುಗಳನ್ನು ಹೊಂದಿದ್ದುದಾಗಿ ತಿಳಿಯಬರುತ್ತದೆ.§ ಇವನು ವಸಿಷ್ಠನ ಸಂಬಂಧವನ್ನು ಪಡೆದಿದ್ದನಾದುದರಿಂದ ವಾಸಿಷ್ಠನೆಂದೂ ಕರೆಯಲ್ಪಟ್ಟಿರುವನು. ಈ ಹೆಸರುಗಳ ವ್ಯವಹರಿಸುವಿಕೆಯಲ್ಲಿ ಇವನ ನಿಜವಾದ ಕೃಷ್ಣನೆಂಬ ಹೆಸರು ಅಡಗಿಹೋಗಿರುವುದು. ಇವನನ್ನು ಕೃಷ್ಣದ್ವೈಪಾಯನವ್ಯಾಸನೆಂದು ಕರೆಯುವ ರೂಢಿಯೂ ಇರುವುದು. ಇವನು '**ಜಯ**'ವೆಂಬ ಕಾವ್ಯವನ್ನು ರಚಿಸಿರುವನು. ಇದೇ ಈಗಿನ **ಮಹಾಭಾರತ**ದ ಮೂಲ.

ಕೆಲವರು ವೇದವ್ಯಾಸ ಮತ್ತು ಬಾದರಾಯಣ ಇವರೀರ್ವರೂ ಭಿನ್ನ ವ್ಯಕ್ತಿಗಳೆಂದು ಹೇಳುವರು. ಇವರ ಏಕವ್ಯಕ್ತಿತ್ವವಿಚಾರದಲ್ಲಿ ಸಂದೇಹಗೊಳ್ಳುವವರ ಸಲುವಾಗಿ ಕೊಂಚ ಬರೆಯುವದವಶ್ಯಕವೆಂದು ತೋರುವುದು.

ಬಾದರಾಯಣನು ಬ್ರಹ್ಮಸೂತ್ರಕಾರನೆಂದು ನಿಶ್ಚಿತವಾಗಿದೆ. ಈತನ ಹೆಸರು ಬ್ರಹ್ಮಸೂತ್ರದಲ್ಲಿ ಒಂಭತ್ತು ಕಡೆ ಹೇಳಲ್ಪಟ್ಟಿದೆ.

ಇವನು ತನಗಿಂತಲೂ ಹಿರಿಯರಾದ ಆಚಾರ್ಯರ ಹೇಳಿಕೆಯನ್ನು ನೋಡಿ ತನ್ನ ಹೇಳಿಕೆಯನ್ನು ಸಮರ್ಥಿಸುವಾಗ ತನ್ನ ಹೆಸರನ್ನು ಪ್ರಥಮಪುರುಷ (Third Person)ದಲ್ಲಿ ಹೇಳಿಕೊಂಡಿರುವನು. ಹೀಗೆ ಹೇಳಲ್ಪಟ್ಟಿರುವುದರಿಂದ ಬ್ರಹ್ಮಸೂತ್ರಕಾರನು ಬಾದರಾಯಣನಲ್ಲವೆಂದೂ ಅವನನಂತರ ಬಂದ ಅವನ ಶಿಷ್ಯರು ಬರೆದಿರಬೇಕೆಂದೂ ಕೆಲವರು ಪಂಡಿತರು ತರ್ಕಿಸುವರು. ಇದು ಸರಿಯಲ್ಲವೆಂದು ತೋರುವುದು. ಹೇಗೆಂದರೆ— "ನಾನು" ಎಂಬ ಶಬ್ದವು ಅಹಂಕಾರ ಅಥವಾ ಅಭಿಮಾನಾತ್ಮಕಪದವಾಗಿದ್ದು ಬಾದರಾಯಣನು ತನ್ನ ಪೂರ್ವಾಚಾರ್ಯರ ಎದುರಿನಲ್ಲಿ ತಾನೆಷ್ಟರವನೆಂದು ಮಮತಾಶೂನ್ಯನಾಗಿ ಪ್ರಥಮಪುರುಷದಲ್ಲಿ ಹೇಳಿಕೊಂಡಿರಬೇಕಾಗಿ ತೋರುತ್ತದೆ. ಹೀಗೆ ಹೇಳಿರುವವನು ಬಾದರಾಯಣನೊಬ್ಬನೇ ಅಲ್ಲ. ಪೂರ್ವಾಚಾರ್ಯರುಗಳಾದ ಜೈಮಿನಿ, ಬೋಧಾಯನ, ಕೌಟಿಲ್ಯ ಮತ್ತು ಕಾಮಸೂತ್ರಕಾರನಾದ ವಾತ್ಸ್ಯಾಯನನೇ ಮೊದಲಾದವರು ಹೀಗೆಯೇ ಹೇಳಿಕೊಂಡಿರುವರು.

---

‡ ಹೆಂಗಸು ಮದುವೆಯಾಗುವವರೆಗೂ ಕನ್ಯೆಯೆಂದು ವ್ಯವಹರಿಸಲ್ಪಡುವಳು.

§ ವೇದವ್ಯಾಸಸ್ತು ಮಾಠರಃ ॥ ೫೧೦ ॥

ದ್ವೈಪಾಯನಃ ಪಾರಾಶರ್ಯಃ ಕಾನೀನೋ ಬಾದರಾಯಣಃ

ವ್ಯಾಸೋಽಸ್ಯಾಂಬಾ ಸತ್ಯವತೀ ವಾಸವೀ ಗಂಧಕಾಲಿಕಾ ॥

—೫೧೩ ಮರ್ತ್ಯಕಾಂಡ, ಹೇಮಚಂದ್ರನ ಅಭಿಧಾನಚಿಂತಾಮಣಿ ಕೋಶ.

ಆಗಣ ಕಾಲದಲ್ಲಿ ಹೀಗೆ ಬರೆಯುವುದೇ ಪ್ರಚಾರದಲ್ಲಿದ್ದಿತಾಗಿ ತೋರುತ್ತದೆ. ತುಲಸೀದಾಸ, ನಾನಕ, ಕಬೀರ, ತುಕಾರಾಮ, ಚಂಡೀದಾಸ, ವಿದ್ಯಾಪತಿಯೇ ಮೊದಲಾದವರು ತಮ್ಮ ಹೆಸರನ್ನು ಪ್ರಥಮಪುರುಷದಲ್ಲಿಯೇ ಹೇಳಿಕೊಂಡಿರುವರು.

ಮಹಾತ್ಮರಾದ ಶಂಕರರಾದಿಯಾಗಿ ಪಂಡಿತೋತ್ತಮರೆಲ್ಲರೂ ಬ್ರಹ್ಮಸೂತ್ರಕಾರನು ಬಾದರಾಯಣನೆಂದು ಏಕವಾಕ್ಯತೆಯಿಂದ ಒಪ್ಪಿಕೊಂಡಿರುವುದರಿಂದ ಬ್ರಹ್ಮಸೂತ್ರಕಾರನು ಅನ್ಯನೆಂದು ಹೇಳಲಾಗುವುದಿಲ್ಲ. ಭಾರತೀಯ ಪಂಡಿತೋತ್ತಮರು ಸೂತ್ರಕಾರನಾದ ಬಾದರಾಯಣನೇ ಮಹಾಭಾರತಕಾರನಾದ ವೇದವ್ಯಾಸನೆಂದು ಹೇಳುವರು. ಆದರೆ ಮಿ. ವಿಂಡಿಷ್‌ಮ್ಯಾನ್ (Windischmann) ರವರು ಶಂಕರಭಾಷ್ಯದಲ್ಲಿ ಬಾದರಾಯಣನೆಂಬ ಹೆಸರು ಕಂಡುಬರುವುದೇ ಹೊರತು ಮಹಾಭಾರತಕಾರನಾದ ವೇದವ್ಯಾಸನ ಹೆಸರು ಕಂಡುಬಾರದೆ ಇರುವುದರಿಂದ ಮಹಾಭಾರತಕಾರನಾದ ವೇದವ್ಯಾಸನೂ ಸೂತ್ರಕಾರನಾದ ಬಾದರಾಯಣನೂ ಬೇರೆ ಬೇರೆ ಎಂದು ಹೇಳುವರು. ಈ ವಿಚಾರವನ್ನು ಪ್ರೊ. ಮ್ಯಾಕ್ಸ್‌ಮುಲ್ಲರವರೂ ಕೂಡ ಅನುಮೋದಿಸಿರುವರು. ಇಂತಹ ಮಹಾಪಂಡಿತರು ಹೀಗೆ ಹೇಳುವುದು ಆಶ್ಚರ್ಯವಾಗಿಯೇ ಇರುವುದು. ಏಕೆಂದರೆ, ಶಂಕರರು ತಮ್ಮ ಭಾಷ್ಯವನ್ನು ಬರೆಯುವವೇಳೆಗೆ ವೇದವ್ಯಾಸನೇ ಸೂತ್ರಕಾರನೆಂದೂ ಅವನೇ ಬಾದರಾಯಣನೆಂದೂ ಲೋಕಸಿದ್ಧಾಂತವಾಗಿದ್ದುದರಿಂದ ಅದನ್ನು ತಮ್ಮ ಭಾಷ್ಯದಲ್ಲಿ ಬರೆಯುವ ಅವಶ್ಯಕತೆಯಿಲ್ಲದೆ ಬಿಟ್ಟಿರಬೇಕಾಗಿ ತೋರುತ್ತದೆ. ಕಾಲಕ್ರಮದಲ್ಲಿ ವೇದವ್ಯಾಸನೇ ಬೇರೆ, ಬಾದರಾಯಣನೇ ಬೇರೆಯಾಗಿರಬೇಕೆಂಬ ಅವಿಚಾರಪ್ರಶ್ನತರಂಗಗಳೊದಗುವುದಾಗಿ ಶಂಕರರು ಯೋಚಿಸಿದ್ದರೆ ಅವರ ಭಾಷ್ಯದಲ್ಲಿ ಒಬ್ಬನ ಹೆಸರನ್ನೇ ಹೇಳುತ್ತಿರಲಿಲ್ಲ. ಭಾಷ್ಯದಲ್ಲಿ ವೇದವ್ಯಾಸ ಮತ್ತು ಬಾದರಾಯಣರಿಬ್ಬರಿಗೂ ಹೆಚ್ಚಾದ ಗೌರವವನ್ನು ತೋರಿಸಿರುವುದು ಕಂಡುಬರುತ್ತದೆ. ಅದರಲ್ಲಿ ಸೂತ್ರಕಾರನೇ ವೇದವ್ಯಾಸನೆಂದು ಸ್ಪಷ್ಟವಾಗಿ ಹೇಳಿ ತೋರಿಸದಿದ್ದರೂ ಭಾಷ್ಯವನ್ನು ಅತ್ಯಂತ ಜಾಗರೂಕತೆಯಿಂದ ಪರಿಶೀಲಿಸುವ ಪ್ರತಿಯೊಬ್ಬ ಚತುರನಿಗೂ ಬಾದರಾಯಣನೂ ಮತ್ತು ವೇದವ್ಯಾಸನೂ ಒಬ್ಬನೇ ಆಗಿರಬೇಕೆಂದು ಹೊಳೆಯದಿರದು. ಗೋವಿಂದಾನಂದ, ವಾಚಸ್ಪತಿಮಿಶ್ರ ಮತ್ತು ಆನಂದಗಿರಿಯೇ ಮೊದಲಾದ ಶಿಷ್ಯರು ತಮ್ಮ ವ್ಯಾಖ್ಯಾನಗಳಲ್ಲಿ ವೇದವ್ಯಾಸನೇ ಸೂತ್ರಕಾರನೆಂದೂ ಅವನೇ ಬಾದರಾಯಣನೆಂದೂ ಒಕ್ಕಣಿಸಿರುವರು. ಇದಲ್ಲದೆ ರಾಮಾನುಜ, ಮಾಧ್ವ,

ವಲ್ಲಭ, ಶ್ರೀನಿವಾಸ, ಬಲದೇವ ಇವರೇ ಮೊದಲಾದ ಮಹಾಪ್ರಭೃತಿಗಳೂ ಕೂಡ ಸೂತ್ರಕಾರನು ವೇದವ್ಯಾಸನೆಂದೇ ಹೇಳಿರುವರು.

ಮಾಧ್ವ ಮತ್ತು ವಂಗೀಯನಾದ ಬಲದೇವ ಇವರುಗಳು ಸ್ಕಾಂದಪುರಾಣದ * ಶ್ಲೋಕಗಳನ್ನುದಹರಿಸಿ ತೋರಿಸಿ ಸೂತ್ರಕಾರನು ವೇದವ್ಯಾಸನೆಂದು ಸಮರ್ಥಿಸಿರುವರು.

ವಂಗೀಯವೈಷ್ಣವಸಂತಾನರ ಪರಮಪೂಜ್ಯಪುಸ್ತಕವಾದ ಭಾಗವತ ಪುರಾಣದಲ್ಲಿಯೂ ಕೂಡ ಬಾದರಾಯಣನೇ ವೇದವ್ಯಾಸನೆಂದು ಹೇಳಲ್ಪಟ್ಟಿದೆ. ಇದಲ್ಲದೆ ಹೇಮಚಂದ್ರನು ತನ್ನ ಅಭಿಧಾನಚಿಂತಾಮಣಿ ಎಂಬ ಕೋಶದಲ್ಲಿ ವೇದವ್ಯಾಸನಿಗೆ ಮಾಠರ, ದ್ವೈಪಾಯನ, ಪಾರಾಶರ್ಯ, ಕಾನೀನ, ಬಾದರಾಯಣ ಮತ್ತು ವ್ಯಾಸನೆಂಬ ನಾಮಾಂತರಗಳಿರುವುದಾಗಿ ಬರೆದುಕೊಂಡಿರುವನು.

ಮಹಾಭಾರತ, ವಿಷ್ಣುಪುರಾಣ, ಭಾಗವತ ಮತ್ತು ಸಾಮವಿಧಾನ ಬ್ರಾಹ್ಮಣಗಳಲ್ಲಿ ಜೈಮಿನಿಯು ವೇದವ್ಯಾಸನ ಶಿಷ್ಯನೆಂದು ಹೇಳಲ್ಪಟ್ಟಿರುವುದು ಕಂಡುಬರುತ್ತದೆ. ಸೂತ್ರಕಾರನಾದ ಬಾದರಾಯಣನೂ ವೇದವ್ಯಾಸನೂ ಒಬ್ಬನೇ ಆಗಿರುವುದರಿಂದ ಜೈಮಿನಿಯು ಬಾದರಾಯಣನ ಶಿಷ್ಯನೆಂದೂ ಹೇಳಬಹುದಾಗಿದೆ. ಜೈಮಿನಿಯು ಬರೆದಿರುವ ಮೀಮಾಂಸಾದರ್ಶನಗ್ರಂಥದಲ್ಲಿ ಬಾದರಾಯಣನ ಹೆಸರು ಐದು ಸಂದರ್ಭಗಳಲ್ಲಿ ‡ ಹೇಳಿರುವುದಾಗಿ ಕಂಡುಬರುತ್ತದೆ. ಬಾದರಾಯಣನೂ ಕೂಡ ಜೈಮಿನಿಯನ್ನು ಹತ್ತುಕಡೆ ಹೇಳಿಕೊಂಡಿರುವನು. ಇದರಿಂದ ಜೈಮಿನಿ ಮತ್ತು ಬಾದರಾಯಣರನ್ನು ಶಿಷ್ಯ ಮತ್ತು ಉಪಾಧ್ಯಾಯರೆಂಬುದಕ್ಕೆ ಬದಲು ಪರಸ್ಪರ ಸಮಕಾಲಿಕರೂ ವಿರುದ್ಧಾಭಿಪ್ರಾಯದವರೂ (Rivals) ಆಗಿರಬೇಕೆಂದು ಹೇಳುವುದು

---

* ತ್ರೈವರ್ಣಿಜ್ಞಾಪಿತಕಾರ್ಯಸ್ತು ಭಗವಾನ್ ಪುರುಷೋತ್ತಮಃ ।
ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ॥
ಉತ್ಸನ್ನಾನ್ ಭಗವಾನ್ ವೇದಾನುಜ್ಜಹಾರ ಹರಿಃ ಸ್ವಯಂ ।
ಚತರ್ಧಾ ವ್ಯಭಜತ್ತಾಂಶ್ಚ ಚತುರ್ವಿಂಶತಿಧಾ ಪುನಃ ॥
ಶತಧಾ ಚೈಕಧಾ ಚೈವ ತಥೈವ ಚ ಸಹಸ್ರಧಾ ।
ಕೃಷ್ಣೋ ದ್ವಾದಶಧಾ ಚೈವ ಪುನಸ್ತಸ್ಯಾರ್ಥವಿತ್ತಯೇ
ಚಕಾರ ಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸಾ ॥

‡ ಪ್ರೊ. ಬೆಳವೇಳಕರ್‌ರವರು ಮೂರು ಜಾಗಗಳಲ್ಲಿ ಮಾತ್ರ ಕಂಡುಬರುವುದಾಗಿ ಹೇಳಿರುವರು.

ಸೂಕ್ತವಾಗಿ ತೋರುತ್ತದೆಂದು ಹೇಳುವ ಕೆಲವರಿಗೆ ವೇದವ್ಯಾಸನೂ ಮತ್ತು ಬಾದರಾಯಣನೂ ಒಬ್ಬನೇ ಆಗಿರಬೇಕೆಂಬ ಹೇಳಿಕೆಯು ವಿರುದ್ಧವಾಗಿ ತೋರಬಹುದು. ಈ ವಿಚಾರವಾಗಿ ಬಹುದೂರ ಯೋಚನೆಮಾಡಿ ನೋಡಿದರೆ ಈ ಈರ್ವರೂ ಮೀಮಾಂಸದ್ವಯದಲ್ಲಿ ವಿರುದ್ಧಾಭಿಪ್ರಾಯದವರೆಂದು ಹೇಳುವುದಕ್ಕಿಂತಲೂ ಗುರು ಶಿಷ್ಯಸಂಬಂಧವನ್ನು ವಹಿಸಿದ್ದರೆಂದು ಹೇಳುವುದೇ ಯೋಗ್ಯವಾಗಿ ಕಾಣಿಸುತ್ತದೆ. ಹೇಗೆಂದರೆ ಜೈಮಿನಿಯು ಬಾದರಾಯಣನನ್ನು ತನ್ನ ಸೂತ್ರದಲ್ಲಿ ಹೇಳಿ ಅವನ ವಿಚಾರವಾಗಿ ವಿರುದ್ಧಾಭಿಪ್ರಾಯವಾವುದನ್ನೂ ಹೇಳದೆ ಹೆಚ್ಚಾಗಿ ಗೌರವಿಸಿಯೇ ಇರುವನು. ಈ ವಿಚಾರದಲ್ಲಿ ಮೀಮಾಂಸ ಪ್ರಾಚೀನವ್ಯಾಖ್ಯಾತೃವಾದ ಶಬರಸ್ವಾಮಿಯು ತಾನು ಬರೆದಿರುವ ಒಂದನೇ ಸೂತ್ರದ ಭಾಷ್ಯದಲ್ಲಿ,

"ಬಾದರಾಯಣಗ್ರಹಣಂ—ಬಾದರಾಯಣಸ್ಯೇದಂ ಮತಂ ಕೀರ್ತ್ಯತೇ
ಬಾದರಾಯಣಂ ಪೂಜಯಿತುಂ ನಾತ್ಮೀಯಂ ಮತಂ ಪರ್ಯುದಸಿತುಂ ||*

ಎಂದು ಹೇಳಿಕೊಂಡಿರುವನು.

ಬಾದರಾಯಣನೂ ಕೂಡ ಜೈಮಿನಿಯನ್ನು ತನ್ನ ಶಿಷ್ಯನಂತೆ ಹೇಳಿರುವನೇ ಹೊರತು ವಿರುದ್ಧಾಭಿಪ್ರಾಯಯುತನೆಂದು ಹೇಳಿರುವುದಿಲ್ಲ. ಅನೇಕ ಕಡೆ ಜೈಮಿನಿಯ ಮತವನ್ನಂಗೀಕರಿಸಿರುವುದಾಗಿಯೂ ತೋರುತ್ತದೆ. ಜೈಮಿನಿಯು ಸ್ವಾಭಿಪ್ರಾಯದಿಂದ ಭಿನ್ನನಾಗಿ ವ್ಯವಹರಿಸಿದಾಗ ಶಿಷ್ಯನ ತಪ್ಪು ತಿಳಿವಳಿಕೆಯನ್ನು ತಿಳಿದು ತಿದ್ದುವ ಆಚಾರ್ಯನಂತೆ ಅವನ ತಪ್ಪು ಅಭಿಪ್ರಾಯಗಳನ್ನು ತಿದ್ದಿ ತಿಳಿಯಹೇಳಿರುವನು.

ಈ ವಿಚಾರದಲ್ಲಿ ಭಾಷ್ಯವ್ಯಾಖ್ಯಾನಕಾರರಾದ ಗೋವಿಂದಾನಂದ ಮತ್ತು ಆನಂದಗಿರಿ ಈ ಇಬ್ಬರೂ ಹೀಗೆಂದು ಹೇಳಿರುವರು—

"ತತ್ತ್ವನಿರೂಪಣಾರ್ಥಂ ಗುರುಶಿಷ್ಯಯೋಃ ಕಥಾವಾದೋಽಯಮಿತಿ
ಜ್ಞಾಪನಾರ್ಥಂ ಜೈಮಿನಿಗ್ರಹಣಂ" —ರತ್ನಪ್ರಭಾವ್ಯಾಖ್ಯಾನಂ.

"ಜೈಮಿನಿಗ್ರಹಣಂ ನ ಪ್ರತಿಪಕ್ಷತಯಾ ಶಿಷ್ಯಸ್ಯ ತದಯೋಗಾತ್"
—ಆನಂದಗಿರೀಯ ವ್ಯಾಖ್ಯಾನಂ ೩—೪—೨.

ಈ ವಿಚಾರವಾಗಿ ಮತ್ತೊಂದು ಪ್ರಶ್ನೆಯು ಹುಟ್ಟುವುದು. ವೇದವ್ಯಾಸನೇ ಸೂತ್ರಕಾರನಾಗಿದ್ದಪಕ್ಷದಲ್ಲಿ ಸೂತ್ರಗಳನ್ನು ವೇದವ್ಯಾಸನ ಹೆಸರಿನಲ್ಲಿ ಹೇಳದೆ ಬಾದರಾಯಣನ ಹೆಸರಿನಲ್ಲಿ ಹೇಳಿರುವುದೇಕೆ?

---

* Sabara's Bhashya to Sutra xi 1-64

ಇವನು ನರನಾರಾಯಣಾಶ್ರಮ ಅಥವಾ ಬದರಿಕಾಶ್ರಮದಲ್ಲಿ ವೇದಾಂತ ಸೂತ್ರಗಳನ್ನು ರಚಿಸಿದನಾದುದರಿಂದ ಬಾದರಾಯಣನೆಂಬ ಹೆಸರಿನಿಂದ ಅವುಗಳಲ್ಲಿ ಹೇಳಿರಬಹುದಾಗಿ ತೋರುತ್ತದೆ. ಆದರೆ ಮಹಾಭಾರತವನ್ನು ಸಾಧ್ಯವಾದಮಟ್ಟಿಗೂ ಹುಡುಕಿದುದರಲ್ಲಿ ಬಾದರಾಯಣನೆಂಬ ಹೆಸರು ಮಹಾಭಾರತದಲ್ಲಿ ಎಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲವಾದರೂ 'ಬದರಿ' ಮತ್ತು 'ನರನಾರಾಯಣಾಶ್ರಮ'ಗಳ ಹೆಸರು ಕಂಡುಬರುತ್ತದೆ.*

ಇಲ್ಲಿಯೇ ದೇವರ್ಷಿಯಾದ ನಾರದನು ಅನೇಕಕಾಲ ತಪೋಸಮಾಧಿಸ್ಥನಾಗಿದ್ದು ಜ್ಞಾನೋದಯವನ್ನು ಹೊಂದಿದನಾಗಿ ಮಹಾಭಾರತದಿಂದ ತಿಳಿಯಬರುತ್ತದೆ. ಮತ್ತು ಅದರಲ್ಲಿ ವೇದವ್ಯಾಸ, ಸುಮಂತು, ವೈಶಂಪಾಯನ, ಜೈಮಿನಿ, ಪೈಲ ಮತ್ತು ತನ್ನ (ವೇದವ್ಯಾಸ)ಮಗ ಶುಕ— ಈ ಐದು ಜನ ಶಿಷ್ಯರೊಡನೆ ಹಿಮಾಲಯದ ತಪ್ಪಲಲ್ಲಿ ವಾಸಿಸುತ್ತಿದ್ದುದಾಗಿಯೂ ಹೇಳಲ್ಪಟ್ಟಿದೆ.‡ ವೇದವ್ಯಾಸನು ಬದರಿಕಾಶ್ರಮದಲ್ಲಿಯೇ ವಾಸಿಸುತ್ತಿದ್ದನೆಂಬುದು ಸ್ಕಾಂದಪುರಾಣದಿಂದ ತಿಳಿಯಬರುತ್ತದೆ.§ ಈ ಮೇಲ್ಕಂಡ ಕಾರಣಗಳಿಂದ ಬದರಿಕಾಶ್ರಮದಲ್ಲಿ ತಾನು ಬರೆದುದಾದ ಸೂತ್ರಗಳಿಗೆ ಬಾದರಾಯಣಕೃತವೆಂದು ಹೆಸರನ್ನೇಕೆ ಕೊಟ್ಟಿರಬಾರದಾಗಿ ನಮಗೆ ತೋರುವುದು. (ಬದರೀ+ಅಯನ?) ಬಾದರಾಯಣನೆಂಬ ಹೆಸರು ಪಾಣಿನೀಯಸೂತ್ರದಲ್ಲಿ ಕಂಡುಬರುವುದಿಲ್ಲ. ಆದರೆ ಗಣಪಾಠದಲ್ಲಿ ಕಂಡು ಬರುವುದು. ಈ ಹೆಸರು ಯಾವಾಗ ಗಣಪಾಠದಲ್ಲಿ ಸೇರಿಸಲ್ಪಟ್ಟಿತೆಂಬುದಕ್ಕಾಗಲಿ, ಪಾಣಿನಿಯ ಕಾಲದಲ್ಲಿ ಗಣಪಾಠದಲ್ಲಿರಲಿಲ್ಲವೆಂಬುದಕ್ಕಾಗಲಿ ಸರಿಯಾದ ಆಧಾರಗಳು ದೊರೆಯುವಂತಿಲ್ಲ. ಬಾದರಾಯಣನ ಹೆಸರು ಭಾಗವತ, ಶಾಂಡಿಲ್ಯಸೂತ್ರ, ಚರಕಸಂಹಿತಾದಿಗಳಲ್ಲಿ ಕಂಡುಬರುವುದು. ಚರಕನು ಕನಿಷ್ಕನ ಸಮಕಾಲಿಕನೆಂದು ತಿಳಿಯಬರುತ್ತದೆ.

---

* 'ನರನಾರಾಯಣಸ್ಥಾನಂ ಬದರೀತ್ಯಭಿವಿಶ್ರುತಂ'

—ಮಹಾಭಾರತ ವನಪರ್ವ ೧೫೬ನೇ ಅಧ್ಯಾಯ ೧೪ನೇ ಶ್ಲೋಕ.

‡ ಮಹಾಭಾರತ ಶಾಂತಿಪರ್ವ ಮೋಕ್ಷಧರ್ಮ ೩೨೭ನೇ ಅಧ್ಯಾಯ (Calcutta Edition)

§ 'ತತೋ ಬದರಿಕಾರಣ್ಯೇ ಸಮಾಸೀನಂ ಮಹಾಮುನಿಂ।

ದ್ವೈಪಾಯನಂ ಸಮಾಗತ್ಯಂ ಪ್ರಣನಾಮ ಸಭಕ್ತಿಕಂ ॥

—ಸ್ಕಂದಪುರಾಣ ಬ್ರಹ್ಮಖಂಡ ಸೇತುಮಹಾತ್ಮ್ಯ ಏಕೋನತ್ರಿಂಶಾಧ್ಯಾಯ೭ನೇ ಶ್ಲೋಕ.

ಅವನು ಇತರ ಋಷಿಗಳನ್ನು ಹೇಳುವಾಗ ಬಾದರಾಯಣನ ಹೆಸರನ್ನೂ ಹೇಳಿರುವನು. ವರಾಹಮಿಹಿರನೂ ಮತ್ತು ಭಟ್ಟೋತ್ಪಲನೂ ತಮ್ಮ ಜ್ಯೋತಿಷ ಗ್ರಂಥಗಳಲ್ಲಿ ಬಾದರಾಯಣನ ಹೆಸರನ್ನು ಹೇಳಿರುವರು. ಆದರೆ ಇವರು ಹೇಳುವ ಬಾದರಾಯಣನು ಸೂತ್ರಕಾರನಲ್ಲ. ಸಾಮವಿಧಾನ ಬ್ರಾಹ್ಮಣದ ಕೊನೆಯಲ್ಲಿ ಬಾದರಾಯಣನೆಂಬ ಹೆಸರು ಕಂಡುಬರುವುದು. ಇವನು ವ್ಯಾಸ ಪಾರಾಶರ್ಯನ ನಾಲ್ಕನೆಯ ತಲೆಯವನೂ ಜೈಮಿನಿಯ ಮೂರನೆಯ ತಲೆಯವನೂ ಆಗಿ ಪಾರಾಶರ್ಯನ ಶಿಷ್ಯನೆಂದು ಹೇಳಿಕೊಂಡಿರುವುದರಿಂದ ಸೂತ್ರಕಾರನಾದ ಬಾದರಾಯಣನು ಇವನಲ್ಲ.

ಮಹಾಪಂಡಿತರಾದ ಲೋಕಮಾನ್ಯಬಾಲಗಂಗಾಧರತಿಲಕರವರೂ ಮತ್ತು ಪ್ರೊ. ಬೆಳಿವೇಳಕರವರೂ ತಮ್ಮ ಗ್ರಂಥಗಳಲ್ಲಿ ಬಾದರಾಯಣನೂ ವೇದವ್ಯಾಸನೂ ಒಬ್ಬನೇ ಎಂದು ಹೇಳಿರುವರು.

**ಕಾಲ:—**ಕುರುಕ್ಷೇತ್ರದಲ್ಲಿ ನಡೆದ ಕೌರವ ಪಾಂಡವರ ಯುದ್ಧದ ವಿಚಾರವಾಗಿ ಯಾರೊಬ್ಬರೂ ಮರುಮಾತಾಡದಿದ್ದರೂ ಅದು ಯಾವಾಗ ನಡೆಯಿತೆಂಬ ವಿಚಾರವನ್ನು ತಿಳಿಯಲು ತಹತಹಪಡುತ್ತಿರುವರು. ಕೆಲವರು ಮಹಾಭಾರತವನ್ನು ಕಲ್ಪನೆಯೆಂತಲೇ ಅನ್ನುವರು. ಅಂಥವರು ಈಜಿಪ್ಟ್, ಬಾಬಿಲೋನಿಯ ಮತ್ತು ಚೈನಾರಾಜ್ಯಗಳ ಚರಿತೆಗಳನ್ನೋದಿ ಪರಿಶೀಲಿಸುವುದಾದರೆ ತಮ್ಮ ಅಭಿಪ್ರಾಯವು ತಪ್ಪೆಂದೂ ಇಂಡಿಯಾದೇಶದ ಚರಿತೆಯನ್ನು ಸುಳ್ಳೆಂದು ಹೇಳಲಾಗುವುದಿಲ್ಲವೆಂದೂ ಅವರಿಗೇ ತೋರಬಹುದು. ವಿಶ್ವದ ಅತ್ಯಾಶ್ಚರ್ಯಕರವಾದ ಈಜಿಪ್ಟಿನ ಪಿರಮಿಡ್ಡುಗಳು ಕ್ರಿ. ಪೂ. ಸುಮಾರು ೨೫೦೦ ವರ್ಷಗಳ ಹಿಂದೆ ಕಟ್ಟಲ್ಪಟ್ಟು ಈಗಲೂ ಅಚ್ಚಳಿಯದಿರುವುವು. ಆಗಣ ನಾಗರೀಕತೆ ಮತ್ತು ಕುಶಲವಿದ್ಯೆಗಳು ಅತ್ಯಂತೋಚ್ಚ್ರಾಯ ಸ್ಥಿತಿಯಲ್ಲಿದ್ದಿತೆಂಬುದನ್ನು ಹೇಳುತ್ತಿರುವುವು. ಬಾಬಿಲೋನಿಯರು ಕೆಳಗಣಪ್ರಾಂತ್ಯಗಳ ನಾಗರಿಕತೆಯನ್ನನುಸರಿಸಿದಂತೆಯೂ ಆ ಕಾಲವು ಕ್ರಿ. ಪೂ. ೨೪೫೮ ಎಂದೂ ಅವರ ಚರಿತೆಯಲ್ಲಿ ಹೇಳಲ್ಪಟ್ಟಿದೆ. ಇದರಿಂದ ದಕ್ಷಿಣ ಅಥವಾ ಕೆಳಗಣ ಪ್ರಾಂತಗಳು ಕ್ರಿ. ಪೂ. ೩೦೦೦ ದಲ್ಲಿ ಅತ್ಯಂತ ನಾಗರೀಕದೆಸೆಯಲ್ಲಿದ್ದಿರಬೇಕೆಂದು ಗೊತ್ತಾಗುವುದು.

ಚೈನಾದೇಶೀಯ ಚರಿತ್ರಕಾರರು ರಾಜನಾದ ಹಂಗತ್ವಿ(Hangtwi)ಎಂಬುವನು ಕ್ರಿ. ಪೂ. ೨೩೩೨ರಲ್ಲಿ ಸಿಂಹಾಸನಕ್ಕೆ ಬಂದನೆಂದು ಹೇಳಿರುವರು. ಇವನ ಹಿಂದಣ ರಾಜರು ಜನರಿಗೆ ಕೃಷಿಕರ್ಮ (Agriculture) ವನ್ನು ಕಲಿಸಿಕೊಟ್ಟರೆಂದೂ ಸರ್ವಜನೋಪಯೋಗ ವ್ಯಾಪಾರಸ್ಥಳಗಳನ್ನು ಕಲ್ಪಿಸಿಕೊಟ್ಟರೆಂದೂ

ರೋಗನಿವಾರಣಾರ್ಥವಾಗಿ ವ್ಯಾಧಿಹರಣಮಾಡುವ ಗಿಡಮೂಲಿಕೆಗಳನ್ನು ಕಂಡು ಹಿಡಿದರೆಂದೂ ಹೇಳಿರುವರು. ಈ ದೇಶವನ್ನಾಳಿದ ಹೆರಡೋಟಿಸ್ ಈಜಿಪ್ಟಿಗೆ ಬಂದಿದ್ದ ಕಾಲದ ಹೀಬ್ರೂವಂಶವೃಕ್ಷಗಳೂ ಚೈನಾರಾಜವಂಶವೃಕ್ಷವೂ ಈಗಲೂ ಅಚ್ಚಳಿಯದಂತೆ ರಕ್ಷಿತವಾಗಿವೆ. ಆದುದರಿಂದ ಇವುಗಳಂತೆಯೇ ಭರತಖಂಡದ ನಾಗರಿಕತೆಯೂ ಎಲ್ಲವಕ್ಕೂ ಮಿಗಿಲೆನಿಸಿಕೊಂಡಿತ್ತೆಂದು ಹೇಳುವುದರಲ್ಲಿ ಆಶ್ಚರ್ಯವೇನಿರದು.

೧. ಮಿ॥ ಬೆಂಟ್ಲಿಯವರು ಪರಾಶರನ ಕಾಲವನ್ನು ಕ್ರಿ. ಪೂ. ೫೭೫ ಎಂದು ಹೇಳಿರುವರು. *

೨. ಮಿ॥ ಬುಚನೆನ್‌ರವರು ಕ್ರಿ. ಪೂ. ೧೩೦೦ ಎನ್ನುವರು. †

೩. ಮಿ॥ ಮಿಲ್ಲಫರ್ಡರವರು ಕ್ರಿ. ಪೂ. ೧೩೯೧ ಎಂದಿರುವರು. ‡

೪. ಪ್ರೊ. ಮ್ಯಾಕಡಾನಲ್ಲರವರು ಬುದ್ಧನಿಗಿಂತಲೂ ಪ್ರಾಚೀನವಾಗಿರ ಬೇಕೆನ್ನುವರು. $

೫. ಡಾ॥ ವೀಬರವರು ಕ್ರಿ. ಶ. ಒಂದನೆಯ ಶತಮಾನದ ಉತ್ತರಾರ್ಧ ದವನಾದ ರಿಯೋಟರ್‌ಡಯನ್ ಕ್ರೈಸೋಸ್ಟಂ (Rhetr Deino Chrysostom) ಎಂಬವನ ಹೇಳಿಕೆಯಿಂದ ಮಹಾಭಾರತಗ್ರಂಥವು ಇದ್ದುದಾಗಿ ತಿಳಿಯಿತೆಂದೂ ಮೆಗಾಸ್ತನೀಸನು ಮಹಾಭಾರತಕಥೆಯ ವಿಚಾರವಾಗಿ ಯಾವುದನ್ನೂ ಹೇಳ ದಿರುವುದರಿಂದ ಮಹಾಭಾರತಯುದ್ಧವು ಮೆಗಾಸ್ತನೀಸನ ಈಚೆಗೆ ಮತ್ತು ರೋಟರ್‌ಡಯನ್ ಕ್ರೈಸೋಸ್ಟಂಗಿಂತ ಪ್ರಾಚೀನವಾದುದಾಗಿರಬೇಕು, ಎಂದರೆ ಕ್ರಿ.ಪೂ. ೩ರಿಂದ ಕ್ರಿ. ಶ. ೧ನೇ ಶತಮಾನದ ಮಧ್ಯಕಾಲದಲ್ಲಾಗಿರಬೇಕು ಎಂದು ಒಕ್ಕಣಿಸಿರುವರು.

೬. ಮಿ. ಮೋದಕರವರು ಯಾವುದೋ ಜ್ಯೋತಿಷ (Astronomical data) ಲೆಕ್ಕಾಚಾರದಂತೆ ಮಹಾಭಾರತಯುದ್ಧವು ನಡೆದು ೬೦೦೦ ವರ್ಷ ಗಳಾಗಿರಬೇಕೆನ್ನುವರು.

೭. ಕೆಲವರು ವರಾಹಮಿಹಿರನನ್ನನುಸರಿಸಿ ಯುದ್ಧವು ಕ್ರಿ. ಪೂ. ೨೬೪ ರಲ್ಲಿ ನಡೆದಿರಬೇಕೆನ್ನುವರು.

---

* Hindu Astronomy.

† Genealogies of the Hindus

‡ Asiatic Researches Vol. IX

$ History of Sanskrit Literature.

೮. ಪಾಶ್ಚಾತ್ಯವಿದ್ವಸ್ಮಣಿಗಳು ಕೆಲವರು ವಿಷ್ಣುಪುರಾಣದ ಒಂದಾನೊಂದು ಶ್ಲೋಕದ ಆಧಾರದ ಮೇಲೆ ಕ್ರಿ. ಪೂ. ೧೫೦೦ ರಲ್ಲಿ ನಡೆದಿರಬೇಕೆನ್ನುವರು.

೯. ಮಿ॥ ರಮೇಶಚಂದ್ರದತ್ತರವರು ಕುರುಪಾಂಚಾಲರ ಯುದ್ಧಕ್ಕೂ ಮತ್ತು ಬುದ್ಧನ ಕಾಲಕ್ಕೂ ಮಧ್ಯದಲ್ಲಿ ೩೫ ಜನ ರಾಜರಾಳಿದರೆಂದು ಹೇಳಿ ಮಗಧದ ಚರಿತೆಯ ಆಧಾರದಿಂದ ಕ್ರಿ. ಪೂ. ೧೨೫೦ ಎಂದಿರುವರು.

೧೦. ಮಿ॥ ವೇಲಾಂಡಿ ಅಯ್ಯರವರು ಕ್ರಿ. ಪೂ. ೧೧೯೪ನೇ ಇಸ್ವಿ ಅಕ್ಟೋಬರು ೧೪ನೆಯ ತಾರೀಖಿನಲ್ಲಿ ನಡೆದುದಾಗಿ ಸಿದ್ಧಾಂತಿಸಿ ಹೇಳಿರುವರು.

೧೧. ಮಿ॥ ಯಂ. ಕೃಷ್ಣಮಾಚಾರ್ಯರವರು "ಪಾಣಿನೀಯ ಸೂತ್ರದಲ್ಲಿ ಯುಧಿಷ್ಠಿರನ ಹೆಸರು ಕಂಡುಬರುವುದು; ಪತಂಜಲಿಯ ಭಾಷ್ಯದಲ್ಲಿ ಭೀಮ ನಕುಲ ಸಹದೇವ ಇವರ ಹೆಸರುಗಳು ಹೇಳಲ್ಪಟ್ಟಿರುವುವು;

ಮತ್ತು—

'ಧರ್ಮೇಣ ಸ್ಮ ಕುರವೋ ಯುಧ್ಯಂತೇ'

ಎಂದು ಮತ್ತೊಂದು ಕಡೆ ಹೇಳಲ್ಪಟ್ಟಿರುವುದು; ಐತ್ತರೇಯ ಬ್ರಾಹ್ಮಣದಲ್ಲಿ ಜನಮೇಜಯನೂ ಭರತನೂ ಮಹಾಪರಾಕ್ರಮಿಗಳೆಂದು ಹೇಳಿರುವುದು, ಸುಮಾರು ಕ್ರಿ. ಪೂ. ೩೫ರಲ್ಲಿ ಬರೆದಿರುವ ಆಶ್ವಲಾಯನಗೃಹ್ಯಸೂತ್ರದಲ್ಲಿ ಭರತನ ಮತ್ತು ಮಹಾಭಾರತದ ಹೆಸರು ಕಂಡುಬರುವುದು." ಇದರಿಂದ ಮಹಾಭಾರತವು ಇವುಗಳೆಲ್ಲದಕ್ಕಿಂತಲೂ ಎಷ್ಟೋ ಶತಮಾನಗಳ ಹಿಂದೆ ಬರೆಯಲ್ಪಟ್ಟುದಾಗಿ ಹೇಳಿರುವರು.

ಇವುಗಳೆಲ್ಲದರ ಪರಿಶಿಲನದಿಂದ ಸ್ಪಷ್ಟಪಡುವುದೇನೆಂದರೆ—

೧. ಮೆಗಾಸ್ತನೀಸನು ಇಂಡಿಯಾಕ್ಕೆ ತಾನು ಬಂದಿದ್ದಾಗ ಬರೆದುದಾದ ಸಂಪೂರ್ಣ ಲೇಖನವು ನಾಮಾವಶೇಷವಾಗಿಹೋಗಿ ಅಲ್ಪಸ್ವಲ್ಪ ದೊರೆಯಬಹುದಾದ ಲೇಖನಗಳಿಂದಲೇ ಮಹಾಭಾರತವು ಕ್ರಿ. ಪೂ. ೨೦೦ಕ್ಕಿಂತ ಹಿಂದಣದೆಂದು ಸಾಧಿಸಬಹುದಾಗಿದೆ. ಇದಲ್ಲದೆ ಡಾ॥ ವೀಬರ್‌ರವರು ಕುರುಪಾಂಚಾಲಯುದ್ಧಕಥಾವರ್ಣನಗಳನ್ನೊಳಗೊಂಡಿರುವ ಭಾರತ ಅಥವಾ 'ಜಯ' ಗ್ರಂಥವನ್ನು ಹೇಳದೆ ಪ್ರಮಾದದಿಂದ ಸೌತಿಯ ಮಹಾಭಾರತವನ್ನೇ ವ್ಯಾಸನ 'ಜಯ' ಕಾವ್ಯವೆಂದು ತಿಳಿದು ಕಾಲನಿರ್ಣಯಮಾಡಿರಬೇಕೆಂದು ಬೋಧೆಯಾಗುತ್ತದೆ.

೨. ಕೃಷ್ಣನು ದ್ವಾಪರಯುಗದವನು, ಕೌರವ ಪಾಂಡವರೂ ಕೂಡ ಕೃಷ್ಣನ ಸಮಕಾಲಿಕರು, ಭಾರತಯುದ್ಧವು ೧೮ ದಿವಸಗಳು ನಡೆದವು, ಈ ದಿವಸಗಳಲ್ಲಿ ಕೃಷ್ಣನಿದ್ದನೆಂಬುದು ವ್ಯಕ್ತವು.§

ಯುದ್ಧಾರಂಭನೊದಲು ಧರ್ಮನಂದನನ ರಾಜ್ಯಾಭಿಷೇಕ, ದ್ವಾರಕಾ ನಗರಾಗಮನ, ಕೆಲವುಕಾಲಾನಂತರ ಕೃಷ್ಣನ ವೈಕುಂಠಗಮನ ಇವುಗಳ ಕಾಲಕ್ಕೆ ಸಂಧಿಯೆಂದು ಹೆಸರು. ಇದಾದ ಕೆಲವು ಕಾಲಾನಂತರ ಪಾಂಡವರೂ ಸ್ವರ್ಗಸ್ಥರಾದರು. ಮಹರ್ಷಿಯಾದ ವ್ಯಾಸನೂ ಇದನ್ನು ಸ್ವರ್ಗಾರೋಹಣ ಪರ್ವವೆಂದು ಕರೆದಿರುವನು. ಮಹಾಭಾರತದಲ್ಲಿ ನಡೆದಿರುವ ಎಲ್ಲಾ ಸಂಗತಿಗಳನ್ನೂ ವ್ಯಾಸನು ಪ್ರತ್ಯಕ್ಷವಾಗಿ ನೋಡಿರುವುದಾಗಿ ಪದ್ಮಪುರಾಣದಲ್ಲಿನ—

ಕುರುರಾಜಕುಲಸ್ಥಾನಾಂ ದೃಷ್ಟಂ ವೃತ್ತಂ ಚ ಯತ್ಸ್ಥಿತಂ ।
ತತ್ಸರ್ವಂ ಭಗವಾನ್ ವ್ಯಾಸೋ ವರ್ಣಯಾಮಾಸ ಭಾರತೇ ॥

ಎಂಬ ಶ್ಲೋಕದಿಂದ ವ್ಯಕ್ತವಾಗುವುದು.

(೩) ಮಹಾಭಾರತವು ದ್ವಾಪರಾಂತ್ಯದಲ್ಲಿ ಅಥವಾ ಕಲಿಯುಗದ ಆದಿಯಲ್ಲಿ ರಚಿಲ್ಪಟ್ಟುದಾಗಿ ವರಾಹಪುರಾಣದ

ದ್ವಾಪರಾಂತೇ ಕಲೇರಾದೌ ಚಕ್ರೇ ಭಾರತಸಂಹಿತಾಂ"

ಎಂಬ ಶ್ಲೋಕದಿಂದಲೂ ದೃಢಪಡುತ್ತದೆ.

(೪) ಮಹಾಭಾರತದಲ್ಲಿ ಯವನರ ಉಲ್ಲೇಖವಿರುವುದರಿಂದಲೂ ಬೌದ್ಧಮತ ವಾದಪ್ರತಿವಾದಗಳಂತಿರುವ ಪ್ರಶ್ನೋತ್ತರಗಳು ಮೋಕ್ಷಧರ್ಮದಲ್ಲಿ ಕಂಡುಬರುವುದರಿಂಲೂ, ಆದಿಪರ್ವದ ಪೌಷ್ಯ ಆಖ್ಯಾನದಲ್ಲಿ ನಗ್ನಕ್ಷಪಣಕನ ಉಲ್ಲೇಖವಿರುವುದರಿಂಲೂ ಬೌದ್ಧ ಮತ್ತು ಜೈನರ ಮತೋತ್ಪತ್ತಿಯ ಕಾಲವು ಕ್ರಿ. ಪೂ. ೫ ನೆಯ ಶತಮಾನದ ಈಚಿನದಾಗಿರುವುದರಿಂದಲೂ, ಮಹಾಭಾರತದ ಕಾಲವೂ ಕೂಡ ಕ್ರಿ. ಪೂ. ೫ನೇ ಶತಮಾನಾನಂತರವಿರಬಹುದೆಂದು ಕೆಲವರು ಹೇಳುವರು. ಆದರೆ ಬೌದ್ಧಮತತತ್ವದ ವಾದವಿವಾದಗಳೂ ಕ್ಷಪಣಕನ ವಿಚಾರವೂ, ಸೌತಿಯ ಮಹಾಭಾರತಕಥಾಸಮೂಹದಲ್ಲಿ ಜೋಡಣೆಯಾಗಿದ್ದು ಇವು ಬೌದ್ಧತತ್ವಸಮಾವೇಶಿತವೆಂಬುದಕ್ಕಿಂತಲೂ ಆರ್ಯಮತತತ್ವಸಮಾವೇಶಿತಗಳಾಗಿರುವುವೆಂದೂ ಕುರುಪಾಂಚಾಲರ ಯುದ್ಧವು ಅವರ ನೀತಿಯುಮತ್ತು ಧರ್ಮಮಾರ್ಗದ ಕ್ಷೀಣತೆಯನ್ನು ತೋರಿಸುವುದೆಂದೂ ಹೇಳ

§ ಮೆ. ಟಾಲ್‌ಭಾಯ್‌ವ್ಹೀಲರವರು ಕೃಷ್ಣನು ಇರಲೇ ಇಲ್ಲವೆಂದಿರುವರು.

(Mahabharata a criticism by Mr. C. V. Vaidya)

ಬಹುದಾಗಿದೆ. ಭೀಮನು ದುರ್ಯೋಧನನ ಊರುಭಂಗವನ್ನು ಮಾಡಿದ ಕಾಲದಲ್ಲಿ ಭೀಮನ ಕಾರ್ಯಕ್ಕಾಗಿ ಖತಿಗೊಂಡ ಬಲರಾಮನನ್ನು ಸಮಾಧಾನ ಗೊಳಿಸುತ್ತ ಕೃಷ್ಣನು—

"ಪ್ರಾಪ್ತಂ ಕಲಿಯುಗಂ ವಿದ್ಧಿ ಪ್ರತಿಜ್ಞಾಂ ಪಾಂಡವಸ್ಯ ಚ" —ಗದಾಪರ್ವ

ಎಂದು ಹೇಳಿರುವುದರಿಂದ ಯುದ್ಧವು ಕಲಿಯುಗದ ಆದಿಯಲ್ಲೆಂದು ಸ್ಪಷ್ಟ ಪಡುವುದು.

(೫) ವೇದಕಾಲವನ್ನು ಮಂತ್ರಕಾಲವೆಂದೂ ಬ್ರಾಹ್ಮಣಕಾಲವೆಂದೂ ಎರಡುಭಾಗಮಾಡಿಕೊಂಡು ಯುದ್ಧವು ಬ್ರಾಹ್ಮಣಕಾಲದ ಮಧ್ಯದಲ್ಲಿ ನಡೆದು ದಾಗಿ ಹೇಳಬಹುದಾಗಿದೆ. ಇದು ಆ ಕಾಲದ ರಾಜಕೀಯ ಪರಿಸ್ಥಿತಿ ಮತ್ತು ಇತರ ಚರಿತೆಗಳಿಂದಲೂ ಗೊತ್ತಾಗುವುದು.

ಎಂ॥ ತಿಲಕರವರೂ ಮತ್ತು ಎಂ॥ ಶಂಕರದೀಕ್ಷಿತರವರೂ ಮಂತ್ರ ಕಾಲವು ಸುಮಾರು ಕ್ರಿ. ಪೂ. ४೦೦೦ ವರ್ಷಗಳೆಂದೂ ಬ್ರಾಹ್ಮಣಕಾಲವು ಕ್ರಿ. ಪೂ. ಸುಮಾರು ೩೦೦೦ ವರ್ಷಗಳೆಂದೂ ಹೇಳಿರುವರು. ಇದರಿಂದಲೂ ವೇದಾಂಗ, ಜ್ಯೋತಿಷಕಾಲಕ್ಕೆ ಮುಂಚೆ ಯುದ್ಧವು ನಡೆದಿರಬೇಕಾಗಿ ತೋರುವುದು.

೬. ಪುನಃ ಭಾರತೀಯ ಜ್ಯೋತಿಷಕಾರರೂ ಕಲಿಯುಗದ ಆದಿಸಿದ್ಧಾಂತ ವನ್ನೇ ಅನುಮೋದಿಸಿರುವಂತೆ ಕಂಡುಬರುತ್ತದೆ.

ಅಂತರೇ ಚೈವಸಂಪ್ರಾಪ್ತೇ ಕಲಿದ್ವಾಪರಯೋರಭೂತ್
ಸ್ಯಮಂತಪಂಚಕೇ ಯುದ್ಧಂ ಕುರುಪಾಂಡವಸೇನಯೋಃ ॥ —ಆದಿಪರ್ವ.
ಏತತ್ಕಲಿಯುಗಂ ನಾಮ ಅಚಿರಾದ್ಯತ್ಪ್ರವರ್ತತೇ —ವನಪರ್ವ

ಇತ್ಯಾದಿ ಆಧಾರಗಳಿಂದ ವ್ಯಾಸನ 'ಜಯ'ಕಾವ್ಯವು ಕ್ರಿ. ಪೂ. ೩೦೦೦ ವರ್ಷಗಳ ಸುಮಾರಿನಲ್ಲಿ ನಡೆದುದೆಂದೇ ಸ್ಪಷ್ಟಪಡುವುದು.

ಬಾದರಾಯಣನೇ ಸೂತ್ರಕಾರನೂ ಜಯ(ಮಹಾಭಾರತ) ಕಥಾಕಾರನೂ ಆಗಿ ಭಾರತಕಥಾಕಾಲವು ಕ್ರಿ. ಪೂ. ಸುಮಾರು ೩೦೦೦ ವರ್ಷಗಳೆಂದು ನಿಶ್ಚಿತ ವಾಗಿರುವಾಗ ಸೂತ್ರಕಾಲವೂ ಕೂಡ ಅದೇ ಆಗಿರಬೇಕೆಂದು ಹೇಳಬೇಕಾ ಗುವುದು. ಸೂತ್ರಕಾಲದ ವಿಚಾರವಾಗಿ ಪಂಡಿತರ ಅಭಿಪ್ರಾಯವು ಭಿನ್ನವಿಸಿ ರುವುದು. ಸೂತ್ರಗಳು ಹೇಗಾದವು? ಅವುಗಳ ಕಾಲವಿಚಾರವಾಗಿ ಪಂಡಿ ತರ ಅಭಿಮತವೇನೆಂಬುದನ್ನು ತಿಳಿಯಬೇಕಾಗಿದೆ.

ಪ್ರಾತಿಶಾಖ್ಯದಲ್ಲಿ ಹೇಳಲ್ಪಟ್ಟಿರುವಂತೆ ಭರತಖಂಡದಲ್ಲಿ ಎಷ್ಟೋ ಸಾವಿ ರಾರುವರ್ಷಗಳಿಂದ ಗುರುಶಿಷ್ಯಪಾರಂಪರ್ಯವಾಗಿ ಎಲ್ಲವನ್ನೂ ಕಂಠಪಾಠ ಮಾಡಿಸುವುದೇ ಬಳಕೆಯಲ್ಲಿದ್ದಿತು.

ದೊಡ್ಡ ದೊಡ್ಡ ವಾಕ್ಯಸಮಾವೇಶಿತವಾಗಿರುವ ಬ್ರಾಹ್ಮಣ ಮತ್ತು ಉಪನಿಷದ್ವಾಕ್ಯಗಳು ವಿಶದವಾಗಿಯೂ ತಪ್ಪಿಲ್ಲದೆಯೂ ಹೇಳಲಾಗದೆ ಕಾಲಕ್ರಮದಲ್ಲಿ ಬುದ್ಧಿಶಕ್ತಿಯು ಕಡಿಮೆಯಾಗಿ ಜ್ಞಾಪಕಶಕ್ತಿಯು ಕುಂದುವುದಾಗಿ ಕಂಡುಬಂದಾಗ ಭಾರತೀಯ ಮಹರ್ಷಿಗಳು ಇವುಗಳೆಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಂಡು ಹೇಳುವುದಕ್ಕೂ ಓದುವುದಕ್ಕೂ ಸರಳವಾಗಿ ತಿಳಿಯುವುದಕ್ಕೂ ಸಾಧ್ಯವಾಗುವಂತಹ ಸಣ್ಣಸಣ್ಣ ವಾಕ್ಯವಿಶೇಷಗಳನ್ನು ಕಲ್ಪಿಸಿ ಅವುಗಳನ್ನು ಸೂತ್ರವೆಂದು ಕರೆದರು. ಇಂತಹ ಮಾರ್ಗವು ಅನುಕೂಲವಾದುದೆಂದು ತೋರಿದಾಗ ಇತರ ಎಲ್ಲಾ ಗ್ರಂಥಗಳನ್ನೂ ಹಾಗೆಯೇ ಸೂತ್ರವಾಗಿ ರಚಿಸಿಟ್ಟರು. ಸೂತ್ರಲಕ್ಷಣವು ಹೇಗಿರಬೇಕೆಂಬುದನ್ನು ಮಧ್ವಾಚಾರ್ಯರು ಸ್ಕಂದಪುರಾಣದಲ್ಲಿ ಉದಹರಿಸಿರುವರು.* ಪ್ರೊ. ಮ್ಯಾಕ್ಸ್‌ಮುಲ್ಲರವರು ಸೂತ್ರಗಳ ರಚನಾಕಾಲವು ಕ್ರಿ. ಪೂ. ೬೦೦ ರಿಂದ ಕ್ರಿ. ಪೂ. ೨೦೦ ರ ಮಧ್ಯಕಾಲದಲ್ಲಾಗಿರಬೇಕೆಂದು ತರ್ಕಿಸುವರು.‡ ಇವರು ಹೇಳುವ ಕಾಲವು ಕೊಂಚ ಹೆಚ್ಚುಕಡಿಮೆ ಬುದ್ಧನ ಕಾಲವೆಂದಾಗುವದು. ಆದರೆ ಬೌದ್ಧಮತಸೂತ್ರಗಳು ಬರೆಯಲ್ಪಟ್ಟ ಕಾಲವನ್ನು ಸೂಕ್ಷ್ಮರೀತಿಯಿಂದ ಪರಿಶೀಲಿಸಿ ನೋಡಿದರೆ ಬುದ್ಧನಿಗಿಂತ ಎಷ್ಟೋ ಹಿಂದೆ ಹಿಂದೂಮತ ಸೂತ್ರಗಳು ರಚಿತವಾಗಿದ್ದುವಾಗಿ ಅವುಗಳಲ್ಲಿನ ಹೇಳಿಕೆಯಿಂದಲೇ ವ್ಯಕ್ತವಾಗುವುವು.

ಪಾಣಿನಿಯು ತನ್ನ ಕಾಲಕ್ಕೆ ಅತ್ಯಂತ ಪ್ರಾಚೀನರೆಂದು ತೋರಿದ ಅನೇಕ ಸೂತ್ರಕಾರರ ಹೆಸರುಗಳನ್ನು ತನ್ನ ಸೂತ್ರಗಳಲ್ಲಿ ಹೇಳಿಕೊಂಡಿರುವನು.†

ಆಶ್ವಲಾಯನ, ಸಾಂಖ್ಯಾಯನ, ಭಾರದ್ವಾಜ ಮತ್ತು ಬೋಧಾಯನ ಇವರುಗಳೂ ಕೂಡ ತಮ್ಮ ಸೂತ್ರ ರಚನಾಕಾಲಕ್ಕಿಂತ ಎಷ್ಟೋ ಹಿಂದೆ ಬ್ರಹ್ಮಸೂತ್ರರಚನೆಯಾಗಿದ್ದುದಾಗಿ ಹೇಳಿರುವರು.

ಈ ಕಾರಣಗಳಿಂದ ಸೂತ್ರರಚನಾಕಾಲವೂ ಮಹಾ ವೈಯ್ಯಾಕರಣನಾದ ಪಾಣಿನಿಯಕಾಲಕ್ಕೆ ಎಷ್ಟೋ ಹಿಂದೆ, ಮಹಾತ್ಮನಾದ ಬುದ್ಧನಿಗಿಂತ ಎಷ್ಟೋ

---

* ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋವಿದುಃ
ನಿರ್ವಿಶೇಷಿತಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯತಃ ॥ —ಸ್ಕಂದಪುರಾಣ ವಚನ.

‡ Maxmuller's Renaisance of History of Sanskrit Literature,

† ಪಾಣಿನಿ IV 3—105·

ಹಿಂದೆ, ಸಾಂಖ್ಯಾಯನನೇ ಮೊದಲಾದ ಋಷಿಪುಂಗವರಿಗಿಂತ ಎಷ್ಟೋ ಹಿಂದೆ ಆಗಿರಬೇಕೆಂದು ವ್ಯಕ್ತವಾಗುವುದು.

ಈಗಣ ಮಹಾಭಾರತರಚನೆಯು ಮಹರ್ಷಿಯಾದ ವ್ಯಾಸನದಲ್ಲವೆಂದು ತೋರುತ್ತದೆ.

ಮೂಲಗ್ರಂಥಕಾರನಾದ ವ್ಯಾಸನು ತನ್ನ ೫ ಜನ ಶಿಷ್ಯರಿಗೆ ಭಾರತದ ಕಥೆಯನ್ನು ಹೇಳಿದ ಹಾಗೂ ಆ ೫ ಜನ ಶಿಷ್ಯರೈವರಲ್ಲಿ ವೈಶಂಪಾಯನನೊಬ್ಬನೆಂದೂ ಜನಮೇಜಯನ ಸರ್ಪಯಾಗದಲ್ಲಿ ವೈಶಂಪಾಯನನು ಈ ಕಥೆಯನ್ನು ಹೇಳಿದಂತೆಯೂ ಜನಮೇಜಯನು ಕೇಳಿದ ಅನೇಕ ಪ್ರಶ್ನೆಗಳಿಗೆ ವೈಶಂಪಾಯನನು ಸಮಂಜಸವಾದ ಉತ್ತರವನ್ನು ಹೇಳಿದಂತೆಯೂ ಹೇಳಲ್ಪಟ್ಟಿದೆ. ಈ ಪ್ರಶ್ನೋತ್ತರಗಳು ಮೂಲಕಥೆಗೆ ಸಂಬಂಧಪಟ್ಟವುಗಳಾಗಿರುವುದಿಲ್ಲವಾದುದರಿಂದ ವೈಶಂಪಾಯನನೋ ಅಥವಾ ಮತ್ತಾವನೋ ವ್ಯಾಸನ ಮೂಲಕಥೆಯನ್ನು ಬೇಕು ಬೇಕಾದಂತೆ ಲಂಬಿಸಿ ಬರೆದಿಟ್ಟಿರಬಹುದಾಗಿ ತೋರುತ್ತದೆ. ಪುನಃ ಈ ಲಂಬಿತ ಕಥೆಯು ದ್ವಾದಶಾಬ್ದಾಧ್ವರದಲ್ಲಿ ಸೂತನಿಂದ ಶೌನಕಾದಿಋಷಿಗಳಿಗೆ ಹೇಳಲ್ಪಟ್ಟಂತೆಯೂ ಶೌನಕನು ಕೇಳಿದ ಹಲವು ಪ್ರಶ್ನೆಗಳಿಗೆ ಸೂತನು ಸಮಂಜಸವಾದ ಪ್ರತ್ಯುತ್ತರವನ್ನು ಹೇಳಿದಂತೆಯೂ ಕಂಡು ಬರುತ್ತದೆ. ಇದರಲ್ಲಿ ಸೂತನೋ ಅಥವಾ ಮತ್ತಾವನೋ ವೈಶಂಪಾಯನನ ಲಂಬಿತ ಭಾರತಕಥೆಯನ್ನು ಮತ್ತಷ್ಟು ಲಂಬಿಸಿ ಬರೆದಿಟ್ಟುದಾಗಿ ಕಂಡು ಬರುತ್ತದೆ. ಹೀಗೆ ಮೂಲಕಥೆಯು ಮೂರು ಮಾತೃಕೆಗಳಾದವು. ಅಲ್ಲದೆ ಭಾರತಕಥಾರಂಭವು ಉಪರಿಚರನಿಂದ ಪ್ರಾರಂಭಿಸಲ್ಪಟ್ಟಿರುವುದೆಂದು ಕೆಲವರೂ ಮನ್ವಾದಿಯಿಂದಾರಂಭಿಸಲ್ಪಟ್ಟುದೆಂದು ಕೆಲವರೂ—

ಮನ್ವಾದಿ ಭಾರತಂ ಕೇಚಿದಾಸ್ತಿಕಾದಿ ತಥಾಽಪರೇ ।<br>
ತಥೋ ಪರಿಚರಾದ್ಯನ್ಯೇ ವಿಪ್ರಾಸ್ಸಮ್ಯಗಧೀಯಿರೇ ॥ —ಆದಿ. ೧—೬೬.

ಎಂದು ತತ್ಸಾಧನಕ್ಕೆ ಬೇಕಾದ ಕಥಾ ಕಾಲ ಮೊದಲಾದವುಗಳೊಡನೆ ಹೇಳಿರುವರು. ಯಾವ ಯಾವುದು ಹೇಗೆ ಹೇಗೆ ರೂಪಾಂತರವಾದುದೆಂಬುದನ್ನು ಕಂಡು ಹಿಡಿಯಲು ಮೂಲಕಥೆಯು ಯಾವುದಾಗಿರಬಹುದೆಂಬುದನ್ನು ಹೇಳಬೇಕಾಗುವುದು.

**ಮೂಲಕಥಾ:—** ಇದು ಚಾರಿತ್ರಕಗ್ರಂಥವಾಗಿದ್ದಿರಬೇಕೇ ವಿನಾ ಉಪದೇಶಾತ್ಮಕಗ್ರಂಥವಲ್ಲವೆಂದು ತೋರುವುದು. ಇದಕ್ಕೆ ಇತಿಹಾಸವೆಂಬ ಹೆಸರನ್ನು ಕೊಟ್ಟು ವ್ಯಾಸನು ಇದನ್ನು '**ಜಯ**'ವೆಂದು ಕರೆದಿರಬಹುದಾಗಿದೆ.

"ಜಯೋ ನಾಮೇತಿ ಹಾಸೋಯಂ" —ಸ್ವರ್ಗಾರೋಹಣಪರ್ವ.

ಎಂದೂ—

"ತತೋ ಜಯಮುದೀರಯೇತ್"

ಎಂದೂ ಗ್ರಂಥಾರಂಭದಲ್ಲಿಯೂ ಮತ್ತು ಕೊನೆಯ ಸರ್ಗದಲ್ಲಿಯೂ ಹೇಳಲ್ಪಟ್ಟಿರುವುದು. ಇದರಿಂದ ಮೂಲಭಾರತದ ಕಥೆಗೆ 'ಜಯ' ಎಂದು ಹೆಸರಿದ್ದಿತೆಂಬುದು ಸ್ಪಷ್ಟವು. ವ್ಯಾಸಕೃತ 'ಜಯ' ಇತಿಹಾಸದಲ್ಲಿ ಇಷ್ಟೇ ಶ್ಲೋಕಗಳು ಇದ್ದುವೆಂದು ಈಗ ಹೇಳಲಾಗುವುದಿಲ್ಲವಾದರೂ ಕವಿಯು ಹೇಳುವ ಕಥಾಭಾಗಗಳನ್ನು ಪರಿಶೀಲಿಸಿ ನೋಡಿದರೆ ಗ್ರಂಥವು ದೊಡ್ಡದಾಗಿರಬೇಕಾಗಿಯೇ ತೋರುವುದು. ಪ್ರೊ. ಪ್ರಾಕಡಾಸಲಾರವರು ವ್ಯಾಸಕೃತಜಯಕಾವ್ಯದಲ್ಲಿ ೮೮೦೦ ಶ್ಲೋಕಗಳಿದ್ದುದಾಗಿ ಹೇಳುವರು. ಇವರಿಗೆ ಆಧಾರವು ಪ್ರೊ. ವೇಬರವರ ಹೇಳಿಕೆ. ಮಿ. ದತ್ತರವರೂ ಹೀಗೆಯೇ ಅಭಿಪ್ರಾಯಪಟ್ಟಿರುವರು.

ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।
ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿ ವಾ ನ ವಾ ॥—ಆದಿ. ೧—೧೧೭.

ಎಂದು ಮಹಾಭಾರತದಲ್ಲಿಯೂ ಹೇಳಲ್ಪಟ್ಟಿರುವುದು. ಆದರೆ ಈ ಸಂಖ್ಯೆಯಲ್ಲಿ ಅನೇಕ ಕೂಟಶ್ಲೋಕಗಳ ಸಂಖ್ಯೆಯೂ ಸೇರಿ ಹೋಗಿರುವುದು. ಆದುದರಿಂದ ಆ ಶ್ಲೋಕಗಳೆಲ್ಲವೂ ವ್ಯಾಸಕೃತವೆಂದು ಹೇಳಲಾಗುವುದಿಲ್ಲ.

ಕೃಷ್ಣದ್ವೈಪಾಯನ ಅಥವಾ ವ್ಯಾಸನು ಈ ಕಾವ್ಯವನ್ನು ಅಹರ್ನಿಶಿ ಬರೆದು ಮೂರು ವರ್ಷಗಳಲ್ಲಿ ಮುಗಿಸಿದುದಾಗಿ ಮಹಾಭಾರತದಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಉಪರಿಚರಚರಿತಾರಂಭಮಾಡಿಕೊಂಡು ಬರೆದುದೆಂದು ಹೇಳುವುದು ನ್ಯಾಯವಾಗಿಯೂ ನಿಜವಾಗಿಯೂ ಇರಬೇಕೆಂದು ತೋರುತ್ತದೆ. ಆದರೆ ಪ್ರಕೃತ ದೊರೆತಿರುವ ಮಹಾಭಾರತದಲ್ಲಿ ೬೩ನೇ ಅಧ್ಯಾಯದಲ್ಲಿ—

'ರಾಜೋ ಪರಿಚರೋ ನಾಮ'

ಎಂದು ಪ್ರಾರಂಭಿಸಲ್ಪಟ್ಟಿರುವುದರಿಂದ ಹಿಂದಣ ೬೨ ಅಧ್ಯಾಯಗಳಲ್ಲಿ ಮಹಾಭಾರತ ಪ್ರಶಸ್ತಿ ಮತ್ತು ರಚನಾಕ್ರಮವೇ ಮೊದಲಾದುವು ವೈಶಂಪಾಯನ ಅಥವಾ ಸೂತನಿಂದ ಹೇಳಲ್ಪಟ್ಟಿರಬೇಕೆಂದು ಸ್ಪಷ್ಟವಾಗುತ್ತದೆ. ಅಂದರೆ ೬೩ನೇ ಅಧ್ಯಾಯದಿಂದ ಮುಂದಣ ಕಥಾನಕಗಳೆಲ್ಲವೂ ವ್ಯಾಸನದೆಂದು ಹೇಳುವೆವಾಗಿ ಅಭಿಪ್ರಾಯಪಡಬಾರದು. ಏಕೆಂದರೆ:—ನಮಗೆ ದೊರೆತಿರುವ ಮಹಾಭಾರತ ಪ್ರತಿಗಳಾಧಾರದಿಂದ ಇದನ್ನೇ ಇಷ್ಟನ್ನೇ ವ್ಯಾಸನು ಬರೆದುದೆಂದು ಬೇರ್ಪಡಿಸುವುದು ಅಸಾಧ್ಯವಾದುದಾಗಿರುವುದು.

ಎರಡನೆಯ ಮಾತೃಕೆಯ ವಿಚಾರ—ವೈಶಂಪಾಯನನನ್ನು ವ್ಯಾಸನ ಶಿಷ್ಯನೆಂದು ಮೊದಲೇ ಹೇಳಿದೆ. ವ್ಯಾಸನು ತನ್ನ ಶಿಷ್ಯರಾದ ಸುಮಂತು, ಜೈಮಿನಿ, ಪೈಲ, ತನ್ನ ಮಗನಾದ ಶುಕ, ಮತ್ತು ವೈಶಂಪಾಯನ ಈ ಐವರಿಗೆ ಭಾರತವನ್ನು ಹೇಳಿದನೆಂದಿದೆ. ಈ ಐವರೂ ವ್ಯಾಸನಿಂದ ಉಪದೇಶಿತರಾಗಿ ಅವರವರಿಗೆ ತೋರಿದಂತೆ ಭಾರತವನ್ನು ಐದು ವಿಧವಾಗಿ ಬರೆದುದಾಗಿ ಭಾರತದಲ್ಲಿ ಒಂದು ಕಡೆ ಹೇಳಲ್ಪಟ್ಟಿದೆ. ಇದರಿಂದ ವ್ಯಾಸನ ಮೂಲಕಥೆಯನ್ನು ವೈಶಂಪಾಯನನು ಲಂಬಿಸಿ ಬರೆದನೆಂದು ಸ್ಪಷ್ಟಪಡುವುದು. ಜೈಮಿನಿಯ ಹೆಸರಿನಲ್ಲಿರುವ ಅಶ್ವಮೇಧಪರ್ವವನ್ನುಳಿದು (ಇದು ಸಂದೇಹಾಸ್ಪದ) ಮಿಕ್ಕುವೆಲ್ಲವೂ ವೈಶಂಪಾಯನನದಾಗಿರಬೇಕೆಂದು ಬೋಧೆಯಾಗುತ್ತದೆ. ಮಹರ್ಷಿ ಆಶ್ವಲಾಯನನು ತನ್ನ ಕಾಲದಲ್ಲಿ ಐದು ವಿಧವಾದ ಭಾರತವು ಇದ್ದುದಾಗಿ ಹೇಳಿ ಈ ಐದು ಋಷಿಗಳನ್ನು ಭಾರತಾಚಾರ್ಯರೆಂದು ಕರೆದಿರುವನು. ಇದರಿಂದ ವೈಶಂಪಾಯನಾದಿಗಳು ಬರೆದವುಗಳು ಭಾರತಾಭಿಧಾನದಿಂದ ಕರೆಯಿಸಿಕೊಂಡುವಾಗಿ ತೋರುತ್ತದೆ. ವೈಶಂಪಾಯನನ ಭಾರತವು ೨೪೦೦೦ ಶ್ಲೋಕಪರಿಮಿತಿಯದೆಂದೂ ವ್ಯಾಸನೂ ಅಷ್ಟೇ ಪರಿಮಿತಿಯುಳ್ಳ "ಭಾರತಸಂಹಿತೆ"ಯೆಂಬುದನ್ನು ಬರೆದು ಅದರ ಉಪಾಖ್ಯಾನಗಳನ್ನು ಬಿಟ್ಟು ಮಿಕ್ಕುದನ್ನು "ಭಾರತ"ವೆಂದು ಕರೆದನೆಂದೂ ಹೇಳುವ ಒಂದು ಶ್ಲೋಕವು ಭಾರತದಲ್ಲಿ ದೊರೆಯುವುದು. ಭಾರತಸಂಹಿತೆ ಅಥವಾ ಭಾರತದಲ್ಲಿ ಮೊದಲು ಕಥಾಸಂಗ್ರಹವಾಗಿ ಹೇಳುವ ೧೫೦ ಶ್ಲೋಕಗಳಿಷ್ಟು ಪರ್ವಗಳ ಮತ್ತು ಅಧ್ಯಾಯಗಳ ಸಂಖ್ಯೆಗಳೂ ಅದರಲ್ಲಿ ಹೇಳಲ್ಪಟ್ಟಿದ್ದಿತು. ವೈಶಂಪಾಯನನು ತನ್ನ ಭಾರತವನ್ನು ಜನಮೇಜಯನ ಸರ್ಪಯಾಗದಲ್ಲಿ ಹೇಳಿದುದನ್ನು ಮೊದಲುಮಾಡಿಕೊಂಡು ಬರೆದಿರಬೇಕು. ಅಥವಾ ಇದಕ್ಕೆ ಆಸ್ತಿಕೋಪಾಖ್ಯಾನಾರಂಭವೆಂದರೂ ಸಲ್ಲುವುದು.

ಮೂರನೆಯ ಮಾತೃಕೆಯ ವಿಚಾರ— ವೈಶಂಪಾಯನನ ಭಾರತವನ್ನು ಲಂಬಿಸಿ ಬರೆದುದಾಗಿ ಸೂತನೇ ಹೇಳಿಕೊಂಡಿರುವನು.

> ಅಸ್ಮಿಂಸ್ತು ಮಾನುಷೇ ಲೋಕೇ ವೈಶಂಪಾಯನ ಉಕ್ತವಾನ್ ।
> ಏಕಂಶತ ಸಹಸ್ರಂ ತು ಮಯೋಕ್ತಂ ವೈ ನಿಬೋಧತ ॥ —ಆದಿ. ೧-೧೨೭.

(ಋಷಿಗಳೇ ಕೇಳಿರಿ! ನಾನು ಭಾರತವನ್ನು ಒಂದು ಲಕ್ಷ ಶ್ಲೋಕಗಳಿಂದ ವಿವರಿಸಿ ಹೇಳಿರುವೆನು. ಅಲ್ಲದೆ ಮಾನವಕೋಟಿಗೆ ಈ ಭಾರತೋಪದೇಶವನ್ನು ಮೊದಲು ವೈಶಂಪಾಯನನು ಮಾಡಿದನು.) ಎಂದು ಹೇಳಿರುವುದರಿಂದ ವೈಶಂಪಾಯನನು ಒಂದು ಲಕ್ಷ ಶ್ಲೋಕಗಳಿಂದ ಭಾರತವನ್ನು ರಚಿಸಿದನೆಂದು ಸ್ಪಷ್ಟವಾಗುವುದು. ಆಸ್ತಿಕೋಪಾಖ್ಯಾನದಿಂದ ಹಿಂದಣ ಕಥಾಭಾಗಗಳನ್ನು ವೈಶಂಪಾ

ಯುನನದೆಂದೆನಲಾಗುವುದಿಲ್ಲ. ಸೌತಿಯು ಮನುವಿನಿಂದ ಪ್ರಾರಂಭಿಸಿಕೊಂಡು ಹೇಳಿರುವುದಾಗಿ ಕಂಡುಬರುತ್ತದೆ. ಆದರೆ ಮನುವಿನಿಂದ ಪ್ರಾರಂಭಿಸಲ್ಪಟ್ಟಿರುವ ಶ್ಲೋಕಗಳಾವುವೂ ಆದಿಪರ್ವದಲ್ಲಿ ಕಂಡುಬರುವುದಿಲ್ಲ. ವ್ಯಾಖ್ಯಾನಕಾರನು ಮನುವಿಗೆ ವೈವಸ್ವತನೆಂದು ಹೇಳಿ ಪ್ರಾರಂಭಿಸಿರುವನು. —(ಆದಿ.೧)

ಈಗಿನ ನಾಗರಿಕಪ್ರಪಂಚಕ್ಕೆ ಬೇಕಾಗುವಂತೆ ಸೂತನು ಭಾರತಕ್ಕೆ ಮುನ್ನುಡಿ, ಕಥಾಸೂಚನೆ ಆಯಾಯ ಭಾಗಗಳ ಉಪಾಖ್ಯಾನ ಇವುಗಳನ್ನು ಸೇರಿಸಿ ಬರೆದಿರುವನು. ಈಗಿರುವ **ಮಹಾಭಾರತ**ವು ಈರೀತಿಯಾಗಿರುವುದು.

ವ್ಯಾಖ್ಯಾನಕಾರನು ಹೆಚ್ಚಿನವುಗಳೆಂದು ತೋರಿಬಂದವುಗಳನ್ನು ಆಯಾಯ ಪರ್ವಾಂತ್ಯದಲ್ಲಿ ಹೇಳಿ ಲೇಖಕರ ದೋಷವಾಗಿರಬೇಕೆಂದು ಒಕ್ಕಣಿಸಿರುವನು. ಇವು ಮುಖ್ಯವಾಗಿ ಆದಿಪರ್ವ ಮತ್ತು ದ್ರೋಣಪರ್ವಗಳಲ್ಲಿ ಕಂಡುಬರುವುವು. ಉದಾಹರಣೆಗಾಗಿ ಆದಿಪರ್ವಾಂತ್ಯದಲ್ಲಿ ವ್ಯಾಸನು ಹೇಳಿದ ೨೨೭ ಪರ್ವಗಳಿಗೆ ಬದಲು ವ್ಯಾಖ್ಯಾನಕಾರನು ೨೩೭ ಪರ್ವಗಳಿರುವುದಾಗಿ ಹೇಳಿರುವನು. ಸೂತನು ತನ್ನ ಮುನ್ನುಡಿಯ ಜತೆಯಲ್ಲಿ ಕಥಾಕಾಲ ಮತ್ತು ಸ್ಥಳನಿರ್ದೇಶವನ್ನು ಧೃತರಾಷ್ಟ್ರನ ಬಾಯಿಯಲ್ಲಿ ಹೇಳಿಸಿರುವನು. ಮೊದಲನೆಯ ಅಧ್ಯಾಯದಲ್ಲಿ 'ಯಥಾ ಶ್ರೌಷಃ' ಎಂದು ಮೊದಲುಮಾಡಿಕೊಂಡು ಬರೆದಿರುವ ೬೯ ಶ್ಲೋಕಗಳು ಮೂಲಕಾವ್ಯದ ಪೀಠಿಕೆಯಲ್ಲಿಲ್ಲದೆ ದೊಡ್ಡದೊಡ್ಡ ಭಿನ್ನವೃತ್ತಗಳಲ್ಲಿ ಒರೆಯಲ್ಪಟ್ಟುವುಗಳಾಗಿರುವುದರಿಂದ ಮೂಲಕಾವ್ಯವನ್ನು ಸೂತನು ಲಂಬಿಸಿ ಹೇಳಿರುವನೆಂದು ಸ್ಪಷ್ಟವಾಗುವುದು. ಇದಲ್ಲದೆ ವೈಶಂಪಾಯನನು ಹೇಳಿದ ಭಾರತದ ಮೊದಲಿನಲ್ಲಿ ೧೫೦ ಶ್ಲೋಕಗಳು ಮಾತ್ರ ಇದ್ದುವೆಂದು ಹೇಳಲ್ಪಟ್ಟಿರುವುದರಿಂದಲೂ ಇದರಲ್ಲಿ ಅದಕ್ಕಿಂತಲೂ ಹೆಚ್ಚಾದ ಶ್ಲೋಕಗಳು ಕಂಡುಬರುವುದರಿಂದಲೂ ಸೂತನು ಮೂಲಭಾರತ ಮತ್ತು ವೈಶಂಪಾಯನ ಭಾರತವನ್ನು ಬಿಟ್ಟು ಬೇರೆ ಭಾರತವನ್ನು ಬರೆದುದಾಗಿಯೂ ಸ್ಪಷ್ಟಪಡುವುದು. 'ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ' ಎಂದು ಸೂತನೇ ಹೇಳಿರುವದರಿಂದ ಇದಕ್ಕೆ ವ್ಯಾಸನಿಂದ "ಭಾರತಸಂಹಿತೆ" ಎಂದೂ ವೈಶಂಪಾಯನನಿಂದ "ಭಾರತ"ವೆಂದೂ ಸೂತನಿಂದ "ಮಹಾಭಾರತ"ವೆಂದೂ ಹೆಸರುಬಂದಹಾಗೆ ತೋರುತ್ತದೆ.

ಸೌತಿಯು ತನ್ನ ಮಹಾಭಾರತವನ್ನು ೧೮ ಪರ್ವಗಳಾಗಿ ಭಾಗಿಸಿದನು. ಮಹಾಭಾರತದಲ್ಲಿ ಇದೇ ಹೆಸರಿನ ಪರ್ವಗಳಿರುವುವಾದರೂ ಸಂಖ್ಯೆಯು ಹೆಚ್ಚಾಗಿರುವುದು. ಇವುಗಳೆಲ್ಲವನ್ನೂ ಒಂದೇ ಕಾಲದಲ್ಲಿ ಒಬ್ಬನೇ ಬರೆದಿರಬೇಕೆಂದು ಹೇಳಲಾಗುವುದಿಲ್ಲ. ಈಗಣ ಮಹಾಭಾರತದ ಪರ್ವಗಳಲ್ಲಿ ಅನೇಕ ಉಪ

ಪರ್ವಗಳಿರುವಂತೆ ಕಂಡುಬರುವುವು. ಉದಾಹರಣೆಗಾಗಿ ಸೌಪ್ತಿಕಪರ್ವ ಸಭಾ ಪರ್ವಗಳು ಸಾಕೆಂದು ತೋರುವುವು. ವ್ಯಾಸಕೃತಮೂಲಕಾವ್ಯದಲ್ಲಿ ಪರ್ವ ಗಳೂ ಅಧ್ಯಾಯಗಳೂ ವಿಂಗಡಿಸಲ್ಪಟ್ಟಿರುವುವು. ಆದರೆ ಪರ್ವಗಳ ಸಂಖ್ಯೆಯು ೧೦೦ ಎಂಬುವ ವೈಶಂಪಾಯನನ ಭಾರತಕ್ಕಿಂತಲೂ ಕಡಿಮೆಯಾಗಿರಬೇಕೆಂದು ತೋರುವುದು.

ಮಹಾಭಾರತದ ಆದಿಪರ್ವದ ಎರಡನೆಯ ಅಧ್ಯಾಯದಲ್ಲಿ ಒಂದು ನೂರು ಪರ್ವಗಳನ್ನು ಹೇಳಿರುವ ಕಡೆ ಹರಿವಂಶವು ಖಿಲಪರ್ವವೆಂದು ಹೇಳಲ್ಪಟ್ಟು ಬೇರೆ ಕಡೆಯಿಂದ ತೆಗೆದುಕೊಂಡದ್ದಾಗಿ ಹೇಳಲ್ಪಟ್ಟಿರುತ್ತದೆ.

ಹರಿವಂಶಃ ಸ್ತತಃಪರ್ವ ಪುರಾಣಂ ಖಿಲ ಸಂಜ್ಞಿಕಂ |
ಏತತ್ಪರ್ವಶತಂ ಪೂರ್ಣಂ ವ್ಯಾಸೇನೋಕ್ತಂ ಮಹಾತ್ಮನಾ ||

ಈ ಹರಿವಂಶವು ವ್ಯಾಸನ ಕಾವ್ಯಕ್ಕೆ ಸೇರಿರದೆ ವೈಶಂಪಾಯನನು ಸೇರಿಸಿ ಕೊಂಡಿರುವಂತೆ ತೋರುತ್ತದೆ. ಏಕೆಂದರೆ:—ಕಥಾನೇತಾರನಾದ ಕೃಷ್ಣನ ವಿಚಾರ ವಿಲ್ಲದೆ ಕಥೆಯು ಮುಗಿಯದು.ರಾಮಾಯಣ ಕಥೆಯು ರಾವಣನ ಜೀವನ ಪರಾ ಕ್ರಮಾತಿಶಯಗಳ ವರ್ಣನವಿಲ್ಲದೆ ಹೇಗೆ ಮುಗಿಯದೋ ಹಾಗೆ ಕೃಷ್ಣನ ವಿಚಾರ ಕಥೆಯು ಇಲ್ಲದೆ ಭಾರತವು ಮುಗಿಯದು. ರಾಮಾಯಣಕ್ಕೆ ಉತ್ತರಕಾಂಡವು ಹೇಗೋ ಹಾಗೆ ಹರಿವಂಶವು ಭಾರತಕ್ಕಿರುವುದು. ಉತ್ತರಕಾಂಡವು ಕಥಾ ನುಕ್ರಮಣವನ್ನನುಸರಿಸಿ ಮುಗಿಸಲ್ಪಟ್ಟಿರುವಂತೆ ಇರದೆ ಹರಿವಂಶವು ಬೇರೆಯಾಗಿ ರುವಂತೆ ಬರೆಯಲ್ಪಟ್ಟಿರುವುದು. ಆದಿಪರ್ವದ ಮೊದಲನೇ ಅಧ್ಯಾಯದಲ್ಲಿ ಹೇಳಿ ರುವಂತೆ ನೂರುಪರ್ವಗಳಿಗಿಂತ ಹೆಚ್ಚಾಗಿರುವುದರಿಂದ ಅವುಗಳನ್ನು ಸೌತಿಯು ಲಂಬಿಸಿ ಬರೆದನೆಂದು ಪುನಃ ಹೇಳುವ ಅವಶ್ಯಕತೆಯಿಲ್ಲ. ವ್ಯಾಸನು ಈ ೧೦೦ ಪರ್ವಗಳನ್ನು ಬರೆದನೆಂದೂ ಸೂತನ ಮಗನಾದ ಲೋಮಹರ್ಷಣಿ ಎಂಬುವನು ಉಳಿದುವನ್ನು ನೈಮಿಶಾರಣ್ಯದಲ್ಲಿ ೧೮ ಪರ್ವಗಳಲ್ಲಿ ಹೇಳಿದುದಾ ಗಿಯೂ ಮಹಾಭಾರತದಲ್ಲಿರುವುದು.

ಒಟ್ಟಿನಲ್ಲಿ ವ್ಯಾಸನು ಜಯವೆಂಬ ಚಾರಿತ್ರಿಕ ಅಥವಾ ಇತಿಹಾಸಕಾವ್ಯ ವನ್ನು ಬರೆದನೆಂದೂ ಅದನ್ನು ಲಂಬಿಸಿ ಬರೆದು ವೈಶಂಪಾಯನನು ಭಾರತವೆಂಬ ಹೆಸರಿನಿಂದ ಕರೆದನೆಂದೂ ಸೌತಿಯು ತನಗೆ ಬೇಕುಬೇಕಾದ ವಿಷಯಗಳನ್ನು ತೆಗೆದುಕೊಂಡು ಮತ್ತಷ್ಟು ಲಂಬಿಸಿ ಬರೆದು ಮಹಾಭಾರತವೆಂದು ಕರೆದನೆಂದೂ ಹೇಳಿದಂತಾದುದು.

ರಾಮಾಯಣ ಮಹಾಕಾವ್ಯಕ್ಕೆ ಶ್ರೀರಾಮನು ಕಥಾನಾಯಕನೆಂದು ಹೇಳುವಂತೆ ಭಾರತಕಥಾನಾಯಕನು ಅರ್ಜುನನಾಗಿರುವನು. ಈ ವಿಚಾರ

ವಾಗಿ ಭಿನ್ನಾಭಿಪ್ರಾಯಗಳನೇಕಗಳು ಇರುವುವು. ಕೆಲವರು ಶ್ರೀಕೃಷ್ಣ ನೆಂದೂ ಕೆಲವರು ಭೀಷ್ಮನೆಂದೂ ಮತ್ತೆ ಕೆಲವರು ಧರ್ಮನಂದನನೆಂದೂ ಉಳಿದ ವರು ಭೀಮನೆಂದೂ ಬಗೆಬಗೆಯಾಗಿ ಹೇಳುವರು.

೧. ಕೃಷ್ಣನು ಕಥಾನಾಯಕನೆನ್ನುವುದಾದರೆ ಇವನು ಭಾರತಕಥಾ ಚಾಲಕನು ಹೊರತು ಕಥಾನಾಯಕನಾಗನು. ಯುದ್ಧವು ಪಾಂಡವಕೌರವರಿಗೆ ನಡೆದುದಾಗಿರುವುದು. ಕೃಷ್ಣನು ಮಧ್ಯಸ್ಥಗಾರನಾಗಿದ್ದನು. ಆದುದರಿಂದ ಇವನು ಕಥಾನಾಯಕನಾಗನು.

೨. ಭೀಷ್ಮನ ಸತ್ಯಸಂಧತೆ ಮತ್ತು ಅತುಲಪರಾಕ್ರಮಾದಿಗುಣಗಳು ಮಹಾಭಾರತದ ಶಾಂತಿ ಮತ್ತು ಅನುಶಾಸನೀಕಪರ್ವಗಳಲ್ಲಿ ಹೇಳಲ್ಪಟ್ಟಿರು ವುವು. ಇವನು ದುರ್ಯೋಧನನಬಳಿ ಪರಸೇವಾತತ್ಪರತೆಯಲ್ಲಿಯೇ ಕಾಲವನ್ನು ಕಳೆದನಾದುದರಿಂದ ಭಾರತ ಕಥಾನಾಯಕತ್ವ ಪ್ರಾಪ್ತಿಯು ಇವನಿಗೆ ಸಲ್ಲದು.

೩. ಸಪ್ತವ್ಯಸನಗಳಲ್ಲಿ ದ್ಯೂತವು ಒಂದಾಗಿರುವುದರಿಂದಲೂ ಕ್ಷತ್ರಿಯ ಧರ್ಮವಿರುದ್ಧವಾದ ಅನರ್ಥಪರಂಪರೆಯ ಜೂಜನ್ನು ಯುಧಿಷ್ಠಿರನು ಆಡಿ ನಾಲ್ವರು ತಮ್ಮಂದಿರನ್ನೂ ದ್ರುಪದಕುಮಾರಿಯನ್ನೂ ಸೋತನಾದುದರಿಂದಲೂ ಸ್ವಯಂವರದೃಷ್ಟಿಯಿಂದ ಯುಧಿಷ್ಠಿರನಿಗೆ ಗೌಣತ್ವವು ಪ್ರಾಪ್ತವಾಗಿ ಕವಿ ಸಂಕೇತಕ್ಕೆ ಭಂಗವು ಬರುವುದಾದುದರಿಂದ ಹಾಗೆ ಹೇಳಲಾಗುವದಿಲ್ಲ. ಹಾಗೆ ಒಂದು ವೇಳೆ ಧರ್ಮರಾಜನೇ ಕಥಾನಾಯಕನೆಂದು ಪಕ್ಷಪಾತದಿಂದ ಹೇಳು ವುದಾದರೆ ಬೌದ್ಧರ ಅತ್ಯುತ್ಕರ್ಷತೆಯ ಕಾಲದಲ್ಲಿ ಅಹಿಂಸಾವಾದದೃಷ್ಟಿಯಿಂದ ಧರ್ಮರಾಜನ ಭೂಮಿಕೆಯನ್ನು ವಿಸ್ತರಿಸಿ ಮಹಾಭಾರತದ ನಾಯಕನೆಂದು ಹೇಳಿರಬಹುದಾಗಿ ತೋರುವುದೇ ಹೊರತು ನ್ಯಾಯವಾದ ಕಥಾನಾಯಕ ಲಕ್ಷಣಗಳಿಂದ ಕೂಡಿದವನು ಇವನಲ್ಲ.

೪. ಭೀಮನು ಮಹಾಸಾಹಸೋದ್ಯಮಪರಾಕ್ರಮಗಳಿಂದ ಕೂಡಿ ನಿರ್ವ್ಯಾಜಕ್ಷಾತ್ರಧರ್ಮವನ್ನು ಸಾಧಿಸಿದನಾದರೂ ಇವನು ಕೇವಲ ತಮೋ ಗುಣಕರ್ಮರತನಾದುದರಿಂದ ಮಹಾಭಾರತಕಥಾನಾಯಕಪದವಿಗೆ ಯೋಗ್ಯ ನಾಗನು.

೫. ನಕುಲಸಹದೇವರ ವಿಚಾರವಾಗಿ ಯಾವ ಹೆಚ್ಚುವಿಚಾರವೂ ಹೇಳ ಲ್ಪಡದಿರುವುದರಿಂದ ಕಥಾನಾಯಕಸ್ಥಾನವು ಇವರಿಗೆ ಸಿಗದು.

ಉಳಿದವನು ಅರ್ಜುನನು. ಇವನೇ ಕಥಾನಾಯಕನು. ಹೇಗೆಂದರೆ—

೧. ಈಗ ದೊರೆತಿರುವ ಮಹಾಭಾರತವೆಂಬ ಗ್ರಂಥಕ್ಕೆ ಮೂಲವಾದ ಜಯನಾಮಕಗ್ರಂಥದಲ್ಲಿ—

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಎಂದು ಪಾಂಡವರಾದಿಪ್ರಮುಖರಲ್ಲಿ ಯಾರ ಹೆಸರನ್ನೂ ಹೇಳದೆ ಅರ್ಜುನನ ಹೆಸರನ್ನು ಮಾತ್ರ ಹೇಳಿರುವುದರಿಂದಲೂ—

೨. ಸ್ವಯಂವರದಲ್ಲಿ ದ್ರೌಪದಿಯನ್ನು ಗೆದ್ದುತಂದವನು ಅರ್ಜುನನಾಗಿರುವುದರಿಂದಲೂ—

೩. ಜಯಗ್ರಂಥದ ಉಪಕ್ರಮೋಪಸಂಹಾರವೂ ಗೀತೆಯಲ್ಲಿ ಕಂಡು ಬರುವ ಸ್ಪಷ್ಟಾಧಾರಗಳೂ ಧನಂಜಯನನ್ನು ಹೇಳುವುದರಿಂದಲೂ—

೪. ಶಾಸ್ತ್ರಸಮ್ಮತದಂತೆ ಮುಖ್ಯನಾಯಕನಲ್ಲಿರಬೇಕಾದ ಸಕಲಲಕ್ಷಣಗಳೂ ಅರ್ಜುನನಲ್ಲಿ ಕಂಡುಬರುವುವಾದುದರಿಂದ ಮಹಾಭಾರತದ ಕಥಾನಾಯಕನು ಅರ್ಜುನನೆಂದೇ ಸ್ಪಷ್ಟಪಡುವುದು.

ವೀರರಸಪ್ರಧಾನವಾಗಿರುವ ಮಹಾಭಾರತವನ್ನು ಹೋಮರ್‌ನ "ಇಲ್ಲಿಯಡ್"ಗೆ ಹೋಲಿಸಬಹುದು. ಇದು ಪಾಶ್ಚಾತ್ಯಸಾಹಿತ್ಯದಲ್ಲಿ ಚಾರಲಮೇನ್ (Charlmagne) ಮತ್ತು ಆರ್ಥರ್ (Arthur) ಇವರ ವಿಚಾರವಾಗಿ ಬಗೆಬಗೆಯಾಗಿ ಹೇಳಿರುವ ಕಥೆಯಂತಿರುವುದು. ಆ ಕಾಲದಲ್ಲಿ ಕಾವ್ಯಗಳನ್ನು ಬರೆದವರು ವಾಲ್ಮೀಕಿ ಮತ್ತು ವ್ಯಾಸರಿಬ್ಬರೇ ಅಲ್ಲ. ನಾನಾವಿದ್ಯೆಗಳಲ್ಲಿ ಕುಶಲರಾಗಿದ್ದ ಅನೇಕ ಕವಿಗಳು ಮಹಾಭಾರತದ ದಿಗಂತವಿಶ್ರಾಂತಕೀರ್ತಿಯನ್ನು ನೋಡಿ ತಾವೂ ಅನೇಕಾನೇಕ ಉಪಾಖ್ಯಾನಗಳನ್ನು ಬರೆದು ಮಹಾಭಾರತದ ಜತೆಗೆ ಸೇರಿಸಿರುವಹಾಗೆ ಬೋಧೆಯಾಗುತ್ತದೆ *

ಸರ್ವಜ್ಞನಾರಾಯಣ, ಅರ್ಜುನಮಿಶ್ರ, ಮತ್ತು ನೀಲಕಂಠ ಇವರು ಮಹಾಭಾರತಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ಇವುಗಳಲ್ಲಿ ನೀಲಕಂಠ ವ್ಯಾಖ್ಯಾನವು ಹೆಸರಾದುದು.

ಆದಿಪರ್ವದಲ್ಲಿ—ಭೀಷ್ಮನು ಧೃತರಾಷ್ಟ್ರಮತ್ತು ಪಾಂಡು ಎಂಬುವರನ್ನು ಪಾಲಿಸಿದುದೂ ಧೃತರಾಷ್ಟ್ರನಿಗೆ ಒಂದು ಸೂರುಜನ ಪುತ್ರೋತ್ಪತ್ತಿಯೂ—

ಸಭಾಪರ್ವದಲ್ಲಿ—ಹಸ್ತಿನಾಪುರ ಸಭಾವೃತ್ತಾಂತವೂ ಯುಧಿಷ್ಠಿರನೊಡನೆ ಶಕುನಿಯು ಅಕ್ಷಕ್ರೀಡೆ ಮತ್ತು ಪಾಂಡವರ ಅರಣ್ಯವಾಸವಿಚಾರವೂ—

---

* "Vicissitudes of Aryan Civilisation in India" by Mr. M. M. Kunte P. 338.

ವನಪರ್ವದಲ್ಲಿ—ಕಾಮ್ಯಕವನದಲ್ಲಿ ಪಾಂಡವರು ಕಾಲಕಳೆದುದೂ—

ವಿರಾಟಪರ್ವದಲ್ಲಿ—ಪಾಂಡವರು ವಿರಾಟನಗರದಲ್ಲಿ ತಮ್ಮ ಅಜ್ಞಾತವಾಸದ ಕೊನೆಯ ದಿವಸಗಳನ್ನು ಹೇಗೆ ಕಳೆದರೆಂಬುದೂ ಉತ್ತರಗೋಗ್ರಹಣ ಮತ್ತು ಕೀಚಕವಧಾವೃತ್ತಾಂತವೂ—

ಉದ್ಯೋಗಪರ್ವದಲ್ಲಿ— ಕುರುಕ್ಷೇತ್ರಯುದ್ಧಸಮಾರಂಭವೂ—

ಭೀಷ್ಮಪರ್ವ(ಗೀತಾಪರ್ವ)ದಲ್ಲಿ—ಉಭಯಸೇನಾವರ್ಣನೆ, ಭೀಷ್ಮನ ಸೈನ್ಯಾಧಿಕಾರವಿಚಾರವೂ—

ದ್ರೋಣಪರ್ವದಲ್ಲಿ— ದ್ರೋಣನ ಸೈನ್ಯಾಧಿಕಾರವಿಚಾರವೂ—

ಕರ್ಣಪರ್ವದಲ್ಲಿ—ಕರ್ಣನ ಸೈನ್ಯಾಧಿಕಾರವಿಚಾರವೂ—

ಶಲ್ಯಪರ್ವದಲ್ಲಿ—ಶಲ್ಯನ ಸೈನ್ಯಾಧಿಕಾರವಿಚಾರವೂ ಭೀಮ ಮತ್ತು ದುರ್ಯೋಧನರ ಬಾಹುಯುದ್ಧವೂ—

ಸೌಪ್ತಿಕಪರ್ವದಲ್ಲಿ— ಕೌರವರಕಡೆಯವರು ಮೋಸದಿಂದ ಪಾಂಡವದಳವನ್ನು ಹೊಕ್ಕವಿಚಾರವೂ ಪಾಂಡವರು ಜೀವವನ್ನುಳಿಸಿಕೊಂಡವಿಚಾರವೂ—

ಸ್ತ್ರೀಪರ್ವದಲ್ಲಿ—ಯುದ್ಧದಲ್ಲಿ ಮಡಿದ ಸ್ತ್ರೀಯರ ಪ್ರಲಾಪವೂ—

ಶಾಂತಿಪರ್ವದಲ್ಲಿ—ಧರ್ಮರಾಜನ ಪಟ್ಟಾಭಿಷೇಕ, ಭೀಷ್ಮನು ಧರ್ಮನಂದನನಿಗೆ ಹೇಳಿದ ರಾಜಧರ್ಮ ಆಪದ್ಧರ್ಮ ಮೋಕ್ಷಧರ್ಮ ವಿಚಾರಗಳೂ—

ಅನುಶಾಸನಪರ್ವದಲ್ಲಿ —ಸಾಮಾನ್ಯ ಲೋಕನೀತಿ ರಾಜನೀತಿ ವ್ರತೋಪವಾಸಾದಿನಿಯಮ ವಿಚಾರವೂ—

ಅಶ್ವಮೇಧಪರ್ವದಲ್ಲಿ—ಅಶ್ವಮೇಧಕಥಾವಿಚಾರವೂ—

ಆಶ್ರಮವಾಸಿಕಪರ್ವದಲ್ಲಿ—ಧೃತರಾಷ್ಟ್ರನು ವಾನಪ್ರಸ್ಥಾಶ್ರಮಕ್ಕಾಗಿ ಬಯಸಿ ಗಾಂಧಾರೀ ಮತ್ತು ಕುಂತಿಯೊಡನೆ ವನವಾಸಕ್ಕೆ ಹೋದ ವೃತ್ತಾಂತವೂ—

ಮೌಸಲಪರ್ವದಲ್ಲಿ—ಬಲರಾಮಕೃಷ್ಣರ ವೈಕುಂಠಗಮನ ಮತ್ತು ಯಾದವರ ನಾಶಸಮಾಚಾರವೂ—

ಮಹಾಪ್ರಸ್ಥಾನಿಕಪರ್ವದಲ್ಲಿ— ಪಾಂಡವರು ಹಸ್ತಿನಾಪುರವನ್ನು ತ್ಯಾಗಮಾಡಿ ಹೊರಗೆ ಹೊರಟುಹೋದ ವಿಚಾರವೂ—

ಸ್ವರ್ಗಾರೋಹಣಪರ್ವದಲ್ಲಿ—ಹೆಸರಿಗೆ ತಕ್ಕಂತೆ ಪಾಂಡವರು ಸ್ವರ್ಗಕ್ಕೆ ಹೊರಟುಹೋದ ಸಮಾಚಾರವೂ ವರ್ಣಿತವಾಗಿರುವುವು.

ಯೋಧಾಗ್ರೇಸರರಾದ ಕರ್ಣಾರ್ಜುನರ ಕಾಳಗ, ದ್ರೌಪದಿಯ ವಿವಾಹ ಸಮಾರೋಹ, ಯುಧಿಷ್ಠಿರನ ಸಾಮ್ರಾಜ್ಯಾಭಿಷೇಕ, ಪ್ರಚಂಡಶಿಶುಪಾಲವಧೆ, ಅಕ್ಷದ್ಯೂತ, ದ್ರೌಪದಿಯ ಕೋಪ, ಪಾಂಡವರ ಶಾಂತಮಯಅರಣ್ಯವಾಸ, ಮತ್ಸ್ಯದೇಶದಲ್ಲಿನ ಗೋಗ್ರಹಣ, ಅರ್ಜುನನು ಸ್ತ್ರೀವೇಷವನ್ನಳಿದು ಯುದ್ಧಕ್ಕಾಗಿ ನಿಲ್ಲುವಿಕೆ, ಯುದ್ಧದಲ್ಲಿಯೂ ಮತ್ತು ಮಂತ್ರಾಲೋಚನೆಯಲ್ಲಿಯೂ ನಡೆಯಿಸುವ ಪೌರುಷಯುಕ್ತವಾದ ವೀರರಸಭಾಷಣ—ಇವೇ ಮೊದಲಾಗ ಪ್ರತಿಯೊಂದು ನೋಟವೂ ವಾಚಕರನ್ನು ಸ್ತಂಭೀಭೂತರನ್ನಾಗಿಮಾಡಿ ಆಶ್ಚರ್ಯಗೊಳಿಸುವುದು.

ಮಹರ್ಷಿವ್ಯಾಸನ ಕಾಲದಲ್ಲಿ ನೃತ್ಯಗೀತಾದಿವಿದ್ಯೆಗಳನ್ನು ಕ್ಷತ್ರಿಯರೇ ಮುಂತಾದ ಭದ್ರಪರಿವಾರದ ಮಹಿಳೆಯರು ಮಾತ್ರವೇ ಕಲಿಯುತ್ತಿದ್ದುದು ಹೊರತು ಸಾಧಾರಣೇತರ ಹೆಂಗಳೆಯರ ನಿತ್ಯಕರ್ತವ್ಯವಾಗಿರಲಿಲ್ಲ. ವ್ಯಾಸನು ತನ್ನ ಸಂಹಿತೆಯಲ್ಲಿ ಸ್ತ್ರೀಯರ ಕರ್ತವ್ಯವಿಚಾರವನ್ನು—

> ಛಾಯೇವಾನುಗತಾ ಸ್ವಚ್ಛಾ ಸಖೀವ ಹಿತಕರ್ಮಸು
>
> ದಾಸೀವಾದಿಷ್ಟಕಾರ್ಯೇಷು ಭಾರ್ಯಾ ಭರ್ತುಸ್ಸದಾ ಭವೇತ್ ||

(ಹೆಂಗಸು ತನ್ನ ಗಂಡನನ್ನು ನೆರಳಿನಹಾಗೆ ಅನುಸರಿಸಬೇಕು; ಮಂಗಳಕಾರ್ಯಗಳಲ್ಲಿ ಮಿತ್ರಳಂತೆ ಯತ್ನಶೀಲಳಾಗಬೇಕು; ನಿಯೋಜಿತಕಾರ್ಯಗಳಲ್ಲಿ ದಾಸಿಯಾಗಿರಬೇಕು) ಎಂದು ಹೇಳಿರುವನು. ಇವುಗಳೆಲ್ಲದರ ಪರಿಶೀಲನದಿಂದಲೂ ಎರಡನೆಯ ಕಾಳಿದಾಸನ ರಘುವಂಶದಲ್ಲಿನ ಅಜವಿಲಾಪದ—

> "ಪ್ರಿಯಶಿಷ್ಯಾ ಲಲಿತೇ ಕಲಾವಿಧೌ"

ಎಂಬ ಹೆಚ್ಚು ವಿಶೇಷಣದಿಂದಲೂ ಇವನಿಗಿಂತಲೂ ಎಷ್ಟೋ ಪುರಾತನರಾದ ವ್ಯಾಸಾದಿಋಷಿಗಳ ಕಾಲದಲ್ಲಿ ಸ್ತ್ರೀಯರಿಗೆ ನೃತ್ಯಗೀತಾದಿಗಳನ್ನು ಕಲಿಸಬೇಕೆಂಬ ಉತ್ಸಾಹಶೀಲತೆಯು ಅಷ್ಟಾಗಿರಲಿಲ್ಲವಾಗಿ ಬೋಧೆಯಾಗುವುದು. ಭಾರತವು ಇತಿಹಾಸಗಳ ಜನ್ಮಭೂಮಿ, ಸುಖಸಂಪದಗಳ ತೌರೂರು, ಸಕಲ ಕಲಾನಿವಾಸಸ್ಥಾನ, ಸರ್ವಧರ್ಮಗಳಪಡಿಗಟ್ಟು, ಜ್ಞಾನಸಮುದ್ರಾಪಯೋನಿಧಿ, ನವರಸಗಳ ಶಯ್ಯಾಗಾರವಾಗಿರುವುದಾದುದರಿಂದಲೇ ಇದನ್ನು ಭಾರತೀಯರು—

> "ಭಾರತಃ ಪಂಚಮೋ ವೇದಃ"

ಎಂದು ಅಹರ್ನಿಶಿ ಮನನಮಾಡುತ್ತಿರುವರು. ಮತ್ತು ನಮ್ಮ ಭಾರತಜನಾಂಗದ ಬುದ್ಧಿಶಕ್ತಿ, ಅಸದೃಶಸನೀತಿತತ್ವ, ಪ್ರಕೃತಿಸೌಭಾಗ್ಯ, ಸ್ವಾರ್ಥತ್ಯಾಗ, ಸಹನ

ಶೀಲತೆ, ಕ್ಲೇಶಸಹಿಷ್ಣುತೆ, ಶಾಂತಿ, ಸುಖ— ಇವೇ ಮೊದಲಾದವುಗಳ ಮೂರ್ತಿಮತ್ತೇ ಮಹಾಭಾರತವೆಂದರೂ ಸಲ್ಲುವುದು.



## ಪಾಣಿನಿ

ಇವನು ಕೃಶಾಕ್ಷನ ಮಗನಾದ ದೇವಲನ ಮುಮ್ಮಗನು.* ಇವನಿಗೆ ಆಹಿಕನೆಂಬ ಹೆಸರೂ ಇರುವುದು.¶

ಪತಂಜಲಿಯು ಪಾಣಿನಿಯ ಸೂತ್ರಕ್ಕೆ (೧-೧-೨೦)—

'ಸರ್ವೇ ಸರ್ವಪದಾದೇಶಾ ದಾಕ್ಷೀಪುತ್ರಸ್ಯ ಪಾಣಿನೇಃ........'

ಎಂದು ಬರೆದಿರುವ ಕಾರಿಕೆಯಿಂದ ಇವನು ದಾಕ್ಷೀ ಎಂಬವಳ ಮಗನೆಂದು ಗೊತ್ತಾಗುತ್ತದೆ.‡

ಸಿಂಧುನದಿಯ ದಡದಲ್ಲಿರುವ 'ಅಟಕ'ಗೆ§ ವಾಯುವ್ಯದಲ್ಲಿರುವ ಶಾಲಾತುರವೆಂಬ ಗ್ರಾಮವು ಇವನ ಜನ್ಮಭೂಮಿಯಾದುದರಿಂದ ಇವನನ್ನು ಶಾಲಾತುರೀಯನೆಂದೂ ಕರೆಯುವರು. ಇವನ ವಿದ್ಯಾಭ್ಯಾಸವು ಪಾಟಲೀಪುತ್ರದಲ್ಲಿ ಆಗ ಮಹಾಪ್ರಖ್ಯಾತವಿದ್ವಾಂಸನಾಗಿದ್ದ ವರ್ಷನೆಂಬುವನ ಬಳಿ ನಡೆದುದಾಗಿ ತಿಳಿಯಬರುತ್ತದೆ.$

**ಕಾಲ:—** ಪಾಣಿನಿಯು ಯಾಸ್ಕನನ್ನು ತಾನು ಬರೆದಿರುವ ಸೂತ್ರದ ೨-೪-೬೩ರಲ್ಲಿ — 'ಯಾಸ್ಕಾದಿಭ್ಯೋ ಗೋತ್ರೇ'

ಎಂದು ಹೇಳಿಕೊಂಡಿರುವುದರಿಂದ ಪಾಣಿನಿಯು ಯಾಸ್ಕನಿಗಿಂತ ಈಚಿನವನಾದರೂ ಇವನ ಕಾಲವು ಇಷ್ಟರಲ್ಲಿಯೇ ಇರಬೇಕೆಂದು ಖಂಡಿತವಾಗಿ ಹೇಳಲಾಗುವುದಿಲ್ಲ. ಬುದ್ಧನ ನಿರ್ವಾಣಕಾಲವನ್ನು ಹಿಡಿದು ಪಾಣಿನಿಯ ಕಾಲವನ್ನು ಸಾಧ್ಯವಾದಷ್ಟು ಮಟ್ಟಿಗೆ ಸಾಧಿಸಬಹುದಾಗಿದೆ.† ಹೇಗೆಂದರೆ—

---

* John Garrett's Classical Dictionary of India P. 163.

¶ John Dowson's Classical Dictionary of Hindu mythology P. 229.

‡ Theodor Goldstucker's Panini and his place in Sanskrit Literature P. 162.

§ ಅಟಕ್ ಬಳಿಯ ಪ್ರಾಂತ್ಯಗಳಿಗೆ ಗಾಂಧಾರವೆಂದೂ ಹೇಳುವರು.

$ ಕವಿತಾಕೌಮುದೀ (ಹಿಂದಿ) ಪು. ೧೫೫-೧೫೬,

† Panini and his Place in Sanskrit Literature P. 170.

೧. ಪಾಣಿನಿಯ ಸೂತ್ರಗಳಲ್ಲಿ ಶಾಕ್ಯಮುನಿಯ ಹೆಸರು ದೊರೆಯುವುದಿಲ್ಲ.

೨. 'ನಿರ್ವಾಣ' ಶಬ್ದಾರ್ಥವು ಬೌದ್ಧಮತಾಭಿಪ್ರಾಯಕ್ಕೆ ಭಿನ್ನವಿನಿ ಹೇಳಲ್ಪಟ್ಟಿರುವುದು. ಈ ಎರಡು ಕಾರಣಗಳಿಂದ ಪಾಣಿನಿಯು ಬುದ್ಧನಿಗಿಂತ ಪ್ರಾಚೀನನೆಂದು ಹೇಳಬಹುದಾಗಿದೆ. ಬುದ್ಧನ ಸರಿಯಾದ ಕಾಲವು ಇನ್ನೂ ನಿಷ್ಕರ್ಷಿಸಲ್ಪಡದೆ ಇರುವುದರಿಂದ ಈ ವಿಚಾರದಲ್ಲಿ ಪಂಡಿತರ ಮತವು ಪರಸ್ಪರ ಭಿನ್ನವಿಸಿರುವುದು. ಪ್ರೊ. ಮ್ಯಾಕ್ಸಮುಲ್ಲರವರು ಬುದ್ಧನ ನಿರ್ವಾಣಕಾಲವು ಕ್ರಿ. ಪೂ. ೪೭೭ ಎಂದಿರುವರು.

ಪ್ರೊ. ಲ್ಯಾಸೆನ್‌ರವರು ಸಿಲೋನೀಯರ ಮತವನ್ನಂಗೀಕರಿಸಿ ಕ್ರಿ. ಪೂ. ೫೪೩ರಲ್ಲಿ ಬುದ್ಧನಿರ್ವಾಣವೆಂದಿರುವರು.

೩. ಪ್ರೊ. ಥಿಯೋಡರ್ ಗೋಲ್ಡ್‌ಸ್ಟುಕರವರು ಇವುಗಳೆರಡೂ ಸರಿಯಾದ ಕಾಲವನ್ನು ಹೇಳುವುದಿಲ್ಲವಾಗಿ ಸಮರ್ಥಿಸಿರುವರು.

೪. ಪ್ರೊ. ತಕಕುಸುರವರು ಬುದ್ಧನ ನಿರ್ವಾಣವು ಕ್ರಿ. ಪೂ. ೪೮೬ ಎಂದು ಹೇಳುವರು.*

೫. ಪ್ರೊ. ವಿನ್ಸೆಂಟ್ ಸ್ಮಿತ್ತರವರು ಕ್ರಿ. ಪೂ. ೪೮೭ ಎನ್ನುವರು.†

೬. ಡಾ. ಫ್ಲೀಟರವರೂ ಮತ್ತು ಪ್ರೊ. ಗೈಗರವರೂ ಸಿಲೋನೀಯರು ಹೇಳುವ ಕ್ರಿ. ಪೂ. ೫೪೪ ಅಥವಾ ೫೪೩ ಎಂಬುದನ್ನು ತಳ್ಳಿಹಾಕಿ ಕ್ರಿ. ಪೂ. ೪೮೩ರಲ್ಲಿರಬೇಕೆಂದು ಹೇಳುವರು.‡

೭. ಡಾ. ಎ. ಬಿ. ಕೀತರವರು ಪಾಣಿನಿಯ ಕಾಲವನ್ನು ಸುಮಾರು ಕ್ರಿ. ಪೂ. ೪ನೆಯ ಶತಮಾನವೆನ್ನುವರು.¶ ಪಾಣಿನಿಯು ಬುದ್ಧನಿಗಿಂತ ಪ್ರಾಚೀನನೆಂದೂ ಬುದ್ಧನ ಕಾಲವು ಕ್ರಿ. ಪೂ. ೫–೬ನೇ ಶತಮಾನಗಳೆಂದೂ ಸ್ಥಾಪಿತವಾಗುವುದಾದುದರಿಂದ ಡಾ. ಕೀತರವರ ಅಭಿಪ್ರಾಯವು ಸರಿಗಟ್ಟದು. ಅಲ್ಲದೆ ಡಾ. ಫ್ಲೀಟರೇ ಮೊದಲಾದವರು ಸಿಲೋನೀಯರು ಹೇಳುವ ಕ್ರಿ.ಪೂ. ೫೪೩ನ್ನು ತಳ್ಳಿಹಾಕುವ ಕಾರಣಸಮರ್ಥನವಿಲ್ಲದುದರಿಂದ ಕ್ರಿ. ಪೂ. ೪೮೩ನ್ನು ಒಪ್ಪಿ

* J. R. A. S. of 1905 P. 51.

† Vincent Simth's early History of India P. 46.

‡ Ibid P. 46 Foot Note.

¶ Dr. A. B. Keith's The Sanskrit Drama P.31.

ಕೊಳ್ಳುವಹಾಗೆ ಕ್ರಿ. ಪೂ. ೫೪೩ನ್ನೂ ಒಪ್ಪಿಕೊಳ್ಳಬೇಕಾಗುವುದು. ಬುದ್ಧನ ನಿರ್ಯಾಣವು ಕ್ರಿ. ಪೂ. ೬ ನೆಯ ಶತಮಾನವಾದರೆ ಪಾಣಿನಿಯು ಇದಕ್ಕಿಂತಲೂ ಪ್ರಾಚೀನನು ಎಂದರೆ ಕ್ರಿ. ಪೂ. ೭ನೆಯ ಶತಮಾನದವನಾಗಿರಬೇಕೆಂದು ತೋರುವುದು. ಡಾ. ಭಂಡಾರಕರರವರು ಪಾಣಿನಿಯ ಕಾಲವನ್ನು ಹೇಳುವಾಗ ಕ್ರಿ. ಪೂ. ೭ನೆಯ ಶತಮಾನ ಅಥವಾ ಇನ್ನೂ ಪ್ರಾಚೀನನಾಗಿರಬಹುದೆನ್ನುವರು. ಈ ಕಾರಣಗಳಿಂದ ಪಾಣಿನಿಯು ಕ್ರಿ. ಪೂ. ೭ನೆಯ ಶತಮಾನದವನಾಗಿರಬಹುದಾಗಿ ತೋರುವುದು.

**ಗ್ರಂಥಗಳು:—** ಇವನು **'ಅಷ್ಟಾಧ್ಯಾಯೀ'** ಎಂಬ ಲೋಕೋತ್ತರ ವ್ಯಾಕರಣಗ್ರಂಥವನ್ನು ಬರೆದಿರುವನು. ಇದರಲ್ಲಿ ೩೯೯೬ ಸೂತ್ರಗಳಿರುವುವು. ಮೊದಲನೆಯ ಅಧ್ಯಾಯದಲ್ಲಿ ಸಂಜ್ಞಾಪ್ರಕರಣವೂ ಎರಡನೆಯದರಲ್ಲಿ ಸಮಾಸ ಪ್ರಕರಣವೂ ೩-೪-೫ರಲ್ಲಿ ಕೃದಂತಗಳೂ ೬-೭-೮ರಲ್ಲಿ ಧಾತುಗಳ ಆಗಮಾದೇಶಗಳೂ ಹೇಳಲ್ಪಟ್ಟಿವೆ.

ಪಾಣಿನಿಗಿಂತ ಪ್ರಾಚೀನರಾದ ವೈಯಾಕರಣರಲ್ಲಿ ಶಾಕಲ್ಯ, ಗಾರ್ಗ್ಯ, ಕಾಶ್ಯಪ, ಗಾಲವ, ಆಪಿಶಲ, ಭರದ್ವಾಜ, ಆಶ್ವಲಾಯನ. ಸ್ಫೋಟಾಯನ, ಚಕ್ರವರ್ಮ—ಇವರು ಮುಖ್ಯರು. ಅಷ್ಟಾಧ್ಯಾಯಿಯ ಟೀಕೆಯಲ್ಲಿ ಇಂದ್ರ, ಚಂದ್ರ, ಕಾಶಕೃತ್ಸ್ನ, ಆಪಿಶಲಿ, ಶಾಕಟಾಯನರ ವಚನಗಳು ಅಲ್ಲಲ್ಲಿ ಕಂಡುಬರುವುವು.

ಪಾಣಿನಿಯ ಸೂತ್ರಗಳ ಮೇಲೆ ಅನೇಕ ವಾರ್ತಿಕಗಳು ಬರೆಯಲ್ಪಟ್ಟಿರುವುವು. ಹೇಳಿದ ಮತ್ತು ಹೇಳದಿದ್ದ ಹಾಗೂ ತಪ್ಪಿ ಹೇಳಿದ ಅರ್ಥವನ್ನು ಸ್ಪಷ್ಟೀಕರಿಸುವುದಕ್ಕೆ ವಾರ್ತಿಕವೆಂದು ಹೆಸರು.†

ಪಾಣಿನಿಯ ಸೂತ್ರಗಳಿಗೆ ಕಾತ್ಯಾಯನನು ವಾರ್ತಿಕವನ್ನು ಬರೆದಿರುವನು. ಜಯಾದಿತ್ಯನು‡ ಕಾಶಿಕಾವೃತ್ತಿಯೆಂಬ ಟೀಕೆಯನ್ನೂ ನಾಗೋಜೀಭಟ್ಟನು ವೃತ್ತಿಸಂಗ್ರಹವೆಂಬ ಟೀಕೆಯನ್ನೂ ಭಟ್ಟೋಜೀದೀಕ್ಷಿತನು ಶಬ್ದಕೌಸ್ತುಭವೆಂಬ ಟೀಕೆಯನ್ನೂ ಬರೆದಿರುವನು. ಆದರೆ ಇದು ಅಪೂರ್ಣವಾಗಿರುವುದು. ಪಾಣಿನಿಯು ಅಷ್ಟಾಧ್ಯಾಯೀ ಎಂಬ ವ್ಯಾಕರಣ ಗ್ರಂಥವನ್ನು ಬರೆದಿರುವುದಲ್ಲದೆ 'ಜಾಂಬುವತೀಜಯ'ವೆಂಬ ಒಂದು ಕಾವ್ಯವನ್ನೂ ಬರೆದಿರುವುದಾಗಿ ರಾಜಶೇಖರನ ಹೇಳಿಕೆಯಾದ—

† ಉಕ್ತಾನುಕ್ತದುರುಕ್ತಾರ್ಥವ್ಯಕ್ತಿಕಾರಿ ತು ವಾರ್ತಿಕಂ ।

‡ ಇವನಿಗೆ ವಾಮನಜಯಾದಿತ್ಯನೆಂಬ ನಾಮಾಂತರವೂ ಇರುವುದು.

ಸ್ವಸ್ತಿ ಪಾಣಿನಯೇ ತಸ್ಮೈ ಯಸ್ಯ ರುದ್ರಪ್ರಸಾದತಃ ।
ಆದೌ ವ್ಯಾಕರಣಂ ಕಾವ್ಯಮನು ಜಾಂಬುವತೀಜಯಂ ॥

ಎಂಬ ಶ್ಲೋಕದಿಂದ ಧೃಢಪಡುತ್ತದೆ.

ನೇಮಿಸಾಧುವು ರುದ್ರಟನ ಕಾವ್ಯಾಲಂಕಾರಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ ತಾನು ಪಾಣಿನಿಯ ಮಹಾಕಾವ್ಯವಾದ ಪಾತಾಳವಿಜಯಗ್ರಂಥದಿಂದ ಉದಾಹರಣೆಗಳನ್ನು ತೆಗೆದುಕೊಂಡಿರುವುದಾಗಿಯೂ—

"ಸಂಧ್ಯಾವಧೂಂ ಗೃಹ್ಯ ಕರೇಣ" ಎಂಬುದನ್ನೂ
ಗತೇರ್ಧರಾತ್ರೇ ಪರಿಮಂದಮಂದಂ
ಗರ್ಜಂತಿ ಯತ್ಪ್ರಾವೃಷಿ ಕಾಲಮೇಘಾಃ ।
ಅಪಶ್ಯತೀ ವತ್ಸಮಿವೇಂದುಬಿಂಬಂ
ತಚ್ಛರ್ವರೀ ಗೌರಿವ ಹುಂಕರೋತಿ ॥"

ಎಂಬುದನ್ನೂ ಹೇಳಿ ಇಂತಹ ಅಸಾಧುಪ್ರಯೋಗಗಳನ್ನು ಆಗಣ ಉದ್ದಾಮ ಕವಿಗಳೂ ಅನುಸರಿಸಿರುವುದಾಗಿ ಹೇಳಿರುವನು.‡

ಈ ಜಾಂಬುವತೀಜಯವೂ ಪಾತಾಳವಿಜಯವೂ ಒಂದೇ ಗ್ರಂಥವೇ ಅಥವಾ ಬೇರೆ ಬೇರೆ ಗ್ರಂಥಗಳೇ ಎಂಬುದು ತಿಳಿಯದಾಗಿದೆ.

ಕವಿಯು ಮಹಾಭಾರತದಿಂದ ಕಥೆಯನ್ನು ತೆಗೆದುಕೊಂಡಿರುವನು. ಶ್ರೀಕೃಷ್ಣನು ಪಾತಾಳಲೋಕಕ್ಕೆ ಹೋಗಿ ಜಾಂಬುವತಿಯನ್ನು ಹೇಗೆ ಪಡೆದನೆಂಬುದೇ ಕಥಾವಸ್ತುವಾಗಿರುವುದು.

ಮಹರ್ಷಿಪಾಣಿನಿಯು ಮಹಾವೈಯ್ಯಾಕರಣನಾಗಿದ್ದು ಇಂತಹ ಅಸಾಧು ಶಬ್ದಪ್ರಯೋಗಗಳನ್ನು ಮಾಡಿರನೆಂದೂ ಪಾಣಿನಿನಾಮಕನಾದ ಮತ್ತಾವನೋ ಬೇರೊಬ್ಬನಿರಬೇಕೆಂದೂ ಕೆಲವರು ಪಾಣಿನಿದ್ವಯವನ್ನು ಹೇಳುವರು.† ಆದರೆ ಸದುಕ್ತಿಕರ್ಣಾಮೃತದಲ್ಲಿ ಹೇಳಲ್ಪಟ್ಟಿರುವ—

ಸುಬಂಧೌ ಭಕ್ತಿರ್ನಃ ಕ ಇಹ ರಘುಕಾರೇ ನ ರಮತೇ
ಧೃತಿರ್ದಾಕ್ಷೀಪುತ್ರೇ ಹರತಿ ಹರಿಚಂದ್ರೋಽಪಿ ಹೃದಯಂ ।
ವಿಶುದ್ಧೋಕ್ತಿಃ ಶೂರಃ ಪ್ರಕೃತಿಮಧುರಾ ಭಾರವಿಗಿರ
ಸ್ತಥಾಪ್ಯಂತರ್ಮೋದಂ ಕಮಪಿ ಭವಭೂತಿರ್ವಿತನುತೇ ॥

ಎಂಬ ಶ್ಲೋಕದಿಂದ ಏಕವ್ಯಕ್ತಿತ್ವವು ಸಿದ್ಧವಾಗುತ್ತದೆ.

‡ ವಲ್ಲಭದೇವನ ಸುಭಾಷಿತಾವಳಿ ಪುಟ. ೫೬—೫೮.

† A. B. Keith's Classical Sanskrit Literature P. 126

ಮೆ. ಬರ್ನಲ್ (Burnell) ರವರು ಜಾಂಬುವತೀಕಲ್ಯಾಣವೆಂಬ ನಾಟಕವನ್ನು ಕೃಷ್ಣರಾಜನೆಂಬುವನು ಬರೆದಿರುವುದಾಗಿಯೂ ಮೇಲ್ಕಂಡ ಕಥೆಯೇ ಇದರಲ್ಲಿಯೂ ಹೇಳಿರುವುದಾಗಿ ಹೇಳಿರುವರು.‡

ಇದಲ್ಲದೆ ಕಂಸವಧ, ಬಲಿಬಂಧ, ಇವೆರಡೂ ನಾಟಕಗಳೆಂದೂ ಇವುಗಳನ್ನು ಪಾಣಿನಿಯು ಬರೆದುದೆಂದೂ ಈ ವಿಚಾರವು ಪಾತಾಳವಿಜಯದಲ್ಲಿ ಹೇಳಲ್ಪಟ್ಟಿರುವುದೆಂದೂ ಈ ನಾಟಕಗಳು ಪತಂಜಲಿಯ ಕಾಲದಲ್ಲಿ ಸೌಭಿಕರಿಂದ ಆಡಲ್ಪಟ್ಟುದಾಗಿ ಪತಂಜಲಿಯಭಾಷ್ಯದಿಂದ ಗೊತ್ತಾಗುವುದೆಂದೂ ಶ್ರೀ. ಟಿ. ಎಸ್. ನಾರಾಯಣಶಾಸ್ತ್ರಿಗಳು ಹೇಳಿರುವರು.$

ಪಾಣಿನಿಯದೆಂದು ಹೇಳುವ ಹಲವು ಶ್ಲೋಕಗಳು ವಲ್ಲಭದೇವನ ಸುಭಾಷಿತಾವಳಿ, ಸದುಕ್ತಿಕರ್ಣಾಮೃತವೇ ಮೊದಲಾದವುಗಳಲ್ಲಿ ದೊರೆಯುವುವು. ಅಲ್ಲದೆ ಕೆಲವು ಶ್ಲೋಕಗಳ ಭಾಷಾಂತರಗಳೂ ದೊರೆಯುವುವು.†

ಪ್ರಕೃತ ಅಷ್ಟಾಧ್ಯಾಯಿಯ ಹೊರತು ಪಾಣಿನಿಯ ಮತ್ತಾವ ಗ್ರಂಥಗಳೂ ಉಪಲಬ್ಧವಿಲ್ಲದಿರುವಾಗ ಯಾವುವೋ ಕೆಲವು ಶ್ಲೋಕಗಳಿಂದ ಮಾತ್ರವೇ ಇದು ಹೀಗೆಯೇ ಸರಿಯೆಂದು ನಿರ್ಧರಿಸಿ ಹೇಳುವುದು ಸಾಧ್ಯವಾಗದು.



## ಭಾಸ

ಲೋಲರಾಜನ ಮುಮ್ಮಗನೂ ಸೋಸರಾಜನ ಮಗನೂ ಆದ ಬೋಸರಾಜನು—

> "ಸೋಽಗ್ನಿರಪಿ ಭಾಸಮುನೇಃ ಕಾವ್ಯಂ ವಿಷ್ಣುಧರ್ಮಾನ್ಮುಖಾತ್
> ತ್ಯಕ್ತವಾನ್ । ನಾದಹದಿತ್ಯರ್ಥಃ"

ಎಂದು ಹೇಳಿ ಮುನಿಶಬ್ದವನ್ನು ಪ್ರಯೋಗಿಸಿರುವುದರಿಂದ ಇವನು ಮಹಾಕವಿಯೆಂದೂ ಬ್ರಾಹ್ಮಣನೆಂದೂ ಬೋಧೆಯಾಗುತ್ತದೆ. ಇವನು ಯಾವ ಸ್ಥಳದವನೆಂಬುದಾಗಲೀ ಜನನೀಜನಕರಾರೆಂಬುದಾಗಲೀ ತಿಳಿಯದು.

‡ ವಲ್ಲಭದೇವನ ಸುಭಾಷಿತಾವಳಿ ಪು. ೫೮.

$ Introduction to Haidimba Vaidagdhya P. 20.

† A. B. Keith's Classical Sanskrit Literature P. 126-27

ಮಹಾಕವಿರಾಜಶೇಖರನು ಭಾಸನ ವಿಚಾರವಾಗಿ ಹೇಳುವಾಗ—

ಕಾರಣಂ ತು ಕವಿತ್ವಸ್ಯ ನ ಸಂಪನ್ನಕುಲೀನತಾ ।
ಧಾವಕೋಽಪಿ ಹಿ ಯದ್ಭಾಸಃ ಕವೀನಾಮಗ್ರಿಮೋಽಭವತ್ ।
ಆದೌ ಭಾಸೇನ ರಚಿತಾ ನಾಟಿಕಾ ಪ್ರಿಯದರ್ಶಿಕಾ ॥
ತಸ್ಯ ರತ್ನಾವಳೀ ನೂನಂ ರತ್ನಮಾಲೇವ ರಾಜತೇ ।
. . . . . . . . .
ನಾಗಾನಂದಂ ಸಮಾಲೋಕ್ಯ ಯಸ್ಯ ಶ್ರೀಹರ್ಷವಿಕ್ರಮಃ ॥

ಭಾಸನು ರತ್ನಾವಳೀ, ಪ್ರಿಯದರ್ಶಿಕಾ ನಾಟಿಕೆಗಳನ್ನೂ ಮತ್ತು ನಾಗಾನಂದವೆಂಬ ನಾಟಕವನ್ನೂ ಬರೆದನು. ಅವನು ಅಗಸರವ (ಧಾವಕ)ನು ಎಂದು ಹೇಳಿರುವನು.

ಮಹಾಕವಿಭಾಸನು ಜಾತ್ಯಾ ಅಗಸರವನೆಂದೂ ಉಜ್ಜಯಿನಿಯಲ್ಲಿ ಆಳಿದ ಶ್ರೀಹರ್ಷವಿಕ್ರಮಾದಿತ್ಯನ ಬಳಿ ಇದ್ದನೆಂದೂ ಇವನು ಆ ನಾಟಕಗಳನ್ನು ಬರೆದಿರುವನೆಂದೂ ಒಂದಾನೊಂದು ದಿವಸ ಶ್ರೀಹರ್ಷವಿಕ್ರಮಾದಿತ್ಯನು ಬೇಟೆಗೆ ಹೋಗಿದ್ದು ಹಿಂದಿರುಗಿ ಬರುವಾಗ ಭಾಸನು ಬಟ್ಟೆಗಳನ್ನು ಹರಡಿ ತದೇಕಧ್ಯಾನದಿಂದ ಬರೆಯುತ್ತ ರಾಜನು ಬಂದದ್ದನ್ನು ಕೂಡ ತಿಳಿಯದಿದ್ದನೆಂದೂ ಆಗ ರಾಜನು ಅವನನ್ನು ಅರಮನೆಗೆ ಕರೆಯಿಸಿಕೊಂಡು, ಬರೆದಿರುವುದೇನೆಂದು ನೋಡುವಾಗ ಅದು "ನಾಗಾನಂದ"ವಾಗಿತ್ತೆಂದೂ ಅದನ್ನೋದಿ ಸಂತೋಷಿಸಿ ಭಾಸನನ್ನು ಸಭಾಪಂಡಿತನನ್ನಾಗಿ ಮಾಡಿ ಧನಕನಕವಾಹನಾದಿಗಳಿಂದ ಸತ್ಕರಿಸಿದನೆಂದೂ ಇದಕ್ಕೆ ಭಾಸನು ರತ್ನಾವಳೀ, ಪ್ರಿಯದರ್ಶಿಕಾ ಮತ್ತು ನಾಗಾನಂದಗಳನ್ನು ರಾಜನ ಹೆಸರಿನಲ್ಲಿ ಅಂಕಿತಮಾಡಿದನೆಂದೂ ಆಸ್ಥಾನದ ಇತರ ಪಂಡಿತರು ಇವನ ಉತ್ಕರ್ಷತೆಯನ್ನು ನೋಡಿ ಸಹಿಸದೆ, "ಭಾಸಕವಿ" ಎಂದು ಹೇಳಲು ಕೂಡಾ ಇಷ್ಟಪಡದೆ, ಅವನಾವನೋ –ಭಾಸ–ಧಾವಕ–ಅಗಸರವನು– ಎಂದು ಹೇಳಿದರೆಂದೂ ಕಾಲಕ್ರಮದಲ್ಲಿ ಭಾಸಶಬ್ದಕ್ಕೆ ಬದಲಾಗಿ ಧಾವಕಶಬ್ದವೇ ರೂಢಿಯಲ್ಲಿ ಬಂದಿತೆಂದೂ ಭಾಸ, ಭಾಸಕ, ಧಾವಕ ಈ ಮೂರೂ ಒಬ್ಬನ ಹೆಸರೇ ಎಂದೂ ಮೊದಲಾಗಿ ಹೇಳುವ ಮನೋರಂಜಕಕಥೆಯೊಂದಿರುವುದು.*

ಭಾಸನು ರಜಕನೆಂದು ಹೇಳುವ ಜನಜನಿತಕಥೆಯು ಇರುವುದಾಗಿ ರಾಜಶೇಖರನು ಹೇಳಿರುವನೇ ಹೊರತು ಅದರ ತಥ್ಯಾಂಶದ ಕಡೆಗೆ ಲಕ್ಷ್ಯಕೊಟ್ಟಿಲ್ಲ. ಮಹಾಕವಿಗಳೆಲ್ಲರೂ 'ಭಾಸ'ನೆಂದು ಹೇಳಿರುವರೇ ಹೊರತು 'ಧಾವಕ'ನೆಂದು ಹೇಳಿರುವುದಿಲ್ಲ.

---

* Introduction to Haidimba Vaidagdhya P. 1–8.

ಮಹಾಕವಿಕಾಳಿದಾಸನು ತನ್ನ ಮಾಳವಿಕಾಗ್ನಿಮಿತ್ರದ ಪ್ರಸ್ತಾವನೆಯಲ್ಲಿ—

"ಪಾರಿಪಾರ್ಶ್ವಕಃ—ಮಾ ತಾವತ್ । ಪ್ರಥಿತಯಶಸಾಂ ಭಾಸಸೌಮಿಲ್ಲಕಕವಿಪುತ್ರಾದೀನಾಂ ಪ್ರಬಂಧಾನತಿಕ್ರಮ್ಯ ವರ್ತಮಾನಕವೇಃ ಕಾಳಿದಾಸಸ್ಯ ಕ್ರಿಯಾಯಾಂ ಕಥಂ ಬಹುಮಾನಃ?

ಎಂಬಲ್ಲಿ ಭಾಸನೆಂದು ಹೇಳಿರುವನೇ ಹೊರತು ಧಾವಕನೆಂದು ಹೇಳಿರುವುದಿಲ್ಲ.

ಮಹಾಕವಿ ಜಯದೇವನು ಪ್ರಸನ್ನರಾಘವದಲ್ಲಿ—

. . . . . .

ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ ।

. . . . . .

ಎಂಬಲ್ಲಿಯೂ ಭಾಸನೆಂದು ಹೇಳಿರುವನೇ ಹೊರತು ಧಾವಕನೆಂದು ಹೇಳಿರುವುದಿಲ್ಲ. ಕ್ರಿ. ಶ. ಹತ್ತನೆಯ ಶತಮಾನಾನಂತರ ಬಂದ ಕವಿಗಳೂ ವ್ಯಾಖ್ಯಾನಕಾರರೂ ಧಾವಕಶಬ್ದವನ್ನುಪಯೋಗಿಸಿರುವರೇ ಹೊರತು ಹಿಂದಣ ಕವಿಗಳಾರೂ ಈ ಶಬ್ದವನ್ನುಪಯೋಗಿಸಿರುವಂತೆ ಕಂಡುಬರುವುದಿಲ್ಲ. ಮೇಲೆ ಹೇಳಿರುವುದು ಮನೋರಂಜಕಕಥೆ. ರತ್ನಾವಳೀ, ಪ್ರಿಯದರ್ಶಿಕಾ, ಮತ್ತು ನಾಗಾನಂದಗಳು ಕನೂಜಿನಲ್ಲಾಳಿದ ಹರ್ಷವರ್ಧನಶಿಲಾದಿತ್ಯನಿಂದ ಬರೆಯಲ್ಪಟ್ಟವು. ಭಾಸನಿಂದ ಬರೆಯಲ್ಪಟ್ಟವುಗಳಲ್ಲ.

**ಕಾಲ:**— ಮಹಾಕವಿಕಾಳಿದಾಸನು ಕ್ರಿ. ಪೂ. ಎರಡನೆಯ ಶತಮಾನದವನಾಗಿದ್ದು ಅವನ ಗ್ರಂಥದಲ್ಲಿ ಭಾಸಾದಿಕವಿಗಳನ್ನು ಗೌರವಿಸಿ ಹೇಳಿರುವುದರಿಂದ ಭಾಸನು ಕಾಳಿದಾಸನಿಗಿಂತ ಪ್ರಾಚೀನನೆಂಬುದು ಸ್ಪಷ್ಟವು. ಆದರೆ ಎಷ್ಟು ಪ್ರಾಚೀನನೆಂಬುದನ್ನು ಹೇಳಲರಿದಾಗಿರುವುದು.

**ಗ್ರಂಥಗಳು:**— ಮಹಾಕವಿಬಾಣನು—

ಸೂತ್ರಧಾರ ಕೃತಾರಂಭೈರ್ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥

ಎಂದು ಹರ್ಷಚರಿತದಲ್ಲಿ ಹೇಳಿರುವುದರಿಂದಲೂ, ಲಾಕ್ಷಣಿಕನಾದ ರಾಮಚಂದ್ರಗುಣಚಂದ್ರರ 'ನಾಟ್ಯದರ್ಪಣ'ದಲ್ಲಿ—

"ಯಥಾ ಭಾಸಕೃತೇ ಸ್ವಪ್ನವಾಸವದತ್ತೇ......"

ಎಂದು ಹೇಳಿರುವುದರಿಂದಲೂ ಇವನು ಅನೇಕ ನಾಟಕಗಳನ್ನು ಬರೆದಿರುವುದಾಗಿಯೂ ಇವುಗಳಲ್ಲಿ "**ಸ್ವಪ್ನವಾಸವದತ್ತಾ**" ಎಂಬುದೊಂದು ನಾಟಕವೆಂದೂ ತಿಳಿಯಬರುವುದು. ಈ ನಾಟಕಗಳಲ್ಲದೆ ಇವನು "ವಿಷ್ಣುಧರ್ಮ" ವೆಂಬ ಕಾವ್ಯವೊಂದನ್ನೂ ಅಲಂಕಾರಶಾಸ್ತ್ರವೊಂದನ್ನೂ ಬರೆದಿರುವುದಾಗಿ ತಿಳಿಯಬರುತ್ತದೆ. ಇವು ಉಪಲಬ್ಧವಿಲ್ಲ.

ಮಹಾಕವಿಭಾಸಕೃತವಾಗಿರುವ ಮತ್ತು ಲಾಕ್ಷಣಿಕರು ಹೇಳುವ ಮೂಲ 'ಸ್ವಪ್ನವಾಸವದತ್ತಾ' ನಾಟಕವು ಯಾವುದೆಂಬುದು ತಿಳಿಯದು. ಆದರೆ ಭಾಸಕೃತವೆಂದು ಹೇಳುವ ತ್ರಿವೇಂದ್ರಂನಾಟಕಗಳ ವಿಚಾರವಾಗಿ ಶೋಧಿಸಿ ಬರೆದ ಹೊರತು ಮಹಾಕವಿಭಾಸನ ವಿಷಯವು ಪೂರ್ಣವಾಗದು.

೧. ತ್ರಿವೇಂದ್ರಂ ನಾಟಕಗಳ ಕರ್ತನು ಒಬ್ಬನೇ ಅಥವಾ ಹಲವರೇ?

೨. ಎಂ. ಗಣಪತಿಶಾಸ್ತ್ರಿಗಳವರ ಹೇಳಿಕೆಯಂತೆ ತ್ರಿವೇಂದ್ರಂ ನಾಟಕಗಳ ಕರ್ತನು ಭಾಸನೇ? ಅಥವಾ ಇತರರೇ?

೩. ಭಾಸನ ಹೆಸರಿನಲ್ಲಿ ಇತರ ಗ್ರಂಥಗಳಲ್ಲಿ ಹೇಳಿರುವ ಶ್ಲೋಕಗಳನ್ನು ಆಧಾರವಾಗಿ ತೆಗೆದುಕೊಳ್ಳಬಹುದೇ?

೪. ಆಶ್ಚರ್ಯಚೂಡಾಮಣಿಕಾರನಾದ ಶಕ್ತಿಭದ್ರನನ್ನು ತ್ರಿವೇಂದ್ರಂ ನಾಟಕಗಳ ಕರ್ತನೆಂದು ಏಕೆ ಹೇಳಕೂಡದು? ಈ ರೀತಿ ಹಲವು ಪ್ರಶ್ನೆಗಳು ಹುಟ್ಟುವುವು. ಈ ಮೊದಲು ತ್ರಿವೇಂದ್ರಂ ನಾಟಕಗಳನ್ನು ಕೆಳಗೆ ಹೇಳಿರುವಂತೆ ವಿಂಗಡಿಸಿಕೊಳ್ಳುವುದವಶ್ಯಕ.

೧. ಚಾರಿತ್ರಕ:–ಸ್ವಪ್ನವಾಸವದತ್ತಾ, ಪ್ರತಿಜ್ಞಾಯೌಗಂಧರಾಯಣ.

೨. ಕಾಲ್ಪನಿಕ:—ಅವಿಮಾರಕ ಮತ್ತು ಚಾರುದತ್ತ.

೩. ಪೌರಾಣಿಕ:— (i) ಮಹಾಭಾರತದಿಂದ ಆರಿಸಿಕೊಂಡು ಬರೆದಿರುವುದು—

ಬಾಲಚರಿತ, ದೂತಘಟೋತ್ಕಚ, ದೂತವಾಕ್ಯ, ಕರ್ಣಭಾರ, ಮಧ್ಯಮವ್ಯಾಯೋಗ, ಪಾಂಚರಾತ್ರ, ಊರುಭಂಗ—

(ii) ರಾಮಾಯಣದಿಂದಾರಿಸಿಕೊಂಡು ಬರೆದಿರುವುದು:— ಅಭಿಷೇಕ ಮತ್ತು ಪ್ರತಿಮಾನಾಟಕಗಳು.

ಮೊದಲನೆಯದಾದ ಚಾರಿತ್ರಕಸಂಬಂಧದ ನಾಟಕಗಳನ್ನು ಒಬ್ಬನೇ ಬರೆದಿರುವನೆಂಬುದು ನಿಸ್ಸಂಶಯವಾದುದು. ಹೇಗೆಂದರೆ:— ಭವಭೂತಿಯ ಉತ್ತರರಾಮಚರಿತವು ಮಹಾವೀರಚರಿತೆಗೆ ಹೇಗೆ ಉತ್ತರಾರ್ಧವೋ ಹಾಗೆಯೇ ಸ್ವಪ್ನವಾಸವದತ್ತೆಯು ಪ್ರತಿಜ್ಞಾನಾಟಕದ ಉತ್ತರಾರ್ಧವೆಂದು ಹೇಳಬಹುದು.

ಕಥಾನಾಯಕನಾಯಕಿಯರೂ, ನಾಟಕದ ಪಾತ್ರಗಳೂ, ಹೆಸರುಗಳೂ ಸೂಚನೆಗಳೂ, ವಾಕ್ಸರಣಿ, ಒಕ್ಕಣೆ ಇವೆಲ್ಲವೂ ಎರಡರಲ್ಲಿಯೂ ಒಂದೇರೀತಿಯಾಗಿರುವುವು. ರಾಜಕಾರ್ಯತಂತ್ರಕುಶಲನಾದ ಯೌಗಂಧರಾಯಣನೇ

ಎರಡರಲ್ಲಿಯೂ ಮಂತ್ರಿಯು. ಇದರಿಂದ ಇವೆರಡನ್ನೂ ಬರೆದವನು ಒಬ್ಬನೇ ಕವಿಯಾಗಿರಬೇಕು.

ಪ್ರತಿಜ್ಞಾ ಮತ್ತು ಅವಿಮಾರಕ:—ಪ್ರತಿಜ್ಞಾನಾಟಕದ ಎರಡನೇ ಅಂಕದಲ್ಲಿ ಮಹಾಪರಾಕ್ರಮಿಯಾದ ಮಹಾಸೇನನ ವಿಚಾರವಿರುವುದು. ಕವಿಯು ಮಹಾಸೇನನನ್ನು ರಾಜನೆನ್ನುವುದನ್ನು ಳಿದು ಸಾಧಾರಣಜನರಂತೆ ತೋರಿಸಿರುವನು. ತನ್ನ ಒಬ್ಬಳೇ ಮಗಳಾದ ವಾಸವದತ್ತೆಗೆ ಅನುರೂಪನಾದ ವರನನ್ನು ದೊರೆಕಿಸಿಕೊಳ್ಳುವ ವಿಚಾರದಲ್ಲಿ ಅತ್ಯಂತ ಕಾತರನಾದ ತಂದೆಯಂತೆ ವರ್ಣಿಸಿರುವನು. ಈ ವಿಚಾರವಾಗಿ ರಾಣಿಯೊಡನೆ ಯೋಚಿಸುತ್ತಿದ್ದಾಗ ವತ್ಸರಾಜನು ಕೈಸೆರೆಸಿಕ್ಕಿದ ವಿಚಾರವನ್ನು ತಿಳಿದು ಭಗ್ನಮನಸ್ಕನಾಗುವನು. ಅವಿಮಾರಕದ ಮೊದಲನೆಯ ಅಂಕದಲ್ಲಿ ರಾಜನು ವಿವಾಹಯೋಗ್ಯಳಾದ ಕುರಂಗಿಯ ವಿಚಾರವಾಗಿ ರಾಣಿಯೊಡನೆ ಯೋಚಿಸುತ್ತಿದ್ದಾಗ ಯಾವುದೋ ಶಬ್ದವನ್ನು ಕೇಳಿ ಭಿನ್ನಮನಸ್ಕನಾಗುವನು. ಅವಿಮಾರಕದ ಈ ನೋಟವನ್ನು ಪ್ರತಿಜ್ಞಾನಾಟಕದಲ್ಲಿ ಲಂಬಿಸಿ ಬರೆದುದಾಗಿದೆ. ಮತ್ತು ಅವಿಮಾರಕವು ಪ್ರತಿಜ್ಞಾನಾಟಕಕ್ಕಿಂತ ಮೊದಲು ಬರೆದುದಾಗಿದೆ. ಇದರಿಂದ ಇವೆರಡರ ಕರ್ತೃವೂ ಒಬ್ಬನೇ ಆಗಿರಬೇಕು.

ಸ್ವಪ್ನವಾಸವದತ್ತಾ ಮತ್ತು ಅಭಿಷೇಕನಾಟಕ:—ಸ್ವಪ್ನವಾಸವದತ್ತೆಯ ಳನೆಯ ಅಂಕದ— **ತತಃ ಪ್ರವಿಶತಿ ಕಾಂಚುಕೀಯಃ**

ಕಾಂಚುಕೀಯಃ-ಕ ಇಹ ಭೋ! ಕಾಂಚನತೋರಣದ್ವಾರಮಶೂನ್ಯಂ ಕುರುತೇ।

ಪ್ರವಿಶ್ಯ—ಪ್ರತೀಹಾರೀ—ಅಯ್ಯ ಅಹಂ ವಿಜ ಆಕಿಂಕರೀ ಅದು।

ಕಾಂಚುಕೀಯಃ-ಭವತಿ ನಿವೇದ್ಯತಾಂ ನಿವೇದ್ಯತಾಂ।

ಎಂಬ ಭಾಗವು ಅಭಿಷೇಕನಾಟಕದ ೩ನೇ ಅಂಕದ—

**(ತತಃ ಪ್ರವಿಶತಿ ಷಡ್ಕುಕರ್ಣಃ)**

ಷಡ್ಕುಕರ್ಣಃ-ಕ ಇಹ ಭೋ ಕಾಂಚನ ತೋರಣದ್ವಾರಮಶೂನ್ಯಂ ಕುರುತೇ।

ಪ್ರವಿಶ್ಯ-ಪ್ರತೀಹಾರೀ-ಅಯ್ಯ ಅಹಂ ವಿಜಯಾ ಕಿಂಕರೀ ಅದು ಕುರುತೇ।

ಷಡ್ಕುಕರ್ಣಃ-ವಿಜಯೇ ನಿವೇದ್ಯತಾಂ ನಿವೇದ್ಯತಾಂ।

ಎಂಬುದನ್ನು ಹೋಲುವುದು.

ಸ್ವಪ್ನವಾಸವದತ್ತೆಯ ಆರನೆಯ ಅಂಕದ—

**ಕಿಂ ವಕ್ಷ್ಯತೀತಿ ಹೃದಯಂ ಪರಿಶಂಕಿತಂ ಮೇ''**

ಎಂಬ ಪೂರ್ಣಪಾದವು ಅಭಿಷೇಕದ ನಾಲ್ಕನೆಯ ಅಂಕದಲ್ಲಿ ಕಂಡುಬರುತ್ತದೆ.

ಸ್ವಪ್ನವಾಸವದತ್ತೆಯ ೬ನೆಯ ಅಂಕದ ಭರತವಾಕ್ಯವಾದ—

"ಇಮಾಂ ಸಾಗರಪರ್ಯಂತಾಂ ಹಿಮವದ್ವಿಂಧ್ಯಕುಂಡಲಾಂ।
ಮಹೀಮೇಕಾತಪತ್ರಾಂಕಾಂ ರಾಜಸಿಂಹಃ ಪ್ರಶಾಸ್ತು ನಃ॥"

ಎಂಬುದು ಅಭಿಷೇಕದ ಭರತವಾಕ್ಯವಾದ—

"ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ"

ಎಂಬುದನ್ನು ಅಚ್ಚಳಿಯದೆ ಹೋಲುವುದು. ಇದರಿಂದ ಈ ಎರಡು ನಾಟಕಗಳನ್ನು ಒಬ್ಬನೇ ಬರೆದುದೆನಬೇಕಾಗುವುದು.

ಅವಿಮಾರಕ ಮತ್ತು ಚಾರುದತ್ತ:— ಚಾರುದತ್ತದ ಒಂದನೇ ಅಂಕ ೧೩ನೆಯ ಶ್ಲೋಕವಾದ—

ಪರಿಚಿತತಿಮಿರಾ ಮೇ ಶೀಲದೋಷೇಣ ರಾತ್ರಿ
ರ್ಬಹುಲತಿಮಿರಕಾಲಾಸ್ತೀರ್ಣಪೂರ್ವಾವಿಘಟ್ಟಾಃ।
ಯುವತಿಜನಸಮಕ್ಷಂ ಕಾಮಮೇತನ್ನವಾಚ್ಯಂ
ವಿಪಣಿಷು ಹತಶೇಷಾ ರಕ್ಷಿಣಃ ಸಾಕ್ಷಿಣೋ ಮೇ ॥

ಎಂಬುದು ಅವಿಮಾರಕದ ಮೂರನೆಯ ಶ್ಲೋಕವಾದ—

ನಗರಪರಿಚಿತೋಽಹಂ ರಕ್ಷಿಣೋ ವಾತಸಾರಾಃ
ತಿಮಿರಗಹನಭೀಮಂ ವರ್ತತೇ ಚಾರ್ಧರಾತ್ರಂ ॥

ಎಂಬುದನ್ನು ಹೋಲುವುದು.

ಬಾಲಚರಿತ ಮತ್ತು ಪಾಂಚರಾತ್ರ:—ಪಾಂಚರಾತ್ರದ ಎರಡನೆಯ ಅಂಕದ

(ತತಃ ಪ್ರವಿಶತಿ ವೃದ್ಧಗೋಪಾಲಕಃ)

..... ವೃಷಭದತ್ತ, ಕುಂಭದತ್ತ, ಮಹಿಷದತ್ತ, ಆಗಚ್ಛತಾಗಚ್ಛತ ಶೀಘ್ರಂ (ತತಃ ಪ್ರವಿಶಂತಿ ಸರ್ವೇ)

ಸರ್ವೇ— ಮಾತುಲ ವಂದಾಮಹೇ।

ವೃದ್ಧಗೋಪಾಲಕಃ—ಶಾಂತಿರ್ಭವತು ಶಾಂತಿರ್ಭವತು! ಅಸ್ಮಾಕಂ ಗೋಧನಸ್ಯ ತಾವತೀಂ ವೇಲಾಂ ಗಾಯಂತೋ ನೃತ್ಯಂತೋ ಭವಾಮಃ।

ಎಂಬುದು ಬಾಲಚರಿತದ ಮೂರನೇ ಅಂಕದ ಮೊದಲನೆಯ ನೋಟವಾದ—

(ತತಃ ಪ್ರವಿಶತಿ ವೃದ್ಧಗೋಪಾಲಕಃ)

ಭೋ ಮೇಘದತ್ತ, ಖಲು ವೃಷಭದತ್ತ ಖಲು ಕುಂಭದತ್ತ....

(ಉಪಸೃತ್ಯ) ಮಾತುಲ ವಂದೇ।

ವೃದ್ಧಗೋಪಾಲಕಃ— ಶಾಂತಿರ್ಭವತು ಅಸ್ಮಾಕಂ ಗೋಧನಸ್ಯ ನಾಮುಕಃ.... ಮಾತುಲ!.... ಅದ್ಯ ಭರ್ತೃದಾಮೋದರೋಽಸ್ಮಿನ್ ವೃಂದಾವನೇ ಗೋಪಕನ್ಯಕಾಭಿಸ್ಸಹ ಹಲ್ಲೀಶಕಂ ನಾಮ ಪ್ರಕ್ರೀಡಿತುಮಾಗಚ್ಛತಿ।

ವೃದ್ಧಗೋಪಾಲಕಃ— ತೇ ಸಹಿ ಸರ್ವೈರ್ಗೋಪಜನ್ಯೈಃ ಭರ್ತ್ರು
ದಾಮೋದರಸ್ಯ ಹಲ್ಲೀಶಕಂ ಪ್ರೇಕ್ಷಾಮಹೇ।

(ಪ್ರಾಕೃತಕ್ಕೆ ಛಾಯೆಯಾದಲ್ಲಿ ಹೇಳಲ್ಪಟ್ಟಿದೆ) ಎಂಬುದನ್ನು ಹೋಲುವುದು.

ಬಾಲಚರಿತದ ಎರಡು ಮತ್ತು ಮೂರನೆಯ ಅಂಕಗಳಲ್ಲಿ ಕಂಡುಬರುವ–

ಗಿರಿತಟಕಠಿನಾಂಸಾವೇವ ಬಾಹೂ ಮಮೈತೌ
ಪ್ರಹರಣಮಪರಂ ತು ತ್ವಾದೃಶಾಂ ದುರ್ಬಲಾನಾಂ ।
ಶ್ರಯ ಮಮ ಭುಜದಂಡೈಃ ಪೀಡ್ಯಮಾನಶ್ಚ ಶೀಘ್ರಂ
ಯದಿ ನ ಪತಸಿ ಭೂಮೌ ನಾಸ್ಮಿ ದಾಮೋದರೋಽಹಂ ॥

ಎಂಬುದರ ಅಭಿಪ್ರಾಯವು ಪಾಂಚರಾತ್ರದ ಎರಡನೇ ಅಂಕದ ಐವತ್ತೈದನೆಯ ಶ್ಲೋಕವಾದ—

ಸಹಜೌ ಮೇ ಪ್ರಹರಣಂ ಭುಜೌ ಪೀನಾಂಸಕೋಮಲೌ ।
ತಾವಾಶ್ರಿತ್ಯ ಪ್ರಯುಧ್ಯೇಯಂ ದುರ್ಬಲೈರ್ಗೃಹ್ಯತೇ ಧನುಃ ॥

ಎಂಬುದನ್ನು ಹೋಲುವುದು.

ಪಾಂಚರಾತ್ರ ಮತ್ತು ಮಧ್ಯಮವ್ಯಾಯೋಗ:— ಪಾಂಚರಾತ್ರದ ಮೇಲಿನ ಶ್ಲೋಕವು ಮಧ್ಯಮವ್ಯಾಯೋಗದ ೪೨ನೆಯ ಶ್ಲೋಕವಾದ—

ಕಾಂಚನಸ್ತಂಭಸದೃಶೋ ರಿಪೂಣಾಂ ನಿಗ್ರಹೇ ತತಃ।
ಅಯಂ ತು ದಕ್ಷಿಣೋ ಬಾಹುರಾಯುಧಂ ಸದೃಶಂ ಮಮ ॥

ಎಂಬುದರ ಅಭಿಪ್ರಾಯಕ್ಕೆ ಸರಿಹೋಗುವುದು. ಈ ಕಾರಣಗಳಿಂದ ಪಾಂಚರಾತ್ರ, ಮಧ್ಯಮವ್ಯಾಯೋಗ, ಬಾಲಚರಿತ ಇವುಗಳ ಕರ್ತನು ಒಬ್ಬನೇ ಆಗಿರಬೇಕೆಂಬುದು ಸ್ಪಷ್ಟವಾಗುವುದು.

ಬಾಲಚರಿತ, ದೂತವಾಕ್ಯ ಮತ್ತು ಸ್ವಪ್ನನಾಟಕ:—ಬಾಲಚರಿತ ಮತ್ತು ದೂತವಾಕ್ಯದ ಭರತವಾಕ್ಯಗಳು ಸ್ವಪ್ನನಾಟಕದ ಭರತವಾಕ್ಯವನ್ನೇ ಹೋಲುವುವು.

ಅಭಿಷೇಕ ಮತ್ತು ಊರುಭಂಗ:— ಅಭಿಷೇಕದ ಒಂದನೆಯ ಅಂಕದ ವಾಲಿಯ ಭಾಷಣವಾದ—

ವಾಲೀ (ಆಚಮ್ಯ) ಪರಿತ್ಯಜಂತೀವ ಮಾಂ ಪ್ರಾಣಾಃ। ಇಮಾ ಗಂಗಾಪ್ರಭೃತಯೋ ಮಹಾನದ್ಯ, ಏತಾ ಊರ್ವಶ್ಯಾದಯೋಽಪ್ಸರಸೋ ಮಾಮಭಿಗತಾಃ ಏಷ ಸಹಸ್ರಹಂಸಪ್ರಯುಕ್ತೋ ವೀರವಾಹೀ ವಿಮಾನಃ ಕಾಲೇನ ಪ್ರೇಷಿತೋ ಮಾಂ ನೇತುಮಾಗತಃ। ಭವತು ಅಯಮಯಮಾಗಚ್ಛಾಮಿ (ಸ್ವರ್ಗಂ ಗತಃ)

ಎಂಬುದನ್ನು ಊರುಭಂಗದ—

ರಾಜಾ.... ಪರಿತ್ಯಜಂತಿ ಮೆ ಪ್ರಾಣಾಃ ..... ಇಮಾ ಊರ್ವ ಶ್ಯಾದಯೋಽಪ್ಸರಸೋ ಮಾಮುಭಿಗತಾಃ। ಇಮೇ ಮೂರ್ತಿ ಮಂತೋ ಮಹಾರ್ಣವಾಃ ಏತಾ ಗಂಗಾಪ್ರಭೃತಯೋ ಮಹಾ ನದ್ಯಃ ಏಷ ಸಹಸ್ರಹಂಸಪ್ರಯುಕ್ತೋ ಮಾಂ ನೇತುಂ ವೀರ ವಾಹೀ ವಿಮಾನಃ ಕಾಲೇನ ಪ್ರೇಷಿತಃ। ಅಯಮಯಮಾ ಗಚ್ಛಾಮಿ

(ಸ್ವರ್ಗಂ ಗತಃ)

ಎಂಬುದರೊಡನೆ ಹೋಲಿಸಿ ನೋಡಿದರೆ ಇವೆರಡರ ಕರ್ತನೂ ಒಬ್ಬನೇ ಎಂದು ತಿಳಿಯಬರುತ್ತದೆ.

ಭವಂತ್ವರಜಸಾ ಗಾವಃ ಪರಚಕ್ರಂ ಪ್ರಶಾಮ್ಯತು।
ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ ॥

ಎಂಬ ಭರತವಾಕ್ಯವು ಅಭಿಷೇಕ, ಪ್ರತಿಜ್ಞಾ ಮತ್ತು ಅವಿಮಾರಕಗಳಲ್ಲಿ ಒಂದೇ ಆಗಿರುವುದು.

ಅಭಿಷೇಕ ಮತ್ತು ಪ್ರತಿಮಾನಾಟಕಗಳು:— ಅಭಿಷೇಕದ ೬ನೆಯ ಅಂಕದ ೧೩ನೆಯ ಶ್ಲೋಕವಾದ—

ಹಾ! ವತ್ಸ ಸರ್ವಜಗತಾಂ ಜ್ವರಕೃತ್ ಕೃತಾಸು
ಹಾ! ವತ್ಸ ವಾಸವಜಿದಾನತವೈರಿಚಕ್ರ ।
ಹಾ! ವತ್ಸ ವೀರಗುರುವತ್ಸಲಯುದ್ಧಶೌಂಡ
ಹಾ! ವತ್ಸ ಮಾಮಿಹ ವಿಹಾಯ ಗತೋಽಸಿ ಕಸ್ಮಾತ್ ॥

ಎಂಬುದು ಪ್ರತಿಮಾನಾಟಕದ ಎರಡನೆಯ ಅಂಕದ ೪ನೆಯ ಶ್ಲೋಕವಾದ—

ಹಾ! ವತ್ಸ ರಾಮ ಜಗತಾಂ ನಯನಾಭಿರಾಮ
ಹಾ! ವತ್ಸ ಲಕ್ಷ್ಮಣ ಸಲಕ್ಷಣ ಸರ್ವಗಾತ್ರ ।
ಹಾ! ಸಾಧ್ವಿ ಮೈಥಿಲಿ ಪತಿಸ್ಥಿತಚಿತ್ತವೃತ್ತೇ
ಹಾ! ಹಾ! ಗತಾಃ ಕಿಲ ವನಂ ಬತ ಮೇ ತನೂಜಾಃ ॥

ಎಂಬುದಕ್ಕೆ ಸರಿಹೋಗುವುದು. ಆದುದರಿಂದ ಇವುಗಳೆಲ್ಲವನ್ನೂ ಬರೆದವನು ಒಬ್ಬನೇ ಎಂದು ಸ್ಪಷ್ಟವಾಗುವುದು.

ಭಾಸನೆಂಬ ಅತ್ಯಂತ ಪ್ರಾಚೀನ ಕವಿಯೊಬ್ಬನು ಇದ್ದುದಾಗಿಯೂ ಅವನು ಸ್ವಪ್ನವಾಸವದತ್ತಾ ಎಂಬ ನಾಟಕವನ್ನು ಬರೆದುದಾಗಿಯೂ, ಅದನ್ನು ಭಾಮಹ, ವಾಮನ, ಅಭಿನವಗುಪ್ತ, ಭೋಜನೇ ಮೊದಲಾದ ಅನೇಕ

ಲಾಕ್ಷಣಿಕರು ಉದಹರಿಸಿಕೊಂಡಿರುವುದಾಗಿಯೂ ಅನೇಕಗ್ರಂಥಗಳಿಂದ ಸ್ಪಷ್ಟ ಪಡುತ್ತದೆ.

ಕ್ರಿಸ್ತಪೂರ್ವದವನಾದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿರುವ (೧–೧೦)

ನವಂ ಶರಾವಂ ಸಲಿಲೈಃ ಸುಪೂರ್ಣಂ
ಸುಸಂಸ್ಕೃತಂ ದರ್ಭಕೃತೋತ್ತರೀಯಂ ।
ತತ್ತಸ್ಯ ಮಾಭೂನ್ನರಕಂ ಸ ಗಚ್ಛೇತ್
ಯೋ ಭರ್ತೃಪಿಂಡಸ್ಯ ಕೃತೇ ನ ಯುಧ್ಯೇತ್ ॥

ಎಂಬ ಶ್ಲೋಕವು ತ್ರಿವೇಂಡ್ರಂನಾಟಕಗಳಲ್ಲಿ ಒಂದಾದ ಪ್ರತಿಜ್ಞಾಯೌಗಂಧರಾಯಣದ ೪ ನೆಯ ಅಂಕದಲ್ಲಿ ಕಂಡುಬರುತ್ತದೆ. ಇದನ್ನು ಭಾಸನದೆಂದು ಕೌಟಿಲ್ಯನು ಉದಹರಿಸಿಕೊಂಡಿರುವುದಾಗಿ ಎಂ. ಗಣಪತಿಶಾಸ್ತ್ರಿಗಳವರು ಹೇಳುವರು. ಹಾಗೆ ಹೇಳಲು ಅರ್ಥಶಾಸ್ತ್ರದಲ್ಲಿ ಯಾವ ಆಧಾರವೂ ಇಲ್ಲ. ಅಲ್ಲದೆ ಮತ್ತೊಂದುಕಡೆ * ಪ್ರಕಟಿಸಲ್ಪಟ್ಟಿರುವ ಅರ್ಥಶಾಸ್ತ್ರದ ವ್ಯಾಖ್ಯಾನವಾದ ನ್ಯಾಯಚಂದ್ರಿಕೆಯಿಂದ ಈ ಶ್ಲೋಕವೂ ಮತ್ತು ಅದರ ಹಿಂದಣದಾದ (ಯಾನ್ ಯಜ್ಞಸಂಘೈಃ) ಎಂಬ ಶ್ಲೋಕವೂ ಪುರಾಣಗಳಲ್ಲಿ ಮನುವು ಹೇಳಿದುದಾಗಿ ತಿಳಿಯಬರುತ್ತದೆ. ಲಾಕ್ಷಣಿಕರು ಉದಹರಿಸಿಕೊಂಡಿರುವ ಮತ್ತು ಸುಭಾಷಿತಾವಳಿಗಳಲ್ಲಿ ಉದಾಹೃತವಾಗಿರುವ ಭಾಸನ ಸ್ವಪ್ನವಾಸವದತ್ತೆಯ ಶ್ಲೋಕಗಳಾವುವೂ ತ್ರಿವೇಂಡ್ರಂನಾಟಕಗಳಲ್ಲೊಂದಾದ ಸ್ವಪ್ನವಾಸವದತ್ತಾದಲ್ಲಿ ಕಂಡುಬಾರದಿರುವುದರಿಂದ ಭಾಸಕೃತಸ್ವಪ್ನವಾಸವದತ್ತೆಯು ಇದರಿಂದ ಭಿನ್ನವಾಗಿರಬೇಕೆಂತಲೂ ತ್ರಿವೇಂಡ್ರಂ ಸ್ವಪ್ನವಾಸವದತ್ತಾಕಾರನು ಯಾವನೋ ಅನ್ಯನಾಗಿರಬೇಕೆಂತಲೂ ಬೋಧೆಯಾಗುವುದು.

ಎಂ. ಗಣಪತಿಶಾಸ್ತ್ರಿಗಳು ಪ್ರಚುರಗೊಳಿಸಿರುವ ಹದಿಮೂರು ನಾಟಕಗಳೂ ಭಾಸನದೆಂಬುದಕ್ಕೆ ಕೆಳಗಿನ ಆಧಾರಗಳನ್ನು ಕೊಟ್ಟಿರುವರು.

೧. ಭಾಸನ ಸ್ವಪ್ನವಾಸವದತ್ತಾದಲ್ಲಿರುವಂತೆ ಪ್ರತಿನಾಟಕದ ಪ್ರಾರಂಭದಲ್ಲಿಯೂ (ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ) ಎಂದಿರುವುದರಿಂದಲೂ,

೨. ಭಾಷೆ, ಶೈಲಿ–ಮೊದಲಾದವು ಒಂದನ್ನೊಂದು ಹೋಲುವುದರಿಂದಲೂ,

೩. ಕೆಲವುಗಳಲ್ಲಿ 'ಪ್ರಸ್ತಾವನಾ' ಎಂಬುದಕ್ಕೆ ಬದಲು 'ಸ್ಥಾಪನಾ' ಎಂದಿರುವುದರಿಂದಲೂ

೪. ಸ್ವಪ್ನವಾಸವದತ್ತಾ ಎಂಬುದು ಭಾಸನು ಬರೆದುದಾಗಿ ಮಹಾಕವಿಗಳೆಲ್ಲರೂ ಉದಹರಿಸಿಕೊಂಡಿರುವುದರಿಂದಲೂ ಅದು ತ್ರಿವೇಂಡ್ರಂ ನಾಟಕ

* Punjab Sanskrit Depot–Arthasastra Vol. II. P. 180.

ಗಳಲ್ಲಿ ಒಂದಾಗಿರುವುದರಿಂದಲೂ ಮತ್ತು ಕಾಳಿದಾಸಾದಿನಾಟಕಕಾರರ ಗ್ರಂಥಗಳಲ್ಲಿರುವಂತೆ ಗ್ರಂಥಕರ್ತೃಪ್ರಶಸ್ತಿಯೇ ಮೊದಲಾದವು ಈ ನಾಟಕಗಳಲ್ಲಿ ಕಂಡುಬಾರದಿರುವುದರಿಂದಲೂ ಈ ಹದಿಮೂರು ನಾಟಕಗಳೂ ಭಾಸನದೆಂದು ಒಕ್ಕಣಿಸಿರುವರು. ಇದರ ತಥ್ಯಾಂಶವನ್ನು ಕುರಿತು ಸ್ವಲ್ಪ ತಿಳಿಯಬೇಕಾಗಿರುವುದು.

೧. ಮ. ಗಣಪತಿಶಾಸ್ತ್ರಿಗಳು ಹೇಳುವಂತೆ (ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ) ಎಂಬುದನ್ನು ಪ್ರಧಾನವಾಗಿ ಇಟ್ಟುಕೊಳ್ಳುವುದಾದರೆ ಇದೇರೀತಿಯಾಗಿ ಮೇಲೆ ಹೇಳಿದ ತ್ರಿವೇಂದ್ರಂ ನಾಟಕಗಳಲ್ಲಿಯೇ ಅಲ್ಲದೆ ಮಹೇಂದ್ರವಿಕ್ರಮನ ಮತ್ತವಿಲಾಸಪ್ರಹಸನ, ಶಕ್ತಿಭದ್ರನ ಆಶ್ಚರ್ಯಚೂಡಾಮಣಿ, ನೀಲಕಂಠಕೃತಕಲ್ಯಾಣಸೌಗಂಧಿಕಾ, ಕುಲಶೇಖರವರ್ಮರಚಿತತಪತೀಸಂವರಣ ಮತ್ತು ಸುಭದ್ರಾಧನಂಜಯ, ಶೂದ್ರಕವಿರಚಿತ ಪದ್ಮಪ್ರಾಭೃತಕ, ಈಶ್ವರದತ್ತನ ಧೂರ್ತವಿಟಸಂವಾದ, ವರರುಚಿಕೃತ ಉಭಯಾಭಿಸಾರಿಕಾ, ಶ್ಯಾಮಿಲಕನ ಪಾದತಾಡಿತಕ, ಬೋಧಾಯನಕೃತ, ಭಗವದಜ್ಜುಕ ಇವೇ ಮೊದಲಾದ ದಾಕ್ಷಿಣಾತ್ಯನಾಟಕಗಳಲ್ಲಿಯೂ ಇರುವುದು. ಮತ್ತು ಪ್ರಸ್ತಾವನಾ ಎಂಬುದಕ್ಕೆ ಬದಲು ಸ್ಥಾಪನಾ ಎಂಬುದು ಮೇಲೆ ಹೇಳಲ್ಪಟ್ಟಿರುವುವುಗಳೆಲ್ಲದರಲ್ಲಿಯೂ ಏಕಪ್ರಕಾರವಾಗಿ ಕಂಡುಬರುವುದು.

೨. ಮ, ಗಣಪತಿಶಾಸ್ತ್ರಿಗಳು ಈ ಹದಿಮೂರು ನಾಟಕಗಳ ಕರ್ತೃತ್ವವು ಭಾಸನದೆಂದು ಹೇಗೆ ಹೇಳುವರೋ ಹಾಗೆಯೇ ಈ ಕೆಳಗಿನ ಆಧಾರಗಳಿಂದ ಅದನ್ನು ಶಕ್ತಿಭದ್ರನದೆಂದೂ ಹೇಳಬಹುದು.

ಶಕ್ತಿಭದ್ರನ ಆಶ್ಚರ್ಯಚೂಡಾಮಣಿಯಲ್ಲಿನ–ಅಯೇ! ಕಿನ್ನು ಖಲು ಮಯಿ ವಿಜ್ಞಾಪನವ್ಯಗ್ರೇ ಶಬ್ದ ಇವ ಶ್ರೂಯತೇ–ಎಂಬ ಪ್ರಯೋಗವು ತ್ರಿವೇಂದ್ರಂ ಒಂಭತ್ತು ನಾಟಕಗಳಲ್ಲಿಯೂ ಕಂಡುಬರುವುದು.

ಶಕ್ತಿಭದ್ರನ ಆಶ್ಚರ್ಯಚೂಡಾಮಣಿಗೂ ತ್ರಿವೇಂದ್ರಂ ನಾಟಕಗಳಲ್ಲಿ ಒಂದಾದ ಅಭಿಷೇಕನಾಟಕಕ್ಕೂ ಇರುವ ಹೋಲಿಕೆ—

(i) ಯಮವರುಣಕುಬೇರವಾಸವಾದೀ
ನಮೃತಭುಜೋ ಜಿತವಾನ್ಭವಾನಯುತ್ನಃ ॥
ಕಥಮಿಹ ಶಿಥಿಲೀಕೃತಃ ಸಮಾಧಿಃ
ಕುಸುಮಮಯೈಃ ಕುಸುಮಾಯುಧಸ್ಯ ಬಾಣೈಃ ॥
—ಆಶ್ಚರ್ಯಚೂಡಾಮಣಿ (೫–೧೩)

ಯಮವರುಣಕುಬೇರವಾಸವಾದ್ಯೈ
ಸ್ತ್ರಿದಶಗಣೈರಭಿಸಂಭೃತೋ ವಿಭಾತಿ ||
ದಶರಥವಚನಾತ್ ಕೃತಾಭಿಷೇಕ
ಸ್ತ್ರಿದಶಪತಿತ್ವಮವಾಪ್ಯ ವೃತ್ರಹೇವ ||
—(ಅಭಿಷೇಕನಾಟಕ ಪುಟ.೭೪)

(ii) ಜಯತು ಸ್ವಾಮೀ ಜಯತು ಮಹಾರಾಜಃ— (ಆಶ್ಚರ್ಯಚೂಡಾಮಣಿ) ಮತ್ತು

ಜಯತು ಕಾರಣಮಾನುಷೋ ರಾವಣಾಂತಕಃ (ಪು. ೨೨೪)

ಎಂಬವು ಅಭಿಷೇಕದ ಪು. ೭೩ ರಲ್ಲಿರುವ ವಿಚಾರವನ್ನೇ ಹೋಲುವುವು.

ಚೂಡಾಮಣಿಯ—ಅಸ್ಯಾಃ ಪತಿವ್ರತಾಯಾಶ್ಚಂಡಮನುತಿಷ್ಠ (ಪು.೨೧೯)

ಎಂಬುದು ಅಭಿಷೇಕದ ೬೯—೭೦ ನೇ ಪುಟಗಳಲ್ಲಿನ ವಿಷಯಗಳಿಗೆ ಸರಿ ಹೋಗುವುದು.

(iii) ಚೂಡಾಮಣಿಯ ೪ ನೇ ಅಂಕದಲ್ಲಿನ ರಾವಣಜಟಾಯುಯುದ್ಧದಲ್ಲಿ ಜಟಾಯು ಮರಣವು ಅಭಿಷೇಕದ ಮತ್ತು ಊರುಭಂಗದ ವಿಷಯಗಳನ್ನೇ ಹೋಲುವುವು.

(iv) ಚೂಡಾಮಣಿ, ಅಭಿಷೇಕ ಮತ್ತು ಪ್ರತಿಮಾನಾಟಕಗಳು ಅನೇಕ ಸಂದರ್ಭಗಳಲ್ಲಿ ಒಂದನ್ನೊಂದು ಹೋಲುವುವು.

(v) ಶಕ್ತಿಭದ್ರನನ್ನು ಪ್ರತಿಜ್ಞಾನಾಟಕಕಾರನೆಂದೂ ಹೇಳಬಹುದಾಗಿದೆ. ಹೇಗೆಂದರೆ ಶಕ್ತಿಭದ್ರನು ಆಶ್ಚರ್ಯಚೂಡಾಮಣಿಯ ಪ್ರಸ್ತಾವನೆಯಲ್ಲಿ ತಾನು ಉನ್ಮಾದವಾಸವದತ್ತಾಕಾರನೆಂದೂ ಹೇಳಿಕೊಂಡಿರುವನು. ಉನ್ಮಾದವಾಸವದತ್ತೆಯು ನಾಟಕವಾಗಿದ್ದು ಕಥಾವಸ್ತುವೇ ಮೊದಲಾದ ವಿಷಯಗಳಲ್ಲಿ ಪ್ರತಿಜ್ಞಾಯೌಗಂಧರಾಯಣವನ್ನು ಹೋಲುವುದಾಗಿರಬಹುದು. ಅಥವಾ ಉನ್ಮಾದವಾಸವದತ್ತೆಯು ಪ್ರತಿಜ್ಞಾನಾಟಕದ ಮತ್ತೊಂದು ಹೆಸರಾಗಿದ್ದರೂ ಇರಬಹುದು. ಮದ್ರಾಸು ಸರ್ಕಾರದ ಹಸ್ತಲಿಖಿತಗ್ರಂಥಗಳ ಕೋಶಾಗಾರ (Madras Govt. Manuscript Library) ದಲ್ಲಿರುವ ನಾಲ್ಕನೆಯ ಅಂಕದ ವರೆಗಿನ ಅಪೂರ್ಣವಾದ ವೀಣಾವಾಸವದತ್ತವು ಪ್ರತಿಜ್ಞಾನಾಟಕದ ಕಥಾವಸ್ತು, ಶೈಲಿ, ಭಾಷೆಯೇ ಮೊದಲಾದುವುಗಳನ್ನು ಹಾಗೆಹಾಗೆಯೇ ಹೋಲುವುದರಿಂದ ವೀಣಾವಾಸವದತ್ತೆಯೆಂಬುದು ಪ್ರತಿಜ್ಞಾನಾಟಕದ ಮತ್ತೊಂದು ಹೆಸರಾಗಿದ್ದರೂ ಇರಬಹುದು. ವೀಣಾವಾಸವದತ್ತಾ ಎಂದು ಅಂತಃಪತ್ರ

ಗಳಲ್ಲಿ ಎಲ್ಲಿಯೂ ಬರೆಯಲ್ಪಡದೆ ಮುಖಪತ್ರದಲ್ಲಿ ಮಾತ್ರ ಬರೆಯಲ್ಪಟ್ಟಿರುವುದು. ಇದು ಹೀಗೆಯೇ ಸರಿಯೆಂದು ಈಗ ನಮಗೆ ದೊರೆತಿರುವ ಅಲ್ಪಾಧಾರಗಳಿಂದ ಸಮರ್ಥಿಸಿ ಹೇಳಲಾಗುವುದಿಲ್ಲ.

ಈ ರೀತಿಯಾಗಿ ಪರಸ್ಪರಹೋಲಿಕೆಗಳನ್ನು ನೋಡಿ ವಿಚಾರಪರರಾಗುವೆವಾದರೂ ಶಕ್ತಿಭದ್ರನ ಕರ್ತೃತ್ವವಿಚಾರದಲ್ಲಿ ಹಿಂದೆಗೆಯಲೇ ಬೇಕಾಗುವುದು. ಹೇಗೆಂದರೆ—

೧. ತ್ರಿವೇಂದ್ರದ ಒಂಭತ್ತು ನಾಟಕಗಳನ್ನು ಶಕ್ತಿಭದ್ರನೇ ಬರೆದುದಾಗಿದ್ದರೆ ಆಶ್ಚರ್ಯಚೂಡಾಮಣಿನಾಟಕದಲ್ಲಿ ತನ್ನ ಹೆಸರನ್ನು ಹೇಳಿಕೊಂಡಿರುವಂತೆ ಅವುಗಳಲ್ಲಿಯೂ ತನ್ನಹೆಸರನ್ನು ಹೇಳಿಕೊಳ್ಳಬಹುದಾಗಿತ್ತು. ಹಾಗೆ ಎಲ್ಲಿಯೂ ಹೇಳಿಕೊಂಡಿರುವುದಿಲ್ಲ.

೨. ರಾಮಾಯಣಕಥಾಧಾರದ ಮೇಲೆ ಬರೆಯಲ್ಪಟ್ಟಿರುವ ಅಭಿಷೇಕ ಮತ್ತು ಪ್ರತಿಮಾನಾಟಕಗಳ ಶೈಲಿ, ಭಾಷೆ ಮತ್ತು ಕಥಾವಸ್ತುವೇ ಮೊದಲಾದುವು ಆಶ್ಚರ್ಯಚೂಡಾಮಣಿಯಿಂದ ತೀರ ಭಿನ್ನವಿಸಿರುವುವಲ್ಲದೆ ಆಶ್ಚರ್ಯಚೂಡಾಮಣಿಯ ಕಥಾಚತುರತೆಯು ಮುಂದೆ ಹೇಳ್ಕಂಡ ನಾಟಕಗಳು ಸಾಧಾರಣವಾದುದಾಗಿಯೇ ತೋರುವುವು.

ಸೂತ್ರಧಾರನಿಂದಾರಂಭಿಸಲ್ಪಟ್ಟುದಾದ ನಾಟಕಗಳನ್ನು ಬರೆದವರಲ್ಲಿ ಭಾಸನು ಪ್ರಾಚೀನನಾದುದರಿಂದಲೂ ಈರೀತಿ ಬರೆಯಲು ತಾನೇ ಆರಂಭಿಸಿದನಾದುದರಿಂಡಲೂ ಇವುಗಳೆಲ್ಲವೂ ಭಾಸನದಾಗಿ ಮಹಾಕವಿಬಾಣನು ಹೇಳಿರುವನೆಂದು ಡಾ. ಬ್ಯಾನರ್ಜೀಯೇ ಮೊದಲಾದವರು ಹೇಳುವರು. ಈ ವಿಚಾರವಾಗಿ ಸಾಹಿತ್ಯದರ್ಪಣಕಾರನಾದ ವಿಶ್ವನಾಥನು ಪ್ರಾಚೀನಹಸ್ತಲಿಖಿತಪ್ರತಿಗಳಲ್ಲಿ ಹಾಗೆ ಆರಂಭಿಸಲ್ಪಟ್ಟಿರುವುದೆಂದೂ ವಿಕ್ರಮೋರ್ವಶೀಯದ ಒಂದಾನೊಂದು ಪ್ರತಿಯಲ್ಲಿ—

ವೇದಾಂತೇಷು ಯಮಾಹುಃ. . . . ।

ಎಂಬ ಮಂಗಲಾಚರಣವು (ನಾಂದಿ) ನಾಂದ್ಯಂತೇ ಸೂತ್ರಧಾರಃ। ಎಂಬುದಾದ ಮೇಲೆಯೇ ಬರೆಯಲ್ಪಟ್ಟಿರುವುದೆಂದೂ ಆಗಣಕಾಲದ ಶೈಲಿಯೇ ಹಾಗೆಂದೂ ಹೇಳಿರುವನು. ಇದಲ್ಲದೆ ನಾಂದಿಯು ಅಷ್ಟು ಅವಶ್ಯಕವಾಗಿರಲೇಬೇಕೆಂಬ ನಿಯಮವೂ ಇರುವಂತೆ ತೋರುವದಿಲ್ಲ. ನಾಂದಿಯೇ ಇಲ್ಲದ ಧವಿವರ್ಮಕೃತಪ್ರದ್ಯುಮ್ನಾಭ್ಯುದಯನಾಟಕ, ತ್ರಿವೇಂದ್ರಂ ನಾಟಕಗಳಲ್ಲಿ ಒಂದಾದ

ಚಾರುದತ್ತ ಇವೇ ಮೊದಲಾದ ಅನೇಕನಾಟಕಗಳಿರುವುವು. ಮಹಾವ್ಯಾಖ್ಯಾತೃ ವಾದ ಶಿವರಾಮನು ನಾಗಾನಂದನಾಟಕಕ್ಕೆ ತಾನು ಬರೆದಿರುವ ವ್ಯಾಖ್ಯಾನ ದಲ್ಲಿ—

"ಕೇಚಿತ್ ತಾವನ್ನ್ಯತೀತ್ಯ ನಾದ್ಯಂತ ಇತ್ಯೇವಾರಂಭತೇ—।"

ಎಂದು ಸ್ಪಷ್ಟವಾಗಿ ಹೇಳಿರುವನು.

ತ್ರಿವೇಂದ್ರಂ ನಾಟಕಗಳಲ್ಲಿ ಭರತವಾಕ್ಯಗಳು ಒಂದರಂತೆ ಒಂದಿರುವುದಿಲ್ಲ. ಸ್ವಪ್ನನಾಟಕ, ಬಾಲಚರಿತಗಳಲ್ಲಿ—

ಇಮಾಂ ಸಾಗರಪರ್ಯಂತಾಂ . . . । ಎಂದೂ—

ಪ್ರತಿಜ್ಞಾ, ಅವಿಮಾರಕ, ಅಭಿಷೇಕನಾಟಕಗಳಲ್ಲಿ—

ಭವಂತ್ವರಜಸೋ ಗಾವಃ . . . . । ಎಂದೂ—

ಕೊನೆಯಲ್ಲಿ—

ಇಮಾಮಪಿ ಮಹೀಂ . . . . . । ಎಂದೂ ಹೇಳಲ್ಪಟ್ಟಿದೆ.

ಕರ್ಣಭಾರ, ದೂತವಾಕ್ಯ, ಶೂದ್ರಕನ ಪದ್ಮಪ್ರಾಭೃತಕ, ಶ್ಯಾಮಿಲಕನ ಪಾದ ತಾಡಿತಕ ಇವುಗಳಲ್ಲಿ ಭರತವಾಕ್ಯವೇ ಇರುವದಿಲ್ಲ.

ಈ ವಿಚಾರದಲ್ಲಿ ಮಿ. ಲಕ್ಷ್ಮಣಸರೂಪರವರು ಹೇಳುವುದೇನೆಂದರೆ—

೧. ಸರ್ವಾನಂದನು ತನ್ನ 'ಅಮರಟೀಕಾಸರ್ವಸ್ವ'ದಲ್ಲಿ ನಾನಾವಿಧಶೃಂಗಾರ ವನ್ನು ವಿವರಿಸುವಾಗ—

"ತ್ರಿವಿಧಃ ಶೃಂಗಾರಃ। ಧರ್ಮಾರ್ಥಕಾಮವಿಭಿನ್ನಃ। ತತ್ರಾದ್ಯೋ ಯಥಾ ನಂದಯಂತ್ಯಾಂ ಬ್ರಾಹ್ಮಣಭೋಜನಂ। ದ್ವಿತೀಯಃ ಸ್ವದಿಶ ಮಾತ್ಮಸಾತ್ಕರ್ತುಮುದಯನಸ್ಯ ಪದ್ಮಾವತೀಪರಿಣಯೋಽರ್ಥ- ಶೃಂಗಾರಃ। ತೃತೀಯಃ ಸ್ವಪ್ನವಾಸವದತ್ತೇ ತಸ್ಯೈವ ವಾಸವದತ್ತಾ ಪರಿಣಯಃ ಕಾಮಶೃಂಗಾರಃ ।"

ಎಂದು ಹೇಳಿರುವನು.

ಸರ್ವಾನಂದನ ಅಭಿಮತದಂತೆ ಸ್ವಪ್ನವಾಸವದತ್ತೆಯು ಉದಯನವಾಸವ ದತ್ತೆಯರ ವಿವಾಹವಾಗಿರಬೇಕೆಂದು ಬೋಧೆಯಾಗುವುದರಿಂದಲೂ, ತ್ರಿವೇಂ ದ್ರಂ ಸ್ವಪ್ನವಾಸವದತ್ತೆಯು ಉದಯನ ಮತ್ತು ಪದ್ಮಾವತಿಯರ ಪರಿಣಯವಾ ಗಿರುವುದರಿಂದಲೂ, ಇದು ಸರ್ವಾನಂದನು ಹೇಳಿರುವ ವಾಸವದತ್ತೆಯಲ್ಲವೆಂದೂ ಸ್ಪಷ್ಟಪಡುವುದು. ಸರ್ವಾನಂದನು ತ್ರಿವಿಧಶೃಂಗಾರವನ್ನು ಹೇಳಲು ಮೂರು ನಾಟಕಗಳನ್ನೇ ಉದಹರಿಸಿಕೊಂಡಿರುವನೆಂದು ನಾವು ಭಾವಿಸಬಹುದು. ಮೊದ

ಲನೆಯ ಧರ್ಮಶೃಂಗಾರಕ್ಕೆ "ನಂದಯಂತೀ" ಎಂಬ ನಾಟಕವನ್ನು ಉದಹರಿಸಿ ರುವನು. ಇದು ಯಾವುದೆಂಬುದು ತಿಳಿಯದು. ಎರಡನೆಯ ಅರ್ಥಶೃಂಗಾರಕ್ಕೆ ಯಾವುದನ್ನೂ ಉದಹರಿಸಿಲ್ಲವಾದುದರಿಂದ ಸರ್ವಾನಂದನ ಹೇಳಿಕೆಯು ಪೂರ್ಣ ವಾದಂತೆ ಕಾಣುವುದಿಲ್ಲ. ಮೂರನೆಯ ಕಾಮಶೃಂಗಾರಕ್ಕೆ ಸ್ವಪ್ನವಾಸವ ದತ್ತಾನಾಟಕವನ್ನುದಹರಿಸಿರುವನು. ಆದರೆ ಉದಯನನ ಕಥೆಗಳಲ್ಲೆಲ್ಲಿಯೂ ಪದ್ಮಾವತೀಪರಿಣಯವು (ಸ್ವದಿಶವಾತ್ಮಾಸಾತ್ಕರ್ತುಂ) ಉದ್ದೇಶವಾಗಿರುವಂತೆ ಕಂಡುಬಾರದಿರುವುದರಿಂದಲೂ, ಈಗಿನ ತ್ರಿವೇಂದ್ರಂ ಸ್ವಪ್ನವಾಸವದತ್ತೆಯ ಲ್ಲಿಯೇ ಅದು ಕಾಣಬರುವುದರಿಂದಲೂ, ಸರ್ವಾನಂದನ ಎರಡನೆಯ ಶೃಂಗಾರದ ಉದಾಹರಣವು ಈ ಸ್ವಪ್ನವಾಸವದತ್ತೆಯೇ ಆಗಿರಬೇಕು. ಮತ್ತು ಸ್ವಪ್ನ ವಾಸವದತ್ತೆಯ ಆರನೆಯ ಅಂಕದಲ್ಲಿನ ವಸುಂಧರಾದಾಸಿಯ ವಾಕ್ಯಗಳಿಂದ ಉದಯನವಾಸವದತ್ತೆಯರ ಕಾಮಶೃಂಗಾರಪರಿಣಯವು ಸೂಚಿತವಾಗಿರು ವುದರಿಂದ ಸರ್ವಾನಂದನ ಮೂರನೆಯ ಶೃಂಗಾರದ ಉದಾಹರಣವೂ ಈ ಸ್ವಪ್ನ ವಾಸವದತ್ತಾನಾಟಕವೇ ಆಗಿರಬೇಕು. ಹೀಗೆ ಈ ಸ್ವಪ್ನವಾಸವದತ್ತೆಯೇ ಎರಡು ಮತ್ತು ಮೂರನೆಯ ಶೃಂಗಾರಗಳಿಗೂ ಉದಾಹರಣೆಯಾಗಿ ಸರ್ವಾ ನಂದನ ಹೇಳಿಕೆಯು ಪೂರ್ಣವಾಗಿರುವುದು. ಈ ಕಾರಣದಿಂದ ಸರ್ವಾನಂದನ ಹೇಳಿಕೆಯು ಈ ಎರಡು ಸ್ವಪ್ನವಾಸವದತ್ತೆಗಳೂ ಒಂದೇ ಎಂದು ಹೇಳುವಂತೆ ಗೊತ್ತಾಗುವುದು.

೨. ಧ್ವನ್ಯಾಲೋಕಲೋಚನಕಾರನಾದ ಅಭಿನವಗುಪ್ತಾಚಾರ್ಯನು—

ಯಥಾ ಸ್ವಪ್ನವಾಸವದತ್ತಾಖ್ಯೇ ನಾಟಕೇ ।

**ಸಂಚಿತಪಕ್ಷ್ಮಕವಾಟಂ . . . ಇತ್ಯಾದಿ**

ಈ ಶ್ಲೋಕವನ್ನು ಸ್ವಪ್ನವಾಸವದತ್ತಾನಾಟಕದ್ದೆಂದು ಸ್ಪಷ್ಟವಾಗಿ ಹೇಳಿ ರುವನು. ಆದರೆ ತ್ರಿವೇಂದ್ರಂನಾಟಕದಲ್ಲಿ ಈ ಶ್ಲೋಕವು ಕಂಡುಬರುವುದಿಲ್ಲ ವಾದುದರಿಂದ, ಈ ನಾಟಕವು ಅಭಿನವಗುಪ್ತಾಚಾರ್ಯನು ಹೇಳುವ ಗ್ರಂಥ ವಲ್ಲವೆಂದು ಆಕ್ಷೇಪಣೆ. ಆದರೆ ಗ್ರಂಥಗಳಿಗೆ ಅನೇಕಪಾಠಾಂತರಗಳಿರುವುದು ಆಶ್ಚರ್ಯವಲ್ಲ; ಹೊಸದೂ ಅಲ್ಲ. ಉದಾಹರಣೆಗಾಗಿ ಶಾಕುಂತಲನಾಟಕಕ್ಕೆ ನಾನಾವಿಧ ಪಾಠಾಂತರಗಳಿರುವುದು ಎಲ್ಲರಿಗೂ ತಿಳಿದ ವಿಚಾರವೇ. ಆದುದ ರಿಂದ ಅಭಿನವಗುಪ್ತಾಚಾರ್ಯನು ಉದಹರಿಸಿರುವ ಶ್ಲೋಕವು ತ್ರಿವೇಂದ್ರಂ ಸಂಚಿಕೆಯಲ್ಲಿ ಕಾಣದಿರುವುದು ಯಾವವಿಧದಲ್ಲಿಯೂ ಬಾಧಕವಾಗದು.

೩. ರಾಮಚಂದ್ರಗುಣಚಂದ್ರನು ತನ್ನ 'ನಾಟ್ಯದರ್ಪಣ'ದಲ್ಲಿ—

"ಯಥಾ ಭಾಸಕೃತೇ ಸ್ವಪ್ನವಾಸವದತ್ತೇ ಶೇಫಾಲಿಕಾಮಂಡಪ-

-ಶಿಲಾತಲಮವಲೋಕ್ಯ ವತ್ಸರಾಜಃ—

ಪಾದಾಕ್ರಾಂತಾನಿ ಪುಷ್ಪಾಣಿ ಸೋಷ್ಮ ಚೇದಂ ಶಿಲಾಸನಂ ।
ನೂನಂ ಕಾಚಿದಿಹಾಸೀನಾ ಮಾಂ ದೃಷ್ಟ್ವಾ ಸಹಸಾ ಗತಾ ॥

ಎಂದು ಹೇಳಿರುವುದರಿಂದ ಭಾಸನು ಸ್ವಪ್ನವಾಸವದತ್ತೆಯೆಂಬ ಗ್ರಂಥವನ್ನು ಬರೆದಿರುವುದಾಗಿಯೂ, ಮೇಲಿನ ಶ್ಲೋಕವು ಅದರಿಂದ ಉದಾಹೃತವಾಗಿರುವುದೆಂದೂ ತಿಳಿಯಬರುತ್ತದೆ. ಈ ಶ್ಲೋಕವು ತ್ರಿವೇಂದ್ರಂ ಸ್ವಪ್ನವಾಸವದತ್ತಾ ನಾಟಕದಲ್ಲಿ ಕಂಡುಬಾರದುದಾಗಿ ಈ ನಾಟಕವು ಭಾಸನದಲ್ಲವೆಂದು ಪ್ರೊ. ಸಿಲ್ವೈನ್ ಲೆವಿಯವರು ಹೇಳುವರು. ಈ ಶ್ಲೋಕವು ಈ ನಾಟಕದಲ್ಲಿ ಕಾಣಬಾರದಿರುವುದಾದರೂ ಇದರ ಅಭಿಪ್ರಾಯವು ರಾಜಾ—ವಿದೂಷಕರ ಆಲಾಪಗಳಲ್ಲಿ ಅಭಿವ್ಯಕ್ತವಾಗಿರುವುದರಿಂದ ಈ ಆಕ್ಷೇಪಣೆಯೂ ಕರ್ತೃತ್ವದ ವಿಚಾರದಲ್ಲಿ ಯಾವ ಅಡ್ಡಿಯನ್ನೂ ಉಂಟುಮಾಡಲಾರದು.

೪. ಇದರ ಮೇಲೆ ತ್ರಿವೇಂದ್ರಂ ಸ್ವಪ್ನವಾಸವದತ್ತೆಯೇ ನಿಜವಾದ, ಸರಿಯಾದ ಭಾಸನ ನಾಟಕವೆಂದು ನಂಬಲು ಬೇಕಾದ ಆಧಾರವಿರುವುದು. ಶಾರದಾತನಯನ ಭಾವಪ್ರಕಾಶದ ಅಷ್ಟಮಾಧಿಕಾರದಲ್ಲಿರುವ—

"ಸ್ವಪ್ನವಾಸವದತ್ತಾಖ್ಯಮುದಾಹರಣಮತ್ರ ತು ।
ಆಚ್ಛಿದ್ಯ ಭೂಪಾತ್ ವ್ಯಸನಾತ್ ದೇವೀ ಮಾಮಧಿಕಾಕರೇ ॥

ನ್ಯಸ್ತಾ . . . . . . . .

"ಪದ್ಮಾವತ್ಯಾ ಮುಖಂ ವೀಕ್ಷ್ಯ ವಿಶೇಷಕವಿಭೂಷಿತಂ ।
ಜೀವತ್ಯಾವಂತಿಕೇತ್ಯೇತತ್ ಜ್ಞಾತಂ ಭೂಮಿಭುಜಾ ಯಥಾ ॥
.... .... .... .... .... .... "

ಅತ್ರೋದಾಹರಣಂ।

ಚಿರಪ್ರಸುಪ್ತಃ ಕಾಮೋ ಮೇ ವೀಣಯಾ ಪ್ರತಿಬೋಧಿತಃ।
ತಾಂ ತು ದೇವೀಂ ನ ಪಶ್ಯಾಮಿ ಯಸ್ಯಾ ಘೋಷವತೀ ಪ್ರಿಯಾ ॥

ಈ ಶ್ಲೋಕಗಳನ್ನು ಮ॥ ಗಣಪತಿಶಾಸ್ತ್ರಿಗಳವರು ಕಂಡುಹಿಡಿದು ಏಷ್ಯಾಟಿಕ್ ಸೊಸೈಟಿಯ ಸಂಚಿಕೆ (Journal of Royal Asiatic Society) ಯಲ್ಲಿ ಪ್ರಕಾಶಪಡಿಸಿದರು. ಇವುಗಳಲ್ಲಿ ೧ನೆಯ ಶ್ಲೋಕವು ಪ್ರಥಮಾಂಕದ ವಿಷಯವನ್ನೂ ೨ನೆಯದು ೬ನೆಯ ಅಂಕದ ವಿಷಯವನ್ನೂ ಹೇಳುವುವಾಗಿ ತೋರುವುದು. ಆದಕಾರಣ ಶಾರದಾತನಯನು ಈ ತ್ರಿವೇಂದ್ರಂಸ್ವಪ್ನನಾಟಕದ ಪರಿಚಯಸ್ಥನಾಗಿರಬೇಕೆಂದೇ ಬೋಧೆಯಾಗುವುದು.

ಇಲ್ಲಿಗೆ ಎಂ. ಲಕ್ಷ್ಮಣಸರೂಪ್‌ರವರ ಹೇಳಿಕೆಯು ಮುಗಿದುದು.

೧. ಸರ್ವಾನಂದನು ತ್ರಿವಿಧಶೃಂಗಾರಗಳನ್ನು ಉದಾಹರಿಸಲು ನಾಟಕಗಳನ್ನೇ ಉದಾಹರಿಸಿರುವನೆಂಬುದಕ್ಕೆ ಯಾವ ಆಧಾರವೂ ಇಲ್ಲ. 'ನಂದಯಂತೀ'— ಎಂಬುದು ನಾಟಕವೆಂದೇ ಹೇಳುವುದೆಂತು? ಅರ್ಥಶೃಂಗಾರಕ್ಕೆ ಸರ್ವಾನಂದನು ಉದಾಹರಣೆಯನ್ನೇ ಹೇಳಿಲ್ಲವೆಂದೂ ಆದರಿಂದ ಆವನ ಹೇಳಿಕೆಯು ಅಸಂಪೂರ್ಣವಾಗಿದೆಯೆಂದೂ ವಿ. ಲಕ್ಷ್ಮಣಸರೂಪ್‌ರವರು ಹೇಳಿರುವರು. ಸರ್ವಾನಂದನು ಎರಡನೆಯ ಅಲಂಕಾರಕ್ಕೆ ಉದಯನಪದ್ಮಾವತೀಪರಿಣಯವನ್ನು ಉದಹರಿಸಿರುವನು. ಇದು ಒಂದು ನಾಟಕವಾಗಿರಬೇಕೆಂಬ ಯಾವ ನಿಯಮವೂ ಕಾಣಬರುವುದಿಲ್ಲ. ಉದಯನನ ಕಥೆಗಳು ನಾನಾವಿಧವಾಗಿರುವುದರಿಂದ ಆ ಒಂದು ಕಥೆಯನ್ನು ಈ ಶೃಂಗಾರಕ್ಕಾಗಿ ಉದಾಹರಿಸಿರಬಹುದು. ಇದಲ್ಲದೆ—

ಅರ್ಥಶೃಂಗಾರಕ್ಕೆ ತ್ರಿವೇಂದ್ರಂ ಸ್ವಪ್ನನಾಟಕವೇ* ಉದಾಹರಣವೆಂದೂ, ಕಾಮಶೃಂಗಾರಕ್ಕೆ ಇದೇ ನಾಟಕದಲ್ಲಿ ಬರುವ ಯಾವಳೋ ಓರ್ವ ದಾಸಿಯು ಹೇಳಿರುವ ಕೆಲವು ವಾಕ್ಯಗಳೇ ಉದಾಹರಣೆಯೆಂದೂ, ಈ ರೀತಿಯಲ್ಲಿ ಈ ನಾಟಕವೊಂದೇ ಈ ಎರಡುವಿಧ ಶೃಂಗಾರಕ್ಕೂ ಉಧಾಹರಣೆಯೆಂದೂ ಹೇಳಿರುವರು. ಆದರೆ ಸರ್ವಾನಂದನು 'ತೃತೀಯಃ ಸ್ವಪ್ನವಾಸವದತ್ತೆ ತಸ್ಯೈವ' (ಉದಯನಸ್ಯೈವ) . . ಎಂದು ಮೂರನೆಯ ಶೃಂಗಾರಕ್ಕೆ ಉದಾಹರಿಸುವಾಗ ಸ್ವಪ್ನವಾಸವದತ್ತೆಯನ್ನು ಹೇಳಿರುವನು. ವಿ॥ ಸರೂಪರವರ ಅಭಿಪ್ರಾಯದಂತೆ ಎರಡನೆಯದಕ್ಕೂ ಇದೇ ಉದಾಹರಣೆಯಾಗಿರುವಪಕ್ಷದಲ್ಲಿ ಸ್ವಪ್ನವಾಸವದತ್ತಾ ಹೆಸರನ್ನು ಅಲ್ಲಿಯೇ ಹೇಳಿ 'ತಸ್ಯೈವ' ಎಂದು ಹಿಂದೆ ಹೇಳಿದ ಉದಯನನ ಹೆಸರನ್ನು ಸರ್ವನಾಮಶಬ್ದದಿಂದ ನಿರ್ದೇಶಿಸಿದಂತೆ, ಪುನಃ 'ತಸ್ಯಾಮೇವ' ಎಂದು ಇದನ್ನೂ ನಿರ್ದೇಶಿಸಬಹುದಾಗಿತ್ತು. ಆದಕಾರಣ ಎರಡನೆಯ ಶೃಂಗಾರದ ಉದಾಹರಣೆಯು ಕೇವಲ ಉದಯನ ಪದ್ಮಾವತೀಪರಿಣಯಾತ್ಮಕಕಥಾ ವಿಶೇಷಕ್ಕೆ ಮಾತ್ರವೆ ಸಂಬಂಧಿಸುವುದೆಂದೂ, ಸ್ವಪ್ನವಾಸವದತ್ತೆಯು ಮೂರನೆಯ ಶೃಂಗಾರಕ್ಕೆ ಉದಾಹರಣವೆಂದೂ ಸ್ಪಷ್ಟವಾಗುವುದು. ಆದರೆ ಈಗಿನ ಸ್ವಪ್ನವಾಸವದತ್ತೆಯು ಅರ್ಥಶೃಂಗಾರವೇ ಹೊರತು ಕಾಮಶೃಂಗಾರವಲ್ಲವೆಂದರೆ, ನ್ಯಾಯವೇ ! ಸರ್ವಾನಂದನು ಉದಾಹರಿಸುವ ಸ್ವಪ್ನವಾಸವದತ್ತೆಯು ಈ ಸ್ವಪ್ನನಾಟಕವೇ ಅಲ್ಲ ! ಅದು ಭಾಸನ ಸ್ವಪ್ನವಾಸವದತ್ತಾನಾಟಕವಾಗಿರಬಹುದು. ಆದಕಾರಣ ಈ ತ್ರಿವೇಂದ್ರಂ ಸ್ವಪ್ನನಾಟಕವು ಭಾಸನ ಸ್ವಪ್ನವಾಸವದತ್ತೆಯೆಂದು ಹೇಳಲು ಇದು ಸ್ವಲ್ಪವೂ ಆಧಾರವಾಗದು.

* ತ್ರಿವೇಂದ್ರಂ ನಾಟಕವನ್ನು 'ಸ್ವಪ್ನನಾಟಕ'ವೆಂದೂ, ಭಾಸನ ನಾಟಕವನ್ನು 'ಸ್ವಪ್ನವಾಸವದತ್ತಾನಾಟಕ'ವೆಂದೂ ಇಲ್ಲಿ ನಾವು ವ್ಯವಹರಿಸುವೆವು.

೨. ಅಭಿನವಗುಪ್ತಾಚಾರ್ಯನು ಸ್ವಪ್ನವಾಸವದತ್ತೆಯದೆಂದು ಸ್ಪಷ್ಟವಾಗಿಹೇಳಿ ಉದಹರಿಸಿರುವ ಸಂಚಿತ . . . . . । ಶ್ಲೋಕವು ಈಗಿನ ಸ್ವಪ್ನನಾಟಕದಲ್ಲಿರುವುದಿಲ್ಲವಾದುದರಿಂದ ಇದೇ ಭಾಸನದೆಂದು ಹೇಳಲಾಗುವುದಿಲ್ಲ. ವಿ. ಸರೂಪ್‌ರವರು ಇದನ್ನು ಪಾಠಾಂತರವೆಂದು ಹೇಳಿ ಸುಲಭವಾಗಿ ದಾಟಿಸಿಬಿಟ್ಟಿರುವರು. ಹೀಗೆಯೇ ಎಲ್ಲಾ ಶ್ಲೋಕಗಳಿಗೂ ಹೇಳುತ್ತಾ ಬರುವುದಾದರೆ ಯಾವವಿಚಾರಕ್ಕೂ ಕಷ್ಟವೇ ಇರುವುದಿಲ್ಲ.

೩. ನಾಟ್ಯದರ್ಪಣಕಾರನಾದ ರಾಮಚಂದ್ರಗುಣಚಂದ್ರನು ಉದಹರಿಸಿರುವ "ಪಾದಾಕ್ರಾಂತಾನಿ" ಎಂಬ ಪದ್ಯವೂ ಇದರಲ್ಲಿರುವುದಿಲ್ಲ. ವಿ. ಸರೂಪ್‌ರವರು ಇದನ್ನೂ ಸುಲಭವಾಗಿ ಪಾಠಾಂತರವೆಂದೇ ಹೇಳಬಹುದಾಗಿದ್ದಿತು. ಆದರೆ ಅವರು ಹಾಗೆ ಮಾಡದೆ ಬೇರೇವಿಧವಾಗಿ ಅರ್ಥಮಾಡುವ ಸಂಭ್ರಮದಲ್ಲಿ ಕೇವಲ ಅಪಾರ್ಥಮಾಡಿರುವುದು ಶೋಚನೀಯವಾಗಿರುವುದು. ಅವರು ಈ ಶ್ಲೋಕದ ಅಭಿಪ್ರಾಯವು ರಾಜಾವಿದೂಷಕರ ಸಲ್ಲಾಪದಿಂದ ಅಭಿವ್ಯಕ್ತವಾಗಿರುವುದೆಂದು ಒಕ್ಕಣಿಸಿರುವರು. ಆದರೆ ದರ್ಪಣಕಾರನು —"ಶಿಲಾತಲಮವಲೋಕ್ಯ ವತ್ಸರಾಜಃ:—**ಪಾದಾಕ್ರಾಂತಾನಿ....**" ಎಂದು ಹೇಳಿರುವುದು ಸ್ಪಷ್ಟವಾಗಿರುವುದು. ಈ ಶ್ಲೋಕವು ವತ್ಸರಾಜನು ಹೇಳಿದ ಶ್ಲೋಕವೆಂದು ಯಾರಿಗೆ ಬೇಕಾದರೂ ಅರ್ಥವಾಗುವಹಾಗಿರುವುದು. ಇದನ್ನು ಬಿಟ್ಟು ರಾಜಾವಿದೂಷಕರ ಸಲ್ಲಾಪವನ್ನು ನೋಡಿಕೊಂಡು ರಾಮಚಂದ್ರಗುಣಚಂದ್ರನು ಸ್ವಂತವಾಗಿ ಒಂದು ಶ್ಲೋಕವನ್ನುಕಟ್ಟಿ ಉದಹರಿಸಿರುವನೆಂದು ಹೇಳುವುದು ಶುದ್ಧ ಅಸಂಬದ್ಧಪ್ರಲಾಪವಾಗದಿರದು. ಆದುದರಿಂದ ದರ್ಪಣಕಾರನು ಸ್ಪಷ್ಟವಾಗಿ—

ಯಥಾ ಭಾಸಕೃತೇ—ಸ್ವಪ್ನವಾಸವದತ್ತೇ—ವತ್ಸರಾಜಃ ।—

ಎಂದು ಹೇಳಿರುವುದರಿಂದ, ಈ 'ಪಾದಾಕ್ರಾಂತಾನಿ' ಎಂಬ ಶ್ಲೋಕವು ಭಾಸನ ಸ್ವಪ್ನವಾಸವದತ್ತೆಯದೇ ಎಂದೂ, ತ್ರಿವೇಂದ್ರಂ ಸ್ವಪ್ನನಾಟಕದಲ್ಲಿ ಈ ಶ್ಲೋಕವು ಇಲ್ಲದಿರುವುದರಿಂದ ಇದು ಭಾಸಕೃತವಲ್ಲವೆಂದೂ ಸ್ಪಷ್ಟವಾಗುವುದು.

ವಿ. ಸರೂಪ್‌ರವರು ಈ ಸ್ವಪ್ನನಾಟಕವೇ ಭಾಸನ ಸ್ವಪ್ನವಾಸವದತ್ತೆಯೆಂದು ಹೇಳಲು ಶಾರದಾತನಯನನ್ನು ಬೆಂಬಲಮಾಡಿಕೊಂಡಿರುವರು. ಇವರು ಉದಹರಿಸಿರುವ ಎರಡು ಶ್ಲೋಕಗಳೂ ತ್ರಿವೇಂದ್ರಂಸ್ವಪ್ನನಾಟಕದ ೧ ಮತ್ತು ೬ನೆಯ ಅಂಕಗಳ ವಿಷಯವನ್ನು ಸೂಚಿಸುವುವೆಂದು ತೋರಿಸಿರುವರು. ಅದು ಹೀಗಿರುವುದು—

**ಅತ್ರೋದಾಹರಣಂ—**

"ಚಿರಪ್ರಸುಪ್ತಃ ಕಾಮೋ ಮೇ ವೀಣಯಾ ಪ್ರತಿಬೋಧಿತಃ ।
ತಾಂ ತು ದೇವೀಂ ನ ಪಶ್ಯಾಮಿ ಯಸ್ಯಾ ಘೋಷವತೀ ಪ್ರಿಯಾ"॥

ಈ ಶ್ಲೋಕವು ರಾಜನು ಹೇಳುವ ಮಾತೆಂದು ಸ್ಪಷ್ಟವಾಗಿರುವುದು. ಮತ್ತು ಮೊದಲನೆಯ ಶ್ಲೋಕದಲ್ಲಿ—

"ಸ್ವಪ್ನವಾಸವದತ್ತಾಖ್ಯಮುದಾಹರಣಮತ್ರ ತು ।"

ಎಂದಿರುವುದರಿಂದ ಈ ಶ್ಲೋಕವು ಸ್ವಪ್ನವಾಸವದತ್ತೆಯದೆಂದೂ ತಿಳಿದುಬರುವುದು. ಆದರೆ ಈ ಶ್ಲೋಕವೊಂದು ಮಾತ್ರ ತ್ರಿವೇಂದ್ರಂ ಸ್ವಪ್ನನಾಟಕದಲ್ಲಿಯೂ ಕಂಡುಬರುವುದಾಗಿದೆ. ಇದೊಂದನ್ನೇ ಆಧಾರವಾಗಿಟ್ಟುಕೊಂಡು ಈ ಸ್ವಪ್ನನಾಟಕವು ಭಾಸನ 'ಸ್ವಪ್ನವಾಸವದತ್ತೆ'ಯೆಂದೇ ಹೇಳಲಾಗುವುದಿಲ್ಲ. ಮತ್ತು ಭಾಸನ ನಾಟಕವನ್ನು ನೋಡಿ ಈ ನಾಟಕವು ಬರೆಯಲ್ಪಟ್ಟಿತೆಂದಾಗಲಿ ಅವನ ಈ ಶ್ಲೋಕವನ್ನು ಇದರಲ್ಲಿಯೂ ತೆಗೆದುಕೊಂಡಿರಬಹುದೆಂದಾಗಲಿ ಹೇಳಬಹುದೇ ವಿನಾ ಅದೇ ಇದೆಂದು ಹೇಳಲು ಯಾವ ಪ್ರಬಲಾಧಾರಗಳೂ ಇಲ್ಲ.

ಬಾಣನು ಹರ್ಷಚರಿತೆಯಲ್ಲಿ ಭಾಸನು ಸೂತ್ರಧಾರನಿಂದಲೇ ಪ್ರಾರಂಭಿತಗಳಾದ ನಾಟಕಗಳನ್ನು ಬರೆದು ಕೀರ್ತಿಶೇಷನಾಗಿರುವನೆಂದು ಹೇಳಿರುವುದರಿಂದ ಭಾಸನು ಅಂತಹ ನಾಟಕಗಳನ್ನು ಬರೆದನೆಂದು ಗೊತ್ತಾಗುವುದು. ರಾಜಶೇಖರನ ಹೇಳಿಕೆಯಿಂದಲೂ ಭಾಸನು ಅನೇಕನಾಟಕಗಳನ್ನು ಬರೆದಿರುವನೆಂದು ಗೊತ್ತಾಗುವುದಲ್ಲದೆ ಅವುಗಳಲ್ಲಿ 'ಸ್ವಪ್ನವಾಸವದತ್ತೆ' ಎಂಬುದೂ ಒಂದೆಂದು ಗೊತ್ತಾಗುವುದು. ರಾಮಚಂದ್ರಗುಣಚಂದ್ರನೂ 'ಭಾಸಕೃತೇ ಸ್ವಪ್ನವಾಸವದತ್ತೇ' ಎಂದು ಹೇಳಿರುವದರಿಂದಲೂ ಭಾಸನು ಸ್ವಪ್ನವಾಸವದತ್ತೆಯನ್ನು ಬರೆದಿರುವನೆಂದು ಸ್ಪಷ್ಟವಾಗುವುದು. ಕಾಳಿದಾಸಾದಿಮಹಾಕವಿಗಳು ಭಾಸನನ್ನು ಗೌರವಿಸಿರುವುದರಿಂದ ಭಾಸನು ಮಹಾಕವಿಯಾಗಿರಬೇಕೆಂದು ಭೋಧೆಯಾಗುವುದು. ಆದರೆ ಈ ಸ್ವಪ್ನವಾಸವದತ್ತೆಯೊಂದು ಹೊರತು ಇವನು ಬರೆದ ನಾಟಕಗಳಿನ್ನಾವುವೆಂಬುದನ್ನು ತಿಳಿಯಲು ಯಾವ ಆಧಾರವೂ ಸಿಗುವಂತಿಲ್ಲ.

ಸರ್ವಾನಂದ, ಅಭಿನವಗುಪ್ತಾಚಾರ್ಯ, ರಾಮಚಂದ್ರಗುಣಚಂದ್ರ—ಮುಂತಾದವರುಗಳಿಂದ ಕಂಠೋಕ್ತವಾಗಿ ಭಾಸನದೆಂದೂ ಸ್ವಪ್ನವಾಸವದತ್ತೆಯದೆಂದೂ ಹೇಳಿರುವ ಒಂದು ಶ್ಲೋಕವೂ ತ್ರಿವೇಂದ್ರಂ ಸ್ವಪ್ನವಾಸದತ್ತೆಯಲ್ಲಿ ಕಾಣಬರುವುದಿಲ್ಲ. ಶಾರದಾತನಯನು ಭಾಸನ ಸ್ವಪ್ನವಾಸವದತ್ತೆಯದೆಂದು ಉದಾಹರಿಸಿರುವ ಒಂದು ಶ್ಲೋಕವು ಮಾತ್ರ ಆಕಸ್ಮಾತ್ತಾಗಿ ಈ ಸ್ವಪ್ನನಾಟಕದಲ್ಲಿಯೂ ಬಂದಿರುವುದು. ಈ ಮಾತ್ರದಿಂದಲೇ, ಮೇಲಿನ ಪ್ರಬಲವಾದ ಉದಾ

ಹರಣೆಗಳಿರುವಲ್ಲಿ, ಈ ಸ್ವಪ್ನನಾಟಕವು ಭಾಸನ ಸ್ವಪ್ನವಾಸವದತ್ತೆಯೋ ಎಂದು ಹೇಳಲಾಗುವುದಿಲ್ಲ. ಭಾಸನ ಸ್ವಪ್ನವಾಸವದತ್ತೆಯು ಈಗ ಉಪಲಬ್ಧವಿಲ್ಲ. ತ್ರಿವೇಂದ್ರಂ ಸ್ವಪ್ನನಾಟಕವನ್ನು ಬರೆದವನಾಗಲಿ, ಇದರಂತಿರುವ ಇತರ ೧೨ ನಾಟಕಗಳ ಕರ್ತೃವಾಗಲಿ ಯಾರೆಂಬುದು ತಿಳಿಯದು. ಈ ೧೨ ನಾಟಕಗಳಲ್ಲಿ ಒಂದುವೇಳೆ ಯಾವುದಾದರೂ ಭಾಸಕರ್ತೃಕವಾದುದು ಇರುವುದಾದರೂ, ಅದನ್ನು ವಿಶದವಾಗಿ ತಿಳಿಯಲವಕಾಶವಿಲ್ಲ. ಭಾಸನ ವಿಚಾರವಾಗಿಯೂ, ಅವನ ಸ್ವಪ್ನವಾಸವದತ್ತಾ ವಿಚಾರವಾಗಿಯೂ. ತ್ರಿವೇಂದ್ರಂ ನಾಟಕಗಳ ವಿಚಾರವಾಗಿಯೂ ಸದ್ಯ ಇಷ್ಟನ್ನು ಹೊರತು, ಯಾವುದನ್ನೂ ನಿಶ್ಚಯಿಸಿ ಹೇಳುವುದು ಸಾಧ್ಯವಿಲ್ಲವಾಗಿರುವುದು.

ತ್ರಿವೇಂದ್ರಂನಾಟಕಗಳೆಲ್ಲಾ ಒಂದನ್ನೊಂದು ಬಹುವಾಗಿ ಹೋಲುವುವು. ಆದಕಾರಣ ಅವುಗಳನ್ನೆಲ್ಲಾ ಬಹುವಾಗಿ ಏಕಕರ್ತೃಕವೆನ್ನಲು ಅವಕಾಶವಿರುವುದು. ಅದಲ್ಲದೆ ಬಹುಕರ್ತೃಕವಾಗಿರುವ ಸಂದರ್ಭದಲ್ಲಿ, ಅವರೆಲ್ಲರೂ ಒಂದೇ ವಿಧವಾಗಿ ಬರೆದರೆಂದಾಗಲಿ, ಎಲ್ಲರೂ ತಮ್ಮ ಹೆಸರುಗಳನ್ನು ಗೋಪ್ಯಮಾಡಿದರೆಂದಾಗಲಿ ಊಹಿಸುವುದು ಸರಿಯಾದುದಾಗಿ ತೋರುವುದಿಲ್ಲ.

ಈ ತ್ರಿವೇಂದ್ರಂನಾಟಕಗಳಲ್ಲಿ ಸ್ವಪ್ನನಾಟಕದ ಹೊರತು ಬೇರೆ ಭಾಸಕೃತ ನಾಟಕಗಳಿರುವುವೆಂದು ಸರಿಯಾದ ಆಧಾರಗಳೊಡನೆ ತಿಳಿಯಬರುವುದಾದರೆ ಆಗ ಈ ನಾಟಕಗಳೆಲ್ಲವೂ ಭಾಸನದೆಂದು ಹೇಳಬಹುದೇ ಹೊರತು ಈಗ ಕೆಲವರು ಸಾಧಿಸಿರುವಂತೆ ಯಾವುದನ್ನೂ ನಿಷ್ಕರ್ಷಿಸಿ ಹೇಳಲು ಸಾಧ್ಯವಿರುವುದಿಲ್ಲ. ಬೇರೆ ಸರಿಯಾದ ಆಧಾರಗಳು ದೊರೆಕುವವರೆಗೂ ಮಹಾಕವಿಭಾಸನು ಪ್ರಸಿದ್ಧ ನಾಟಕಕಾರನಾಗಿದ್ದನೆಂದೂ ಅವನ ನಾಟಕಗಳು ಈಗ ಉಪಲಬ್ಧವಿರುವುದೋ ಇಲ್ಲವೋ ತಿಳಿಯದೆಂದೂ ಈಗ ದೊರೆತಿರುವ ತ್ರಿವೇಂದ್ರಂನಾಟಕಗಳ ಕರ್ತನೂ ಯಾರೆಂಬುದು ತಿಳಿಯದೆಂದೂ ತ್ರಿವೇಂದ್ರಂನಾಟಕಗಳು ನಿಜವಾಗಿಯೂ ಉತ್ಕೃಷ್ಟನಾಟಕಗಳೇ ಆಗಿ ಎಲ್ಲರ ಅವಗಾಹನೆಗೂ ಯೋಗ್ಯವಾಗಿರುವುವೆಂದೂ ಇಷ್ಟು ಮಾತ್ರ ಹೇಳಬಹುದಾಗಿದೆ.

ಭಾಸನ ಹೆಸರಿನಲ್ಲಿ ಬರೆಯಲ್ಪಟ್ಟುದಾಗಿ ವಿವಿಧಸುಭಾಷಿತಕೋಶದಲ್ಲಿ ದೊರೆಯುವ ಶ್ಲೋಕಗಳು—

ಶಾರ್ಙ್ಗಧರ ಪದ್ಧತಿ:— (ನಂ. ೩೨೯೨.)

> ಅಸ್ಯಾ ಲಲಾಟೇ ರಚಿತಾ ಸಖೀಭಿಃ ।
> ವಿಭಾವ್ಯತೇ ಚಂದನಪತ್ರಲೇಖಾ ॥
> ಆಪಾಂಡುರಕ್ಷಾಮಕಪೋಲಭಿತ್ತೌ ।
> ಅನಂಗಬಾಣವ್ರಣಪಟ್ಟಿಕೇವ ॥ —(ಭಾಸಸ್ಯ)

ಇದೇ ಶ್ಲೋಕವು ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿಯೂ ವಲ್ಲಭದೇವನ ಸುಭಾಷಿತಾವಳಿ(೧೪೮೭)ಯಲ್ಲಿಯೂ ಭಾಸನದೆಂದು ಹೇಳಲ್ಪಟ್ಟಿದೆ.

ನಂ. ೩೩೩೦

**ದಯಿತಾಬಾಹುಪಾಶಸ್ಯ ಕುತೋಽಯಮಪರೋ ವಿಧಿಃ ।**

**ಜೀವಯತ್ಯರ್ಪಿತಃ ಕಂಠೇ ಮಾರಯತ್ಯಪವರ್ಜಿತಃ ॥ (ಭಾಸಸ್ಯ)**

ಇದೇ ಶ್ಲೋಕವು ವಲ್ಲಭದೇವನ ಸುಭಾಷಿತಾವಳಿಯಲ್ಲಿ (೧೫೩೯) ಶ್ರೀಶಕನದೆಂದೂ ಸದುಕ್ತಿಕರ್ಣಾಮೃತದಲ್ಲಿ ಕಾಶ್ಮೀರದ ಶ್ಯಾಮಿಲಕನದೆಂದೂ ಹೇಳಲ್ಪಟ್ಟಿದೆ.

ನಂ. ೩೬೪೦

**ಕಪೋಲೇ ಮಾರ್ಜಾರೀ ಪಯ ಇತಿ ಕರಾನ್ಲೇಢಿ ಶಶಿನ**

**ಸ್ತರುಚ್ಛಿದ್ರಪ್ರೋತಾನ್ಬಿಸಮಿತಿ ಕರೀ ಸಂಕಲಯತಿ**

**ರತಾಂತೇ ತಲ್ಪಸ್ಥಾನ್ ಹರತಿ ವನಿತಾಪ್ಯಂಶುಕಮಿತಿ**

**ಪ್ರಭಾಮತ್ತಶ್ಚಂದ್ರೋ ಜಗದಿದಮಹೋವಿಪ್ಲವಯತಿ ॥ (ಭಾಸಸ್ಯ)**

ಇದೇ ಶ್ಲೋಕವು ವಲ್ಲಭದೇವನ ಸುಭಾಷಿತಾವಳಿಯಲ್ಲಿ (೧೯೯೪) ಭಾಸನದೆಂದೂ ಸದುಕ್ತಿಕರ್ಣಾಮೃತದಲ್ಲಿ ರಾಜಶೇಖರನದೆಂದೂ ಹೇಳಲ್ಪಟ್ಟಿದೆ.

ನಂ. ೩೯೦೭

**ತೀಕ್ಷ್ಣಂ ರವಿಸ್ತಪತಿ ನೀಚ ಇವಾಚಿರಾಢ್ಯಃ**

**ಶೃಂಗಂ ರುರುಸ್ತ್ಯಜತಿ ಮಿತ್ರಮಿವಾಕೃತಜ್ಞಃ ॥**

**ತೋಯಂ ಪ್ರಸೀದತಿ ಮುನೇರಿವ ಚಿತ್ತಮಂತಃ**

**ಕಾಮೀ ದರಿದ್ರ ಇವ ಶೋಷ ಮುಪೈತಿ ಪಂಕಃ ॥ (ಭಾಸಸ್ಯ)**

ಸದುಕ್ತಿಕರ್ಣಾಮೃತದಲ್ಲಿ ಇದನ್ನು ಭಾಸನದೆಂದು ಹೇಳಲ್ಪಟ್ಟಿದೆ.

ವಲ್ಲಭದೇವನ ಸುಭಾಷಿತಾವಳಿ:—

ನಂ. ೧೨೯೬

**ಬಾಲಾ ಚ ಸಾ ವಿದಿತಪಂಚಶರಪ್ರಪಂಚಾ**

**ತನ್ವೀ ಚ ಸಾ ಸ್ತನಭರೋಪಚಿತಾಂಗಯಷ್ಟಿಃ ॥**

**ಲಜ್ಜಾಂ ಸಮುದ್ವಹತಿ ಸಾ ಸುರತಾವಸಾನೇ**

**ಹಾ! ಕಾಪಿ ಸಾ ಕಿಮಿವ ಕಿಂ ಕಥಯಾಮಿ ತಸ್ಯಾಃ ॥ (ಭಾಸಸ್ಯ)**

ನಂ. ೧೩೫೩

**ದುಃಖಾರ್ತೇ ಮಯಿ ದುಃಖಿತಾ ಭವತಿ ಯಾ ಹೃಷ್ಟೇ ಪ್ರಹೃಷ್ಟಾ ತಥಾ**

**ದೀನೇ ದೈನ್ಯಮುಪೈತಿ ರೋಷಪರುಷೇ ಪಥ್ಯಂ ವಚೋ ಭಾಷತೇ ॥**

ಕಾಲಂ ವೇತ್ತಿ ಕಥಾಃ ಕರೋತಿ ನಿಪುಣಾ ಮತ್ಸಂಸ್ತವೇ ರಜ್ಯತಿ
 ಭಾರ್ಯಾ ಮಂತ್ರಿವರಃ ಸಖಾ ಪರಿಜನಃ ಸೈಕಾ ಬಹುತ್ವಂ ಗತಾ॥(ಭಾಸಸ್ಯ)

ನಂ. ೧೬೧೯

ಕಠಿನಹೃದಯೇ ಮುಂಚ ಕ್ರೋಧಂ ಸುಖಪ್ರತಿಘಾತಕಂ
 ಲಿಖತಿ ದಿವಸಂ ಯಾತಂ ಯಾತಂ ಯಮಃ ಕಿಲ ಮಾನಿನಿ ॥
ವಯಸಿ ತರುಣೇ ನೈತದ್ಯುಕ್ತಂ ಚಲೇ ಚ ಸಮಾಗಮೇ
 ಭವತಿ ಕಲಹೋ ಯಾವತ್ ತಾವದ್ವರಂ ಸುಭಗೇ ರತಂ ॥ (ಭಾಸಸ್ಯ)

ನಂ. ೧೬೨೮

ಕೃತಕಕೃತಕೈರ್ಮಾಯಾಸಖ್ಯೈಸ್ತ್ವಯಾಸ್ಮಿ ತಿವಂಚಿತಾ
 ನಿಭೃತನಿಭೃತೈಃ ಕಾರ್ಯಾಲಾಪೈರ್ಮಯಾಪ್ಯುಪಲಕ್ಷಿತಂ ॥
ಭವತು ವಿದಿತಂ ನೇಷ್ಟಾಹಂ ತೇ ವೃಥಾ ಪರಿಖಿದ್ಯಸೇ
 ಹೃಹಮಸಹನಾತ್ವಂ ನಿಃ ಸ್ನೇಹಃ ಸಮೇನ ಸಮಂಗತಂ ॥ (ಭಾಸಸ್ಯ)

ಸದುಕ್ತಿಕರ್ಣಾಮೃತ:—

ನಂ. ೨೩೮೩

ದಗ್ಧೇ ಮನೋಭವತರೌ ಬಾಲಾ
 ಕುಚಕುಂಭಸಂಭೃತೈರಮೃತೈಃ ॥
ತ್ರಿವಳೀಕೃತಾಲವಾಲಾ
 ಜಾತಾ ರೋಮಾವಳೀ ವಲ್ಲೀ ॥ (ಭಾಸಸ್ಯ)

ನಂ. ೧೧೧೨

ಪ್ರತ್ಯಾಸನ್ನವಿವಾಹಮಂಗಳವಿಧೌ ದೇವಾರ್ಚನವ್ಯಸ್ತಯಾ
 ದೃಷ್ಟ್ವಾಗ್ರೇ ಪರಿಣೇತುರೇವ ಲಿಖಿತಾಂ ಗಂಗಾಧರಸ್ಯಾಕೃತಿಂ ॥
ಉನ್ಮಾದಸ್ಮಿತರೋಷಲಜ್ಜಿತರಸೈಃ ಗೌರ್ಯಾ ಕಥಂಚಿಚ್ಚಿರಾತ್
 ವೃದ್ಧಸ್ತ್ರೀವಚನಾತ್ ಪ್ರಿಯೇ ವಿನಿಹಿತಃ ಪುಷ್ಪಾಂಜಲಿಃ ಪಾತು ವಃ ॥

ನಂ. ೨೮೭೨ (ಭಾಸಸ್ಯ)

ವಿರಹವನಿತಾವಕ್ತ್ರೌಪಮ್ಯಂ ಬಿಭರ್ತಿ ನಿಶಾಪತಿಃ
 ಗಳಿತವಿಭವಸ್ಯಾಜ್ಞೇವಾದ್ಯದ್ಯುತಿರ್ಮಸೃಣಾ ರವೇಃ ॥
ಅಭಿನವವಧೂರೋಷಸ್ವಾದುಃ ಕರೀಷತನೂನಪಾತ್
 ಅಸರಲಜನಾಶ್ಲೇಷಕ್ರೂರಸ್ತುಷಾರಸಮೀರಣಃ ॥ (ಭಾಸಸ್ಯ)

ಜಲ್ಹಣನ ಸೂಕ್ತಿಮುಕ್ತಾವಳಿ:—

ಯದಪಿ ವಿಬುಧೈಃ ಸಿಂಧೋರಂತಃ ಕಥಂಚಿದುದಾರ್ಜಿತಂ
 ತದಪಿ ಸಕಲಂ ಚಾರುಸ್ತ್ರೀಣಾಂ ಮುಖೇಷು ವಿಲೋಕ್ಯತೇ ।

ಸುರಸುಮನಸಃ ಶ್ವಾಸಾಮೋದೇ• (ಶಶಿ)ಕಪೋಲಯೋಃ
ಅಮೃತಮಧರೇ ತಿರ್ಯಗ್ಭೂತೇ ವಿಷಂ ಚ ವಿಲೋಚನೇ || (ಭಾಸಸ್ಯ)

ಈ ಮೇಲಿನ ಶ್ಲೋಕಗಳು ಪರಸ್ಪರ ಭಿನ್ನಭಿನ್ನಕರ್ತೃಗಳನ್ನು ಹೇಳುವುದಾದುದರಿಂದಲೂ ಆಧಾರಸಹಿತವಾಗಿ ಬರೆಯಲ್ಪಡದೆ ಕೇವಲ ಹೇಳಿಕೆಯ ಮೇಲೆ ಬರೆಯಲ್ಪಟ್ಟಿರುವುದರಿಂದಲೂ ಇವುಗಳನ್ನು ಆಧಾರವಾಗಿ ತೆಗೆದುಕೊಳ್ಳಲಾಗುವುದಿಲ್ಲ.



## ರಾ ಮಿ ಲ-ಸೌ ಮಿ ಲ

ಮಹಾಕವಿಕಾಳಿದಾಸನು ಮಾಳವಿಕಾಗ್ನಿಮಿತ್ರನಾಟಕದ ಪ್ರಸ್ತಾವನೆಯಲ್ಲಿ ಮಹಾಕವಿಭಾಸನೊಡನೆ ರಾಮಿಲಸೌಮಿಲರನ್ನು ಸೇರಿಸಿ ಮಹಾನಾಟಕಕಾರರಾಗಿದ್ದರೆಂದು ಹೊಗಳಿರುವುದರಿಂದಲೂ ರಾಮಿಲಸೌಮಿಲರಿಬ್ಬರೂ ಸೇರಿ **ಶೂದ್ರಕಕಥೆ**ಯನ್ನು ಬರೆದುದಾಗಿ—

ತೌ ಶೂದ್ರಕಕಥಾಕಾರೌ ವಂದ್ಯೌ ರಾಮಿಲಸೌಮಿಲೌ |
ಯಯೋರ್ದ್ವಯೋಃ ಕಾವ್ಯಮಾಸೀದರ್ಧನಾರೀಶ್ವರೋಪಮಂ ||

ಎಂಬ ಶ್ಲೋಕದಿಂದ ವ್ಯಕ್ತವಾಗುವುದರಿಂದಲೂ ಇವರು ಮಹಾಕವಿಗಳಾಗಿರಬೇಕೆಂದು ಗೊತ್ತಾಗುತ್ತದೆ.§ ರಾಮಿಲಸೌಮಿಲರಿಗೆ ಕವಿಪುತ್ರರೆಂಬ ನಾಮಾಂತರವಿರುವುದಾಗಿ ತೋರುತ್ತದೆ.

**ಕಾಲ:**—ಕಾಳಿದಾಸನ ಹೇಳಿಕೆಯ ಕ್ರಮವನ್ನನುಸರಿಸಿ ಹೇಳುವುದಾದರೆ ಭಾಸನ ಅನಂತರ ಮತ್ತು ಕಾಳಿದಾಸನಿಗಿಂತ ಮುಂಚೆ ಇವರು ಇದ್ದಿರಬೇಕೆಂದು ಬೋಧೆಯಾಗುವುದು. ಆದರೆ ಭಾಸನಿಗಿಂತ ಎಷ್ಟುಕಾಲಾನಂತರ ಕಾಳಿದಾಸನಿಗಿಂತ ಎಷ್ಟುಮುಂಚೆ ಇದ್ದರೆಂದು ಹೇಳಲಾಗುವುದಿಲ್ಲ.

ಈ ಮಹಾಕವಿಗಳ ಗ್ರಂಥಗಳೊಂದೂ ದೊರೆಯದೆ ಅಲ್ಲಲ್ಲಿ ದೊರೆಯುವುವಾದ ಶ್ಲೋಕಗಳಿಂದ ಇವರ ಮಹತ್ತನ್ನು ಯೋಜಿಸಬೇಕಾಗಿದೆ. ರಾಮಿಲನು 'ಮಣಿಪ್ರಭಾ' ಎಂಬ ಗ್ರಂಥವನ್ನು ಬರೆದಿರುವನೆಂದು ಹೇಳಲ್ಪಟ್ಟಿದೆ.* ಗ್ರಂಥವು ಉಪಲಬ್ಧವಿಲ್ಲ.

§ Introduction to Subhashitavali P. 103
* Introduction to Haidimba Vaidagdhya P. 11

ಡಾ. ಅಫ್ರ್ ಷಿಟ್‌ರವರು ರಾಮಿಲಸೌಮಿಲರು ಬರೆದುದಾಗಿರುವ ಶ್ಲೋಕ ಸಮುದಾಯದಲ್ಲಿ,—

> ಸವ್ಯಾಧೇಃ ಕೃಶತಾ ಕ್ಷತಸ್ಯ ರುಧಿರಂ ದಷ್ಟಸ್ಯ ಲಾಲಾಸ್ರುತಿಃ
> ಕಿಂಚಿನ್ನೈತದಿಹಾಸ್ತಿ ತತ್ಕಥಮಸೌ ಪಾಂಥಸ್ತಪಸ್ವೀ ಮೃತಃ ।
> ಆಜ್ಞಾತಂ ಮಧುಲಂಪಟೈರ್ಮಧುಕರೈರಾರಬ್ಧಕೋಲಾಹಲೇ
> ನೂನಂ ಸಾಹಸಿಕೇನ ಚೂತಮುಕುಲೇ ದೃಷ್ಟಿಃ ಸಮಾರೋಪಿತಾ ॥

ಎಂಬ ಶ್ಲೋಕವು ಬಹುಚೆಲುವಾದುದೆಂದು ಒಕ್ಕಣಿಸಿರುವರು.

ಇದು ಶಾರ್ಙ್ಗಧರಪದ್ಧತಿಯಲ್ಲಿ ಹೇಳಲ್ಪಟ್ಟಿರುವುದು.†

ವಲ್ಲಭದೇವನ ಸುಭಾಷಿತಾವಳಿಯಲ್ಲಿ (೧೭೯೮) ರಾಮಿಲಕನದೆಂದು ಮಾತ್ರ ಹೇಳುವ—

> ಪರಪುರುಷಾದಿವ ಸವಿತುಃ
> ಸಂಪ್ರತಿ ಭೀತಾಃ ಕರಾಗ್ರಸಂಸ್ಪರ್ಶಾತ್ ॥
> ಕುಲವಧ್ವ ಇವ ಸಲಜ್ಜಾಃ
> ಪ್ರವಿಶಂತಿ ಗೃಹೋದರಂ ಛಾಯಾಃ ॥ (ರಾಮಿಲಕಸ್ಯ)

ಮತ್ತೊಂದುಶ್ಲೋಕವು (೨೨೨೭) ಕವಿಪುತ್ರರಹೆಸರಿನಲ್ಲಿ ಹೇಳಲ್ಪಟ್ಟಿರುವುದು.

> ಭ್ರೂಚಾತುರ್ಯಂ ಕುಂಚಿತಾಂತಾಃ ಕಟಾಕ್ಷಾಃ
> ಸ್ನಿಗ್ಧಾ ಹಾವಾ ಲಜ್ಜಿತಾಂಕಾಶ್ಚ ಹಾಸಾಃ ॥
> ಲೀಲಾಮಂದಂ ಪ್ರಸ್ಥಿತಂ ಚ ಸ್ಥಿತಂ ಚ
> ಸ್ತ್ರೀಣಾಮೇತದ್ಭೂಷಣಂ ಚಾಯುಧಂ ಚ ॥



† ವಲ್ಲಭದೇವನ ಸುಭಾಷಿತಾವಳಿ ಮುನ್ನುಡಿ ಪುಟ ೧೦೩–೧೦೪

## ಕಾ ಳಿ ದಾ ಸ. (೧)

ಕಾಳಿದಾಸನ ಹೆಸರನ್ನು ಹೇಳಿದಕೂಡಲೇ ವಿಕ್ರಮಾದಿತ್ಯನ ಹೆಸರನ್ನೂ ಹೇಳುವುದು ವಾಡಿಕೆಯಾಗಿದೆ.

ಧನ್ವಂತರಿಕ್ಷಪಣಕಾಮರಸಿಂಹಶಂಕು
ವೇತಾಲಭಟ್ಟಘಟಕರ್ಪರಕಾಲಿದಾಸಾಃ ||
ಖ್ಯಾತೋ ವರಾಹಮಿಹಿರೋ ನೃಪತೇಃ ಸಭಾಯಾಂ
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ||

ಎಂಬ ಚಾಟುಶ್ಲೋಕವು ಹೀಗೆ ಹೇಳಲು ಕಾರಣವಿರಬಹುದಾಗಿ ತೋರುತ್ತದೆ. ವಿಕ್ರಮಾದಿತ್ಯನ ಸಭಾಪಂಡಿತನಾಗಿದ್ದನೆಂದು ಈ ಶ್ಲೋಕಾಧಾರದ ಮೇಲೆ ಸಮರ್ಥಿಸುವ ಪಾಶ್ಚಾತ್ಯ ಮತ್ತು ಪೌರ್ವಾತ್ಯಚಾರಿತ್ರಶೋಧಕರು ನೆಲೆಕಾಣದ ಕಾಲಶೋಧನದಲ್ಲಿ ಸಾಹಸಪಡುತ್ತಿರುವುದು ಸೋಜಿಗವಾಗಿದೆ.

ಶಕನಾಯಕನಾದ ವಿಕ್ರಮನ ಸಮಕಾಲಿಕನಾಗಿದ್ದಿರಬೇಕೆಂದು ಕೆಲವರೂ ವಿಕ್ರಮನಾಮಕನಾದ ಮಗದೋರ್ವರಾಜನ ಕಾಲದಲ್ಲಿದ್ದಿರಬೇಕೆಂದು ಕೆಲವರೂ ಅವರವರ ಪ್ರಯತ್ನಸಾಫಲ್ಯದಂತೆ ಸಿದ್ಧಾಂತಗೊಳಿಸುವ ನೆಪದಲ್ಲಿ ಕಾಳಿದಾಸನ ನಿಜವಾದ ಕಾಲಸಮಾಲೋಚನೆಯು ಅಂತರ್ಹಿತವಾಗಿ ಹೋಗಿದೆ.

ಮೇಲಣ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಗ್ರಂಥಕಾರರು ಭಿನ್ನಭಿನ್ನಕಾಲದವರೆಂದು ಸಿದ್ಧಾಂತವಾಗುವುದಾದುದರಿಂದ ಚಾರಿತ್ರಕದೃಷ್ಟಿಯಿಂದ ದೂರವಾಗಿರುವ ಈ ಶ್ಲೋಕಾಧಾರದಿಂದ ಚರಿತ್ರೆಯನ್ನು ಬರೆಯುವುದು ಸಾಧುವಾಗಿರದು.

ಗೀರ್ವಾಣವಾಙ್ಮಯದಲ್ಲಿ ದೊರಕುವ ವಿಕ್ರಮನೆಂಬ ಹೆಸರಿನ ಎಷ್ಟೋ ಜನರಲ್ಲಿ ಯಾವ ವಿಕ್ರಮನು ತನ್ನ ಆಸ್ಥಾನದಲ್ಲಿ ಇಂತಹ ಮಹಾಕವಿಯನ್ನಿಟ್ಟುಕೊಂಡು ಯಶಶ್ಶರೀರಿಯಾದನೆಂಬುದಕ್ಕೆ ಸರಿಯಾದ ಆಧಾರಗಳು ಎಲ್ಲಿಯೂ ಸಿಗವು. ಇದುವರೆಗೆ ದೊರೆಕಿರುವ ಚರಿತ್ರಾಧಾರಗಳು ಪರಸ್ಪರ ಸಂಬಂಧದೂರವಾಗಿ ವ್ಯಕ್ತಿಯ ಭಿನ್ನಭಿನ್ನಾಭಿಪ್ರಾಯಗಳ ಜೋಡಣೆಯ ರೂಪವಾಗಿರುವುವು. ಈ ಕಾರಣಗಳಿಂದ ಚರ್ಚಾಸ್ಪದನಾದ ವಿಕ್ರಮನ ಹೆಸರನ್ನು ಬಿಟ್ಟು ಪ್ರಕೃತ ವಿಷಯೈಕನಾದ ಕಾಳಿದಾಸನ ವಿಚಾರವಾಗಿ ದೊರಕುವುವಾದ ವಿಷಯಗಳು ಮಾತ್ರ ಇಲ್ಲಿ ಹೇಳಲ್ಪಡುವುವು.

ಶಾಕುಂತಲಾದಿಲೋಕೋತ್ತರನಾಟಕಗಳನ್ನು ಬರೆದು ಕೀರ್ತಿಶೇಷ ನಾಗಿರುವ ಕಾಳಿದಾಸನೇ "ಮಾತೃಗುಪ್ತನೆಂಬು"ವನು ಎಂದು ಡಾ. ಭೌದಾಜಿ ಯವರ ಮತವಿರುವುದು $

ಮಹಾಕವಿಕ್ಷೇಮೇಂದ್ರಕೃತ 'ಔಚಿತ್ಯವಿಚಾರಚರ್ಚಾ' ‡ ಎಂಬ ಗ್ರಂಥ ದಲ್ಲಿ ಕಾಳಿದಾಸನ ಶ್ಲೋಕಗಳೂ ಮತ್ತು ಮಾತೃಗುಪ್ತನದೆಂದು ಹೇಳುವ—

ನಾಯಂ ನಿಶಾಮುಖಸರೋರುಹರಾಜಹಂಸಂ . . . . ।

ಎಂಬುದೊಂದು ಶ್ಲೋಕವೂ ಬೇರೆಬೇರೆಯಾಗಿ ಹೇಳಲ್ಪಟ್ಟಿರುವುದು. ವಲ್ಲಭ ದೇವನ ಸುಭಾಷಿತಾವಳಿಯಲ್ಲಿ ಮಾತೃಗುಪ್ತನದೆಂದು ಹೇಳುವ ಎರಡು ಶ್ಲೋಕ ಗಳು (೨೫೫೦, ೩೧೮೧) ಕಂಡುಬರುವುವು.

ಕಲ್ಹಣನ ರಾಜತರಂಗಿಣಿಯಲ್ಲಿ ಮಾತೃಗುಪ್ತನ ಹೆಸರುಮಾತ್ರ ಕಂಡು ಬರುವುದು.*

ಶಾಕುಂತಲನಾಟಕಕ್ಕೆ ವ್ಯಾಖ್ಯಾನವನ್ನು ಬರೆದಿರುವ ರಾಘವಭಟ್ಟನು ಮಾತೃಗುಪ್ತಾಚಾರ್ಯನನ್ನು ಅನೇಕಕಡೆ ಉದಹರಿಸಿಕೊಂಡು ಮಾತೃ ಗುಪ್ತಾಚಾರ್ಯನು ಮಹಾ ಅಲಂಕಾರಿಕನೆಂದೂ ಅಲಂಕಾರಶಾಸ್ತ್ರವೊಂದನ್ನು ಬರೆದಿರುವನೆಂದೂ ಇವನು ಕಾಳಿದಾಸನಲ್ಲವೆಂದೂ ಪ್ರತಿಪಾದಿಸಿರುವನು.†

ಯಾವ ನಾಟಕಗಳು ಕಾಳಿದಾಸನದೆಂದು ಹೇಳಲ್ಪಟ್ಟಿವೆಯೋ ಆ ನಾಟಕ ಗಳಲ್ಲಿ ಎಲ್ಲಿಯೂ ಮಾತೃಗುಪ್ತ ಎಂಬ ಹೆಸರು ಕಂಡುಬರುವುದಿಲ್ಲ. ಈ ಎರಡು ವ್ಯಕ್ತಿಗಳೂ ಒಂದೇ ಆಗಿರುವುದಾಗಿದ್ದರೆ ಮಾತೃಗುಪ್ತನ ಹೆಸರಿನಲ್ಲಿಯೂ ಈ ನಾಟಕಗಳು ಉದ್ಧೃತವಾಗಬಹುದಾಗಿದ್ದಿತು. ಹಾಗೆ ಎಲ್ಲಿಯೂ ಹೇಳದೆ ಇರುವುದರಿಂದಲೂ ಮಾತೃಗುಪ್ತನ ಚರಿತೆಯು ಕಾಳಿದಾಸನ ಚರಿತೆಯಿಂದಭಿನ್ನ ವಿರುವುದರಿಂದಲೂ ಇವರೀರ್ವರೂ ಬೇರೆಬೇರೆಯೆಂಬುದು ಸ್ಪಷ್ಟಪಡುವುದು.

ಕಾಳಿದಾಸನು ಬರೆದಿರುವ ಶಾಕುಂತಲನಾಟಕದಲ್ಲಿ—

ಯಾ ಸೃಷ್ಟಿಸ್ಸ್ರಷ್ಟುರಾದ್ಯಾ . . . । ಎಂದೂ—

ಮಾಳವಿಕಾಗ್ನಿಮಿತ್ರದಲ್ಲಿ—

ಏಕೈಶ್ವರ್ಯೇ . . . . . , । ಎಂದೂ—

---

$ Journal of B. B. R. A. S. VII P. 207

‡ ಔಚಿತ್ಯವಿಚಾರಚರ್ಚಾ (ನಿರ್ಣಯಸಾಗರಪ್ರತಿ ಪುಟ. ೧೪೨)

* ರಾಜತರಂಗಿಣಿ ೩. ೧೨೫—೧೨೬

† ವಲ್ಲಭದೇವನ ಸುಭಾಷಿತಾವಳಿ ಪೀಠಿಕೆ ಪುಟ. ೮೯

ವಿಕ್ರಮೋರ್ವಶೀಯದಲ್ಲಿ—

**ವೇದಾಂತೇಷು ಯಮಾಹುರೇಕಪುರುಷಂ . . . . ।** ಎಂದೂ—

ಮಂಗಲಾಚರಣವನ್ನು ಮಾಡಿರುವುದರಿಂದಲೂ ಇದರ ಸಮ್ಯಗರ್ಥವು ಭಕ್ತಿಯೋಗಾರ್ಥವನ್ನು ಸೂಚಿಸುವುದರಿಂದಲೂ ಇವನು ಬ್ರಾಹ್ಮಣನೆಂದು ವ್ಯಕ್ತವಾಗುವುದು. ಕೆಲವರು ಇವನನ್ನು ಮಗಧದೇಶದವನೆಂದೂ ಕಾಶ್ಮೀರದವನೆಂದೂ, ಉಜ್ಜಯಿನಿಯವನೆಂದೂ ಪಾಟಲಿಪುತ್ರದವನೆಂದೂ ವಂಗೀಯನೆಂದೂ§ ವ್ಯವಹರಿಸುವರು.

ಜನಜನಿತಕಥೆಯಂತೆ ಮಗಧದೇಶದವನೆಂದು ಹೇಳಬೇಕಾಗುವುದು. $ 'ಕಾಳಿದಾಸ'ನೆಂಬ ಹೆಸರಿನ ಜನಜನಿತವಾದ ಕಥೆಗಳು ಎಷ್ಟೋ ಪ್ರಚುರಗೊಂಡಿವೆ. ಆದರೆ ಅವುಗಳನ್ನು ಮನೋರಂಜಕಕಥೆಗಳೆನ್ನಬಹುದೇ ಹೊರತು ಚರಿತ್ರೆಯೆಂದಾಗಲಿ ಇತಿಹಾಸವೆಂದಾಗಲಿ ಹೇಳಲಾಗುವುದಿಲ್ಲ. ಕಾಳಿದಾಸನೆಂಬ ಹೆಸರು ಕಾಳಿಯ ವರಪ್ರಸಾದಲಬ್ಧವಾದುದೆನ್ನುವುದಾದರೆ ಇವನ ನಿಜವಾದ ಹೆಸರಾವುದೆಂಬುದು ಎಲ್ಲಿಯೂ ದೊರೆಯುವಂತಿಲ್ಲ.

ಕಾಳಿದಾಸನು **ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಳಾ** ಎಂಬ ಮೂರು ನಾಟಕಗಳನ್ನು ಬರೆದಿರುವನು.

**ಕಾಲವಿಚಾರ:—** ಇವನ ಕಾಲವಿಚಾರವಾಗಿ ಪಾಶ್ಚಾತ್ಯ ಮತ್ತು ಪೌರ್ವಾತ್ಯವಿದ್ವನ್ಮಣಿಗಳು ಶೋಧಿಸಿಶೋಧಿಸಿ ಅವರವರಿಗೆ ತೋರಿದಂತೆ ವಿಷಯಸಮರ್ಥನ ಮಾಡಿರುವರು. ಪ್ರತಿಯೊಬ್ಬರ ಅಭಿಪ್ರಾಯವೂ ಪರಸ್ಪರ ಭಿನ್ನವಿನಿರುವುದು. ಒಬ್ಬರು ಒಂದುಕಾಲವನ್ನು ನಿಷ್ಕರ್ಷಿಸಿ ಈ ಕಾಲದಲ್ಲಿ ಕಾಳಿದಾಸನು ಇದ್ದಿರಬಹುದೆಂದ ಕೂಡಲೇ ಮತ್ತೊಬ್ಬರು ಅದನ್ನು ಖಂಡಿಸಿ ತಾವು ಹೇಳುವ ಕಾಲವನ್ನು ಸಮರ್ಥಿಸುವರು. ಹೀಗಾಗಿ ಇದುವರೆಗೂ ಕಾಳಿದಾಸನ ಕಾಲವು ನೆಲೆಯಿಲ್ಲದಂತಾಗಿರುವುದು. ಕ್ರಿ. ಶ. ೧ನೆಯ ಶತಮಾನದಿಂದ ೬ನೆಯ ಶತಮಾನದವರೆಗಿನ ಮಧ್ಯಕಾಲಗಳಲ್ಲಿ ಇರಬೇಕೆಂದು ಹಲವು ಪಂಡಿತರ ಮತವಿರುವುದು. ಕ್ರಿಸ್ತಪೂರ್ವವೆಂದು ಸರ್ ವಿಲಿಯಂ ಜೋನ್ಸ್‌ರೇ ಮೊದಲಾದ ಕೆಲವು ಪಂಡಿತರ ಮತವಿರುವುದು.

---

§ ಬಂಗಾಳದೇಶದ (ವಂಗಸಾಮ್ರಾಜ್ಯ) ರಾಜಧಾನಿಯಾದ (ಕಲಿಕತ್ತಾ) ಕಾಳೀಘಟ್ಟದಲ್ಲಿ ಕಾಳಿಯಾಲಯವು ಇರುವುದರಿಂದಲೂ ಮತ್ತೆಲ್ಲಿಯೂ ಇಲ್ಲದಿರುವದರಿಂದಲೂ ಕಾಳಿದಾಸನು ವಂಗೀಯನಾಗಿರಬೇಕೆಂದು ವಂಗದೇಶೀಯರು ಕೆಲವರು ವ್ಯವಹರಿಸುವರು.

$ The Indian Antiquary

ಕಾಳಿದಾಸನು ಕ್ರಿ. ಪೂ. ಎರಡನೆಯ ಶತಮಾನದವನೆಂದು ಇವನ ಮಾಳವಿಕಾಗ್ನಿಮಿತ್ರದ ಭರತವಾಕ್ಯದಿಂದಲೂ ಸರ್ ಜಾನ್‌ಮಾರ್ಷಲರವರು ಇತ್ತೀಚೆಗೆ ಶೋಧಿಸಿದುದರಲ್ಲಿ ಅಲಹಾಬಾದಿನ 'ಭಿಟ' ಎಂಬಲ್ಲಿ ತೋರೆತ ಒಂದಾನೊಂದು ಲೋಹಬಿಲ್ಲೆಯ ಸೋಟದಿಂದಲೂ ಸಮರ್ಥಿಸಬಹುದಾಗಿದೆ.

ಮಾಳವಿಕಾಗ್ನಿಮಿತ್ರದ ಭರತವಾಕ್ಯವು ಹೀಗಿರುವುದು—

ತ್ವಂ ಮೇ ಪ್ರಸೀದ ಸುಮುಖೀ ಭವ ಚಂಡಿ ನಿತ್ಯಂ
ಏತಾವದೇವ ಮೃಗಯೇ ಪ್ರತಿಪಕ್ಷಹೇತೋಃ ॥
ಆಶಾಸ್ಯಮೀತಿವಿಗಮಪ್ರಭೃತಿಪ್ರಜಾನಾಂ
ಸಂಪತ್ಸ್ಯತೇ ನ ಖಲು ಗೋಪ್ತರಿ ನಾಗ್ನಿಮಿತ್ರೇ ॥*

ಎಂದು ಇದರಲ್ಲಿಮಾತ್ರ ಅಗ್ನಿಮಿತ್ರನ ಹೆಸರನ್ನು ಹೇಳಿರುವುದು ಹೊರತು ಇವನ ಮತ್ತೆರಡು ನಾಟಕಗಳಲ್ಲಿನ ಭರತವಾಕ್ಯಗಳು ಸಾಮಾನ್ಯವಾಗಿ ರಾಜರೆಲ್ಲರಿಗೂ ಅನ್ವಯಿಸುವಂತೆ ಹೇಳಲ್ಪಟ್ಟಿರುವುವು. ಇದು ಆಶೀರ್ವಚನವಲ್ಲ; "ಅಗ್ನಿಮಿತ್ರನು ಸಿಂಹಾಸನವನ್ನು ಹತ್ತಿದ ಮೊದಲು ಅವರವರ ಅಭೀಷ್ಟವು ಸಿದ್ಧಿಸಲಿಲ್ಲ ಎಂದು ಯಾರುತಾನೇ ಹೇಳುವರು" ಎಂಬರ್ಥವನ್ನು ಕೊಡುವುದು. ಇದನ್ನು ವಿಕ್ರಮೋರ್ವಶೀಯದ "ಸರ್ವಸ್ತರತು" ಎಂಬುದಕ್ಕೂ ಶಾಕುಂತಲದ "ನಂದತು" ಎಂಬುದಕ್ಕೂ ಹೋಲಿಸಿನೋಡಿದರೆ ಎಂತಹನಿಗಾದರೂ ವ್ಯತ್ಯಾಸವು ಕಂಡುಬರಲಾರದಿರದು.

ಇದಲ್ಲದೆ ಮಾಳವಿಕಾಗ್ನಿಮಿತ್ರದ ಕೊನೆಯ ಶ್ಲೋಕದ ಕ್ರಿಯಾಪದವು ವರ್ತಮಾನಕಾಲದಲ್ಲಿ ಹೇಳಲ್ಪಟ್ಟಿರುವುದು. 'ಸಂಪದ್ಯತೇ' ಎಂಬುದಕ್ಕೆ ಬದಲು "ಸಂಪತ್ಸ್ಯತೇ" ಎಂದು ಹೇಳಿರುವುದರಿಂದಲೂ 'ಸಂಪತ್ಸ್ಯತೇ' ಎಂದು ಹೇಳಿದುದುಸಾಲದೆ ಮತ್ತೂ ಹೆಚ್ಚಾಗಿ ಒತ್ತಿ ಹೇಳುವುದಕ್ಕಾಗಿ ಎರಡು ನಿಷೇಧಾರ್ಥ ಪ್ರತ್ಯಯಗಳನ್ನೊಂದಾಗಿಸೇರಿಸಿ "ಆಶಾಸ್ಯಂ ನ ಸಂಪತ್ಸ್ಯತೇ ನ"ಎಂದು ಹೇಳಿ ಅದೂ ಸಾಲದೆ "ಖಲು" ಶಬ್ದವನ್ನೂ ಪ್ರಯೋಗಿಸಿರುವುದರಿಂದಲೂ ಇವನು ಅಗ್ನಿಮಿತ್ರನ ಸಮಕಾಲಿಕನಾಗಿರಬೇಕೆಂದು ಗೊತ್ತಾಗುವುದು.

ಅಗ್ನಿಮಿತ್ರನು ಸಂಗವಂಶದವನಾದ ಪುಷ್ಯಮಿತ್ರನ ಮಗನು. ಪುಷ್ಯಮಿತ್ರನು ಕ್ರಿ. ಪೂ. ೧೭೮ರಲ್ಲಿ ಮೌರ್ಯವಂಶದ ಕೊನೆಯರಸನನ್ನು ಪದಚ್ಯುತನನ್ನಾಗಿಮಾಡಿ ತಾನು ಮಗಧಸಿಂಹಾಸನವನ್ನೇರಿದನು. ಅಗ್ನಿಮಿತ್ರನಕಾಲಕ್ಕೆ

* Malavikagnimitra Bombay Sanskrit Series. vi Edited by Shankar P. Pandit in 1869. P. 113

"ವಿದಿಶಾ" ಎಂಬುದು ಮಗಧರಾಜ್ಯದ ರಾಜಧಾನಿಯಾಗಿದ್ದಿತು. ಮಾಳ ವಿಕೆಯು ವಿದರ್ಭರಾಜನ ಮಗಳು. ವಿಧರ್ಭನಗರದವರಿಗೂ ಮಗಧರಾಜ್ಯದ ವರಿಗೂ ಪರಸ್ಪರ ವೈರವಿದ್ದಿತಾಗಿ ತಿಳಿಯುಬರುತ್ತದೆ.‡

ಪುಷ್ಯಮಿತ್ರನು ಮೂವತ್ತುವರ್ಷಗಳು ರಾಜ್ಯವಾಳಿ ಸುಮಾರು ಕ್ರಿ. ಪೂ. ೧೪೮ರಲ್ಲಿ ಸತ್ತನಂತರ ಅಗ್ನಿಮಿತ್ರನು ರಾಜ್ಯಕ್ಕೆ ಬಂದುದಾಗಿ ತಿಳಿಯು ಬರುತ್ತದೆ.$ ಈ ಕಾರಣಗಳಿಂದ ಕಾಳಿದಾಸನು ಕ್ರಿ. ಪೂ. ಎರಡನೆಯ ಶತಮಾನ ದವನೆನಬೇಕಾಗುವುದು. ಅಲ್ಲದೆ ಹಿಂದಣ ಶ್ಲೋಕದಿಂದ ಕಾಳಿದಾಸನು ಅಗ್ನಿಮಿ ತ್ರನ ಸಂಪೂರ್ಣವಾದ ಆದರಕ್ಕೆಪಾತ್ರನಾಗಿದ್ದಿರಬಹುದಾಗಿಯೂ ತೋರುತ್ತದೆ. ಇಷ್ಟುಮಾತ್ರದಿಂದಲೇ ಅವನ ಆಸ್ಥಾನಪಂಡಿತನಾಗಿದ್ದನೆಂದಾಗಲಿ ಅಥವಾ ಅವನ ಆಶ್ರಯದಲ್ಲಿದ್ದನೆಂದಾಗಲಿ ಹೇಳಲಾಗುವುದಿಲ್ಲ.

ಅಲಹಾಬಾದಿನಬಳಿ 'ಬಿಟ' ಎಂಬಲ್ಲಿದೊರೆತುದಾಗಿ ಹೇಳಲ್ಪಟ್ಟಿರುವ ಲೋಹ ಬಿಲ್ಲೆಯು ಸುಂದರವಾಗಿರುವುದಲ್ಲದೆ ಶಾಕುಂತಲದ ಒಂದಾನೊಂದು ನೋಟ ವನ್ನು ಜ್ಞಾಪಕಕೊಡುವುದಾಗಿದೆ. ಅದರ ಮಧ್ಯದ ಚಾಕಾಕೃತಿಯಲ್ಲಿ ಹರಿಣಿ ಯನ್ನು ಕೊಲ್ಲಕೂಡದೆಂದು ಕೇಳಿಕೊಂಡಂತೆ ತೋರಿಸಲ್ಪಟ್ಟಿರುವುದು. ಇದು ದುಷ್ಯಂತನು ಹರಿಣಿಯನ್ನು ಕೊಲ್ಲಲು ಹೋದಾಗ ಋಷಿಕುಮಾರರು ಬೇಡ ವೆಂದು ತಡೆದುದನ್ನು ಜ್ಞಾಪಕಕ್ಕೆ ತರುವುದು. ರಾಜ, ಸೇವಕ ಮತ್ತು ಋಷಿ ಇವರು ಇರುವಂತೆಯೂ ಪರ್ಣಶಾಲೆಯಮುಂದೆ ಹುಡುಗಿಯೊಬ್ಬಳು ಮರ ಗಳಿಗೆ ನೀರೆರೆಯುವಂತೆಯೂ ಚಿತ್ರಿಸಲ್ಪಟ್ಟಿರುವುದರಿಂದ ಇವರು ದುಷ್ಯಂತ, ಸೂತ, ಕಥಾನಾಯಕಿಯಾದ ಶಕುಂತಲೆಯರಾಗಿರಬಹುದಾಗಿ ಬೋಧೆಯಾ ಗುತ್ತದೆ. ಇದು ಸಂಗರಾಜರ ಕಾಲದ್ದಾಗಿರಬಹದೆಂದು ಹೇಳಬಹುದಾ ಗಿದೆ.† ಸಂಗರಾಜರು ಪಾಟಲಿಪುತ್ರವನ್ನು ಕ್ರಿ. ಪೂ. ೧೮೪–೭೨ರ ವರೆಗೆ ಆಳಿದರು.* ಇವರಲ್ಲಿ ಅಗ್ನಿಮಿತ್ರನು ಮುಖ್ಯನು. ಆದುದರಿಂದ ಕಾಳಿದಾಸನು ಅಗ್ನಿಮಿತ್ರನ ಸಮಕಾಲಿಕನೆನಬೇಕಾಗುವುದು. ವಿಷಯವು ಹೀಗೆಯೇ ಸರಿ ಯೆಂದು ನಿಶ್ಚಯಿಸುವವರೆಗೂ ಸರ್ ಜಾನ್ ಮಾರ್ಷಲ್‌ರವರ ಹೇಳಿಕೆಯು

‡ Dr. A. B. Keith's—The Sanskrit Drama P. 147–149
$ Marsden's History of India Part I, P. 134–135.
† Introduction to Shakuntala by Saradaranjan Ray P.9.
* Evidence Bhita Madallian Research in Archeological Survey of India by Sir John Marshell.

ಆಧಾರದಮೇಲೆ ಕಾಳಿದಾಸನು ಕ್ರಿ. ಪೂ. ಎರಡನೆಯ ಶತಮಾನದವನೆನ್ನು ವುದರಲ್ಲಿ ಅಭ್ಯಂತರವಿರದಹಾಗೆ ತೋರುವುದು.

೩. ಶಾಕುಂತಲದಲ್ಲಿ ಬೌದ್ಧಮತತತ್ವದ್ಯೋತಕವರ್ಣನವಿರುವುದರಿಂದಲೂ ಕಾಳಿದಾಸನ ಕಾಲದಲ್ಲಿ ಬೌದ್ಧಮತವು ಅತ್ಯಂತೋಚ್ಛ್ರಾಯಸ್ಥಿತಿಯಲ್ಲಿದ್ದು. ಆಗಣರಾಜರು ಆ ಮತಪ್ರಚಾರಕ್ಕಾಗಿ ಪ್ರಯತ್ನಿಸುತ್ತಿದ್ದುದಾಗಿ ತಿಳಿಯ ಬರುವುದರಿಂದಲೂ, ಅವರಲ್ಲಿ ಹೆಚ್ಚಾಗಿ ಪ್ರಯತ್ನಿಸಿದವನು ಅಶೋಕನೆಂದೂ ಅವನು ಕ್ರಿ. ಪೂ. ೩ನೆಯ ಶತಮಾನದಲ್ಲಿದ್ದನೆಂದೂ ಇವನ ಅನಂತರ ಸಂಗರಾಜರ ಕಾಲವಾದುದರಿಂದ ಕಾಳಿದಾಸನು ಅಶೋಕನ ಅನಂತರ ಇರಬೇಕೆಂದೂ ಕಾಳಿ ದಾಸನ ಕಾಲಕ್ಕೆ ಸರ್ವಸಾಮಾನ್ಯವಾದ ಸಂಸ್ಕೃತಭಾಷೆಯು ಕೇವಲ ವಿದ್ವಾಂ ಸರ ಭಾಷೆಯಾಗಿದ್ದಿತೆಂದೂ ತಿಳಿದುಬರುವುದರಿಂದ ಕಾಳಿದಾಸನು ಕ್ರಿ. ಪೂ. ಎರಡನೆಯ ಶತಮಾನದವನೆನಬೇಕಾಗುವುದು.

ಕಾಳಿದಾಸನು ಮೌರ್ಯಸೇನಾಪತಿಯಾದ ಪುಷ್ಯಮಿತ್ರನನ್ನು ವರ್ಣಿಸಿರು ವುದಾಗಿ—

"ಇಹ ಪುಷ್ಯಮಿತ್ರಂ ಯಾಜಯಾಮಃ"

ಎಂಬ ಪತಂಜಲಿಯ ಮಹಾಭಾಷ್ಯವಾಕ್ಯದಿಂದ ತಿಳಿಯಬರುತ್ತದೆ.

ಕಾಳಿದಾಸನ ಕಾಲದ ವಿದ್ಯಾಭ್ಯಾಸ, ರಾಜಕೀಯ ಮತ್ತು ನಾಗರಿಕಸ್ಥಿತಿ ಗಳನ್ನು ಅಲ್ಲಲ್ಲಿ ಹೇಳಲ್ಪಟ್ಟಿರುವ ಉಪಮಾನೋಪಮೇಯಗಳಿಂದಲೂ ಸಣ್ಣಸಣ್ಣ ಕಥಾಭಾಗಗಳಿಂದಲೂ ಊಹಿಸಬಹುದಾಗಿದೆ:—ಕಾಳಿದಾಸನ ಕಾಲದಲ್ಲಿ ಋಷ್ಯಾ ಶ್ರಮಗಳೇ ವಿದ್ಯಾಶಾಲೆಗಳಾಗಿಯೂ ಋಷಿಗಳೇ ಅಧ್ಯಾಪಕರಾಗಿಯೂ ಇದ್ದು ದಾಗಿ ಕಂಡುಬರುತ್ತದೆ. ಅವನು ಹಾಗೆ ಹೇಳುವಾಗ ರಾಜನ ಕರ್ತವ್ಯ, ಪ್ರಜೆ ಗಳ ವಿದ್ಯಾಭ್ಯಾಸ, ವಿದ್ಯಾಶಾಲೆಗಳ ರಕ್ಷಣೆ, ಸ್ತ್ರೀವಿದ್ಯಾಭ್ಯಾಸಶಿಕ್ಷಣಸ್ವರೂಪ ಇವೇ ಮೊದಲಾದ ವಿಚಾರಗಳನ್ನು ಸಂದರ್ಭ ಒದಗಿದಾಗ ಹೇಳಿ ಮುಗಿಸಿರು ವನು. ಲೋಕಕಲ್ಯಾಣಕಾಂಕ್ಷಿಗಳಾಗಿ ನಿಸ್ವಾರ್ಥತೆಯಿಂದ ಜ್ಞಾನಬೋಧಕ ರಾಗಿದ್ದ ಋಷಿಗಳ ಆಶ್ರಮರಕ್ಷಣೆ, ವಿದ್ಯಾಭ್ಯಾಸಮಾಡುತ್ತಿರುವ ವಟುಗಳ ರಕ್ಷಣಾವೇಕ್ಷಣೆಗಳ ಭಾರವು ರಾಜನದಾಗಿರುತ್ತಿದ್ದಿತು. ಶಾಕುಂತಲನಾಟಕ ದಲ್ಲಿ ಕಣ್ವರಿಗೆ ಕುಲಪತಿಯೆಂಬ ಬಿರುದು ಬಂದಿರುವುದು. ಹತ್ತುಸಹಸ್ರ ಶಿಷ್ಯರಿಗೆ ಪಾಠಪ್ರವಚನಗಳನ್ನು ಹೇಳಿಕೊಡುವವನಿಗೆ ಕುಲಪತಿಯೆಂದು ಹೆಸರು. ಇಂತಹ ದೊಡ್ಡ ಸಂಸ್ಥೆಯ ರಕ್ಷಣಾವೇಕ್ಷಣಭಾರವು ದುಷ್ಯಂತನದಾಗಿರುತ್ತಿದ್ದಿತು. ಇದಕ್ಕಾಗಿ ರಾಜರಾದವರು ಬೇಕಾದಷ್ಟು ನೆಲವನ್ನು ಮಾನ್ಯವಾಗಿ ಕೊಟ್ಟಿ ದ್ದರು. ಅದಕ್ಕೆ ತೆರಿಗೆಮೊದಲಾದವು ಯಾವುವೂ ಇರುತ್ತಿರಲಿಲ್ಲ. ಕಾಳಿದಾಸನು

ಹೇಳಿರುವ ಆಶ್ರಮಗಳೆಲ್ಲವೂ ವಿದ್ಯಾಶಾಲೆಗಳಾಗಿದ್ದು, ಈಗಣ ನಗರಗಳಲ್ಲಿ ಕಂಡು ಬರುವ ಸರ್ವಕಲಾಶಾಲೆಗಳಂತೆ ಇರದೆ, ಜನಸಂದಣಿಯಿಲ್ಲದ ಪಟ್ಟಣಕ್ಕೆ ದೂರ ವಾಗಿ ನದಿಗಳ ದಡದಮೇಲೆ ಇರುತ್ತಿದ್ದುವು. ಇಂತಹ ವಿದ್ಯಾಶಾಲೆಗೆ ಮಹರ್ಷಿಯೊಬ್ಬನು ಯಾಜಮಾನ್ಯವನ್ನು ವಹಿಸಿರುತ್ತಿದ್ದನು. ಇಂತಹ ಸಂಸ್ಥೆಗೆ ಯಾವಭಾಗದಲ್ಲಿಯೂ ತೊಂದರೆಬಾರದಂತೆ ರಾಜನಾದವನು ಪದೇಪದೇ ಬಂದು ನೋಡಿಕೊಂಡು ಹೋಗುವ ವಾಡಿಕೆಯಿದ್ದಿತು. ಈ ವಿಚಾರವು ದುಷ್ಯಂತನು ಕಣ್ವಾಶ್ರಮಕ್ಕೆ ಹೋದಾಗ ನಡೆದ ವಿಚಾರಗಳಿಂದ ಗೊತ್ತಾಗುವುದು. ಉಪ ನಯನವಾದಕೂಡಲೇ ಹುಡುಗನು ವಿದ್ಯಾವ್ಯಾಸಂಗಕ್ಕಾಗಿ ಕಳುಹಿಸಲ್ಪಡುತ್ತಿ ದ್ದನು. ಮೊದಲನೆಯ ಮೂರುವರ್ಣದವನೂ ವಿದ್ಯಾಭ್ಯಾಸಮಾಡಬಹುದಾಗಿ ದ್ದಿತು. ಈ ಮೂರುವರ್ಣದವರಿಗೂ ವಿದ್ಯಾಭ್ಯಾಸವನ್ನು ಮಾಡಿಸಲೇಬೇಕೆಂಬ ನಿಯಮವಿದ್ದಿತು. ಹೀಗೆ ಕಳುಹಿಸಲ್ಪಟ್ಟ ಶಿಷ್ಯನು ಗುರುವಿನ ಹೇಳಿಕೆಯನ್ನು ಸ್ವಲ್ಪವೂ ಮೀರದೆ ಕೇವಲ ವಿಧೇಯನಾಗಿಯೂ ವಿದ್ಯಾಕಾಂಕ್ಷಿಯಾಗಿಯೂ ವ್ಯಾಸಂಗಮಾಡಬೇಕೆಂಬ ಕಟ್ಟಪ್ಪಣೆಯಿದ್ದಿತು. ಆಶ್ರಮಧರ್ಮವನ್ನು ಮೀರುವ ವಿದ್ಯಾವ್ಯಾಸಂಗದೂರರು ಆಶ್ರಮದಿಂದ ಹೊರಗೆ ಕಳುಹಿಸಲ್ಪಡುತ್ತಿದ್ದರು. ಉದಾಹರಣೆಗಾಗಿ ವಿಕ್ರಮೋರ್ವಶೀಯ ನಾಟಕದಲ್ಲಿ ಪುರೂರವನ ಮಗನಾದ ಆಯುಃಕುಮಾರನು ಜನ್ಮಪ್ರಭೃತಿ ಚ್ಯವನಋಷಿಯಾಶ್ರಮದಲ್ಲಿದ್ದು ಬೆಳೆಸಲ್ಪಟ್ಟ ವನಾದರೂ ನಿಯಮಬಾಹಿರನಾದುದರಿಂದ ಆವನ ತಂದೆಯ ಬಳಿಗೆ ಹಿಂದಕ್ಕೆ ಕಳು ಹಿಸಿಕೊಡಲ್ಪಟ್ಟವನಾದನು. ವಿದ್ಯಾವ್ಯಾಸಂಗವನ್ನು ಮಾಡುವವರು ಯಾವ ವಿಧವಾದ ವೇತನವನ್ನೂ ಕೊಡದೆ ಪುಕ್ಕಟೆಯಾಗಿ ಹೊಂದುವ ಸುಯೋಗವು ಇದ್ದಿತು. ಹಾಗೆ ಯಾರಾದರೂ ಕೊಡಬೇಕಾದರೆ ವ್ಯಾಸಂಗವು ಮುಗಿದ ಅನಂತರ ಅವರಿಗೆ ತೋರಿದಷ್ಟು ಗುರುದಕ್ಷಿಣೆಯನ್ನು ಕೊಟ್ಟುಹೋಗಬಹು ದಾಗಿದ್ದಿತು. ಅನಾಥರಾದ ವಿದ್ಯಾರ್ಥಿಗಳು ಯಾವುದನ್ನೂ ಕೊಡಬೇಕಾ ದುದಿರಲಿಲ್ಲ. ಕಾಳಿದಾಸನ ಕಾಲಕ್ಕೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ—ಈ ಮೂವರಿಗೂ ವಿದ್ಯಾಭ್ಯಾಸವು ಅಷ್ಟು ಅಗತ್ಯವಾದುದಾಗಿದ್ದರೂ ಬ್ರಾಹ್ಮಣ ಕ್ಷತ್ರಿಯರಿಗೆ ಮಾತ್ರವೇ ದೊರೆತುದಾಗಿ ವೈಶ್ಯರ ಓದಾಣಿಕೆಯು ಅವಿದ್ಯಾ ವಂತರ ಜತೆಯಲ್ಲಿ ಬೆರೆತುಹೋದಹಾಗೆ ತೋರುತ್ತದೆ. ವಿದ್ಯಾಭ್ಯಾಸದ ಜತೆಯಲ್ಲಿ ಓದುವುದು ಬರೆಯುವುದಲ್ಲದೆ ಚಿತ್ರಕೆಲಸ, ಸಂಗೀತ ಅಥವಾ ಗಾನ ಮತ್ತು ವ್ಯವಸಾಯವು ಕೂಡಾ ಭಾಗವಾಗಿರುತ್ತಿದ್ದವು. ಗಂಡಸರಂತೆ ಹೆಂಗಸ ರಿಗೂ ವಿದ್ಯಾಸೌಲಭ್ಯವು ಸಮವಾಗಿರುತ್ತಿತ್ತು. ಶಾಕುಂತಲದಲ್ಲಿನ ಮೂವರು ಕನ್ನಿಕೆಯರಿಗೂ ಓದುವುದು ಬರೆಯುವುದು ಮತ್ತು ಚಿತ್ರಗಳನ್ನು ಚಿತ್ರಿಸು

ವೃದು— ಈ ಮೂರೂ ಗೊತ್ತಿದ್ದುದಾಗಿ ತಿಳಿಯುಬರುತ್ತದೆ. ಗಂಡನ ಮನೆಗೆ ಹೊರಟುಹೋಗುವ ಶಕುಂತಲೆಯನ್ನು ಅಲಂಕರಿಸುವ ಭಾರವು ಸಖಿಯರಿಬ್ಬರ ಮೇಲೆ ಬಿದ್ದಿತ್ತು. ಆಭರಣಗಳೆಂದು ಈಗ ಹೇಳಿಸಿಕೊಳ್ಳುವ ಬೆಳ್ಳಿ ಬಂಗಾರದ ಒಡಿವೆಗಳಾವುವೂ ಅವರಿಗೆ ತಿಳಿಯದು. ಶರೀರದ ಈ ಭಾಗಕ್ಕೆ ಇಂತಹ ಆಭರಣ ವೆನ್ನುವುದನ್ನು ಮತ್ತಾವುದಾದರೂ ಚಿತ್ರಗಳನ್ನು ನೋಡಿ ಊಹಿಸಿ ತಿಳಿದು ಕೊಳ್ಳುವವಾಡಿಕೆಯಿದ್ದಿತು. ಬ್ರಾಹ್ಮಣವಿದ್ಯಾರ್ಥಿಗಳು ತಮಗೆ ಬೇಕಾದ ಸಾಹಿತ್ಯ–ವೇದ–ವೇದಾಂತಾದಿಪಾಠಪ್ರವಚನಗಳನ್ನೂ ಕ್ಷತ್ರಿಯವಿದ್ಯಾರ್ಥಿಗಳು ತಮಗೆ ತಕ್ಕಂಥಾ ಧನುರ್ವಿದ್ಯಾಭ್ಯಾಸವನ್ನೂ ಮಾಡುತ್ತಿದ್ದರು. ಈಗಣ ಹಾಗೆ ಒಂದೊಂದು ಶಾಸ್ತ್ರಕ್ಕೆ ಒಬ್ಬೊಬ್ಬ ಆಚಾರ್ಯನಿರುವಂತೆ ಆಗ ಇರಲಿಲ್ಲ. ಯಾವವಿಷಯವನ್ನಾದರೂ ಒಬ್ಬನೇ ಸಮರ್ಥಿಸಿ ಹೇಳುತ್ತಿದ್ದನು. ಉದಾಹರಣೆ ಗಾಗಿ ಪುರೂರವನ ಮಗ ಆಯುಃಕುಮಾರನು ಸಾಧಾರಣವಿದ್ಯಾಭ್ಯಾಸ ವನ್ನು ಮಾಡಿದ ಬಳಿಕ ಚ್ಯವನಋಷ್ಯಾಶ್ರಮದಲ್ಲಿ ಧನುರ್ವಿದ್ಯೆಯನ್ನು ಕಲಿತು ದಾಗಿ ಕಾಳಿದಾಸನು ಹೇಳಿರುವನು. ಪುಸ್ತಕಗಳೇಯಿಲ್ಲದ ಆಗಣ ಕಾಲ ದಲ್ಲಿ ಬಾಯಿಯಲ್ಲಿ ಹೇಳಿಕೊಟ್ಟು ಬಾಯಿಪಾಠ ಮಾಡಿಸುವ ಪದ್ಧತಿಯು ಇದ್ದಿತು. ಹೆಚ್ಚಿನ ವಿಷಯಗಳು ತಾಳಪತ್ರಸ್ಥವಾದುದಾಗಿ ಯಾವುದಾದ ರೊಂದು ಬಣ್ಣ ಅಥವಾ ಮಸಿಯಲ್ಲಿ ಬರೆಯಲ್ಪಡುತ್ತಿದ್ದವು. ತಾಳಪತ್ರದಲ್ಲಿ ಬರೆವ ವಿಚಾರವು ಕಾಳಿದಾಸನ ಹೇಳಿಕೆಯಿಂದ ಸ್ಥಿರಪಡುವುದು. ಊರ್ವಶಿಯು ಪುರೂರವನಿಗೆ ತಾಳಪತ್ರದಲ್ಲಿ ಬರೆದು ಕಳುಹಿಸಿದ ಪ್ರಣಯಲೇಖನ ವಿಚಾರ ವಾಗಿ ಪುರೂರವನು ವಿದೂಷಕನನ್ನು ನೋಡಿ "ಗೆಳೆಯ! ಅಗೋ! ಆ ಪತ್ರವನ್ನು ನಿಧಾನವಾಗಿ ಹರಿಯದಹಾಗೆ ತೆಗೆದುಕೋ. ಇಲ್ಲದಿದ್ದರೆ ಬೆರಳಿನ ಬೆವರಿನಿಂದ ಅಕ್ಷರಗಳು ಮಾಸಲಾಗಿ ಕಾಣದಂತಾಗಬಹುದು" ಎಂದು ಹೇಳಿರುವನು. ಅಕ್ಷರಾಭ್ಯಾಸಕ್ಕೆ ಮರದ ಹಲಗೆಗಳು ಉಪಯೋಗಿಸಲ್ಪಡುತ್ತಿದ್ದವು. ಹೆಚ್ಚು ವಿಷಯಗಳನ್ನು ತಮ್ಮ ಮಕ್ಕಳಿಗೆ ತಿಳಿಯಹೇಳಲು ತತ್ತದ್ವಿಷಯಗಳಲ್ಲಿ ಸಮರ್ಥ ರಾದವರನ್ನು ನಿಯಮಿಸಿಕೊಳ್ಳುವ ರೂಢಿಯು ಇದ್ದಿತು. ಕೆಲವು ಸಮಯ ಗಳಲ್ಲಿ ತಂದೆಯಾದವನೇ ವಿರಾಮಕಾಲಗಳಲ್ಲಿ ತನ್ನ ಮಕ್ಕಳಿಗೆ ಹೇಳಿಕೊಡುವ ವಾಡಿಕೆಯೂ ಇದ್ದಿತು. ತಂದೆಯಾದವನು ಧರ್ಮಮಾರ್ಗಾವಲಂಬಿಯಾಗಿದ್ದು ತನ್ನ ಮಕ್ಕಳ ಸನ್ನಡತೆಯ ವಿಚಾರವಾಗಿ ಅತ್ಯಂತಜಾಗರೂಕತೆಯಿಂದ ನೋಡಿ ಕೊಳ್ಳುವುದು ಅವನ ಕರ್ತವ್ಯವಾಗಿರುತ್ತಿದ್ದಿತು. ಆಗಣ ವಿದ್ಯೆಯು ಸನ್ನಡತೆ ಮತ್ತು ವಿನಯಗಳಿಗೆ ಕೇಂದ್ರಸ್ಥಾನವಾಗಿದ್ದಿತು—

"ವಿದ್ಯಾ ದದಾತಿ ವಿನಯಂ . . . . . ."

ಎಂಬುದು ವಿಕ್ರಮೋರ್ವಶೀಯದಲ್ಲಿಯೂ ಮಾಳವಿಕಾಗ್ನಿಮಿತ್ರದಲ್ಲಿಯೂ ಕಂಡುಬರುವುದು. ಸುಮ್ಮನೆ ಓದಿದಮಾತ್ರದಿಂದಲೇ ವಿದ್ವಾಂಸನೆನಿಸಿಕೊಳ್ಳ ಬಹುದು; ಆದರೆ ಅಂತಹನು ಆಚಾರ್ಯನೆನಿಸಿಕೊಳ್ಳನು. ಯಾವನು ತಾನು ಕಲಿತುದನ್ನು ಸುಲಭರೀತಿಯಿಂದ ವಿದ್ಯಾರ್ಥಿಗಳ ಮನಸ್ಸಿಗೆ ನಾಟುವಂತೆ ಹೇಳಲು ಶಕ್ತನೋ ಅಂತಹನು ಮಾತ್ರವೇ ಉಪಾಧ್ಯಾಯನೆನಿಸಿಕೊಳ್ಳುವನು. ಒಬ್ಬನು ತಾನು ಗ್ರಹಿಸುವುದರಲ್ಲಿ ಒಳ್ಳೇ ವಿದ್ವಾಂಸನಾಗಿದ್ದರೆ ಮತ್ತೊಬ್ಬನು ಅದನ್ನು ತಿಳಿಯಹೇಳುವುದರಲ್ಲಿ ಬುದ್ಧಿವಂತನಾಗಿರುವನು. ಇವೆರಡರಲ್ಲಿಯೂ ಯಾವನು ಶಕ್ತನೋ ಅಂತಹನು ಮಾತ್ರವೇ ಮಹಾಮಹೋಪಾಧ್ಯಾಯನೆನಿಸಿ ಕೊಳ್ಳಲಾಗುವನು. ಈ ವಿಷಯವು ಮಾಳವಿಕಾಗ್ನಿಮಿತ್ರದಲ್ಲಿ ಕಂಡುಬರುವುದು. ಸ್ತ್ರೀವಿದ್ಯಾಭ್ಯಾಸವು ಸಮವಾಗಿದ್ದಿತು. ರಾಜಕುಮಾರಿಯರು ಮಾತ್ರವಲ್ಲದೆ ಆಶ್ರಮವಾಸಿಗಳಾದ ಮುನಿಕನ್ನಿಕೆಯರೂ ಕೂಡಾ ಓದುವುದನ್ನೂ ಬರೆಯುವು ದನ್ನೂ ಚಿತ್ರಿಸುವುದನ್ನೂ ಹಾಡುವುದನ್ನೂ ಕಲಿತಿರುತ್ತಿದ್ದರು. ಊರ್ವಶಿಯು ಅಪ್ಸರಸ್ತ್ರೀಳು, ಮಾಳವಿಕೆಯೂ ಹಾಗೆಯೇ. ಕನ್ನಿಕೆಯರು ಪ್ರಾಯಸಮರ್ಥ ರಾಗಿ ವಿವಾಹಿತರಾಗುವವರೆಗೂ ಓದುತ್ತಿದ್ದರು. ಇದು ಶಾಕುಂತಲನಾಟಕ ದಲ್ಲಿ ಕಂಡುಬರುವುದು. ಕಾಳಿದಾಸನ ಕಾಲದಲ್ಲಿ ಬಾಲ್ಯವಿವಾಹವಿರಲಿಲ್ಲ. ಗಂಡಸರಾಗಲಿ ಅಥವಾ ಹೆಂಗಸರಾಗಲಿ ವಿದ್ಯಾಭ್ಯಾಸವು ಮುಗಿದನಂತರವೇ ವಿವಾಹವಾಗುತ್ತಿದ್ದುದಾಗಿ ತಿಳಿಯಬರುತ್ತದೆ.

ಕಾಳಿದಾಸನ ಸ್ತ್ರೀವರ್ಣನವು ಅನ್ಯಾದೃಶವಾದುದು. ಮಾಳವಿಕಾಗ್ನಿ ಮಿತ್ರವನ್ನು ಕಾಳಿದಾಸನು ಬರೆದುದಾಗಿ ತೋರುವುದಿಲ್ಲವೆಂದು ಕೆಲವರು ಸಂದೇಹಪಡುವರು. ಈ ಮೂರುರೂಪಕಗಳನ್ನೂ ಕಾಳಿದಾಸನೇ ಬರೆದು ದೆಂಬುದಕ್ಕೆ ಸಾಕಾದಷ್ಟು ಕಾರಣಗಳಿರುವುವು. ಕಾಳಿದಾಸನು ಸ್ತ್ರೀರೂಪ ವರ್ಣನೆಯನ್ನು ಭಿನ್ನಭಿನ್ನವ್ಯಕ್ತಿಗಳಿಂದ ತೋರಿಸಿರುವನು. ಮಾಳವಿಕಾಗ್ನಿ ಮಿತ್ರದ ಪಾತ್ರಗಳು ಕೇವಲ ಮಾನುಷಪ್ರಪಂಚಕ್ಕೆ ಸಂಬಂಧಪಟ್ಟವುಗಳಾಗಿ ರುವುವು. ಮಾಲವಿಕೆಯು ವಿದರ್ಭರಾಜನ ಮಗಳು. ಇವಳನ್ನು ಮಾಲವಾಧಿಪ ನಿಗೆ ಕೊಡತಕ್ಕುದೆಂದು ನಿಶ್ಚಯಿಸಲ್ಪಟ್ಟುದುದರಿಂದ ಇವಳಿಗೆ "ಮಾಲವಿಕಾ" ಎಂಬ ನಾಮಾಂತರವಾದುದಾಗಿ ತೋರುವುದು.

ವಿಕ್ರಮೋರ್ವಶೀಯದ ಪಾತ್ರಗಳು ಕೇವಲ ಸುರಲೋಕಸಂಬಂಧವಾದು ವುಗಳಾಗಿರುವುವು. ಊರ್ವಶಿಯು ಅಪ್ಸರಾಂಗನೆ. ಅವಳ ಸಹಚಾರಿಣಿಯೂ ಅಪ್ಸರಳು. ಭಾರ್ಗವಮುನಿಯು ಸುರಲೋಕನಾಟ್ಯಕಾರನು. ಭಾರ್ಗವ ಮುನಿಯ ನಾಟಕದಲ್ಲಿ ಊರ್ವಶಿಯು ಅಭಿನಯಿಸುವಳು.

ಶಾಕುಂತಲದ ಪಾತ್ರಗಳಲ್ಲಿ ಕೆಲವು ಸುರಲೋಕಸಂಬಂಧವಾದುವೂ ಕೆಲವು ನರಲೋಕಸಂಬಂಧವಾದುವೂ ಆಗಿರುವುವು.

ಮಹಾಕವಿಕಾಳಿದಾಸನು 'ಮಾಲವಿಕಾಗ್ನಿಮಿತ್ರ'ದಲ್ಲಿ ನರಲೋಕವಿಷಯ ವರ್ಣನೆಗಳನ್ನೂ ವಿಕ್ರಮೋರ್ವಶೀಯದಲ್ಲಿ ಸುರಲೋಕವಿಷಯವರ್ಣನೆಗಳನ್ನೂ ಮಾಡಿ ತೃಪ್ತನಾಗದೆ ಶಾಕುಂತಲದಲ್ಲಿ ಇವೆರಡನ್ನೂ ಅನುಸರಿಸಿ ಕೃತಕೃತ್ಯನಾಗಿರುವನು.

**ಮಾಲವಿಕಾ—**

ವಿದಿಶಾನಗರದ ರಂಗಮಂದಿರದಲ್ಲಿ ರಾಜ್ಞಿಯಾದ ಧಾರಿಣೀಪಂಡಿತ ಕೌಶಿಕಾವಿದೂಷಕರೊಡನೆ ರಾಜನಾದ ಅಗ್ನಿಮಿತ್ರನು ಕುಳಿತುಕೊಂಡಿರುವಾಗ ನಾಟ್ಯಾಚಾರ್ಯನಾದ ಗಣದಾಸನು ಶಿಷ್ಯಳಾದ ಮಾಳವಿಕೆಯನ್ನು ಕುರಿತು— ಎಲೆ ಮಾಳವಿಕೆ! ಹೆದರಬೇಡ. ತೆರೆಮರೆಯನ್ನು ಬಿಟ್ಟು ರಂಗಸ್ಥಳಕ್ಕೆ ಬಾರೆಂದು ಹೇಳಿದಕೂಡಲೇ ಮಾಳವಿಕೆಯು ರಂಗಸ್ಥಳವನ್ನು ಪ್ರವೇಶಿಸಿದಳು. ಈ ಸಂದರ್ಭದಲ್ಲಿ ರಾಜನಿಗೆ ಮಾಳವಿಕೆಯ ಪ್ರಥಮಸಂದರ್ಶನವಾದುದು.

ಪಟಸ್ಥವಾಗಿ ಮೊದಲು ತೋರಿಸಿದ ಮಾಳವಿಕೆಯ ಚಿತ್ರಕ್ಕೂ ಈಗ ಪ್ರತ್ಯಕ್ಷದಲ್ಲಿರುವ ನೈಸರ್ಗಿಕಸುಂದರಿಯಾದ ಮಾಳವಿಕೆಗೂ ಎಷ್ಟೋ ಭೇದ ವಿರುವುದೆಂದು ತಿಳಿಯುತ್ತ ರಾಜನು ಸುಂದರಿಯ ಸೌಂದರ್ಯದಲ್ಲಿ ಮುಗ್ಧನಾಗಿರುವಾಗ ಗಣದಾಸನು ಶರ್ಮಿಷ್ಠಾಪ್ರಣೀತವಾದ 'ಚತುಷ್ಪಾದಿಕಾ'ಎಂಬ ಗಾನವನ್ನೂ 'ಛತ್ರಿಕಾ' ಎಂಬ ನೃತ್ಯವನ್ನೂ ಮಾಳವಿಕೆಯಿಂದ ಮಾಡಿಸುವ ನೆಪದಲ್ಲಿ ಮಾಳವಿಕೆಯನ್ನು ಎರಡನೆಯಾವರ್ತಿ ರಾಜನಿಗೆ ತೋರಿಸಿರುವನು. ಇಷ್ಟರಲ್ಲಿಯೇ ಕವಿಯು ತೃಪ್ತನಾಗದೆ ನರ್ತನಪೂರ್ತಿಯಾದ ಅನಂತರ ಹೊರಟುಹೋಗಲುದ್ಯುಕ್ತಳಾದ ಮಾಳವಿಕೆಯನ್ನು ಕುರಿತು ಎಲೆ, ಮಾಳವಿಕೆ! ಸ್ವಲ್ಪ ನಿಲ್ಲು; ನಿನ್ನ ನಾಟ್ಯದಲ್ಲಿ ಸ್ವಲ್ಪ ದೋಷತೋರುವುದು ಎಂದು ವಿದೂಷಕನಿಂದ ಹೇಳಿಸಿ ಅದನ್ನು ತಿದ್ದಿಹೇಳಿದನಂತರ ಹೊರಟುಹೋಗುವವಳಾಗೆಂದು ಗಣದಾಸನಿಂದ ಆಜ್ಞಾಪಿತಳಾಗುವ ಸಂಧಿಯನ್ನು ಕಲ್ಪಿಸಿಕೊಟ್ಟಿರುವನು. ಹಾಗೆ ತಿದ್ದಿ ಹೇಳಲು ಕೆಲಕಾಲ ನಿಂತುಕೊಳ್ಳುವಹಾಗೆ ಮಾಳವಿಕೆಗೆ ಕಾಲವನ್ನು ಕಲ್ಪಿಸಿ ರಾಣಿಯೂ ಗಣದಾಸನೂ ಇಬ್ಬರೂ ವಾಗ್ವಾದಕ್ಕೆ ಆರಂಭಿಸುವಂತೆ ಮಾಡಿ ಪಂಡಿತಕೌಶಿಕಿಯು ಸಮಾಧಾನಮಾಡಿದಳೆಂಬುದನ್ನೂ ಸೂಚಿಸುವ ಸಂದರ್ಭದಲ್ಲಿ ರಾಜನು ಪುನಃ ಮಾಳವಿಕೆಯನ್ನು ನೋಡುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟಿರುವನು. ಇದಲ್ಲದೆ ಮಾಳವಿಕೆಯು ಹೇಳಿ ತೋರಿಸಿದುದರಲ್ಲಿ ತಪ್ಪೇನಿರುವುದು? ಎಂದು ವಿದೂಷಕನನ್ನು ಅಲ್ಲಿದ್ದ ನಾಲ್ಕುಜನರು ಕೇಳಿದು

ದಕ್ಕೆ ಮೊದಲು ನೃತ್ಯಾರಂಭಸಮಯದಲ್ಲಿ ಬ್ರಾಹ್ಮಣಪೂಜೆಯನ್ನು ಮಾಡ ದಿರುವುದು ತಪ್ಪೆಂದು ಹೇಳಲು ಸಭಿಕರೆಲ್ಲರೂ ನಕ್ಕರು. ಮಾಳವಿಕೆಯೂ ನಕ್ಕಳು, ರಾಜನೂ ನಕ್ಕನು, ವಿದೂಷಕನು ಕಣ್ಣುಹುಟ್ಟಿದುದಕ್ಕೆ ಸಾರ್ಥ ಕವೆಂದನು. ಮತ್ತೊಂದುಸಲ ವಿದೂಷಕನು ಮಾಳವಿಕೆಯನ್ನು ಇನ್ನೂ ಕೆಲ ಹೊತ್ತು ರಂಗಸ್ಥಳದಲ್ಲಿರಲು ಅಪೇಕ್ಷಿಸಿದಾಗ ಕಾಳಿದಾಸನು ಮತ್ತೊಂದು ಸಂಧಿ ಯನ್ನು ಕಲ್ಪಿಸಿ ಆಗಲೂ ತೋರಿಸಿರುವನು. ಹೀಗೆ ಕಾಳಿದಾಸನು ಸುಂದರಿಯಾದ ಮಾಳವಿಕೆಯನ್ನು ಮೂರು ಅವಸ್ಥೆಗಳಲ್ಲಿಯೂ ತೋರಿಸಿ ರಾಜನನ್ನು ತೃಪ್ತಿ ಗೊಳಿಸಿರುವನು.

**ಊರ್ವಶಿ—**

ಊರ್ವಶಿಯು ಕುಬೇರನನ್ನಾರಾಧಿಸಿ ಚಿತ್ರಲೇಖೆಯೊಡನೆ ಹಿಂದಿರುಗಿ ಬರುವ ಮಾರ್ಗದಲ್ಲಿ ಕೇಶಿಯೆಂಬ ದೈತ್ಯನು ಊರ್ವಶಿಯನ್ನು ಎತ್ತಿಕೊಂಡು ಹೋಗಿಬಿಟ್ಟನು. ಇದನ್ನು ಕೇಳಿ ಅಪ್ಸರೆಯರು ಅಳಲಾರಂಭಿಸಿದರು. ಸೂರ್ಯೋ ಪಸ್ಥಾನವನ್ನು ಮುಗಿಸುವುದಕ್ಕಾಗಿ ಹೊರಗೆ ಬಂದ ಪುರೂರವನು ಈ ರೋದನ ವೇಕೆಂದು ಅವರನ್ನು ಕೇಳಲು, ಅವರು ಎಲೈ ರಾಜನೆ! ಕೇಶಿ ಎಂಬ ರಾಕ್ಷಸನು ನಮ್ಮ ಸಖಿಯಾದ ಊರ್ವಶಿಯನ್ನಪಹರಿಸಿಕೊಂಡು ಹೋಗಿರುವನು, ಕಾಪಾ ಡಿಕೊಡಬೇಕೆಂದು ಕೇಳಿಕೊಂಡರು. ಅಪ್ಸರೆಯರನ್ನು ಸಮಾಧಾನಗೊಳಿಸಿ ಪುರೂರವನು ಜಾಗ್ರತೆಯಾಗಿ ರಥವನ್ನು ನಡೆಯಿಸಿ ಕೇಶಿಯನ್ನು ಕೊಂದು ಊರ್ವಶಿಯನ್ನು ಕರೆದುಕೊಂಡು ಬಂದನು. ಇದೇ ಊರ್ವಶಿಯ ಮೊದಲ ನೆಯ ರಂಗಪ್ರವೇಶ ಅಥವಾ ಪ್ರಥಮಸಂದರ್ಶನ. ಅನಂತರ ಭಯವಿಹ್ವಲತೆ ಯಿಂದ ಮೂರ್ಛಿತಳಾಗಿರುವ ಊರ್ವಶಿಯನ್ನು ನೋಡಿ ಅಹಹ! ವಕ್ಷಸ್ಥಳದಲ್ಲಿ ಮಂದಮಾರುತನಾಘಾತನಿಂದ ಚಲಿಸುತ್ತಿರುವ ಈ ಮಂದಾರಪುಷ್ಪಹಾರವು ಹೃದಯದ ಭಯವನ್ನು ಸೂಚಿಸಿ ವಕ್ಷೋಜಗಳಮೇಲೆ ಬಿದ್ದು ಅಲುಗಾಡುವು ದೆಂದು ಹೇಳುತ್ತಾ ಅವಳ ಶರೀರಸೌಂದರ್ಯವನ್ನು ನೋಡಿ ಆಶ್ಚರ್ಯಪಡುತ್ತಿ ರುವಷ್ಟರಲ್ಲಿ ಊರ್ವಶಿಯು ಎಚ್ಚೆತ್ತವಳಾಗಿ ಎಲೆ, ಚಿತ್ರಲೇಖೆ! ನನ್ನನ್ನು ಈ ಕಷ್ಟದಿಂದ ಪಾರುಮಾಡಿದವರಾರು? ಸುರನಾಯಕನೇನು? ಎಂದು ಕೇಳಿದು ದಕ್ಕೆ ಚಿತ್ರಲೇಖೆಯು ಸುರನಾಯಕನಿಗೆ ಬದಲಾಗಿ ಈ ಪುರೂರವನು ನಿನ್ನನ್ನು ಕಾಪಾಡಿರುವನು ಎಂದುದನ್ನು ಕೇಳಿ ಊರ್ವಶಿಯು ಪುರೂರವನನ್ನು ನೋಡಿದಳು. ಪುರೂರವನೂ ಊರ್ವಶಿಯನ್ನು ನೋಡಿದನು. ಇದೇ ಎರಡ ನೆಯ ಸಂದರ್ಶನ. ಅನಂತರ ರಾಜನು ಊರ್ವಶಿಯ ಬರುವಿಕೆಯನ್ನು ಎದುರುನೋಡುತ್ತಾ ಹೇಮಕೂಟದಲ್ಲಿದ್ದಾಗ ಸಖಿಯರು ಅವನನ್ನು ಅವಳ

ಬಳಿಗೆ ಕರೆದುಕೊಂಡು ಹೋಗಲು ಅಲ್ಲಿ ದೊರೆತ ಆನಂದಸಂಭ್ರಮಸಂದರ್ಶನ. ಹೀಗೆ ಕಾಳಿದಾಸನು ಭಯಚೇತನಳಾಗಿರುವ ಊರ್ವಶಿಯನ್ನೂ, ಮುಮೂರ್ಷಾವಸ್ಥೆಯೊಳಗಣ ಊರ್ವಶಿಯನ್ನೂ, ಆನಂದಸಂದಾಯಕಳಾದ ಊರ್ವಶಿಯನ್ನೂ ಮೂರು ಅವಸ್ಥೆಗಳಲ್ಲಿ ತೋರಿಸಿರುವನು.

**⋆ಶಾಕುಂತಲಾ:—**

ರಾಜನು ದೂರದಲ್ಲಿರುವ ಶಕುಂತಲೆಯನ್ನು ನೋಡುವನು. ಮೂವರು ರಮಣಿಯರು ವೃಕ್ಷಗಳಿಗೆ ನೀರೆರೆಯುತ್ತಿದ್ದರು. ಇವರಲ್ಲಿ ಶಕುಂತಲೆಯು ಯಾರೆಂಬುದು ತಿಳಿಯದೆ ರಾಜನು ವಿಚಾರಮಗ್ನನಾದನು. ಇಲ್ಲಿ ಕಾಳಿದಾಸನು ಒಂದುಪಾಯವನ್ನು ಕಲ್ಪಿಸಿರುವನು. ಶಕುಂತಳೆಯು ಇಬ್ಬರು ಸಖಿಯರನ್ನು ನೋಡಿ ಸಖಿಯರೆ! ಈ ಕಡೆ ಈ ಕಡೆ ಎಂದು ಹೇಳಿದುದನ್ನು ಕೇಳಿ ಅವರಲ್ಲೊಬ್ಬಳು ಎಲೆ, ಶಕುಂತಳೆ! ನವಮಾಲಿಕಾಕುಸುಮದಂತೆ ಕೋಮಲವಾಗಿರುವ ನಿನ್ನನ್ನು ಈ ವೃಕ್ಷಗಳಿಗೆ ಜಲಸೇಚನಕ್ಕಾಗಿ ನಿಯಮಿಸಲ್ಪಟ್ಟಿರುವುದರಿಂದ ತಾತ ಕಣ್ವರ ಪ್ರೀತಿಯು ನಿನಗಿಂತಲೂ ಈ ವೃಕ್ಷಗಳಲ್ಲಿ ಹೆಚ್ಚಾಗಿರುವುದಾಗಿ ಭಾವಿಸುವೆನೆಂದಳು. ಅದನ್ನು ಕೇಳಿ ಶಕುಂತಲೆಯು ಕುಪಿತಳಾಗಿ ಸಖಿ! ತಂದೆಯಾಣತಿಯಂತೆ ಈ ವೃಕ್ಷಗಳಿಗೆ ನೀರೆರೆಯುವ ನನಗೆ ಈ ವೃಕ್ಷಗಳಲ್ಲಿ ಪ್ರೀತಿಯು ಇಲ್ಲವೆನ್ನುವೆಯಾ? ಎಂದು ಹೇಳುತ್ತಾ ವೃಕ್ಷಗಳಿಗೆ ನೀರೆರೆಯುವಳು. ಆಗ ದುಷ್ಯಂತನು ಈಕೆಯೇ ಶಕುಂತಳೆಯೆಂದು ತಿಳಿದುಕೊಂಡನು. "ಅಹಹ! ಪೂಜ್ಯರಾದ ಕಣ್ವರು ಇಂತಹ ಕುಸುಮಕೋಮಲೆಯನ್ನು ಇಂತಹ ಕಟುತರಕಾರ್ಯದಲ್ಲಿ ನಿಯೋಗಿಸಿರುವರೇಕೆ? ಕುವಲಯದಳಗಳಿಂದ ವೃಕ್ಷವನ್ನು ಛೇದಿಸಲು ಆಶಿಸುವರೇಕೆ?" ಎಂದು ಹೇಳುತ್ತಾ ಲತಾಕುಂಜದಲ್ಲಿ ಮರೆಯಾಗಿ ನಿಂತು ನೋಡುತ್ತಿದ್ದನು. ಇದೇ ದುಷ್ಯಂತನಿಗೆ ಆದ ಶಕುಂತಲೆಯ ಪ್ರಥಮಸಂದರ್ಶನ.

ಅನಂತರ ದುಷ್ಯಂತನು ಬಿಳಿಯ ನಾರುಮಡಿಯನ್ನುಟ್ಟ ಸುಂದರಿಯ ಶರೀರವನ್ನು ನೋಡಿ ಅಹಹ! ಕಮಲವು ಶೈವಲದಿಂದ ಮುಸುಕಲ್ಪಟ್ಟಿದ್ದಾಗ್ಯೂ ಶೋಭಾಯಮಾನವಾಗಿಯೇ ಇರುವುದು. ಪ್ರಪಂಚದಲ್ಲಿ ವಸ್ತುವಿನ ನೈಸರ್ಗಿಕರಮಣೀಯತೆಯೊಡನೆ ಸಂಸರ್ಗಗೊಳ್ಳುವ ಎಂತಹ ನಿಕೃಷ್ಟಪದಾರ್ಥವಾದರೂ ಹೃದ್ಯವಾಗಿಯೇ ಇರುವುದು—ಎಂದು ಶಕುಂತಲೆಯ ವಯೋರೂಪಲಾವಣ್ಯಾದಿಗಳನ್ನು ನೋಡುತ್ತಾ ಚೂತವೃಕ್ಷದ ಕೆಳಗೆ ನಿಂತಿರುವ ಶಕುಂತಲೆಯನ್ನು ನೋಡುತ್ತಿದ್ದನು. ಶಕುಂತಲೆಯು ಜಲಸೇಚನೆಯನ್ನು ಮಾಡುವಾಗ ಅಲ್ಲಾಡಿಸಲ್ಪಟ್ಟ ಮಾಲಿಕಾಗಿಡದಿಂದ ಒಂದು ಭ್ರಮರವು ಹೆದರಿ ಆ ಹೂವನ್ನು

ಬಿಟ್ಟು ಈಕೆಯ ಮುಖವನ್ನು ನೋಡಿ ಹೂವೆಂಬ ಭ್ರಾಂತಿಯಿಂದ ಮುಖಕ್ಕೆ ಬರಲಾರಂಭಿಸಿತು. ಏನು ಮಾಡಿದರೂ ಹೋಗದ ಆ ಭ್ರಮರವನ್ನು ನೋಡಿ ಶಕುಂತಲೆಯು ಅಹಹ! ಈ ದುಷ್ಟಭ್ರಮರದ ಬಾಧೆಯಿಂದ ನನ್ನನ್ನು ತಪ್ಪಿಸಿ ಕಾಪಾಡುವವರಾರೂ ಇಲ್ಲವೇ? ಎಂದು ಕೂಗಿಕೊಂಡಳು. ಅನಂತರ ಸಖಿಯರು ಶಕುಂತಲೆಯ ಕೂಗನ್ನು ಕೇಳಿ ಎಲೆ ಶಕುಂತಳೆ! ಭ್ರಮರದ ಬಾಧೆಯನ್ನು ಪರಿಹರಿಸುವದಕ್ಕಾಗಿ ದುಷ್ಯಂತರಾಜನನ್ನು ಕರೆಯೆಂದು ಪರಿಹಾಸ್ಯವಾಗಿ ಹೇಳಿದುದನ್ನು ಕೇಳಿ ರಾಜನು ಲತಾಮಂಟಪದ ಮರೆಯನ್ನು ಬಿಟ್ಟು ಶಕುಂತಲೆಯ ಎದುರಿನಲ್ಲಿ ಬಂದು ನಿಂತನು. ಇಲ್ಲಿ ಕವಿಯು ಶಕುಂತಲೆಯ ಮೂರನೆಯ ಅವಸ್ಥೆಯನ್ನು ದುಷ್ಯಂತನಿಗೆ ತೋರಿಸಲು ಅವಕಾಶವನ್ನು ಕಲ್ಪಿಸಿ ಕೊಟ್ಟಿರುವನು. ಈರೀತಿ ಕವಿಯು ಪ್ರತಿ ನಾಟಕದ ನಾಯಿಕೆಯರನ್ನೂ ಮೂರು ಅವಸ್ಥೆಗಳಲ್ಲಿಯೂ ತೋರಿಸಿರುವನು.

ಶಕುಂತಲೆಯು ರಾಜರ್ಷಿಯ ಮಗಳು. ಕಣ್ವಋಷಿಯಿಂದ ಪೋಷಿತಳು. ಸಂಸಾರಕಥಾಪ್ರಪಂಚವಿಚಾರವೇ ಗೊತ್ತಿಲ್ಲದವಳಿಗೆ ಕಣ್ವರಿಗೆ ದೇವಪೂಜಾಸಾಮಗ್ರಿಗಳನ್ನೊದಗಿಸುವುದು, ತಪೋವನವೃಕ್ಷಜಲಸೇಚನೆ — ಇವೆರಡೇ ಕೆಲಸಗಳು. ಶಕುಂತಲೆಯು ಮಾಲತಿಯ ಹಾಗೆ ಚತುರಳಲ್ಲ, ಊರ್ವಶಿಯ ಹಾಗೆ ಪ್ರೌಢಳಲ್ಲ. ಇಂತಹ ಮುಗ್ಧಳಾದ ಶಕುಂತಲೆಯನ್ನು—ತಪೋವನದಲ್ಲಿ ವೃಕ್ಷಗಳಿಗೆ ನೀರೆರೆಯುವಾಗ; ಆರ್ದ್ರವಲ್ಕಲವು ಶರೀರಕ್ಕೊದವಿಕೊಂಡಾಗ, ಭ್ರಮರಭಯವಿಹ್ವಲಳಾಗಿದ್ದಾಗ ಈ ಮೂರು ಅವಸ್ಥೆಗಳಲ್ಲಿಯೂ ತೋರಿಸಿರುವನು. ಮಾಲವಿಕೆಯು ರಾಜನನ್ನು ಪ್ರಥಮಾವಸ್ಥೆಯಲ್ಲಿಯೂ ಊರ್ವಶಿಯು ರಾಜನನ್ನು ದ್ವಿತೀಯಾವಸ್ಥೆಯಲ್ಲಿಯೂ ಮುಗ್ಧಳಾದ ಶಕುಂತಲೆಯು ರಾಜನನ್ನು ತೃತೀಯಾವಸ್ಥೆಯಲ್ಲಿಯೂ ನೋಡಿದ ಹಾಗೆ ತೋರಿಸಿರುವನು. ಈ ರೀತಿ ಕಾಳಿದಾಸನ ಮನೋವೃತ್ತಿಯು ಅನುಪಮಾನವಾದುದಾಗಿ ಸರ್ವೋತ್ಕೃಷ್ಟತೆಯಿಂದ ದೇಶವಿದೇಶಗಳಲ್ಲಿ ಬೆಳಗುತ್ತಿರುವುದು.

**ಮಾಳವಿಕಾಗ್ನಿಮಿತ್ರ:—**

ಮಗಧದೇಶದಲ್ಲಿ 'ವಿದಿಶಾ'ಎಂಬ ಪಟ್ಟಣವಿದ್ದಿತು. ಅದನ್ನು ಅಗ್ನಿಮಿತ್ರನೆಂಬ ಅರಸು ಪರಿಪಾಲಿಸುತ್ತಿದ್ದನು. ಇವನು ವಿದರ್ಭದೇಶದ ರಾಜಕುವರಿಯಾದ ಮಾಳವಿಕೆಯ ಸೌಂದರ್ಯಲುಬ್ಧನಾಗಿ ಇವಳನ್ನು ಮದುವೆಮಾಡಿಕೊಳ್ಳಬೇಕೆಂಬ ಅಪೇಕ್ಷೆಯನ್ನು ಮಾಳವಿಕೆಯ ಅಣ್ಣನಾದ ಮಾಧವನಿಗೆ ತಿಳಿಸಿದನು. ಇದನ್ನು ಕೇಳಿ ಸಂತೋಷಗೊಂಡು ಮಾಧವನು ತಂಗಿಯಾದ ಮಾಳವಿಕೆಯನ್ನು

ವಿದಿಶಾನಗರಕ್ಕೆ ಕರೆದುಕೊಂಡು ಹೋಗತಕ್ಕುದೆಂದು ಯೋಚಿಸುತ್ತಿರುವಷ್ಟ ರಲ್ಲಿ ಆಗ ವಿದರ್ಭರಾಜ್ಯವನ್ನಾಳುತ್ತಿದ್ದ ದಾಯಾದನಾದ ಯಜ್ಞಸೇನನು ಮಾಳ ವಿಕೆಯನ್ನು ಅಗ್ನಿಮಿತ್ರನಿಗೆ ಕೊಟ್ಟು ವಿವಾಹವಾದರೆ ಮಾಧವಸೇನನಿಗೆ ಸಹಾಯ ಸಂಪತ್ತುಗಳೊದಗಿ ತನ್ನ ಮೇಲೆ ತಿರುಗಿಬೀಳುವನೆಂಬ ಸೂಯೆಯಿಂದ ಮಾಧವ ಸೇನನನ್ನು ಸೆರೆಯಲ್ಲಿಡಿಸಿದನು.

ಇಂತಹ ಸಮಯದಲ್ಲಿ ಮಾಧವಸೇನನ ಮಂತ್ರಿಯಾದ ಸುಮತಿಯು ಮಾಳವಿಕೆಯನ್ನು ಯಜ್ಞಸೇನನಿಗೆ ಸಿಲುಕದಂತೆಮಾಡಿ ತನ್ನೊಡೆಯನ ಇಷ್ಟಕ್ಕೆ ಭಂಗಬಾರದಂತೆ ತನ್ನ ತಂಗಿಯಾದ ಕೌಶಿಕಿಯೊಡನೆ ವಿದಿಶಾನಗರಕ್ಕೆ ಕರೆದು ಕೊಂಡುಬರುತ್ತಿರುವಾಗ ಗ್ರಹಚಾರದೋಷದಿಂದ ಮಾರ್ಗಮಧ್ಯದಲ್ಲಿ ಕಳ್ಳರ ಕೈಗೆಸಿಲುಕಿ ಅವರೊಡನೆ ಕಾದಾಡಿ ಮಡಿದನು. ತಾನಾಗಿ ಬಂದೊದಗಿದ ವಿಪ ತ್ಪರಂಪರೆಯನ್ನೂ ಅಣ್ಣನು ಮೃತನಾದುದನ್ನೂ ನೋಡಿ ಕೌಶಿಕೆಯು ಮೈ ಮರೆತಳು. ಕಳ್ಳರು ಇವಳು ಸತ್ತಿರುವಳೆಂದೂಹಿಸಿ ಅನಾಥಳಾದ ಮಾಳ ವಿಕೆಯ ಆಭರಣಗಳನ್ನು ಕಳಚಿಕೊಂಡು ನರ್ಮದಾತೀರದಲ್ಲಿರುವ ಮಗಧ ಸೀಮಾಂತರದಲ್ಲಿ ಬಿಟ್ಟು ಹೊರಟುಹೋದರು. ಮಾಳವಿಕೆಯು ಕೊನೆಗೆ ಅಗ್ನಿ ಮಿತ್ರನ ದಳವಾಯಿಯಾದ ವೀರಸೇನನ ಬಳಿಸೇರಿದಳು. ಅವನು ತನ್ನ ಅಕ್ಕನೂ ಅಗ್ನಿಮಿತ್ರನ ಪಟ್ಟದರಾಣಿಯೂ ಆದ ಧಾರುಣಿಯಬಳಿಯಲ್ಲಿ ಮಾಳವಿಕೆಯು ಇರುವಂತೆ ಏರ್ಪಡಿಸಿದನು. ಧಾರುಣಿಯು ಅವಳ ರೂಪರೇಖಾವಿಲಾಸಗ ಳಿಗೂ ಸಂಗೀತವಿದ್ಯಾವೈಖರಿಗೂ ಅಭಿನಂದಿಸಿ ಇವಳಿಗೆ ಭರತಶಾಸ್ತ್ರವನ್ನು ಕಲಿಸಿಕೊಡಲು ಗಣದಾಸನೆಂಬ ನಾಟ್ಯಾಚಾರ್ಯನನ್ನು ಗೊತ್ತುಮಾಡಿ ರಾಜನ ದೃಷ್ಟಿಯು ಇವಳಮೇಲೆ ಬೀಳುವುದಾದರೆ ತನ್ನಮೇಲಣ ಅನುರಾಗವು ಕಡಿಮೆ ಯಾಗುವುದೆಂದೂಹಿಸಿ ರಾಜನ ದೃಷ್ಟಿಗೆ ಬೀಳಿಸದಂತೆ ಜಾಗರೂಕಳಾಗಿರು ತ್ತಿದ್ದಳು. ಇತ್ತ ಪಂಡಿತಕೌಶಿಕೆಯು ಮೂರ್ಛೆಯನ್ನು ತಿಳಿದೆದ್ದು ಸುತ್ತಲೂ ನೋಡಿ ಎದೆಗೆಡದೆ ಧೈರ್ಯವನ್ನವಲಂಬಿಸಿ ವಿದಿಶಾನಗರವನ್ನು ಸೇರಿ ಸನ್ಯಾಸ ಧರ್ಮವನ್ನು ಸ್ವೀಕರಿಸಿ ಧಾರುಣಿಗೆ ಪುರಾಣಪುಣ್ಯಕಥೆಗಳನ್ನು ಹೇಳುತ್ತಾ ಕಾಲಯಾಪನ ಮಾಡುತ್ತಿದ್ದಳು. ಹೀಗೆ ಕೆಲಕಾಲಾನಂತರ ಬಂದಾನೊಂದುದಿವಸ ಮಹಾರಾಜನು ರಾಜಾಂತಃಪುರಕ್ಕೆಬಂದು ಹಾಗೆಯೇ ಚಿತ್ರಪಟದಲ್ಲಿ ಧಾರುಣೀ ದೇವಿಯ ಬಳಿಸಲ್ಲಿ ನಿಂತಿರುವ ಹುಡುಗಿಯನ್ನು ಯಾರೆಂದು ವಿಚಾರಿಸಿ ಮಾಳವಿ ಕೆಯೆಂದು ತಿಳಿದುಕೊಂಡವನಾಗಿ ಆ ಹುಡುಗಿಯನ್ನು ಸಾಕ್ಷಾತ್ತಾಗಿನೋಡ ಲೆಳಸಿ ಧಾರುಣಿಗೆ ಸಂದೇಹಾಸ್ಪದವಾಗದಂತೆ ನಾಟ್ಯಪರೀಕ್ಷೆಯೆಂಬ ವ್ಯಾಜವನ್ನು ಹೂಡಿ ಗಣದಾಸನೊಡನೆ ಮಾಳವಿಕೆಯನ್ನು ರಾಜಾಂತಃಪುರಕ್ಕೆ ಬರಮಾಡಿ

ಕೊಂಡು ನಾಟ್ಯವಾಡುತ್ತಿರುವ ಮಾಳವಿಕೆಯನ್ನು ನೋಡಿ ಅವಳ ಸೌಂದರ್ಯ ಮಾಹಾತ್ಮ್ಯಧುರ್ಯಚಾತುರ್ಯಗಳಿಗೆ ಮೆಚ್ಚಿ ಧಾರಿಣಿಯ ಸಮ್ಮತದಿಂದ ಮದುವೆಯಾಗಿ ಸುಖವಾಗಿದ್ದನು. ಇದರಲ್ಲಿ ಐದು ಅಂಕಗಳಿರುವುವು.

**ವಿಕ್ರಮೋರ್ವಶೀಯ—**

ಇವನು ಕಥಾಭಾಗವನ್ನು ಪುರಾಣಗಳಿಂದ ಆರಿಸಿಕೊಂಡಿರುವನು. ಪುರೂರವ (ವಿಕ್ರಮ) ಊರ್ವಸಿಯರ ಸಂವಾದವು ಋಗ್ವೇದದಲ್ಲಿ ದೊರಕುವುದು. ದೇವಲೋಕದಲ್ಲಿದ್ದ ಊರ್ವಶಿಯು ಶಾಪಗ್ರಸ್ತಳಾಗಿ ಕೆಲಕಾಲ ಪುರೂರವನಿಗೆ ಹೆಂಡತಿಯಾಗಿದ್ದು ನಹುಷ*ನೆಂಬ ಮಗನನ್ನು ಪಡೆದು ಕಾಲಾಂತರದಲ್ಲಿ ಶಾಪ ವಿಮುಕ್ತಳಾಗಿ ಇಂದ್ರಲೋಕವನ್ನು ಸೇರಿದುದಾಗಿ ಶ್ರೀಮದ್ರಾಮಾಯಣದ ಉತ್ತರಕಾಂಡದ ೫೬ನೆಯ ಸರ್ಗದಲ್ಲಿ ಹೇಳಿರುವುದು.

ಪ್ರೊ. ವಿಲ್ಸನ್ ಪಂಡಿತರು "ಈ ನಾಟಕದ ಪ್ರಸ್ತಾವನೆಯ ಕಥೆಯು ಅಗ್ನಿ ಪುರಾಣದಿಂದ ತೆಗೆದುಕೊಳ್ಳಲ್ಪಟ್ಟು ಅನ್ಯೋಕ್ತಿಪರವಾಗಿರುವುದು. ಹೇಗೆಂದರೆ— ಇಲ್ಲಿ ನಾಯಕನು ಸೂರ್ಯನು, ನಾಯಿಕೆಯು ಉಷಾ ಎಂದು ಇರುವುದು. ಇವರೀರ್ವರೂ ಕೆಲಕಾಲ ಕೂಡಿದ್ದು ಅನಂತರ ಅಗಲುವರು. ವಿರಹದುಃಖಕಾತರನಾದ ಸೂರ್ಯನು ಪರ್ವತನದೀಮೊದಲಾದ ಪ್ರದೇಶಗಳಲ್ಲಿ ಏಕಾಕಿಯಾಗಿ ಸಂಚರಿಸುತ್ತಾ ಅಹಸ್ಸೆಲ್ಲವನ್ನೂ ಕಳೆದು ದಣಿದು ಕೊನೆಗೆ ತನ್ನ ಪ್ರಿಯಳೊಡನೆ ಸಮಾಗಮವಾಗುವನು. ಇದನ್ನು ತೆಗೆದುಕೊಂಡು ಕವಿಯು ತನ್ನ ನಾಟಕವನ್ನು ರಮಣೀಯವಾಗಿ ಬರೆದಿರುವನು" ಎಂದು ಹೇಳಿರುವರು. ಇದರಲ್ಲಿ ಐದು ಅಂಕಗಳಿರುವುವು.

**ಶಾಕುಂತಲಾ—**

ನಾಟಕಗಳಲ್ಲಿ ಶಾಕುಂತಲವು ಉತ್ತಮೋತ್ತಮವಾದುದರಿಂದಲೇ—

**"ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಂ ಶಕುಂತಲಾ"**

ಎಂದು ಹೇಳಲ್ಪಟ್ಟಿರುವುದು. ಕಾಳಿದಾಸನು ಈ ಕಥೆಯನ್ನು ಮಹಾಭಾರತದಿಂದ ಆರಿಸಿಕೊಂಡಿರುವನು. ಪುರುಕುಲದೀಪನಾದ ದುಷ್ಯಂತರಾಜನು ಬೇಟೆಯಾಡುತ್ತ ಬರುತ್ತಿರುವಾಗ ಕಣ್ವರ ಆಶ್ರಮವನ್ನು ನೋಡಿ ಪರಿವಾರವೆಲ್ಲವನ್ನೂ ಹಿಂದೆ ಬಿಟ್ಟು ತಾನೊರ್ವನೇ ಆಶ್ರಮವನ್ನು ಹೊಕ್ಕು ಅಲ್ಲಿರುವ ಶಕುಂತಲೆಯನ್ನು ನೋಡಿ ಅವಳ ಲಾವಣ್ಯಾಕೃತಿಗೆ ಮನಸೋತು ಗಾಂಧರ್ವವಿವಾಹವನ್ನು ಮಾಡಿಕೊಂಡು ತಾನು ಬೇಟೆಯಾಡಲು ಬಂದಿರುವುದಾಗಿಯೂ ಊರಿಗೆ ಹೋಗಿ

* ಕಾಳಿದಾಸನು ತಾನು ಬರೆದಿರುವುದರಲ್ಲಿ "ಆಯುಃಕುಮಾರ"ನೆಂದು ಹೇಳಿರುವನು. ನಹುಷನಿಗೇ "ಆಯುಃಕುಮಾರ"ನೆಂಬ ನಾಮಾಂತರವಿದ್ದಿತೋ, ಏನೋ ತಿಳಿಯದು.

ಆವಳನ್ನು ಕರೆಯಿಸಿಕೊಳ್ಳುವುದಾಗಿಯೂ ಹೇಳಿ ಹೊರಟುಹೋದನು. ಎಷ್ಟು ದಿವಸಗಳಾದರೂ ರಾಜನು ಬಾರದಿರುವುದನ್ನೂ ಅಥವಾ ಹೇಳಿಕಳುಹಿಸಿ ಕರೆಯಿಸಿ ಕೊಳ್ಳದುದನ್ನೂ ನೋಡಿ ತಾನೇ ತನ್ನ ಮಗನೊಡನೆ ರಾಜಾಸ್ಥಾನಕ್ಕೆ ಹೋಗಲು ಅಲ್ಲಿ ರಾಜನಿಂದ ತಿರಸ್ಕೃತಳಾಗಿ ಶಾಪಕೊಡಬೇಕೆಂದಿರುವಷ್ಟರಲ್ಲಿಯೇ "ಎಲೈ! ದುಷ್ಯಂತನೆ! ಈ ಶಕುಂತಲೆಯು ಪರಮಸಾಧ್ವೀಮಣಿಯು, ಪುತ್ರನೊಡನೆ ಬಂದ ಇವಳನ್ನು ಪರಿಗ್ರಹಿಸು" ಎಂದು ಆಕಾಶವಾಣಿಯಾದುದನ್ನು ಕೇಳಿ ಸಂತುಷ್ಟನಾಗಿ ಶಕುಂತಲೆಯನ್ನು ಪರಿಗ್ರಹಿಸಿ ಸುಖವಾಗಿರುತ್ತಿದ್ದನೆಂದು ಮಹಾಭಾರತದಲ್ಲಿ ಕಥೆಯು ಇರುವುದು. ಈ ಕಥೆಯು ಕರುಣರಸಪ್ರಧಾನ ವಾಗಿರುವುದು. ಇಂತಹ ಕಥೆಯನ್ನು ತೆಗೆದುಕೊಂಡು ರಸವಿಷಯಗಳಿಗೊಳ ಪಡುವಂತೆ ಭಿನ್ನವಿಸಿ ಶೃಂಗಾರರಸಪ್ರಧಾನವುಳ್ಳದಾಗಿರುವಂತೆ ರೂಪಿಸಿರುವನು. ಈ ನಾಟಕದಲ್ಲಿ ೭ ಅಂಕಗಳಿರುವುವು.

ಈಗಣ ಮಹಾಭಾರತದಲ್ಲಿ ಹೇಳಿರುವ ಶಕುಂತಲಾವಿಚಾರಕ್ಕೂ ಕಾಳಿ ದಾಸಕೃತವಾದ ಶಕುಂತಲೆಗೂ ಅನೇಕವ್ಯತ್ಯಾಸಗಳು ಕಂಡುಬರುವುವು. ಭಾರತದ ಕಥೆಗಳಲ್ಲಿ ಅನೇಕ ಕಡೆ ಸ್ತ್ರೀಪುರುಷರಿಗೆ ಪ್ರತ್ಯೇಕ ಪ್ರತ್ಯೇಕ ಧರ್ಮಾನುಷ್ಠಾನತತ್ಪರತೆಯನ್ನು ಬೋಧಿಸಿ ಆಯಾಯ ಪಾತ್ರಕ್ಕೆ ತಕ್ಕಂತೆ ಕೇವಲ ಧರ್ಮಪರಾಯಣತೆಯನ್ನು ಮಾತ್ರ ಪ್ರದರ್ಶಿಸಿ ಧರ್ಮೌಚಿತ್ಯವು ಸಮ ರ್ಥಿಸಲ್ಪಟ್ಟಿರುವುದು. ಈಗಣ ಕಾಲದ ಅಭಿರುಚಿಗೆ ತಕ್ಕಂತೆ ಆಯಾಯ ಪಾತ್ರ ಗಳಿಗೆ ಅಲಂಕಾರ-ಚಮತ್ಕಾರಗಳೆಂಬ ಮೆರಗನ್ನು ಹಚ್ಚಿ ಹೇಳಬೇಕಾದ ಅವಶ್ಯ ಕವಿರಲಿಲ್ಲವಾದುದರಿಂದಲೇ ಶಕುಂತಲೆಯನ್ನು ಪರಮ ಸಾಧ್ವೀಮಣಿಯನ್ನಾ ಗಿಯೂ ಶ್ರದ್ಧಾ-ಭಕ್ತಿ-ಜ್ಞಾನ-ವೈರಾಗ್ಯವೇ-ಮೊದಲಾದ ಸದ್ಗುಣಗಳಿಗೆ ಆಶ್ರ ಯಳಾದ ಕುಲಾಂಗನಾರತ್ನವನ್ನಾಗಿಯೂ ತಾಪಸಕನ್ನೆಯರೊಡನೆ ಹೋಲಿಸ ಬಹುದಾದ ಸುಶೀಲವತಿಯನ್ನಾಗಿಯೂ ಪ್ರದರ್ಶಿಸಿರುವನು. ದುಷ್ಯಂತ ನೊಡನೆ ಗಾಂಧರ್ವವಿವಾಹಾನಂತರವೂ ಕೂಡ ಶಕುಂತಲೆಯು ಕುಲಪತಿಯಾದ ಕಣ್ವರ ಬಳಿ ಶುಶ್ರೂಷೆಯನ್ನು ಮಾಡುತ್ತಾ ಸರ್ವಕಾಲ-ಸರ್ವಾವಸ್ಥೆಗಳಲ್ಲಿಯೂ ಆಶ್ರಮದಲ್ಲಿನ ಕೆಲಸಗಳನ್ನು ನಿರ್ವಹಿಸುತ್ತ ಅತಿಥಿ-ಅಭ್ಯಾಗತಪೂಜಾದಿ ಆಶ್ರ ಮಧರ್ಮಗಳಿಗೆ ಸ್ವಲ್ಪವೂ ನ್ಯೂನತೆ ಬಾರದಂತೆ ನೋಡಿಕೊಳ್ಳುತ್ತ ರಾಜಸ-ತಾಮಸ ವಿಚಾರಗಳಿಗೆಡೆಗೊಡದೆ ಧರ್ಮಶಿಕ್ಷಣರಕ್ಷಿತಳಾಗಿ ಮುನಿಜನಸೇವಾ ತತ್ಪರಳಾಗಿ ಗುರುಕುಲದಲ್ಲಿ ಶಿಕ್ಷೆಯನ್ನು ಹೊಂದುತ್ತ ಗುರುಶುಶ್ರೂಷಾರಸಾ ಯನಪಾನಪರವಶಳಾಗಿ ಲೋಕವನ್ನು ಮರೆತಿರುವ ನೈಷ್ಠಿಕಬ್ರಹ್ಮಚಾರಿಯಂತೆ ಇರುತ್ತಿದ್ದಳು. ಈ ಸಾಧ್ವೀಮಣಿಯ ಹೃದಯದಲ್ಲಿ ತನ್ನ ಮನೋಹರನ ಬಳಿಗೆ

ಹೊರಡಬೇಕೆಂಬ ಉತ್ಸುಕತೆಯು ಕಾಮೋಪಬೃಂಹಿತವಾದುದಾಗಿ ಮಹರ್ಷಿಯ ಆಶ್ರಮಸೇವಾಭಿರುಚಿಯನ್ನು ಕಡಿಮೆಮಾಡುವಷ್ಟು ನಾಗರಿಕತೆಯ ಅಂಕುರವು ಇನ್ನೂ ಉದಯಿಸಿರಲಿಲ್ಲ. ಅಂತಹ ಉತ್ಕಂಠತೆಯನ್ನು ಯಾವಾಗಲೂ ಸ್ವಂತವಾಗಿಯಾಗಲಿ ಅಥವಾ ಇತರರ ಮುಖದಿಂದಾಗಲಿ ಸೂಚಿಸದೆ ತನ್ನ ಕುಮಾರನಿಗೆ ಹನ್ನೆರಡು ವರುಷಗಳಾಗುವವರೆಗೂ ಶಕುಂತಲೆಯು ಕಣ್ವಾಶ್ರಮದಲ್ಲಿರುವವಳಾದಳು. ಇಲ್ಲಿ ಮಹಾಭಾರತಕರ್ತನ ಆಶಯವೇನಿರಬಹುದು? ಧರ್ಮಶ್ರದ್ಧೆಯಲ್ಲಿಯೂ ಸದ್ಗುಣಸಂಪತ್ತಿಯಲ್ಲಿಯೂ ನ್ಯೂನತೆಯುಂಟಾಗದಂತೆ ಧರ್ಮಾನುಷ್ಠಾನಪರತೆಯಿಂದ ಪಾತ್ರವನ್ನು ಪೋಷಿಸಿಕೊಳ್ಳುವುದು ಮಾತ್ರವೇ ಬೇಕಾಗಿದ್ದಿತೇ ಹೊರತು ತನ್ನ ಪತಿಯ ಮಾತನ್ನು ನಿರಾಕರಿಸಿ ಅಷ್ಟು ದೀರ್ಘಕಾಲ ಪಾಮರತ್ವದಿಂದ ಕುಲಪತಿಯಾದ ಕಣ್ವರ ಬಳಿಯಲ್ಲಿ ದರ್ಭೆಯ ಕೂರ್ಚಗಳನ್ನು ಕಟ್ಟುತ್ತ ಕಾಲಯಾಪನೆಮಾಡುವ ಕತದಿಂದ ಶಕುಂತಲೆಯನ್ನು ಅನಾಗರೀಕಳೆಂದು ಹೇಳುವರೆಂದಾಗಲಿ ವಿದಗ್ಧತೆ–ರತಿಪಾರವಶ್ಯ–ಕುಮಾರಪ್ರಾಯ (ಯೌವನ)ದ ಗುಣಗಳಿಲ್ಲದೆ ಶಕುಂತಲೆಯು ಪ್ರಪಂಚವನ್ನರಿಯದ ಮುಗ್ಧಾಂಗನೆಯೆಂದು ನವನಾಗರಿಕರು ಹೇಳುವರೆಂಬ ವಿಚಾರವು ಕಿಂಚಿತ್ತಾದರೂ ಇರಲಿಲ್ಲ. ಅವನಿಗೆ ಬೇಕಾದುದು ಧರ್ಮಶ್ರದ್ಧೆಮಾತ್ರವೆಂದು ತೋರುತ್ತದೆ.

ಶಾಕುಂತಲನಾಟಕದಲ್ಲಿ ಕಾಳಿದಾಸನು ತಾನು ಸಾಧಿಸಲೆಳಸಿರುವ ಆದಿರಸವಾದ ಶೃಂಗಾರವನ್ನು ವಿಚ್ಛೇದವಾಗದಂತೆ ಸಮುಚಿತಸಿದ್ಧಿಯನ್ನು ಮಾಡಿಕೊಳ್ಳುತ್ತಾ ಪಾತ್ರಗಳಿಗೂ ಪ್ರಸಂಗಗಳಿಗೂ ಸಮುಗ್ರೌಚಿತ್ಯವನ್ನು ತೋರಿಸುತ್ತಾ ಅಪೇಕ್ಷಿತಗಳಲ್ಲದ ವರ್ಣನಾತಿರೇಕದಲ್ಲಿ ಆಸಕ್ತಿಯನ್ನಿಡದೆ ಕಥಾಸಂವಿಧಾನಕೌಶಲದಲ್ಲಿ ನಿರುಪಮನಾಗಿ ರಸಿಕಸಂತತಿಗೆ ಸ್ಪೃಹಣೀಯನಾಗಿರುವನು.

ಇದರಲ್ಲಿ ಹಾಸ್ಯ–ಭಯಾನಕ–ಶಾಂತಾದಿ ರಸಗಳನ್ನೂ ವಾತ್ಸಲ್ಯ–ಭಕ್ತಿ–ಮುಂತಾದ ಭಾವಗಳನ್ನೂ ಅಲ್ಲಲ್ಲಿಗೆ ತಕ್ಕಂತೆ ತೋರಿಸಿರುವನಾದರೂ ಧಾರಾವಾಹಿನಿಯಾಗಿ ನಾಟಕಾದ್ಯಂತದಲ್ಲಿಯೂ ಪರಿವ್ಯಾಪ್ತಿತವಾಗಿರುವುದು ಶೃಂಗಾರರಸವಾಗಿರುವುದು. ನಾಟಕಗಳಲ್ಲಿ ಶೃಂಗಾರರಸವಾಗಲಿ ಅಥವಾ ವೀರರಸವಾಗಲಿ ಪ್ರಧಾನವಾಗಿರಬೇಕೆಂಬ ಲಾಕ್ಷಣಿಕಸಾಂಪ್ರದಾಯನಿಯಮಾನುಸಾರ ಶಾಕುಂತಲದಂತಹ ಲಲಿತರಚನೆಗಳಲ್ಲಿ ಶೃಂಗಾರರಸಕ್ಕೂ ಅನರ್ಘರಾಘವ, ಮಹಾವೀರಚರಿತೆಗಳತಂಹ ರಚನೆಗಳಲ್ಲಿ ವೀರರಸಕ್ಕೂ ವಸ್ತುಸೌಂದರ್ಯಜ್ಞರಾದ ಮಹಾಕವಿಕಾಳಿದಾಸಾದಿಗಳು ಪ್ರಾಧಾನ್ಯವಿತ್ತುದರಿಂದಲೇ ಆ ರಸಗಳ ಉತ್ಕರ್ಷತೆಯು ವ್ಯಕ್ತವಾಗುವುದು. ತಾನೇ ತಾನಾಗಿರುವ ಇಂತಹ ಶುದ್ಧ

ವಾದ ಶೃಂಗಾರರಸವು ಕೂಡ ಸಹೃದಯಹೃದಯಗಳಿಗೆ ಬೇಸರವಾಗಬಹು ದೆಂಬ ಶಂಕೆಯಿಂದ ಪ್ರಯೋಗಸೂಕ್ಷ್ಮಜ್ಞನಾದ ಮಹಾಕವಿಕಾಳಿದಾಸನು ತನ್ನ ನಾಟಕವನ್ನು ಏಳು ಅಂಕಗಳಾಗಿ ಭಾಗಿಸಿ— ಪ್ರಥಮಾಂಕದಲ್ಲಿ— ನಾಯಿಕಾನಾಯಕರಿಗೆ ನೈಜವಾಗಿ ಪ್ರಥಮದಲ್ಲಿ ಉಂಟಾಗುವ ಅನುರಾಗದ ನೂತನಾವಸ್ಥೆಯನ್ನು ಪೋಷಿಸಿ, ದ್ವಿತೀಯಾಂಕದಲ್ಲಿ— ಅದನ್ನೇ ಸ್ಮರ್ಯ ಮಾಣ ಮಧುರವಾಗುವಂತೆ ಪ್ರಯೋಗಿಸಿ, ತೃತೀಯಾಂಕದಲ್ಲಿ— ಸಂಭೋಗ ಶೃಂಗಾರರಸಮಯವಾದ ಭಾವಸಾಮಗ್ರಿಗಳೊಂದಿಗೆ ವ್ಯಕ್ತಗೊಳಿಸಿ, ಚತು ರ್ಥಾಂಕದಲ್ಲಿ— ರಸಿಕಹೃದಯಗಳನ್ನು ಸುಲಭವಾಗಿ ತಲ್ಲೀನಮಾಡಿಕೊಳ್ಳಬಲ್ಲ ವಾತ್ಸಲ್ಯವನ್ನು ತಾತಕಣ್ವರಲ್ಲಿಯೂ ಮಧುರಮಯಿಯಾದ ಶಕುಂತಲೆಯ ಲ್ಲಿಯೂ ಕಣ್ವಾಶ್ರಮದಲ್ಲಿ ಸರ್ವತ್ರ ಸಹಜಶಾಂತಿಪ್ರಸಾರಕ್ಕೆ ಸಹಿತ ಕಾಂತಿ ಯುಂಟಾಗುವಂತೆ ಪ್ರಕಟಿಸುತ್ತ ತತ್ಸಾದೃಶವಾಗಿ ಸೀಮಾತಿಗಾಮಿಯಾದ ಆ ವಾತ್ಸಲ್ಯಪ್ರವಾಹಕ್ಕೆ ಸೇತುವಾಗಿ ನಿಂತು ಶೃಂಗಾರರಸವೇ ಶಕುಂತಲೆಯ ಪತಿ ಗೃಹಯಾತ್ರೆಗೆ ನಿರ್ವಿಘ್ನಸಮಾರಂಭವೆಂಬುದನ್ನು ವ್ಯಕ್ತಪಡಿಸಿ ಪ್ರಧಾನಶೃಂಗಾರ ರಸಪೋಷಣೆಯನ್ನು ಸಮರ್ಥಿಸಿ, ಪಂಚಮಾಂಕದಲ್ಲಿ— ದೈವಾನುಕೂಲವಿಲ್ಲದೆ ರಸಕಾರ್ಯಗಳಿಗೆ ಪ್ರತಿಬಂಧಕವುಂಟಾದುದೆಂದು ನಾಯಕನಾಯಕಿಯರ ಅಂತರಂಗಸ್ನಿಗ್ಧತೆಯನ್ನು ಬಲಪಡಿಸುತ್ತ ಸ್ಥಿರವಾದ ಭಾವಪ್ರತಿಷ್ಠೆಯನ್ನು ತೊಲಗಿಸಲು ಶಕ್ಯವಲ್ಲವೆಂದು ಅದನ್ನು ಶಕುಂತಲಾ ಮತ್ತು ದುಷ್ಯಂತರ ಭಾಷಣಗಳಲ್ಲಿ ಸೂಚಿಸುತ್ತ ತತ್ಕಾಲದ ಪ್ರಧಾನರಸಕ್ಕೆ ಅವಿಚ್ಛಿತ್ತಿಯನ್ನುಂಟು ಮಾಡಿ, ಷಷ್ಠಾಂಕದಲ್ಲಿ—ತನ್ನ ಇಷ್ಟಬಂದಂತೆ ಪ್ರವಾಸ ವಿಪ್ರಲಂಭಶೃಂಗಾರ (ನಾಯಕನಾಯಿಕೆಯರು ದೂರಸ್ಥರಾಗಿ ಪರಸ್ಪರವಿಯೋಗದುಃಖವನ್ನನುಭವಿ ಸುವಿಕೆ)ವನ್ನು ಯೋಜಿಸಿ ಸರ್ವದಾ ಸ್ಮರಣೆಗೆ ತರುತ್ತಲಿರುವ ಶೃಂಗಾರರಸ ಸಾರಸರ್ವಸ್ವವನ್ನು ವಿವಿಧ ಪಾತ್ರಗಳ ಮೂಲಕ ಸ್ಫುಟೀಕರಿಸಿ, ಸಪ್ತಮಾಂಕ ದಲ್ಲಿ— ಪೂರ್ವವರ್ಣಿತಗಳಾದ ಬಹುವಿಧ ಶೃಂಗಾರರಸಗಳಲ್ಲಿನ ಅವಾಂತ ರಾವಸ್ಥೆಗಳಿಗೆಲ್ಲ ಪರಮಾವಧಿಯಂತಿರುವ ನಿಖಿಲಸಾರಭೂತವಾದ ಸಂಭೋಗ ಶೃಂಗಾರಸಮಗ್ರತೆಯನ್ನು ಸುವಿಶುದ್ಧಪ್ರಣಯರಸಭರಿತರಾದ ನಾಯಕ ನಾಯಿಕೆಯರ ಆಕಸ್ಮಿಕಸಮಾಗಮದಲ್ಲಿ ಉಂಟಾಗುವ ಅದ್ಭುತರಸದೊಂದಿಗೆ ಪ್ರದರ್ಶಿಸಿರುವನು. ಅದರಲ್ಲಿಯೂ ಪ್ರಥಮದಲ್ಲಿ ಶಾಸ್ತ್ರೀಯಸಂತತಿವಿಚ್ಛೇದ ದೋಷವನ್ನು ನೆನೆಸಿಕೊಂಡು ಪರಿತಪಿಸುತ್ತಿರುವ ದುಷ್ಯಂತನ ಸ್ನಿಗ್ಧಹೃದಯ ವನ್ನು ಔರಸಪುತ್ರನ ಗಾಢಾಲಿಂಗನದಿಂದ ಸಂತೋಷಪಡಿಸಿರುವನು. ಇಲ್ಲಿ ಕವಿಯ ಹೃದಯವು ಅಗಾಧವಾದುದಾಗಿರುವುದು. ನಿರಪರಾಧಿನಿಯಾದ

ಸತಿಯ ಸೌಶೀಲ್ಯವಿಚಾರದಲ್ಲಿ ಅನ್ಯಥಾಭಾವವನ್ನು ಕಲ್ಪಿಸಿ ಪೂರ್ವದಲ್ಲಾ ಚರಿಸಿದ ಶಾಸ್ತ್ರೀಯವಾದ ಗಾಂಧರ್ವವಿವಾಹವನ್ನು ಮರೆಯಿಸಿದ ಮುನಿ ಶಾಪಪ್ರಭೂತವಾದ ತಮಸ್ಸಿಗೆ ಪ್ರತಿಯಾಗಿ ಪಶ್ಚಾತ್ತಾಪಯುಕ್ತವಾದ ವಿಯೋಗವೇದನಾನುಭವದಲ್ಲಿಯ ಕಾಲುಷ್ಯಕ್ಕೆ ನಿಷ್ಕೃತಿಯಾಗಿ ಪರಮಪಾವನ ವಾದ ಪುತ್ರವಾತ್ಸಲ್ಯವೆಂಬ ದಿವ್ಯಗಂಗಾಲಹರಿಯಲ್ಲಿ ಕಥಾನಾಯಕನ ಹೃದಯ ವನ್ನು ಮುಳುಗಿಸಿಬಿಟ್ಟಿರುವನು. ಪರಂಪರೆಯಾಗಿ ಸುವಿಶುದ್ಧವಾದ ಪ್ರೇಮ ಬೀಜಗಳು ಮೊಳಕೆಯಾಗಲು ಏಕಾಕಾರವಾಗಿರುವ ಅನುರೂಪ ದಂಪತಿಗಳ ಹೃದಯಪ್ರಾಂಗಣದಲ್ಲಿ ನವನವವಾತ್ಸಲ್ಯಾನುಗತಗಳಾದ ಅನುರಾಗಗಳಜೋಡ ಣೆಯನ್ನು ಮಾಡುತ್ತ ನಿಪುಣತನದಿಂದ ನಿರ್ವಹಣಸಂಧಿಯಲ್ಲಿ ಕಥೋಪಸಂಹಾರ ವನ್ನು ಮಾಡಿರುವನು.

ಕಾವ್ಯಕರ್ತರೆಲ್ಲರೂ ಒಬ್ಬೊಬ್ಬರು ಒಂದೊಂದು ವಿಧವಾಗಿ ತಮ್ಮತಮ್ಮ ಕಾವ್ಯಗಳಿಗೆ ಆನಂದವನ್ನುಂಟುಮಾಡಲು ಪ್ರಯತ್ನಿಸುತ್ತಿರುವರು. ಕೆಲವರು ಶಬ್ದಾಲಂಕಾರಗಳಿಂದ ಕಾವ್ಯಘನತೆಯನ್ನು ನಿಲ್ಲಿಸಿಕೊಳ್ಳುವರು, ಕೆಲವರು ಅರ್ಥಾಲಂಕಾರಗಳಿಂದ ಅಂದವಾಗಿ ತೋರಿಸಿರುವರು, ಕೆಲವರು ಶಬ್ದಶಕ್ತಿಮೂಲ ಧ್ವನಿಗಳನ್ನು ತುಂಬಿ ಪದ್ಯಗಳ ಶೋಭೆಯನ್ನುಳಿಸುವರು, ಮತ್ತೆ ಕೆಲವರು ಅರ್ಥಶಕ್ತಿಮೂಲಗಳಾಗಿ ಅನುಕರಣಾತ್ಮಕಗಳಾದ ವಸ್ತ್ವಲಂಕಾರಧ್ವನಿಗಳಿಂದ ಕಾವ್ಯಾರ್ಥದಲ್ಲಿಯ ಉದಾರತೆಯನ್ನು ಪುಷ್ಟೀಕರಿಸಿಕೊಂಡಿರುವರು. ಮಹಾಕವಿ ಕಾಳಿದಾಸನಾದರೋ ಕೇವಲ ಅಸಂಲಕ್ಷ್ಯಕ್ರಮವ್ಯಂಗ್ಯಸರಣಿಯಲ್ಲಿ ದೃಷ್ಟಿ ಯನ್ನು ನಿಲ್ಲಿಸಿ ಭಾವಾಧ್ವಗಳಲ್ಲಿ ವಿಸ್ರಬ್ಧವಾಗಿ ವಿಹರಿಸುತ್ತ ಪಿಪೀಲಿಕಾದಿಬ್ರಹ್ಮ ಪರ್ಯಂತವಾದ ಸಕಲಪ್ರಾಣಿಕೋಟಿಗಳ ಹೃದಯರಂಗಗಳಲ್ಲಿ ಸರ್ವಕಾಲಸರ್ವಾ ವಸ್ಥೆಗಳಲ್ಲಿ ದೇಶಪರಿಚ್ಛೇದವಿಲ್ಲದೆ, ಏಕಾಕಾರಗಳಲ್ಲಿ ತಾಂಡವವಾಡುತ್ತಲಿರುವ ಆ ಅಖಂಡಬ್ರಹ್ಮಾನಂದರಸಸಮ್ರಾಟನ ಅವತಾರಗಳೆಂಬ ನವರಸಗಳ ಮಹಾ ಸಾಮ್ರಾಜ್ಯದಲ್ಲಿ ಅಗ್ರಾಸನವನ್ನಧಿವಹಿಸಿ ಆನಂದಾಮೃತಧಾರಾಪಾನಮತ್ತ ಗಳಾದ ಚಿತ್ತಗಳನ್ನು ಪಾರವಶ್ಯವಾಗಿ ಮಾಡಿ ಪ್ರಣಯಲಹರಿಯನ್ನು ತನ್ಮಯ ಗಳನ್ನಾಗಿ ಮಾಡಿ ಪ್ರಪಂಚಾದರಣೀಯನಾಗಿರುವನು.

ಇವನ ವರ್ಣನೆಯು ಸ್ವಭಾವಸಿದ್ಧವೆನ್ನುವುದಕ್ಕೆ ಕವಿಯು ತಪಶ್ಚರ್ಯ ಕ್ಕಾಗಿ ನೇಮಿಸಲ್ಪಟ್ಟ ಸುರಸುಂದರಿಯೂ ಕೋಮಲಳೂ ಆದ ಶಕುಂತಲೆಗೆ ಕುವಲಯದಳದಿಂದ ಶಮೀಲತಾಚ್ಛೇದನದೃಷ್ಟಾಂತವನ್ನೂ ವಲ್ಕಲಾವೃತಳಾದ ಶಕುಂತಲೆಗೆ ಪಾಚಿಯಿಂದಾವೃತವಾದ ತಾವರೆಯ ಹೂವಿನ ದೃಷ್ಟಾಂತವನ್ನೂ

ಮೃಣಾಲಕೋಮಲತೆಗೆ ಶುಕೋದರವನ್ನೂ ಯಾವುದೋ ವಿಷಯಾರ್ಥವಾಗಿ ಶರೀರವು ಧಾವಿಸುತ್ತಿರುವುದಾದರೂ ಅದರಲ್ಲಿಯೇ ನಟ್ಟ ಮನೋವೃತ್ತಿಗೆ ಧ್ವಜಸ್ತಂಭದ ಚೀನಾಂಶುಕದ ದೃಷ್ಟಾಂತವನ್ನೂ ಹೇಳಿರುವುದು ಸಾಕಾಗಿರುವುವು. ಕಣ್ವಋಷಿಯು ಪತಿಗೃಹಕ್ಕಾಗಿ ತೆರಳುವ ಶಕುಂತಲೆಗೆ ಹೇಳುವ ಬುದ್ಧಿವಾದವು ಪ್ರತಿಯೊಬ್ಬ ರಮಣಿಯೂ ಅನುಸರಿಸಲು ಯೋಗ್ಯವಾದುದಾಗಿರುವುದು. ಈ ಬುದ್ಧಿವಾದವು ಮಹಾಕವಿಷೆಕ್ಸ್‌ಪಿಯರನು ಹ್ಯಾಮ್ಲೆಟ್ ನಾಟಕದಲ್ಲಿ ಪೊಲೋನಿಯಸ್ ಲಿಯಾಟೀಸನಿಗೆ ಹೇಳಿರುವ ಬುದ್ಧಿವಾದವನ್ನು ಜ್ಞಾಪಕಕ್ಕೆ ತರುವುದು. ಪತಿಯಾದವನು ಎಂತಹನಾದರೂ ಅವನ ಸೇವೆಯಲ್ಲಿದ್ದುಕೊಂಡಿರುವುದು ಕುಲರಮಣಿಯರಿಗೆ ಧರ್ಮವೇ ಹೊರತು ಜನ್ಮಗೃಹದಲ್ಲಿರುವಿಕೆಯು ಯೋಗ್ಯವಲ್ಲವೆಂಬ ವಿಷಯವೂ ಬೋಧೆಯಾಗುವುದು. ಇದಲ್ಲದೆ ರಾಜಧರ್ಮ—ಮಕ್ಕಳವಿಚಾರದಲ್ಲಿ ಮಾತಾಪಿತೃಗಳ ವಾತ್ಸಲ್ಯ— ಇವೇ ಮೊದಲಾದ ನೀತಿಗಳೂ ಕಂಡುಬರುವುವು.

ಕರ್ಮಮಾರ್ಗಾಚರಣೆಯಿಂದ ಪ್ರಯೋಜನವಾಗದು, ಜ್ಞಾನಸಂಪಾದನೆಯಿಂದ ಮೋಕ್ಷವು ದೊರೆಯುವುದು, ಎಂಬ ಬೌದ್ಧಮತತತ್ವಮೂಲವಾದ ಶ್ಲೋಕದಿಂದ ಮಂಗಳಾಚರಣವನ್ನು ಮಾಡಿರುವನು. ಕಾಳಿದಾಸನ ಕವಿತ್ವದಲ್ಲಿ ಗ್ರಾಮ್ಯ ಮತ್ತು ಅಶ್ಲೀಲ ಶಬ್ದಗಳು ಕಂಡುಬರುವುದಿಲ್ಲ. ಕಾಳಿದಾಸನ ವಿಶೇಷಗುಣವಾದ ಉದಾತ್ತರಸಕಲ್ಪನಾವಿಶಾಲತ್ವ, ಶುದ್ಧ ಮತ್ತು ಮಾರ್ಮಿಕ ವಿಚಾರಗಳು ಇವನ ನಾಟಕಗಳಲ್ಲಿ ಕಂಡುಬರುವುವು. ಅಸಮಾನಕಲ್ಪನಾ ಚತುರತೆಗೆ ಉದಾಹರಣರೂಪವಾಗಿ ಶಾಕುಂತಲನಾಟಕದ ಒಂದನೆಯ ಅಂಕದಲ್ಲಿ—ಭ್ರಮರವು ಶಕುಂತಲೆಯ ಮುಖವನ್ನು ನೋಡಿ ಕಮಲವೆಂಬ ಭ್ರಾಂತಿಯಿಂದ ಬಂದೆರಗುವಿಕೆ, ನಾಲ್ಕನೆಯ ಅಂಕದಲ್ಲಿ—ಪತಿಸನ್ನಿಧಿಯನ್ನುಹೊಂದಲು ಪ್ರಯಾಣಸನ್ನದ್ಧಳಾಗಿ ನಿಂತಿರುವ ಶಾಕುಂತಲೆಯ ಬಳಿಗೆ ಹರಿಣಿಯು ತಾನಾಗಿ ಬಂದುನಿಲ್ಲುವಿಕೆ, ಐದನೆಯ ಅಂಕದಲ್ಲಿ— ಆಕಾಶಗಾಯನವನ್ನು ಕೇಳುವಿಕೆ. ಆರನೆಯ ಅಂಕದಲ್ಲಿ — ರಾಜನು ಶಕುಂತಲೆಯ ಚಿತ್ರಪಟವನ್ನು ನೋಡಿ ನಿಜವಾದ ಶಕುಂತಲೆಯೆಂದು ಭ್ರಮಿಸುವಿಕೆ, ರಾಜನು ಸಂತಾನಹೀನನಾದೆನೆಂದೂ ಪುರುಕುಲವಂಶಾಂಕುರನಾದ ಪುತ್ರನಿಲ್ಲವೆಂದೂ ಮೂರ್ಛೆಹೋಗುವಿಕೆ, ಇವೇ ಮೊದಲಾದವು ಕವಿಯ ಅನುಪಮಕಲ್ಪನಾಗೌರವವನ್ನು ಹೆಚ್ಚಿಸುವುವಾಗಿರುವುವು.

ಲೋಕಪ್ರಸಿದ್ಧವಾದ ಶಾಕುಂತಲನಾಟಕದ ವಿಚಾರದಲ್ಲಿ ಜರ್ಮನ್ಯಾದೇಶದ ಕವಿಮಣಿಯಾದ ಗೋಥೆ (Goethe) ತತ್ವವೇತ್ತನಾದ ಹಂಬೋಲ್ಟನು

ಮಹಾಪಂಡಿತನಾದ ಶ್ಲೇಘುಲ್ ಇವರು ಕಾಳಿದಾಸನ ಅನುಪಮವರ್ಣನೆಯ ಚಾತುರ್ಯವನ್ನು ನೋಡಿ ಹೊಗಳಿರುವರು. ಫ್ರಾನ್ಸ್ ದೇಶದ ವಿದ್ಯಾವಿಚಕ್ಷಣನಾದ ಫ್ರೈಜಿಯು ಪುತ್ರನ ಲೀಲಾವೈಭವವನ್ನು ವರ್ಣಿಸಿರುವುದಾದ ಒಂದು ಶ್ಲೋಕವನ್ನು ನೋಡಿ ದೇಹಾಭಿಮಾನವನ್ನೇ ಮರೆತು ಆನಂದಿಸಿರುವನು.

ಸರ್. ವಿಲಿಯಂ ಜೋನ್ಸರು ಶಾಕುಂತಲವನ್ನು ಭಾರತಸಾಹಿತ್ಯರತ್ನವೆಂತಲೂ (The jem of Oriental Literature) ಪ್ರೊ. ವಿಲ್ಸನಪಂಡಿತರು ಪ್ರಪಂಚಾದರ್ಶಕ ರೂಪಕಗಳಲ್ಲಿ ಶಾಕುಂತಲವು ಮನೋಹರನಾಟಕವೆಂದೂ (One of the loveliest pieces in the Dramatic Literarure of the world) ಪ್ರೊ. ಹೀರನ್ಸನು ಈ ನಾಟಕವು ಪ್ರಪಂಚದ ಯಾವ ಜನಾಂಗದ ಕಾವ್ಯಸಮುದಾಯವನ್ನು ತೆಗೆದುಕೊಂಡು ನೋಡಿದರೂ ಮೊದಲನೆಯದಾಗುವುದೆಂದೂ ಹೃದಯಂಗಮವಾದುದರಲ್ಲಿಯೂ ಮತ್ತು ಸನ್ಮಾರ್ಗದರ್ಶಕತೆಯಲ್ಲಿ ಅದ್ವಿತೀಯವಾದುದೆಂದೂ (The play is incomparable for its beauty anb fidelity to natnre and stands at the head of the Dramatic Literature of all nations). ಪ್ರಸಿದ್ಧನಾದ ಗೋಥೆಯು—

"Wouldst thou the young years blossoms and the fruits of its decline
And all by which the soul is charmed enraptured feasted fed;
Wouldst thou the earth and herein itself in one soul combine,
I name thee Sakuntala O! and all at once is said"

ಎಂದು ಹೇಳಿರುವನು. ಕಾಳಿದಾಸನ ಉಳಿದ ಎರಡು ನಾಟಕಗಳು ಷೇಕ್ಸ್ಪಿಯರನ ನಾಟಕಗಳಂತೆ ಕವಿಯ ಮನೋಭಾಗಭೇದವನ್ನು ತಿಳಿಸುವುವಾಗಿವೆ. (Midsummer nights dream ಮತ್ತು Tempest) ಎಂಬ ನಾಟಕಗಳನ್ನು ಬರೆದವನು ಒಬ್ಬನೇಯಾದರೂ ಇವೆರಡರ ವರ್ಣನೆ ಶೈಲಿ ಸರಸಪದಗಳ ವಿಚಾರದಲ್ಲಿ ಇವೆರಡಕ್ಕೂ ಎಷ್ಟೋ ಅಂತರವಿರುವುದೆಂದು ಕುಶಲಮತಿಯುಳ್ಳವರು ಹೇಳುವರು. ಇವೆರಡರಲ್ಲಿ ಮೊದಲನೆಯದನ್ನು ಬರೆದುದಕ್ಕೂ ಎರಡನೆಯ ನಾಟಕವನ್ನು ಬರೆದುದಕ್ಕೂ ದೇಶಕಾಲಗಳಲ್ಲಿ ಎಷ್ಟೋ ವ್ಯತ್ಯಾಸವು ತೋರಿಬರುವುದು. ಕಾಳಿದಾಸನ ಮಾಳವಿಕಾಗ್ನಿಮಿತ್ರವು ಅವನ ತಾರುಣ್ಯಾವಸ್ಥೆಯನ್ನೂ, ಭಾರತನಾಟಕನಿಯಮಾನುಸಾರ ನಾಟಕಗಳನ್ನು ಬರೆಯುವುದರಲ್ಲಿ

ವಿಕ್ರಮೋರ್ವಶೀಯವು ಸ್ವಲ್ಪ ವಯಸ್ಸಿನ ಸ್ಥಿತಿಯಲ್ಲಿ ಸಾಧ್ಯವಾದಷ್ಟು ಪ್ರಪಂಚಾನುಭವವನ್ನು ಹೊಂದಿ ನಾಟಕರಚನೆಯಲ್ಲಿ ಸ್ವಲ್ಪ ತಿಳಿವಳಿಕೆಯು ಬಂದ ನಂತರ ಬರೆದಿರಬಹುದೆಂಬುದನ್ನೂ, ಮೂರನೆಯದಾದ ಶಾಕುಂತಲವು ವಯೋವೃದ್ಧನೂ ಜ್ಞಾನವೃದ್ಧನೂ ಆದನಂತರ ಬರೆಯಲ್ಪಟ್ಟಿರಬಹುದೆಂಬುದನ್ನೂ ತೋರಿಸುವುವು. ಶಾಕುಂತಲದಲ್ಲಿ ಮೊದಲಿನ ೩೩ ಶ್ಲೋಕಗಳು ಹನ್ನೊಂದು ವಿಧಗಳಾದ ಛಂದೋಲಕ್ಷಣಗಳಿಂದ ಕೂಡಿರುವುವು. ಪ್ರಕೃತಿಯನ್ನೂ ಮನುಷ್ಯನನ್ನೂ ಸಹಜರೀತಿಯಿಂದ ಚಿತ್ರಿಸುವ ಚಿತ್ರಕಾರನು ಕಾಳಿದಾಸನೆಂದರೆ ಹೆಚ್ಚಾಗದು. ಅದರಲ್ಲಿಯೂ ಅವನು ಸ್ತ್ರೀವರ್ಣನವನ್ನು ಮಾಡುವಾಗ ಅವನ ನಡತೆಯು ಗೌರವಯುಕ್ತವಾದುದಾಗಿಯೂ ಉದಾತ್ತವಾದುದಾಗಿಯೂ ಸೌಜನ್ಯದಿಂದೊಡಗೂಡಿದುದಾಗಿಯೂ ಆಗಿರುವುದು. *

ಅವನು ಯಾವ ಊರನ್ನು ವರ್ಣಿಸಿದರೂ ಸಜೀವದಿಂದಿರುವಂತೆ ವರ್ಣಿಸಿರುವನು. ಅಲ್ಲದೆ ಧರ್ಮಮಾರ್ಗವು ಸ್ವಲ್ಪವೂ ದಾರಿತಪ್ಪದಂತೆ ಬಹುಜಾಗರೂಕತೆಯಿಂದ ವರ್ಣಿಸಿರುವನು. ಶೃಂಗಾರರಸಪೋಷಣೆಯಲ್ಲಿ ಹೇಗೆ ದಕ್ಷನೋ ಹಾಗೆಯೇ ಕರುಣರಸವನ್ನೂ ಸಹಜರೀತಿಯಿಂದ ವರ್ಣಿಸಿರುವುದರಲ್ಲಿ ದಕ್ಷನಾಗಿರುವನು. ಶಾಕುಂತಲನಾಟಕದ ನಾಲ್ಕನೆಯ ಅಂಕವೂ ವಿಕ್ರಮೋರ್ವಶೀಯದ ನಾಲ್ಕನೆಯ ಅಂಕವೂ ಕರುಣರಸದ ಮುದ್ರೆಯಾಗಿರುವುವು. ನಾಟಕಕಾರರಲ್ಲಿ ಮುಖ್ಯಗುಣವಾಗಿ ಎಣಿಸಲ್ಪಡುವ ಹಾಸ್ಯರಸವು ಕಾಳಿದಾಸನಲ್ಲಿ ಇಲ್ಲದಿರಲಿಲ್ಲ. ಕಾಳಿದಾಸನು ಷೇಕ್ಸ್ಪಿಯರನಂತೆ ಚಾತುರ್ಯಯುಕ್ತವಾಗಿಯೂ ಸೊಗಸಾಗಿಯೂ ಸರ್ವಾಕರ್ಷಣೀಯವಾಗಿಯೂ ಕಾಠಿಣ್ಯರಹಿತವಾದುದಾಗಿಯೂ ಅವಾಚ್ಯದಿಂದ ದೂರವಾಗಿಯೂ ಇರುವ ಹಾಸ್ಯರಸವನ್ನು ತೋರಿಸುವುದರಲ್ಲಿ ನಿಪುಣನಾಗಿರುವನು. ಶಾಕುಂತಲದಲ್ಲಿ ದುಷ್ಯಂತನಿಗೂ ವಿದೂಷಕನಿಗೂ, ಗ್ರಾಮರಕ್ಷಕನಿಗೂ ಮತ್ತು ಬೆಸ್ತನಿಗೂ ವಿಕ್ರಮೋರ್ವಶೀಯದಲ್ಲಿ ಪುರೂರವನಿಗೂ ವಿದೂಷಕನಾದ ಮಾಣವಕನಿಗೂ ನಡೆದಂತೆ ಇರುವ ಭಾಷಣಗಳು ಹಾಸ್ಯರಸಗಳನ್ನು ಹೊರಸೂಸಿ ನೋಟಕರನ್ನು ಆನಂದಲಹರಿಯಲ್ಲಿ ಮುಳುಗಿಸುವುವು.

ಕಾಳಿದಾಸನ ಕವಿತೆಯಲ್ಲಿ ಕೇವಲದಿಗ್ದರ್ಶಕವಾಗಿ ಒಂದೆರಡು ಮೂದರಿ ಶ್ಲೋಕಗಳನ್ನು ಎತ್ತಿ ಬರೆಯುವೆವು—

ಇನ್ನೂ ಪ್ರಾತಃಕಾಲವಾಯಿತೇ ಇಲ್ಲವೇ ಎಂಬುದನ್ನು ನೋಡುವುದಕ್ಕಾಗಿ ಬಂದ ಶಿಷ್ಯನು ಹೇಳುವುದು—

ಅಂತರ್ಹಿತೇ ಶಶಿನಿ ಸೈವ ಕುಮುದ್ವತೀ ಮೇ
ದೃಷ್ಟಿಂ ನ ನಂದಯತಿ ಸಂಸ್ಮರಣೀಯಶೋಭಾ।
ಇಷ್ಟಪ್ರವಾಸಜನಿತಾನ್ಯಬಲಾಜನಸ್ಯ
ದುಃಖಾನಿ ನೂನಮತಿಮಾತ್ರಸುದುಃಸಹಾನಿ ॥ —ಶಾಕುಂತಲ ೪–೨

ಚಂದ್ರನು ಅಂತರ್ಹಿತನಾದ ಕೂಡಲೇ ಇಲ್ಲಿಯ ವರೆವಿಗೂ ಸಂಸ್ಮರಣೀಯವಾದ ಶೋಭೆಯಿಂದ ಬೆಳಗುತ್ತಿದ್ದ ಈ ಕುಮುದ್ವತಿಯು ಈಗ ನೋಡಲಿನಂತೆ ಆನಂದದಾಯಕಳಾಗಿರುವುದಿಲ್ಲ! ಆಹಾ! ಇಷ್ಟಪ್ರವಾಸದಿಂದುಂಟಾಗುವ ದುಃಖವು, ಅದರಲ್ಲೂ ಸ್ತ್ರೀಯರಿಗೆ, ಅತ್ಯಂತದುಃಸಹವೇ ಅಲ್ಲವೇ?

ತಾನು ಸಂತಾನಹೀನನಾಗಿರುವುದನ್ನು ಕುರಿತು ದುಷ್ಯಂತನು ಅನುಶೋಚಿಸುವಿಕೆ—

ಅಸ್ಮಾತ್ಪರಂ ಬತ! ಯಥಾಶ್ರುತಿಸಂಭೃತಾನಿ
ಕೋ ನಃ ಕುಲೇ ನಿವಪನಾನಿ ನಿಯಚ್ಛತೀತಿ।
ನೂನಂ ಪ್ರಸೂತಿವಿಕಲೇನ ಮಯಾ ಪ್ರಸಿಕ್ತಂ
ಧೌತಾಶ್ರುಶೇಷಮುದಕಂ ಪಿತರಃ ಪಿಬಂತಿ ॥ —ಶಾಕುಂತಲಾ ೬–೨೫

ಅಯ್ಯೋ! ನನ್ನ ಅನಂತರ ವಿಧ್ಯುಕ್ತಶ್ರಾದ್ಧಾದಿಗಳನ್ನು ಯಾರು ಮಾಡುವರೆಂಬ ಯೋಚನೆಯಿಂದ ಸಂತಾನಶೂನ್ಯನಾದ ನಾನು ಕೊಡುವ ಈ ಕಣ್ಣೀರನ್ನೇ ನಮ್ಮ ಪಿತೃಗಳು ಕುಡಿಯುನಂತಾದುದಲ್ಲಾ!

ಮಾರೀಚಾಶ್ರಮವರ್ಣನೆ—

ಪ್ರಾಣಾನಾಮನಿಲೇನ ವೃತ್ತಿರುಚಿತಾ ಸತ್ಕಲ್ಪವೃಕ್ಷೇ ವನೇ
ತೋಯೇ ಕಾಂಚನಪದ್ಮರೇಣುಕಪಿಶೇ ಧರ್ಮಾಭಿಷೇಕಕ್ರಿಯಾ।
ಧ್ಯಾನಂ ರತ್ನಶಿಲಾತಲೇಷು ವಿಬುಧಸ್ತ್ರೀಸನ್ನಿಧೌ ಸಂಯಮಃ
ಯತ್ಕಾಂಕ್ಷಂತಿ ತಪೋಭಿರನ್ಯಮುನಯಸ್ತಸ್ಮಿಂಸ್ತಪಸ್ಯಂತ್ಯಮೀ॥ ಶಾ.೭–೧೨

ಅಹೊ! ಆಶ್ಚರ್ಯವು! ಆಶ್ಚರ್ಯವು! ಸಕಲಾಪೇಕ್ಷಿತಾರ್ಥಸಂದಾಯಕಗಳಾದ ಕಲ್ಪವೃಕ್ಷಗಳ ವನದಲ್ಲಿದ್ದುಕೊಂಡು ವಾತಾಹಾರ! ಹೇಮಪದ್ಮಪರಾಗಗಳಿಂದ ಧೂಸರವರ್ಣಗಳಾದ, ಭೋಗಾರ್ಹಗಳಾದ, ಜಲಗಳಲ್ಲಿ ಧರ್ಮಾಭಿಷೇಕ! ಕ್ರೀಡಾವಿಹಾರಯೋಗ್ಯಗಳಾದ ರತ್ನಶಿಲಾತಲಗಳ ಮೇಲೆ ಕುಳಿತುಕೊಂಡು ಧ್ಯಾನಕ್ರಿಯೆ! ದೇವಸ್ತ್ರೀಯರ ಮಧ್ಯದಲ್ಲೇ ಜಿತೇಂದ್ರಿಯತೆ! ಆಹಾ! ಯಾವುದನ್ನು ಪಡೆಯುವುದಕ್ಕಾಗಿ ಇತರ ಮುನಿಗಳು ಘೋರತರತಪಸ್ಸನ್ನಾಚರಿಸುವರೋ ಆಸ್ಥಳಗಳಲ್ಲಿದ್ದುಕೊಂಡೇ ಈ ಮಹರ್ಷಿಗಳು ತಪೋನಿರತರಾಗಿರುವರಲ್ಲಾ!

ಸ್ವಸುತನೆಂದು ತಿಳಿಯದೆ ಭರತನನ್ನು ಎತ್ತಿಕೊಂಡಾಗ ದುಷ್ಯಂತನು ಸ್ವಾನುಭವವನ್ನು ಪ್ರಕಟಿಸುವಿಕೆ—

ಅನೇನ ಕಸ್ಯಾಪಿ ಕುಲಾಂಕುರೇಣ
ಸ್ಪೃಷ್ಟಸ್ಯ ಗಾತ್ರೇಷು ಸುಖಂ ಮಮೈವಂ ।
ಕಾಂ ನಿರ್ವೃತಿಂ ಚೇತಸಿ ತಸ್ಯ ಕುರ್ಯಾತ್
ಯಸ್ಯಾಯಮಂಕಾತ್ಕೃತಿನಃ ಪ್ರರೂಢಃ ॥ —ಶಾಕುಂತಲಾ ೭–೧೯

ಯಾವನೋ ಓರ್ವನ ಕುಲಾಂಕುರಪ್ರಾಯನಾದ ಇವನ ಸ್ಪರ್ಶದಿಂದಲೇ ನನಗೆ ಈ ಪ್ರಕಾರವಾದ ಸುಖಾತಿಶಯವುಂಟಾಗುತ್ತಿರುವಲ್ಲಿ, ಆಹಾ! ಆ ಧನ್ಯರಾದ ಸಾಕ್ಷಾತ್ಸ್ವಮಾತಾಪಿತೃಗಳಿಗೆ ಇವನಿನ್ನೆಂತಹ ಆನಂದಾತಿಶಯವನ್ನುಂಟುಮಾಡುತ್ತಾನೋ—

ಮರೀಚಮಹರ್ಷಿಗಳು ಶಕುಂತಲೆಗೆ ಮಾಡುವ ಆಶೀರ್ವಾದ:—

ವತ್ಸೇ!

ಆಖಂಡಲಸಮೋ ಭರ್ತಾ ಜಯಂತಪ್ರತಿಮಃ ಸುತಃ ।
ಆಶೀರನ್ಯಾ ನ ತೇ ಯೋಗ್ಯಾ ಪೌಲೋಮೀ ಸದೃಶೀ ಭವ ॥
—ಶಾಕುಂತಲಾ ೭–೨೮

ವತ್ಸೇ, ಶಕುಂತಲೆ! ನಿನ್ನ ಪತಿಯು ದೇವರಾಜ ಪ್ರತಿಮನಾಗಿರುವನು; ನಿನ್ನ ಮಗನಾದರೋ ಜಯಂತಸಮಾನನೇ; ಆದಕಾರಣ ನಿನಗೆ ಬೇರೆ ವಿಧವಾದ ಆಶೀರ್ವಾದವು ಯೋಗ್ಯವಾಗಲಾರದು— ನೀನು ಆ ಇಂದ್ರಾಣೀ ಸಮಾನಳೇ ಆಗು!

ಮಾಲವಿಕೆಯ ನರ್ತನವರ್ಣನೆ:—

ಅಂಗೈರಂತರ್ನಿಹಿತವಚನೈಃ ಸೂಚಿತಃ ಸಮ್ಯಗರ್ಥಃ
ಪಾದನ್ಯಾಸೋ ಲಯಮನುಗತಸ್ತನ್ಮಯತ್ವಂ ರಸೇಷು ॥
ಶಾಖಾಯೋನಿರ್ಮೃದುರಭಿನಯಸ್ತದ್ವಿಕಲ್ಪಾನುವೃತ್ತೌ
ಭಾವೋ ಭಾವಂ ನುದತಿ ವಿಷಯಾದ್ರಾಗಬಂಧಃ ಸ ಏವ ॥
—ಮಾಲವಿಕಾಗ್ನಿಮಿತ್ರಂ ೨–೮

ಅಂಗವಿನ್ಯಾಸಗಳ ಮೂಲಕವಾಗಿ ಆಂತರಿಕಭಾವನೆಯನ್ನು ಸೂಚಿಸುತ್ತಾ ಗೀತಾರ್ಥವು ಸ್ಪಷ್ಟೀಕರಿಸಲ್ಪಟ್ಟಿತು; ಚರಣನ್ಯಾಸವೂ ತಾಲಾನುಗತವಾಗಿತ್ತು; ಆಯಾ ರಸಗಳೂ ಸ್ಫುಟವಾಗಿ ವ್ಯಕ್ತಮಾಡಲ್ಪಟ್ಟುವು; ಅಂಗಕ್ಷೇಪಗಳೂ ಮಧುರತರವಾಗಿ ಅಭಿನಯಿಸಲ್ಪಟ್ಟುವು; ವಿಕಲ್ಪಾನುವೃತ್ತಿಮಾಡುವುದರಲ್ಲಿ ಶೃಂಗಾರಾದಿಭಾವಗಳೂ ಅನುಯುಕ್ತವಾಗಿ ಚಿತ್ರಿತವಾದುವು:—ರಂಜನಯೋಗ್ಯಗಳಾದ ಪ್ರಯೋಗಗಳು ಇವೇ ಅಲ್ಲವೆ?

ದುಷ್ಯವಾದ ಜೀವನದ ನಿಂದೆ:—

> ಲಬ್ಧಾಸ್ಪದೋಽಸ್ಮೀತಿ ವಿವಾದಭೀರೋಃ
> ತಿತಿಕ್ಷಮಾಣಸ್ಯ ಪರೇಣ ನಿಂದಾಂ ।
> ಯಸ್ಯಾಗಮಃ ಕೇವಲಜೀವಿಕಾಯೈ
> ತಂ ಜ್ಞಾನಪಣ್ಯಂ ವಣಿಜಂ ವದಂತಿ ॥ —ಮಾಲವಿಕಾಗ್ನಿಮಿತ್ರಂ ೧—೧೭

ಯುಕ್ತವಾದ ಆಶ್ರಯವು ದೊರಕಿತೆಂದು ಅಷ್ಟಕ್ಕೇ ತೃಪ್ತನಾಗಿ, ಶತ್ರುವಿನೊಡನೆ ವಾದಕ್ಕೆ ಹೆದರಿಕೊಂಡು ಪರನಿಂದೆಯನ್ನೂ ಸಹಿಸುತ್ತಾ—ಈ ಪ್ರಕಾರವಾಗಿ ಯಾವನ ಪಾಂಡಿತ್ಯವು ಜೀವನೋಪಾಯತ್ವೇನ ಮಾತ್ರವಾಗಿರುವುದೋ ಅಂತಹನು 'ವಿದ್ಯಾವಿಕ್ರಯಿ'ಯೆಂಬುದಾಗಿ ಕೇವಲ ನಿಂದ್ಯನಾಗುವನು!

ಊರ್ವಶೀ ವಿರಹಪರಿತಪ್ತನಾದ ರಾಜನು ಒಂದಾನೊಂದು ಸಲಗನನ್ನು ನೋಡಿ ಹೇಳುವುದು:—

> ಮಾಮಾಹುಃ ಪೃಥಿವೀಭೃತಾಮಧಿಪತಿಂ ನಾಗಾಧಿರಾಜೋ ಭವಾನ್
> ಅವ್ಯುಚ್ಛಿನ್ನಪೃಥುಪ್ರವೃತ್ತಿ ಭವತೋ ದಾನಂ ಮಮಾಪ್ಯರ್ಥಿಷು ।
> ಸ್ತ್ರೀರತ್ನೇಷು ಮಮೋರ್ವಶೀ ಪ್ರಿಯತಮಾ ಯೂಥೇ ತವೇಯಂ ವಶಾ
> ಸರ್ವಂ ಮಾಮನು ತೇ ಪ್ರಿಯಾವಿರಹಜಾಂ ತ್ವಂ ತು ವ್ಯಥಾಂ ಮಾನುಭೂಃ
> —ವಿಕ್ರಮೋರ್ವಶೀಯಂ ೪—೪೭

ಎಲೈ, ಗಜೇಂದ್ರ! ನನ್ನನ್ನು ರಾಜಾಧಿರಾಜನೆನ್ನುವರು; ನೀನೂ ನಾಗಾಧಿರಾಜನು; ನೀನು ನಿರಂತರಪ್ರಸವಿಸುತ್ತಿರುವ ದಾನ (ಮದೋದಕ) ವುಳ್ಳವನು; ನಾನೂ ಹಾಗೆಯೇ ಅರ್ಥಿಗಳಾದವರಲ್ಲಿ ನಿರಂತರದಾನಶೀಲನು; ಈ ಕರಿಣಿಯು ನಿನಗೆ ವಶವರ್ತಿನಿಯಾಗಿರುವಂತೆ ಊರ್ವಶಿಯೂ ನನಗೆ ಪ್ರಿಯತಮಳು;—ಈ ರೀತಿಯಲ್ಲಿ ನಮ್ಮಿರ್ವರಿಗೂ ವಿಶೇಷಸಾಮ್ಯವಿರುವುದು. ಆದರೆ ನಾನು ಪ್ರಿಯಾವಿರಹಪೀಡಿತನಾಗಿರುವೆನಾದರೂ ನೀನು ಮಾತ್ರ ಆ ವ್ಯಥೆಯನ್ನು ಹೊಂದಬೇಡ! ನೀನಾದರೂ ಸುಖವನ್ನನುಭವಿಸು!

ರಾಜಾ—

> ಯದೇವೋಪನತಂ ದುಃಖಾತ್ಸುಖಂ ತದ್ರಸವತ್ತರಂ ।
> ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ ॥
> —ವಿಕ್ರಮೋರ್ವಶೀಯಂ ೩—೨೧

ಸುಖವೇನೋ ಆನಂದಾಸ್ಪದವೇ ಆಗಿರುವುದಾದರೂ ಅದು ದುಃಖೋಪನತವಾದರೇನೇ ರಸವತ್ತರವಾಗುವುದು. ಹೇಗೆಂದರೆ—ನೆರಳೆಂದರೆ ಎಲ್ಲರಿಗೂ ತಂಪನ್ನುಂಟುಮಾಡುವಂಥದೇ ಆದರೂ ಅದು ಬಿಸಿಲಿನಲ್ಲಿ ತಪ್ತನಾದವನಿಗೇ ವಿಶೇಷಸುಖದಾಯಕವಾಗುವುದಲ್ಲವೆ ?



## ಕಾಳಿದಾಸ (೨)

ಐಶ್ವಾದರ್ಶನಾಟಕಗಳನ್ನು ರಚಿಸಿರುವುದರಲ್ಲಿ ಮೊದಲನೆಯ ಕಾಳಿದಾಸನು ಹೇಗೆ ಅಗ್ರನೆನಿಸಿರುವನೋ ಹಾಗೆ ಲೋಕಮೆಚ್ಚುವಂತಹ ಕಾವ್ಯಗಳನ್ನು ರಚಿಸಿರುವುದರಲ್ಲಿ ಎರಡನೆಯ ಕಾಳಿದಾಸನು ದಕ್ಷನೆನಿಸಿ ಕೀರ್ತಿಶೇಷನಾಗಿರುವನು. ಇವನು **ರಘುವಂಶ, ಕುಮಾರಸಂಭವ, ಮೇಘದೂತ** ಎಂಬ ಮೂರು ಕಾವ್ಯಗಳನ್ನು ಬರೆದಿರುವನು. ಈ ಕಾವ್ಯಗಳಲ್ಲಿ ವೇದೋಪನಿಷದ್ಗೀತಾದಿ ವಿಚಾರಗಳು ದೊರಕುವುದರಿಂದಲೂ, ರಘುವಂಶದಲ್ಲಿ,

**ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।**
**ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥**
**ಅವೇಹಿಮಾಂ ಕಿಂಕರಮಷ್ಟಮೂರ್ತೇಃ**
**ಕುಂಭೋದರಂ ನಾಮ ನಿಕುಂಭಮಿತ್ರಂ ।** ಎಂದೂ,

ಕುಮಾರಸಂಭವದಲ್ಲಿ,

**ತತ್ರಾಗ್ನಿಮಾಧಾಯ ಸಮಿತ್ಸಮಿದ್ಧಂ**
**ಸ್ವಮೇವಮೂರ್ತ್ಯಂತರಮಷ್ಟಮೂರ್ತೇಃ ॥**

ಎಂದೂ ಹೇಳಿರುವುದರಿಂದ ಇವನು ಘನವೇದಾಂತಿಯೂ ಈಶ್ವರಭಕ್ತನೂ ಬ್ರಾಹ್ಮಣನೂ ಆಗಿರಬೇಕೆಂದು ಘೋಷಿಸಲಾಗುವುದು.

ಜ್ಯೋತಿರ್ವಿದಾಭರಣದ ಶೇಷಾಧ್ಯಾಯದಲ್ಲಿ—
**ವರ್ಷೇ ಸಿಂಧುರ(೮) ದರ್ಶನಾಂ (೬) ಬರ (೦) ಗುಣೈಃ (೩)ಯಾತೇ ಕಲೌ ಸಮ್ಮಿತೇ ।**
**ಮಾಸೇ ಮಾಧವಸಂಜ್ಞಿತೇಽತ್ರ ವಿಹಿತೋ ಗ್ರಂಥಕ್ರಿಯೋಪಕ್ರಮಃ ॥**

ಎಂದು ಹೇಳಿರುವುದರಿಂದ ಇವನು ಹೇಳುವ ಕಲಿವರ್ಷಗಳು ೩೦೬೮ (ಕ್ರಿ. ಪೂ. ೩೪) ಆಗುವುದು.

ಸದಾಶಿವಬ್ರಹ್ಮೇಂದ್ರರಚಿತ 'ಗುರುರತ್ನಮಾಲಾ' ಎಂಬುದಕ್ಕೆ ವ್ಯಾಖ್ಯಾನಕಾರನಾದ ಆತ್ಮಬೋಧೇಂದ್ರನು ತಾನು ಬರೆದಿರುವ 'ಸುಷಮಾ' ಎಂಬ ಪುಸ್ತಕದಲ್ಲಿ ಈ ಕಾಳಿದಾಸನು ಕಾಂಚಿಯಲ್ಲಿನ ಕಾಮಕೋಟಿಪೀಠದ ೯ ನೆಯ ಆಚಾರ್ಯರ ಸಮಕಾಲಿಕನೆಂದೂ ಅವರಿಗೆ ಕೃಪಾಶಂಕರರೆಂಬ ಹೆಸರಿದ್ದಿತೆಂದೂ ಅವರು ಮಠಾಧಿಪತ್ಯವನ್ನು ಕ್ರಿ. ಪೂ. ೩೩ ರ ಲಾಗಾಯಿತು ಕ್ರಿ. ಪೂ. ೮ರ ವರೆಗೆ ಮಾಡಿದರೆಂದೂ ಹೇಳಲ್ಪಟ್ಟಿರುವುದು.

ಅಶ್ವಘೋಷನು ಕ್ರಿ. ಶ. ೨ ನೇ ಶತಮಾನದವನು. ಇವನು ಕಾಳಿದಾಸನ ಗ್ರಂಥಗಳಿಂದ ತನ್ನ ಗ್ರಂಥಗಳಿಗೆ ಎರವುತೆಗೆದುಕೊಂಡಿರುವನು.

ಆ ವೇಳೆಗೆ ಕಾಳಿದಾಸನ ಕಾವ್ಯಗಳು ಲೋಕಪ್ರಿಯವಾಗಲು ಸುಮಾರು ಒಂದೆರಡು ಶತಮಾನಗಳಾದರೂ ಆಗಿರಬೇಕಾಗಿ ತೋರುವುದು; ಈ ಕಾರಣಗಳಿಂದ ಕಾಳಿದಾಸನ ಕಾಲವು ಕ್ರಿ. ಪೂ. ಒಂದನೆಯ ಶತಮಾನವಾಗಿರಬೇಕೆಂದು ಸ್ಪಷ್ಟಪಡುವುದು.

**ರಘುವಂಶ:—**

ವೈವಸ್ವತನೆಂಬ ಮನುವು ಸೂರ್ಯವಂಶದ ಮೊದಲನೆಯವನು. ಆವನ ವಂಶದಲ್ಲಿ ದಿಲೀಪನು ಹುಟ್ಟಿದನು. ಅವನು 'ಸುದಕ್ಷಿಣಾ' ಎಂಬುವಳನ್ನು ಮದುವೆಯಾಗಿ ಬಹುಕಾಲದವರೆಗೂ ಸಂತಾನವಿಲ್ಲದುದನ್ನು ಕಂಡು ಚಿಂತಿಸಿ ಕುಲಗುರುವಾದ ವಸಿಷ್ಠನಾಶ್ರಮವನ್ನು ಹೊಂದಿ ನಿಃಸಂತಾನದುಃಖವನ್ನು ಹೇಳಿಕೊಳ್ಳಲು ಮುನಿಯು ಕರುಣಿಸಿದ ಸುರಭಿಯ ಕರುವಾದ ನಂದಿನಿಯನ್ನಾರಾಧಿಸಿದರೆ ಸಂತಾನವಾಗುವುದೆಂಬುದನ್ನು ಶಿರಸಾಧರಿಸಿ ಮಹದಾನಂದದಿಂದ ನಂದಿನಿಯನ್ನು ಸೇವಿಸಿ ಕೆಲಕಾಲಾನಂತರ ಸುದಕ್ಷಿಣೆಯು ಗರ್ಭವತಿಯಾಗಿ ರಘುಕುಮಾರನನ್ನು ಹಡೆದಳು. ರಘುವು ಪ್ರವರ್ಧಮಾನನಾಗಿ ರಾಜ್ಯಭಾರವನ್ನು ಕೈಗೊಂಡು ಸಕಲದಿಗ್ವಿಜಯವನ್ನು ಮಾಡಿ ಸರ್ವಜಿತ್ತೆಂಬ ಯಾಗವನ್ನು ನಿರ್ವಹಿಸಿ ಗುರುದಕ್ಷಿಣಾನಿಮಿತ್ತ ತನ್ನ ಬಳಿಗೆ ಬಂದ ವರತಂತುಋಷಿಯ ಶಿಷ್ಯನಾದ ಕೌತ್ಸನೆಂಬವನಿಗೆ ಹದಿನಾಲ್ಕುಕೋಟಿದ್ರವ್ಯವನ್ನು ಕೊಟ್ಟು ಕೃತಕೃತ್ಯನಾಗಿರಲು ಇವನಿಗೆ ಅಜನೆಂಬ ಮಗನಾದನು. ಇವನು ಸಂಪ್ರಾಪ್ತವಯಸ್ಕನಾಗಿ ವಿದರ್ಭರಾಜನಾದ ಭೋಜರಾಜನ ತಂಗಿಯಾದ ಇಂದುಮತಿಯೆಂಬವಳನ್ನು ಮದುವೆಯಾಗಿ ದಶರಥನೆಂಬ ಮಗನನ್ನು ಪಡೆದನು. ಇವನು ಪ್ರವರ್ಧಮಾನನಾಗಿ ಕೋಸಲ, ಮಗಧ, ಕೇಕಯದೇಶಾಧೀಶ್ವರರ ಪುತ್ರಿಯರಾದ ಕೌಸಲ್ಯಾ, ಸುಮಿತ್ರಾ, ಕೈಕೇಯಿಯರನ್ನು ಮದುವೆಯಾಗಿ ಪುತ್ರಕಾಮೇಷ್ಟಿಯನ್ನು ನೆರವೇರಿಸಿ ಕೌಸಲ್ಯೆಯಲ್ಲಿ ಶ್ರೀರಾಮನನ್ನೂ ಸುಮಿತ್ರೆಯಲ್ಲಿ ಸೌಮಿತ್ರಿಯ (ಲಕ್ಷ್ಮಣ)ನ್ನೂ ಕೈಕೆಯಲ್ಲಿ ಭರತಶತ್ರುಘ್ನರನ್ನೂ ಪಡೆದನು. ಬಾಲಕರು ಇನ್ನೂ ಚಿಕ್ಕವರಿರುವಾಗಲೇ ಕುಶಿಕರಾಜಕುಲೋತ್ಪನ್ನನಾದ ವಿಶ್ವಾಮಿತ್ರನು ದಶರಥನ ಬಳಿಗೆ ಬಂದು ತನ್ನ ತಪೋಭಂಗವನ್ನೆಸಗುತ್ತಿರುವ ರಾಕ್ಷಸಂಹಾರಕ್ಕಾಗಿ ರಾಮಲಕ್ಷ್ಮಣರನ್ನು ಕಳುಹಿಸಿಕೊಡಬೇಕೆಂದು ಕೇಳಿ ಕರೆದುಕೊಂಡುಹೋಗಿ ಅವರಿಗೆ ಧನುರ್ವಿದ್ಯಾದಿಗಳನ್ನು ಕಲಿಸಿ ಜನಕನಂದಿನಿಯಾದ ಸೀತಾವಿವಾಹಕ್ಕಾಗಿ ರಾಮಲಕ್ಷ್ಮಣರೊಡನೆ ಹೊರಟು ಶಿಲಾರೂಪಳಾದ ಗೌತಮಿಯ ಶಾಪವಿಮೋಚನೆಯನ್ನು ಮಾಡಿ ಮಿಥಿಲೆಯನ್ನು ಸೇರಿ ಹರಧನುವನ್ನು ಮುರಿದು ಜಾನಕಿಯ ಕೈಹಿಡಿದು ಭಾರ್ಗವಗರ್ವವನ್ನೀಡಾಡಿ ವನವಾಸವನ್ನು

ಹೊಂದಿ ಶತ್ರುರಾಕ್ಷಸರನ್ನುಗೆದ್ದು ಸೀತಾಪಹರನಾದ ರಾವಣನ ರುಂಡವನ್ನು ಮುಂಡದಿಂದಿಳಿಸಿ ಸೀತಾಸಮೇತನಾಗಿ ಅಯೋಧ್ಯೆಗೆ ಬಂದನಂತರ ಲೋಕಾಪವಾದಭೀತಿಯಿಂದ ಸೀತೆಯು ಅರಣ್ಯವಾಸವನ್ನು ನಿಶ್ಚಯಿಸಿ ಅವಳನ್ನು ಬಿಟ್ಟುಬರಲಾಜ್ಞಾಪಿಸಿ ವಾಲ್ಮೀಕ್ಯಾಶ್ರಮದಲ್ಲಿ ಹುಟ್ಟಿದ ಲವಕುಶರಿಗೆ ಸಕಲವಿದ್ಯೆಗಳನ್ನು ಕಲಿಸಿದ ನಂತರ ಸೀತೆಯನ್ನರಸುತ್ತ ಬಂದ ರಾಮನಿಗೆ ಪುತ್ರಸಮೇತಳಾದ ಸೀತೆಯನ್ನೊಪ್ಪಿಸಿದನಂತರ ಕೆಲಕಾಲ ಅಯೋಧ್ಯಾನಗರವನ್ನು ಪಾಲಿಸಿ ಕುಶನಿಗೆ ರಾಜ್ಯವನ್ನಿತ್ತನು. ಕುಶನು ತಂದೆಯಾಣತಿಯಂತೆ ರಾಜ್ಯವನ್ನಾಳುತ್ತಾ ಕುಮುದ್ವತಿಯೆಂಬವಳನ್ನು ಮದುವೆಯಾಗಿ ಅತಿಥಿ ಎಂಬ ಪುತ್ರನನ್ನು ಪಡೆದನು. ಈ ಅತಿಥಿರಾಜನಿಗೆ ಇವನ ವಂಶದ ಕೊನೆಯವನಾದ ಅಗ್ನಿವರ್ಣನು ೨೩ನೆಯ ತಲೆಯವನು. ಇವನು ಕೇವಲ ವಿಷಯಾಸಕ್ತನಾಗಿದ್ದು ಅಕಾಲಮೃತ್ಯುಗ್ರಾಸವಾದನು. ಮಂತ್ರಿಗಳು ರಾಜನಿಲ್ಲದ ರಾಜ್ಯವನ್ನು ನೋಡಿ ಗರ್ಭವತಿಯಾಗಿದ್ದ ಅವನ ರಾಣಿಗೆ ಪಟ್ಟವನ್ನು ಕಟ್ಟಿ ರಾಜ್ಯಭಾರವನ್ನು ನಡೆಯಿಸುತ್ತಿದ್ದರೆಂಬಲ್ಲಿಗೆ ೧೯ ಸರ್ಗಗಳು ಮುಗಿದುವು.

ಈ ಕಾವ್ಯಕ್ಕೆ ಮಲ್ಲಿನಾಥ, ದಿನಕರ, ವಲ್ಲಭ, ಚಾರಿತ್ರವರ್ಧನ, ಹೇಮಾದ್ರಿ, ವಿಜಯಾನಂದಸೂರೀಶ್ವರಚರಣಸೇವಕ, ವಿಜಯಗಣಿ, ಪಂಡಿತಸುಮತಿವಿಜಯ, ಬೃಹಸ್ಪತಿಮಿಶ್ರ, ಭರತಸೇನ, ದಕ್ಷಿಣಾವರ್ತನಾಥ, ಧರ್ಮಮೇರು ಮೊದಲಾದ ಟೀಕಾಕಾರರಿರುವರು. ಆದರೂ ಮಲ್ಲಿನಾಥನ ಸಂಜೀವಿನೀಟೀಕಾ, ವಲ್ಲಭನ ರಘುಪಂಚಿಕಾ, ದಿನಕರನ ಸುಬೋಧಿನೀ, ಚಾರಿತ್ರವರ್ಧನನ ಶಿಶುಹಿತೈಷಿಣೀ, ಹೇಮಾದ್ರಿಯ ದರ್ಪಣ, ವಿಜಯಗಣಿಯ ಸುಬೋಧಿನೀ, ಸುಮತಿವಿಜಯನ ಸುಗಮಾರ್ಥಪ್ರಬೋಧಿಕಾ—ಇವು ಪ್ರಕೃತದೊರಕಿರುವುವು. ವಿಜಯಾನಂದಸೂರಿ ಆರೆಂಬುದು ತಿಳಿಯದು. ಮಲ್ಲಿನಾಥ ದಿನಕರ ಹೇಮಾದ್ರಿ ಈ ಮೂವರನ್ನು ಬಿಟ್ಟರೆ ಉಳಿದ ಐವರೂ ಜೈನರೆಂದು ಗೊತ್ತಾಗುವುದು. ಇವುಗಳಲ್ಲಿ ಮಲ್ಲಿನಾಥನ ಟೀಕೆಯೇ ಸುಂದರವಾದುದಾಗಿರುವುದು. ರಘುವಂಶಕ್ಕೆ ಆದಿರಾಮಾಯಣ ವಿಷ್ಣುಪುರಾಣಗಳು ಕಥಾನುಕೂಲವಾಗಿರುವುವು.

**ಕುಮಾರಸಂಭವ:—**

ಇದರಲ್ಲಿ ಎಂಟು ಸರ್ಗಗಳಿರುವುವು. ಕಥೆಯನ್ನು ಸ್ಕಂದ ಅಥವಾ ಶೈವಪುರಾಣದಿಂದಾರಿಸಿಕೊಂಡಿರುವನು. ಕೆಲವು ಪಂಡಿತರು ಕುಮಾರಸಂಭವವು ಕಾರ್ತಿಕೇಯನ ಜನ್ಮದವರೆಗಾದುದರಿಂದ ಈ ಮೊದಲಿನ ಏಳು ಸರ್ಗಗಳನ್ನು ಮಾತ್ರವೇ ಕಾಳಿದಾಸನು ಬರೆದುದಾಗಿಯೂ ಉಳಿದ ಹನ್ನೊಂದು ಸರ್ಗಗಗಳೂ ಮೊದಲಣ ಏಳು ಸರ್ಗಗಳಂತೆ ಕಾವ್ಯಪ್ರೌಢಕಾ ಶಬ್ದಸೌಷ್ಠವತ,

ಅರ್ಥಚಮತ್ಕಾರಗಳು ಕಂಡುಬರುವುದಿಲ್ಲವಾದುದರಿಂದ ಮತ್ತಾರೋ ಬರೆದು ಕಾಳಿದಾಸನ ಹೆಸರಿನಲ್ಲಿ ಅಂಕಿತವಮಾಡಿರುವುದಾಗಿಯೂ ಹೇಳುವರು. ಹಾಗೆ ಕಾಳಿದಾಸನೇ ಬರೆದುದಾಗಿದ್ದರೆ ಕಾವ್ಯವನ್ನು ಕುಮಾರಸಂಭವವೆಂದು ಕರೆಯುವ ಬದಲು 'ತಾರಕವಧ'ವೆಂದೇ ಹೆಸರಿಡಬಹುದಾಗಿದ್ದಿತು. ಆದುದರಿಂದ ಕಾಳಿದಾಸನು ಬರೆದುದು ಎಂಟು ಸರ್ಗಗಳು ಮಾತ್ರವೇ ಎಂದು ತೋರುವುದು. ಮಲ್ಲಿನಾಥನೂ ಈ ಎಂಟುಸರ್ಗಗಳಿಗೆ ಮಾತ್ರವೇ ವ್ಯಾಖ್ಯಾನವನ್ನು ಬರೆದಿರುವನು.

### ಮೇಘದೂತ—

ಇದು ಬಹುಚಿಕ್ಕದಾದುದರಿಂದ ಇದನ್ನು ಖಂಡಕಾವ್ಯವೆನ್ನುವರು. ಇದು ಬಹುಸರಸವಾಗಿಯೂ ಹೃದ್ಯವಾಗಿರುವಂತೆಯೂ ಬರೆಯಲ್ಪಟ್ಟಿದೆ. ತನ್ನಾಜ್ಞೆಯನ್ನು ಮೀರಿದ ತಪ್ಪಿತಕ್ಕಾಗಿ ಕುಬೇರನು ಯಕ್ಷನೊಬ್ಬನನ್ನು ಅಲಕಾವತಿಯಿಂದ ದೂರವಾಗಿ ಒಂದು ವರ್ಷಗಳ ಕಾಲ ಪ್ರವಾಸಿಯಾಗಿರಬೇಕೆಂದು ಅಪ್ಪಣೆಮಾಡಿದನು. ಹಾಗೆಯೇ ಆ ಯಕ್ಷನು ಸುರೂಪಿಯೂ ಯುವತಿಯೂ ಆದ ತನ್ನ ಹೆಂಡತಿಯನ್ನಗಲಿ ರಾಮಗಿರಿಯನ್ನು ಸೇರಿದನು. ಪುಣ್ಯಾಶ್ರಮೋತ್ತಮವಾದ ಈ ರಾಮಗಿರಿಯಲ್ಲಿ ವಾಸಮಾಡುತ್ತಾ ವಿರಹಾನಲಸಂತಪ್ತನಾಗಿ ಆಷಾಢಮಾಸದ ಒಂದಾನೊಂದುದಿವಸ ತನ್ನ ಮನೋಭಿಪ್ರಾಯವನ್ನು ವಿರಹಿಣಿಯಾದ ಭಾರ್ಯೆಗೆ ಹೇಳಿಕಳುಹಲುದ್ದೇಶಿಸಿ ಮತ್ತಾರೂ ದೊರೆಯದೆ ಒಂದಾನೊಂದು ಮೇಘವನ್ನು ನೋಡಿ, ಅದರೊಡನೆ ತನ್ನ ಪ್ರಿಯೆಗೆ ಸಂದೇಶವನ್ನು ಹೇಳಿ ಕಳುಹಿಸಿರುವನು. ಶ್ರೀಮದ್ರಾಮಾಯಣದಲ್ಲಿ ರಾಮನು ಪತ್ನೀವಿಯೋಗದಿಂದ ಬಳಲಿದವನಾಗಿ ಕೊನೆಗೆ ಆಂಜನೇಯನನ್ನು ದೂತನಾಗಿ ಹೋಗಲು ಸಂದೇಶವನ್ನು ಕೊಟ್ಟು ಕಳುಹಿಸಿದ ಕಥೆಯನ್ನು ನೋಡಿ ಇದನ್ನು ಬರೆದಂತೆ—

"ಇತ್ಯಾಖ್ಯಾತೇ ಪವನತನಯಂ ಮೈಥಿಲೀವೋನ್ಮುಖೀ ಸಾ"

ಎಂಬುದರಿಂದ ಭಾಸವಾಗುವುದು. ಇದರಲ್ಲಿ ಪೂರ್ವಮೇಘವೆಂದೂ ಉತ್ತರಮೇಘವೆಂದೂ ಎರಡು ಭಾಗವಾಗಿದ್ದು ರಾಮಗಿರಿಯಿಂದ ಅಲಕಾವತಿಗೆ ಹೋಗಲು ಮೇಘನಿಗೆ ಅನುಕೂಲವಾದ ಮಾರ್ಗವನ್ನು ವರ್ಣಿಸಿರುವುದು ಪೂರ್ವಮೇಘವೆಂದೂ ಅನಂತರ ಅಲಕಾವರ್ಣನೆ, ಸ್ವಗೃಹವರ್ಣನೆ, ಸಂದೇಶವಿಚಾರ—ಇತ್ಯಾದಿಗಳಿಂದ ಕೂಡಿರುವುದು ಉತ್ತರಮೇಘವೆಂದೂ ಪ್ರಸಿದ್ಧವಾಗಿರುವುದು. ಈ ಕಾವ್ಯದಲ್ಲಿ ಶೃಂಗಾರ ಮತ್ತು ಕರುಣರಸಮಿಶ್ರವಾಗಿದೆ. ಕವಿಯಾದವನು ತಾನು ಹೇಳಬೇಕೆಂದಿರುವ ವಿಷಯಗಳಿಗನುಕೂಲವಾದ ವೃತ್ತಗಳನ್ನಾರಿಸಿಕೊಳ್ಳುವುದು ಕವಿಯ ಕುಶಲತೆಯನ್ನು ತೋರ್ಪಡಿಸುವದು. ಹೀಗೆ ಮಾಡು

ವುದರಿಂದ ಹೇಳಬೇಕೆಂಬ ವಿಷಯಕ್ಕೆ ಮತ್ತಷ್ಟು ಸಜೀವತೆಯನ್ನೂ ಸರಳತೆಯನ್ನೂ ದೊರಕಿಸಿಕೊಟ್ಟಂತಾಗುವುದು. ಆದುದರಿಂದ ಕಾಳಿದಾಸನು ತನ್ನ ಕಲ್ಪನಾವಿಷಯಕ್ಕೆ ಅನುರೂಪವಾದ ಮಂದಾಕ್ರಾಂತಾವೃತ್ತದಲ್ಲಿ ಹೇಳಿರುವನು. ಈಚೆಗೆ ಇದನ್ನನುಸರಿಸಿ ಕೀರಸಂದೇಶ ಹಂಸಸಂದೇಶವೇ ಮೊದಲಾದ ಎಷ್ಟೋ ಸಂದೇಶಗಳು ಬರೆಯಲ್ಪಟ್ಟಿರುವುವು. ಇವೆಲ್ಲಾ ಮೇಘಸಂದೇಶದ ಲೋಕಪ್ರೀತಿಯನ್ನು ವಿಶದಗೊಳಿಸುತ್ತವೆ. ಇದಕ್ಕೆ ಮಲ್ಲಿನಾಥ, ಭರತ, ಸನಾತನ, ಮಕರಂದ, ಕಲ್ಯಾಣಮಲ್ಲ— ಇವರು ಟೀಕೆಯನ್ನು ಬರೆದಿರುವರು.

ರಘುವಂಶಾದಿಕಾವ್ಯಪ್ರಣೇತೃವಾದ ಕಾಳಿದಾಸನು ಶಾಕುಂತಲಾನಾಟಕಕಾರನಾದ ಕಾಳಿದಾಸನಿಗಿಂತ ಭಿನ್ನನೆಂಬುದಕ್ಕೆ ಈ ಕೆಳಗಣ ಹೇಳಿಕೆಯು ಸಾಕಾಗಬಹುದಾಗಿರುವುದು.

೧. ಕಾಳಿದಾಸನು ತಾನು ಬರೆದುದಾಗಿ ಹೇಳಿಕೊಂಡಿರುವ 'ಜ್ಯೋತಿರ್ವಿದಾಭರಣ'ವೆಂಬ ಕಾಲವಿಧಾನಶಾಸ್ತ್ರದಲ್ಲಿ—

**ಕಾವ್ಯತ್ರಯಂ ಸುಮತಿಕೃದ್ರಘುವಂಶಪೂರ್ವಂ**
**ಜಾತಂ ತತೋ ನನು ಕಿಯಚ್ಛ್ರುತಿಕರ್ಮವಾದಃ ।**
**ಜ್ಯೋತಿರ್ವಿದಾಭರಣಕಾಲವಿಧಾನಶಾಸ್ತ್ರಂ**
**ಶ್ರೀಕಾಳಿದಾಸಕವಿತೋ ಹಿ ತತೋ ಬಭೂವ ॥**

ಎಂದು ಹೇಳಿಕೊಂಡಿರುವುದರಿಂದ ಇವನು ಕಾವ್ಯತ್ರಯಗಳನ್ನು ಬರೆದಿರುವನೆಂದು ಗೊತ್ತಾಗುವುದು. ನಾಟಕಕಾರನಾದ ಕಾಳಿದಾಸನೇ ಇದನ್ನೂ ಬರೆದುದಾಗಿದ್ದರೆ 'ಕಾವ್ಯತ್ರಯ'ವೆಂದು ಹೇಳಿಕೊಂಡವನು 'ನಾಟಕತ್ರಯ'ವೆಂದೂ ಹೇಳಬಹುದಾಗಿದ್ದಿತು.

೨. ನಾಟಕಕಾರನಾದ ಕಾಳಿದಾಸನ ಕೃತಿಗಳನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸುವುದಾದರೆ ಅವುಗಳೆಲ್ಲವೂ ಸ್ವಾಭಾವಿಕತೆಯಿಂದ ಕೂಡಿ ಪರಿಪೂರ್ಣವೂ ಸಮಭಾವವೂ ಆಗಿರುವುವಾಗಿ ಗೋಚರಿಸುವುವಲ್ಲದೆ, ವಿಷಯಗಳನ್ನಾರಿಸಿಕೊಂಡು ಬರೆಯುವುದರಲ್ಲಿ ಕವಿಯು ಅತ್ಯಂತಚತುರನೆಂದೂ ಬೋಧೆಯಾಗುತ್ತದೆ. ಅಲ್ಲದೆ ಭಾರತಸಂಪ್ರದಾಯಾನುಸಾರವಾಗಿ ತನ್ನ ಪ್ರತಿಯೊಂದು ನಾಟಕವನ್ನೂ ಮಂಗಳಾಂತವಾಗಿ ಮುಗಿಸಿರುವುದು ಕಂಡುಬರುತ್ತದೆ. ಎರಡನೆಯ ಕಾಳಿದಾಸನ ಗ್ರಂಥಗಳು ಹೀಗಿರುವುದಿಲ್ಲ. ಇವನ ಕಾವ್ಯಗಳಾವುವೂ ಪೂರ್ಣವಾಗಿರದೆ ದುಃಖಾಂತವಾಗಿರುವಂತೆ ಕಂಡುಬರುವುವು.

೩. ಅಶ್ವಘೋಷನು ಮಹಾಕವಿಗಳ ಕಾವ್ಯಮರ್ಯಾದೆಯನ್ನನುಕರಿಸಿರುವುದರಿಂದಲೂ ಇವರೀರ್ವರ ಕಾವ್ಯಗಳಲ್ಲಿ ಪರಸ್ಪರಸಾಮ್ಯವು ತೋರುವುದ

ರಿಂದಲೂ ಅಶ್ವಘೋಷನು ಕಾಳಿದಾಸನ ಕಾವ್ಯಗಳಿಂದ ಎರವು ತೆಗೆದುಕೊಂಡಿರ ಬಹುದು. ಈ ಕಾರಣಗಳಿಂದ ಇವನು ಮೊದಲನೆಯ ಕಾಳಿದಾಸನಿಗಿಂತ ಭಿನ್ನ ನೆಂಬುದು ವ್ಯಕ್ತವಾಗುವುದು.

ಭಾರತೀಯರಲ್ಲಿ ತಮ್ಮ ಗ್ರಂಥಗಳನ್ನು ಮಂಗಳಾಂತವಾಗಿಯೇ ಮುಗಿ ಸಲೇ ಬೇಕೆಂಬುವ ಸಂಪ್ರದಾಯವಿರುವುದು. ಈ ವಿಚಾರವಾಗಿ ಪಾಣಿನಿಯ ಸೂತ್ರಕ್ಕೆ ಪತಂಜಲಿಯು ಭಾಷ್ಯವನ್ನು ಬರೆದಿರುವುದರಲ್ಲಿ—

ಮಂಗಳಾದೀನಿ ಮಂಗಳಮಧ್ಯಾನಿ ಶಾಸ್ತ್ರಾಣಿ ಪ್ರಥಂತೇ। ವೀರ ಪುರುಷಾಣಿ ಭವಂತಿ ಪ್ರಾಯುಷ್ಮತ್ಪುರುಷಾಣಿ ಚ ಪ್ರಧ್ಯೇತಾರಶ್ಚ ಮಂಗಳಂ ಯುಕ್ತಾ ಯಥಾ ಸ್ಯುಃ ॥

ಎಂದು ಹೇಳಿರುವುದು ಕಂಡುಬರುವುದು. ಹೀಗೆ ಶಾಸ್ತ್ರನಿಯಮಬದ್ಧವಾಗಿ ಬರೆಯಲ್ಪಟ್ಟ ಗ್ರಂಥಗಳು ಬಹುಕಾಲೋಜ್ಜೀವಿತಗಳಾಗಿ, ಹೇಳುವವರು ಕೇಳು ವವರು ಬಲಾಢ್ಯರಾಗಿಯೂ ಯಶಸ್ವಿಗಳಾಗಿಯೂ ಚಿರಾಯುಗಳಾಗಿಯೂ ಸುಖವನ್ನು ಹೊಂದುವರು. ಒಂದು ವೇಳೆ ಶಾಸ್ತ್ರಗಳಲ್ಲಿನ ಶಬ್ದವಿಚಾರಗಳೂ ಕಾವ್ಯವಿಚಾರಗಳೂ ಮೇಲಣ ಸೂತ್ರಕ್ಕೆ ಸರಿಬಾರದಿರುವಂತೆ ಕಂಡುಬರುವುವಾ ದರೂ ಕಾವ್ಯವಿಚಾರದಲ್ಲಿ ಆಲಂಕಾರಿಕರು ಓದುವವರಿಗಾನಂದವನ್ನುಂಟುಮಾ ಡುವಂತೆ 'ಸದ್ಯಃಪರನಿರ್ವೃತಿ'ರಸವನ್ನು ಜೋಡಿಸಿರುವರು. ಕಾವ್ಯಗಳು ಮಂಗ ಳಾಂತವಾಗಿರದಿದ್ದರೆ ವಾಚಕರಿಗೆ ಸದ್ಯಃಪರನಿರ್ವೃತಿಯಾನಂದವು ದೊರೆಯದು. ಆದುದರಿಂದ ಸಂಸ್ಕೃತಕವಿಗಳು ತಮ್ಮ ಕಾವ್ಯಗಳನ್ನು ಮಂಗಳಾಂತವಾಗಿಯೇ ಮುಗಿಸಿರುವರು; ಮುಗಿಸುವರು. ಮಹಾತ್ಮನಾದ ಕಾಳಿದಾಸನು ತಾನು ತಿಳಿದವನಾಗಿದ್ದರೂ ಸಂಪ್ರದಾಯವಿರುದ್ಧವಾಗಿ ತನ್ನ ಕಾವ್ಯಗಳನ್ನು ಮಂಗ ಳಾಂತವಾಗಿ ಬರೆಯದೆ ಮುಗಿಸಿರುವನು. ಇದಕ್ಕೆ ಯಾವುದಾದರೊಂದು ಪ್ರಬಲಕಾರಣವಿದ್ದಿರಬೇಕಾಗಿ ತೋರುವುದು. ಹಾಗಿರದಿದ್ದರೆ ಸಂಪ್ರದಾಯ ವಿರುದ್ಧವಾಗಿ ಬರೆಯುತ್ತಿರಲಿಲ್ಲವೆಂಬ ಭರವಸೆಯು ನಮಗಿರುವುದು. ಈ ವಿಚಾರಗಳನ್ನು ಮಹಾಕವಿಯ ಕಾವ್ಯಾವಲೋಕನದಿಂದ ಊಹಿಸಿಕೊಳ್ಳಬಹು ದಾಗಿದೆ. ಮೊದಲು ಕುಮಾರಸಂಭವವನ್ನು ನೋಡೋಣ! ಅಷ್ಟಮಸರ್ಗಾಂ ತ್ಯದಲ್ಲಿ—

"ಸಮದಿವಸನಿಶೀಥಂ . . . . . . . . . ಜ್ಜತೌಘೈಃ" ಎಂದು ಹೇಳಿ—

ಉಮಾಸುರತವರ್ಣನಂ ನಾಮಾಷ್ಟಮಸ್ಸರ್ಗಃ

ಎಂದು ಮುಗಿಸಿರುವನು. ಇದನ್ನು ಸಾಮಾನ್ಯವಾಗಿ ಓದಿನೋಡುವುದರಿಂದ ಸಂಪ್ರದಾಯವಿರುದ್ಧವಾಗಿ ತೋರುವುದಿಲ್ಲವಾದರೂ ಮಲ್ಲಿನಾಥನು ತನ್ನ

ವ್ಯಾಖ್ಯಾನದಲ್ಲಿ ಹೇಳಿ ಸೂಚಿಸಿರುವುದಿಲ್ಲವಾದರೂ ಕಾವ್ಯವನ್ನು ಮುಗಿಸದೆ ಫಲಪ್ರಾಪ್ತಿಯನ್ನು ಹೇಳದೆ ಅಷ್ಟಕ್ಕೇ ಬಿಟ್ಟುಬಿಟ್ಟಿರುವುದನ್ನು ಸಂಪ್ರದಾಯಾನುಬದ್ಧರಾದ ಭಾರತೀಯರು ಮಂಗಳಾಂತವೆಂದು ಒಪ್ಪಿಕೊಳ್ಳಲಾರರು. ಕುಮಾರಸಂಭವವನ್ನು ಬರೆದನಂತರ ರಘುವಂಶವನ್ನು ಬರೆದಿರುವುದಾಗಿ ಪಂಡಿತರ ಒಪ್ಪಿಗೆ ಇರುವುದು. ಇದರಿಂದ ಕಾಳಿದಾಸನು ತಾನು ಮೊದಲು ಬರೆದ ಕುಮಾರಸಂಭವವನ್ನು ಮಂಗಳಾಂತವಾಗಿ ಮುಗಿಸುವುದಕ್ಕೆ ಬೇಕಾದಷ್ಟು ಕಾಲವೂ ಸಾಕಾದಷ್ಟು ಸೌಕರ್ಯವೂ ಇದ್ದಾಗ್ಯೂ ತಾನು ಗ್ರಂಥಮುಕ್ತಾಯವನ್ನು ಮಾಡದೆ ಬೇಕಾಗಿಯೇ ಬಿಟ್ಟಿರಬಹುದಾಗಿ ತೋರಿಬರುವುದು.

ಅಗ್ನಿವರ್ಣನು ವಿಷಯಲಂಪಟನಾಗಿದ್ದು ಕ್ಷಯಪೀಡಿತನಾಗಿ ಸಾಯುವನು. ಅವನನಂತರ ಸಿಂಹಾಸನಾರೋಹಣಕ್ಕೆ ತಕ್ಕವರಾರೂ ಇರಲಿಲ್ಲ. ಅವನು ಮರಣಶಯ್ಯೆಯಲ್ಲಿದ್ದಾಗ ಮಂತ್ರಿಗಳು ಆ ವಿಚಾರವನ್ನು ಯಾರಿಗೂ ತಿಳಿಸದೆ ಗೋಪ್ಯಮಾಡಿದ್ದಾರೆ. ಹಾಗೆ ಒಂದುವೇಳೆ ಈ ವಿಚಾರವನ್ನು ಹೊರಪಡಿಸಿದರೆ ರಾಜ್ಯವು ಅರಾಜಕವಾದ ಸಂಗತಿಯು ಹರಡಿ ತೊಂದರೆಯು ಸಂಭವಿಸಬಹುದೆಂಬ ಭೀತಿಯಿಂದ ಹಾಗೆ ಮಾಡಿದುದಾಗಿ ಭಾಸವಾಗುತ್ತದೆ. ಈ ಕಾರಣದಿಂದಲೇ ಅವನ ಶವಸಂಸ್ಕಾರವೂ ಯಾರಿಗೂ ಗೋಚರವಾಗದಂತೆಯೇ ನಡೆಯಿಸಲ್ಪಟ್ಟಿತು. ಅನಂತರ ಮಂತ್ರಿಗಳು ಪಟ್ಟದ ರಾಣಿಯು ಗರ್ಭವತಿ ಎಂಬುದನ್ನು ತಿಳಿದು ಗರ್ಭದಲ್ಲಿನ ಪಿಂಡಕ್ಕೆ ಪಟ್ಟವನ್ನು ಕಟ್ಟಿ ರಾಣಿಯೇ ರಾಜ್ಯಭಾರ ಮಾಡುವಂತೆ ನಿಯಮಿಸಿಕೊಂಡರು. ಇದೂ ಪ್ರಜಾನುಮತಿಯಿಂದ ನಡೆದುದೇ ಅಲ್ಲವೇ ಎಂಬುದು ರಘುವಂಶದಿಂದ ತಿಳಿದುಬರುವಂತಿಲ್ಲ.

ರಘುವಂಶದ ಕೊನೆಯ ಶ್ಲೋಕದಲ್ಲಿ ರಾಣಿಯನ್ನು ಭೂಮಿಗೆ ಹೋಲಿಸಿ, ಭೂಮಿಯಲ್ಲಿ ಬಿತ್ತಿದ ಬೀಜವು ಮೊಳೆತು ಗಿಡವಾಗುವುದನ್ನೆದುರುನೋಡುವಂತೆ ವೃದ್ಧಮಂತ್ರಿಗಳು ರಾಣಿಯ ಗರ್ಭದಲ್ಲಿ ತಮ್ಮನ್ನು ಕಾಪಾಡುವ-ಅರಾಜಕತೆಯಿಂದುದ್ಧಾರಮಾಡುವ-ಪುತ್ರೋತ್ಪತ್ತಿಯನ್ನೆದುರುನೋಡುತ್ತಿದ್ದರೆಂದು ಹೇಳಿ ಮುಗಿಸಿರುವನು. ಇದು ಹೇಗೆ? ಭೂಮಿಯಲ್ಲಿ ಬಿತ್ತಿದ ಬೀಜವು ನೆನೆದು ನಿಂತು ಮೊಳೆತು ಕವಲೊಡೆದು ಗಿಡವಾಗಿ ಮರವಾಗಿ ಹೂವಾಗಿ ಹೀಚಾಗಿ ಕಾಯಾಗಿ ಹಣ್ಣಾಗಿ ತನ್ನೊಡೆಯನನ್ನು ತಣಿಸುವುದೆಂಬುದು ಯಾವ ಭರವಸೆ? ಮೇಲಣ ಶ್ಲೋಕವನ್ನು ಓದುವವರಿಗೆ-ಗಂಡನು ಸತ್ತನಂತರ ಆ ರಾಣಿಯು ರಾಜ್ಯಭಾರವನ್ನು ಮಾಡುತ್ತಿದ್ದಳೇ? ಅಥವಾ ರಾಜ್ಯಭಾರಕ್ರಮವು ಹೇಗೆ? ಗರ್ಭಿಣಿಯಾಗಿದ್ದವಳು ಗಂಡುಮಗುವನ್ನೇ ಪ್ರಸವಿಸಿದಳೇ? ಅವನು ಬೆಳೆದು ದೊಡ್ಡವನಾಗಿ ರಾಜ್ಯಧುರವನ್ನು ವಹಿಸಿ ಶತ್ರುದಮನವನ್ನೆಸಗಿ ಏಕಚ್ಛತ್ರಾಧಿಪತ್ಯವನ್ನು

ಕೈಕೊಂಡು ತನ್ನ ಹಿರಿಯರಂತೆ ಪ್ರಜೆಗಳ ಮನೋಭೀಷ್ಟವನ್ನು ಸಲಿಸಿದನೇ?-ಇತ್ಯಾದಿವಿಕಲ್ಪಗಳು ಸ್ಫೂರ್ತಿಸುವುವು.

ಇದೂ ಹಾಗಿರಲಿ; ಮಹಾಕವಿಕಾಳಿದಾಸನು ತನ್ನ ಗ್ರಂಥವನ್ನು ಅಮಂಗಳಾಂತವಾಗಿ ಮಾಡಬಾರದೆಂದಿದ್ದರೆ ಕಾವ್ಯವನ್ನು ೧೮ನೆಯ ಅಧ್ಯಾಯಕ್ಕೇ ಮುಕ್ತಾಯಮಾಡಬಹುದಾಗಿದ್ದಿತು. ಅಥವಾ ೧೯ನೆಯ ಅಧ್ಯಾಯದಲ್ಲಿ ಅಗ್ನಿವರ್ಣನ ಕಥೆಯನ್ನು ಹೇಳಿ ಗರ್ಭವತಿಯಾಗಿದ್ದ ಅವನ ರಾಣಿಯು ನವಮಾಸಾನಂತರ ಗಂಡುಶಿಶುವನ್ನು ಪ್ರಸವಿಸಿ, ಅವನು ಕಾಲಕ್ರಮದಲ್ಲಿ ಪ್ರಜಾರಂಜಕನಾಗಿ ರಾಜ್ಯವಾಳುತ್ತಿದ್ದನೆಂದು ಹೇಳಿ ಮುಗಿಸಬಹುದಾಗಿದ್ದಿತು. ಇಂತಹ ಅಮೋಘಕಾವ್ಯವನ್ನು ಬರೆದ ಕವಿಗೆ ಇನ್ನು ಕೆಲವು ಶ್ಲೋಕಗಳ ಜೋಡಣೆಯು ಬಾರದೇ ಇರಲಿಲ್ಲ. ಇದರಿಂದ ಕಾಳಿದಾಸನು ತನ್ನ ಕಾವ್ಯವನ್ನು ಬೇಕೆಂದೇ ದುಃಖಾಂತವಾಗಿ ಮಾಡಿರುವುದಾಗಿ ತೋರುವುದು. ಇದರಿಂದ ಈ ಕಾಳಿದಾಸನ ಕಾಲವು ಅತ್ಯಂತ ದುಃಖಾಸ್ಪದವಾಗಿದ್ದು ಕವಿಯು ಮನೋದುಗುಡದಿಂದ ಈರೀತಿ ಮಾಡಿರಬೇಕಾಗಿ ಬೋಧೆಯಾಗುವುದು. ಅಗ್ನಿವರ್ಣನು ಅತ್ಯಂತವಿಷಯಾಸಕ್ತನೆಂದೂ ಸಂತಾನಹೀನನೆಂದೂ ಹೇಳಿರುವುದರಿಂದ ರಾಜ್ಯಭಾರವು ಸುಸೂತ್ರವಾಗಿ ನಡೆಯುತ್ತಿರಲಿಲ್ಲವೆಂತಲೂ ಪರರಾಜಭಯಾಕ್ರಾಂತರಾದ ಪ್ರಜೆಗಳು ಶತ್ರುನಿಗ್ರಹಸಮರ್ಥನೂ ಪ್ರಜಾನುರಂಜಕನೂ ಆದ ಓರ್ವ ಮಹಾಪುರುಷನನ್ನು ಬಯಸುತ್ತಿದ್ದಂತೆಯೂ ಬೋಧೆಯಾಗುವುದು.

ಕುಮಾರಸಂಭವದಲ್ಲಿಯೂ ಹೀಗೆಯೇ. "ಕುಮಾರಸಂಭವ" ವೆಂಬ ಹೆಸರಿನಿಂದಲೇ ಇದು ಕುಮಾರೋತ್ಪತ್ತಿವಿಷಯಕವಾದ ಗ್ರಂಥವೆಂದು ತಿಳಿಯುವುದು. ಇಂದ್ರಾದಿದೇವತೆಗಳು ತಾರಕಾಸುರನ ಹಾವಳಿಯನ್ನು ತಾಳಲಾರದೆ ಬ್ರಹ್ಮನ ಸಲಹೆಯಂತೆ ಉಮಾಪರಮೇಶ್ವರರಿಂದ ಜನಿಸುವ ಸೇನಾನಿಯಿಂದ ಕ್ಷೇಮವನ್ನಾಶಿಸಿ ಊರ್ಧ್ವರೇತಸ್ಕನಾದ ಪರಮೇಶ್ವರನನ್ನು ಇಂತಹ ಕಾರ್ಯಕ್ಕೆ ಒಡಂಬಡಿಸಲು ಮದನನನ್ನು ಕಳುಹಿಸಲು ಕಾಮನು ಬಹಿರ್ಮುಖನಾದ ಫಾಲಲೋಚನನಿಂದ ಭಸ್ಮೀಭೂತನಾಗುವನು. ಅನಂತರ ಶಿವಪೂಜಾಪರಾಯಣಳಾದ ಉಮೆಯನ್ನು ನೋಡಿ ಮನಸೋತು ಈಶ್ವರನು ಪಾಣಿಗ್ರಹಣ ಮಾಡಿಕೊಂಡನೆಂದು ಹೇಳಿ ಉಮಾಸುರತವರ್ಣನೆಯಲ್ಲಿಯೇ ಕಾವ್ಯವನ್ನು ಮುಗಿಸಿರುವನು. ಕುಮಾರನ ಜನ್ಮಪರಾಕ್ರಮಾದಿಗಳನ್ನು ಹೇಳುವುದಾಗಿ ಕಾವ್ಯವನ್ನು ಪ್ರಾರಂಭಿಸಿ ಕುಮಾರೋತ್ಪತ್ತಿಗೆ ಮೊದಲೇ ಗ್ರಂಥಾಂತವನ್ನು ಮಾಡಿರುವನು. ಇವುಗಳನ್ನೆಲ್ಲಾ ವಿಮರ್ಶಿಸಿದರೆ ಆಗಣ ಕಾಲದ ರಾಜ್ಯಸ್ಥಿತಿಯು ಹೇಗೆ ಅನಾಯಕವಾಗಿತ್ತೆಂಬುದು ವ್ಯಕ್ತವಾಗುವುದು. ಶತ್ರುನಾಶವಾಗಲಿಲ್ಲ, ಅರಾಜಕತ್ವವು

ತಪ್ಪಲಿಲ್ಲ, ಸ್ವಾತಂತ್ರ್ಯೋದ್ಧರಣವಾಗಲಿಲ್ಲ, ದೇಶಕಲ್ಯಾಣವಾಗಲಿಲ್ಲ, ಇಷ್ಟಾರ್ಥವು ಕೈಗೂಡಲಿಲ್ಲ, ಎಂಬಿವೇ ಮೊದಲಾದ ಆಧಿಪರಂಪರೆಗಳಿಂದ ಪ್ರಜೆಗಳೆಲ್ಲರೂ ಆ ದೇವತೆಗಳಂತೆ ಸದಾ ಹಾತೊರೆಯುತ್ತಿದ್ದರೆಂಬುದು ಸ್ಪಷ್ಟಪಡುವುದು.

ಮೇಘಸಂದೇಶದಲ್ಲಿಯೂ ಗ್ರಂಥಕಾರನು ಸಂಪ್ರದಾಯವಿರುದ್ಧವಾಗಿ ಬರೆದಿರುವಂತೆ ತೋರುವುದು, ಹೇಗೆಂದರೆ—ವಿರಹಿಯಾದ ಯಕ್ಷನು ಮೇಘನನ್ನು ಪ್ರಾರ್ಥಿಸಿ ವಿರಹಿಣಿಯಾದ ತನ್ನ ಭಾರ್ಯೆಗೆ ತನ್ನ ಕ್ಷೇಮಸಮಾಚಾರವನ್ನು ಹೇಳಿಕಳುಹಿಸಿ ಅನುರೂಪನಾಯಕನ ಶ್ರೇಯೋಭಿವೃದ್ಧಿಯನ್ನು ಒಯಸಿ—

ಏತತ್ಕೃತ್ವಾ . . . . , . . . . ವಿಪ್ರಯೋಗಃ

ಎಂದು ಹೇಳಿ ಮುಕ್ತಾಯವನ್ನುಮಾಡಿರುವನು. ಇದರಲ್ಲಿ ಮಿತ್ರನ ಪ್ರಾರ್ಥನೆಯನ್ನು ಅಂಗೀಕರಿಸಿ ಮೇಘನು ಯಕ್ಷಭಾರ್ಯೆಗೆ ಯಕ್ಷನ ಸಮಾಚಾರವನ್ನು ತಿಳಿಸಿದನೇ? ಅಥವಾ ಇಲ್ಲವೇ? ಏನು ಹೇಳಿದ? ಪ್ರತಿಯಾಗಿ ಯಕ್ಷಭಾರ್ಯೆಯು ಏನು ಹೇಳಿಕಳುಹಿಸಿದಳು— ಇವೇ ಮೊದಲಾದ ವಿಚಾರಗಳಾವುವೂ ತಿಳಿಯುವಂತಿಲ್ಲ. ಯಕ್ಷನೇನೋ ಕಾಮಾರ್ತನಾಗಿ ಚೇತನಾಚೇತನವಿವೇಕಮೂಢನಾಗಿ ಮೇಘದೊಡನೆ ಸಂದೇಶವನ್ನು ಕಳುಹಿಸಲು ಪ್ರಯತ್ನಪಟ್ಟನೆಂದರೆ, ಕವಿಯೂ ಹಾಗೆಯೇ ವಿವೇಕಶೂನ್ಯನಾಗಿ ಮೇಘವು ಸಂದೇಶವನ್ನು ತೆಗೆದುಕೊಂಡು ಹೋದುದಾಗಿಯೂ ಪುನಃ ಉತ್ತರವನ್ನು ತಂದುದಾಗಿಯೂ ವರ್ಣನೆಮಾಡ ಬಲ್ಲನೆ! ಎಂದರೆ ಹಾಗಿಲ್ಲದಿದ್ದರೂ, ಕೊನೆಗೆ ಆ ಯಕ್ಷದಂಪತಿಗಳು ಶಾಪಾವಸಾನಾನಂತರ ಸೇರಿ ಸುಖವಾಗಿದ್ದರೆಂದು ಒಂದುಶ್ಲೋಕದಿಂದ ಹೇಳಿ ಮಂಗಳಾಂತವಾಗಿ ಮಾಡುವುದು ಏನೂ ಅಸಾಧ್ಯವಾಗಿರಲಿಲ್ಲ! ಮತ್ತೂ, ಯಕ್ಷನಿಗೆ ಕುಬೇರನು ಸುಮ್ಮನೇ ಸ್ವಾಧಿಕಾರಾತ್ಪ್ರಮತ್ತನಾದುದಕ್ಕಾಗಿ ಶಾಪವನ್ನು ಕೊಟ್ಟನೆಂದು ಕವಿಯು ಹೇಳಿರುವನೇ ಹೊರತು, ಇಂತಹ ಗುರುತರವಾದ ಪ್ರವಾಸರೂಪಶಾಪಕ್ಕೆ ಎಂತಹ ತಪ್ಪನ್ನು ಯಕ್ಷನು ಮಾಡಿರಬಹುದೆಂಬುದನ್ನು ಹೇಳಿರುವುದಿಲ್ಲ. ಇವೇ ಮೊದಲಾದ ಕಾರಣಗಳಿಂದ ಕಾಳಿದಾಸನು ಕಾವ್ಯವನ್ನು ಬರೆಯುವಾಗ ರಾಜ್ಯವು ಅರಾಜಕವಾಗಿತ್ತೆಂತಲೂ ದುಷ್ಟನಿಗ್ರಹಶಿಷ್ಟಪರಿಪಾಲನವನ್ನುಮಾಡುವ ಪ್ರಜಾರಂಜಕರಾರೂ ಇರಲಿಲ್ಲವೆಂದೂ, ಯಾರು ಬರುವರೋ ಹೇಗಾಗುವುದೋ ಎಂಬ ನಿರೀಕ್ಷಣೆಯಲ್ಲಿ ಕಾಲಹರಣಮಾಡುತ್ತಿದ್ದರೆಂದು ಸ್ಪಷ್ಟವಾಗಬಹುದಾಗಿದೆ. ಈ ಕಾರಣದಿಂದಲೇ ಕಾಳಿದಾಸನು ತನ್ನ ಅಮೋಘಕಾವ್ಯಗಳನ್ನು ಮಂಗಳಾಂತಮಾಡದೆ ಮನಬಂದಲ್ಲಿಗೇ ಕೈಬಿಟ್ಟಿರುವನು.

ರಾಮಾವತಾರಸಮಾಪ್ತಿವರ್ಣನಂ—

ನಿರ್ವರ್ತ್ಯೈವಂ ದಶಮುಖಶಿರಚ್ಛೇದಕಾರ್ಯಂ ಸುರಾಣಾಂ
ವಿಷ್ವಕ್ಸೇನಃ ಸ್ವತನುಮವಿಶತ್ಸರ್ವಲೋಕಪ್ರತಿಷ್ಠಾಂ।
ಲಂಕಾನಾಥಂ ಪವನತನಯಂ ಚೋಭಯಂ ಸ್ಥಾಪಯಿತ್ವಾ
ಕೀರ್ತಿಸ್ತಂಭದ್ವಯಮಿವ ಗಿರೌ ದಕ್ಷಿಣೇ ಚೋತ್ತರೇ ಚ ॥ —ರಘುವಂಶ

ಶ್ರೀರಾಮನು ರಾವಣವಧರೂಪವಾದ ದೇವಕಾರ್ಯವನ್ನು ಈ ರೀತಿಯಲ್ಲಿ ನಿರ್ವಹಿಸಿ, ದಕ್ಷಿಣಪರ್ವತವಾದ ತ್ರಿಕೂಟಾಚಲದ ಮೇಲೆ ಲಂಕಾಧಿಪನಾದ ವಿಭೀಷಣನನ್ನೂ, ಉತ್ತರಾಚಲವಾದ ಹಿಮಾಲಯದ ಮೇಲೆ ಭಕ್ತಶಿರೋಮಣಿ ಯಾದ ಆಂಜನೇಯನನ್ನೂ ಸಹ ತನ್ನ ಎರಡು ಕೀರ್ತಿಸ್ತಂಭಗಳೋಪಾದಿಯಲ್ಲಿ ಸ್ಥಾಪನೆಮಾಡಿ ಸರ್ವಲೋಕಶ್ರೇಷ್ಠತಮವಾದ ಸ್ವಾರಾಜ್ಯವನ್ನು ಸೇರಿದನು!

ಪಾರ್ವತೀಸೌಂದರ್ಯವರ್ಣನಂ—

ಸರ್ವೋಪಮಾದ್ರವ್ಯಸಮುಚ್ಚಯೇನ ಯಥಾಪ್ರದೇಶಂ ವಿನಿವೇಶಿತೇನ।
ಸಾ ನಿರ್ಮಿತಾ ವಿಶ್ವಸೃಜಾ ಪ್ರಯತ್ನಾದೇಕಸ್ಥಸೌಂದರ್ಯ ದಿದೃಕ್ಷಯೇವ ॥
—ಕುಮಾರಸಂಭವ ೧—೪೯

ಪ್ರಪಂಚದಲ್ಲಿರುವ ಸಕಲ ಸೌಂದರ್ಯಗಳನ್ನೂ ಒಟ್ಟುಗೂಡಿಸಿ ನೋಡಿ ಆನಂದಪಡಬೇಕೆಂಬ ಕುತೂಹಲದಿಂದ ಬ್ರಹ್ಮನು ಎಲ್ಲಾ ಸೌಂದರ್ಯವಸ್ತುಗ ಳನ್ನು ಬಹು ಪ್ರಯತ್ನಗಳಿಂದ ತಕ್ಕ ತಕ್ಕ ಪ್ರದೇಶಗಳಲ್ಲಿರಿಸಿ ಪಾರ್ವತಿಯನ್ನು ನಿರ್ಮಿಸಿರಬೇಕು!

ಅಲಕಾಪುರವರ್ಣನಂ—

ವಿದ್ಯುತ್ವಂತಂ ಲಲಿತವನಿತಾಃ ಸೇಂದ್ರಚಾಪಂ ಸಚಿತ್ರಾಃ
ಸಂಗೀತಾಯ ಪ್ರಹತಮುರಜಾಃ ಸ್ನಿಗ್ಧಗಂಭೀರಘೋಷಂ।
ಅಂತಸ್ತೋಯಂ ಮಣಿಮಯಭುವಸ್ತುಂಗಮಭ್ರಂಲಿಹಾಗ್ರಾಃ
ಪ್ರಾಸಾದಾಸ್ತ್ವಾಂ ತುಲಯಿತುಮಲಂ ಯತ್ರ ತೈಸ್ತೈರ್ವಿಶೇಷೈಃ॥ಮೇ೨—೧೦

ನೀನು ವಿದ್ಯುಕ್ತಿನಿಂದ ಕೂಡಿ ಕಾಂತಿವಂತನಾಗಿರುವೆ; ಅಲಕಾಪುರಿಯ ಮಹಡಿಗಳು ಲಲಿತವನಿತಾಸನಾಥಗಳಾಗಿ ಕಾಂತಿಮತ್ತಾಗಿರುವುವು. ನೀನು ಇಂದ್ರಚಾಪಸಹಿತನಾಗಿ ರಮ್ಯನಾಗಿ ಕಾಣುವೆ; ಆ ಮಹಡಿಗಳೂ ನಾನಾ ವಿಧ ಚಿತ್ರಗಳಿಂದಲಕೃತಗಳಾಗಿರುವುವು; ನೀನು ಬಹುಗಂಭೀರ ಮನೋಹರವಾದ ನಾದವನ್ನುಂಟುಮಾಡುವೆ; ಅವುಗಳೂ ಸಹ ಸಂಗೀತಕ್ಕಾಗಿ ಬಾರಿಸಲ್ಪಡುವ ಮೃದಂಗಗಳ ಗಂಭೀರನಾದವಿನಾದಿತವಾಗಿರುವುವು. ನೀನು ತೋಯಭರಿತ ನಾಗಿರುವೆಯಾದರೆ, ಅವು ಮಣಿಮಯಭೂಮಿಗಳಾಗಿರುವುವು. ನೀನು ಉನ್ನತ

(ಸಂಚಾರಿಯಾಗಿ)ನಾಗಿರುವೆಯಾದರೆ, ಅವೂ ಉನ್ನತಗಳೇ ಆಗಿರುವುವು—ಹೀಗೆ ಅಲ್ಲಿನ ಮುಹಡಿಗಳು ಪ್ರತಿಯೊಂದು ವಿಷಯದಲ್ಲಿಯೂ ನಿನಗೆ ಸರಿಸಮಾನಗಳಾಗಿರುವುವು!

ಯಕ್ಷಪತ್ನೀ ವಿರಹದಶಾವರ್ಣನಂ—

> ಸಾ ಸನ್ನ್ಯಸ್ತಾಭರಣಮಬಲಾ ಪೇಶಲಂ ಧಾರಯಂತೀ
> ಶಯ್ಯೋತ್ಸಂಗೇ ನಿಹಿತಮಸಕೃದ್ದುಃಖದುಃಖೇನ ಗಾತ್ರಂ ।
> ತ್ವಾಮಪ್ಯಸ್ರಂ ನವಜಲಮಯಂ ಮೋಚಯಿಷ್ಯತ್ಯವಶ್ಯಂ
> ಪ್ರಾಯಃ ಸರ್ವೋ ಭವತಿ ಕರುಣಾವೃತ್ತಿರಾರ್ದ್ರಾಂತರಾತ್ಮಾ ॥ ಮೇ. ೨–೩೦

ಅಯ್ಯೋ! ಯಾವವಿಧವಾದ ಆಭರಣಗಳೂ ಇಲ್ಲದೇ ವಿರಹಾಗ್ನಿತಾಪದಿಂದ ಅತ್ಯಂತ ಕೃಶಳಾಗಿ ದುಃಸಹದುಃಖದಿಂದ ಶಯ್ಯೋತ್ಸಂಗದಲ್ಲಿ ಬಿದ್ದಿರುವ ಆಕೆಯನ್ನು ನೋಡಿದರೆ, ನೀನೂ ಕಣ್ಣೀರು ಬಿಡುವಂತಾಗುವುದು! ಅಥವಾ ಇದೇನಾಶ್ಚರ್ಯ! ನಿನ್ನಂತೆ ಆರ್ದ್ರಾಂತರಾತ್ಮನಾದವನು ಬಹುಶಃ ಕರುಣಾವೃತ್ತಿಯುಳ್ಳವನೇ ಆಗಿರುವನು.

ಯಕ್ಷನು ಸ್ವಾವಸ್ಥೆಯನ್ನು ಹೇಳುವಿಕೆ—

> ಶಬ್ದಾಖ್ಯೇಯಂ ಯದಪಿ ಕಿಲ ತೇ ಯಃ ಸಖೀನಾಂ ಪುರಸ್ತಾತ್
> ಕರ್ಣೇ ಲೋಲಃ ಕಥಯಿತುಮಭೂದಾನನಸ್ಪರ್ಶಲೋಭಾತ್ ।
> ಸೋಽತಿಕ್ರಾಂತಃ ಶ್ರವಣವಿಷಯಂ ಲೋಚನಾಭ್ಯಾಮದೃಷ್ಟಂ
> ತ್ವಾಮುತ್ಕಂಠಾವಿರಚಿತಪದಂ ಮನ್ಮುಖೇನೇದಮಾಹ॥—ಮೇಘದೂತ ೨–೪೦

ಆಹಾ? ಸಖಿಯರ ಎದುರಿನಲ್ಲಿಯೂ ಸಹ ಗಟ್ಟಿಯಾಗಿ (ಪ್ರಕಾಶವಾಗಿ) ಹೇಳಬಹುದಾದಂಥ ಮಾತುಗಳನ್ನು ಸಹ ಆನನಸ್ಪರ್ಶಲೋಭದಿಂದ ಯಾವನು ಏಕಾಂತದಲ್ಲಿಯೂ ಕಿವಿಯಲ್ಲೇ ಹೇಳಲು ಕುತೂಹಲ ಪಡುತ್ತಿದ್ದನೋ, ಈಗ ಅವನು ಕಣ್ಣಿಗೂ ಕಾಣದಂತೆ, ಕಿವಿಗೂ ಕೇಳದಂತೆ ದೂರನಾದುದರಿಂದ ಈ ಸಂದೇಶವನ್ನು ನನ್ನ (ಮೇಘನ) ಸಂಗಡ ಹೇಳಿಕಳುಹಿಸಿರುವನು.

ಯಕ್ಷನು ಪತ್ನಿಗೆ ಸಮಾಧಾನವನ್ನು ಹೇಳಿರುವುದು—

> ನನ್ವಾತ್ಮಾನಂ ಬಹು ವಿಗಣಯನ್ನಾತ್ಮನೈವಾವಲಂಬೇ
> ತತ್ಕಲ್ಯಾಣಿ! ತ್ವಮಪಿ ನಿತರಾಂ ಮಾ ಗಮಃ ಕಾತರತ್ವಂ ।
> ಕಸ್ಯಾತ್ಯಂತಂ ಸುಖಮುಪನತಂ ದುಃಖಮೇಕಾಂತತೋ ವಾ
> ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ॥—ಮೇಘಸಂದೇಶ ೨–೪೬

ಪ್ರಿಯೆ! ನನ್ನನ್ನೇ ನಾನು ಬಹುವಾಗಿ ಭಾವಿಸಿಕೊಳ್ಳುತ್ತಾ ಪ್ರಾಣಧಾರಣೆಯನ್ನು ಮಾಡಿಕೊಂಡಿರುವುದಿಲ್ಲವೆ? ಆದುದರಿಂದ ನೀನೂ ಸಹ ಹಾಗೆಯೇ ಸಮಾಶ್ವಾಸನೆ ಮಾಡಿಕೋ—ಕಾತರಳಾಗಬೇಡ. ಏಕೆಂದರೆ, ಯಾರಿಗೆ ತಾನೇ ಸುಖವೇ ಆಗಲಿ ದುಃಖವೇ ಆಗಲಿ, ಒಂದೇ ಸಿಗುವುದು ? ಸುಖದುಃಖಗಳು ಚಕ್ರನೇಮಿಕ್ರಮದಲ್ಲಿ ಒಂದಾಗುತ್ತಲೊಂದು ಕ್ರಮವಾಗಿ ಪ್ರಾಪ್ತವಾಗುತ್ತಿರುವುವು. ಆದುದರಿಂದ ಈಗ ನಮಗೆ ದುಃಖಪ್ರಾಪ್ತವಾದರೆ ಅದೇ ಮುಂದಕ್ಕೂ ಇರುವುದಿಲ್ಲ—ಮುಂದೆ ನಾವು ಸುಖವನ್ನು ಪಡೆಯಬಹುದು. ಈ ಆಶೆಯಿಂದಲಾದರೂ ಕಾತರಳಾಗದೇ ಧೈರ್ಯವನ್ನವಲಂಬಿಸಿಕೊ.

ಏತತ್ಕೃತ್ವಾ ಪ್ರಿಯಮನುಚಿತಪ್ರಾರ್ಥನಾವರ್ತಿನೋ ಮೇ
ಸೌಹಾರ್ದಾದ್ವಾ ವಿಧುರ ಇತಿ ವಾ ಮಯ್ಯನುಕ್ರೋಶಬುದ್ಧ್ಯಾ |
ಇಷ್ಟಾನ್ ದೇಶಾನ್ ವಿಚರ ಜಲದ ! ಪ್ರಾವೃಷಾ ಸಂಭೃತಶ್ರೀಃ
ಮಾ ಭೂದೇವಂ ಕ್ಷಣಮಪಿ ಚ ತೇ ವಿದ್ಯುತಾ ವಿಪ್ರಯೋಗಃ || —ಮೇ.ಸಂ

ಎಲೈ, ಮೇಘರಾಜನೆ ! ನಿನ್ನಂತಹ ಮಹನೀಯನಿಗೆ ಇಂತಹ, ನನ್ನ ಸ್ತ್ರೀಗೆ ಸಂದೇಶವನ್ನು ಕೊಂಡುಹೋಗುವಂತಹ, ದೌತ್ಯರೂಪವಾದ ಕಾರ್ಯವನ್ನು ಹೇಳುವುದು ತೀರಾ ಅನುಚಿತವೇಸರಿ ! ಆದರೂ ನನ್ನಮೇಲಿನ ಸ್ನೇಹದಿಂದಲಾಗಲಿ ಅಥವಾ ಇವನು ಪ್ರಿಯಾವಿರಹಪೀಡಿತನಾಗಿರುವನೆಂಬ ನನ್ನ ಮೇಲಿನ ಕನಿಕರದಿಂದಲಾಗಲಿ—ಹೇಗಾದರೂ ಇದೊಂದು ಕಾರ್ಯವನ್ನು ನನಗೆ ಮಾಡಿಕೊಡಬೇಕು. ಹೇಜಲದ ! ವರ್ಷಾಕಾಲದ ಕಾಂತಿಯಿಂದ ಕೂಡಿದವನಾಗಿ ಬೇಕಾದಕಡೆಗಳಲ್ಲಿ ಯಥೇಚ್ಛವಾಗಿ ವಿಹರಿಸು ; ಮತ್ತು ನನಗಾಗಿರುವ ರೀತಿಯಲ್ಲಿ ನಿನ್ನ ಪ್ರಿಯೆಯಾದ ವಿದ್ಯುದಂಗನೆಯಿಂದ ನಿನಗೆ ಯಾವಾಗಲೂ ಕ್ಷಣಕಾಲವೂ ವಿಪ್ರಯೋಗವುಂಟಾಗದೇ ಇರಲಿ !



|| ಶ್ರೀಃ ||

|| ಶ್ರಿಯೈ ನಮಃ ||

# ಸಂಸ್ಕೃತಕವಿಚರಿತೆ

ಕಾಲೀಯಾಹಿಫಣಾಲೀ
    ಕ್ರಮಣಕರಾಲೀ ಭವನ್ನಘಕ್ಷಾಲೀ ।
ಗೋಪಾಲೀಕರಶಾಲೀ
    ನರ್ತನಶಾಲೀ ಪುನಾತು ವನಮಾಲೀ ॥

## ಒಂದನೆಯ ಶತಮಾನ

### ಸಾತವಾಹನ

ಇವನು ಗಾಥಾಸಪ್ತಶತಿ ಎಂಬ ಗ್ರಂಥವನ್ನು ಬರೆದಿರುವನು. ಇವನ ವಿಚಾರವು ಕ್ಷೇಮೇಂದ್ರಕೃತಬೃಹತ್ಕಥಾಮಂಜರಿಯಲ್ಲಿಯೂ ಸೋಮದೇವಭಟ್ಟಕೃತಕಥಾಸರಿತ್ಸಾಗರದಲ್ಲಿಯೂ ದೊರಕುವುದು.

> "ದೀಪಕರ್ಣಿಸೂನುಃ ಸಾತವಾಹನೋ ನಾಮ ಕಶ್ಚನ ವಿದ್ವಾನ್ಮಹೀಪತಿಃಪ್ರತಿಷ್ಠಾನಾಮನಗರೇ ಽಬಭೂವ; ಯತ್ಸಭಾಂ ಬೃಹತ್ಕಥಾಪ್ರಣೇತ'ಗುಣಾಢ್ಯ'ಕಾಲಾಪವ್ಯಾಕರಣಕರ್ತೃ'ಶರ್ವವರ್ಮ' ಪ್ರಭೃತಯೋ ಭೂಯಾಂಸೋ ವಿದ್ವಾಂಸೋ ಮಂಡಯಾಂಚಕ್ರುರಿತಿ"

ರಾಜನೂ ವಿದ್ವಾಂಸನೂ ಮತ್ತು ದೀಪಕರ್ಣಿಯ ಮಗನೂ ಆದ ಸಾತವಾಹನನೆಂಬವನು ಪ್ರತಿಷ್ಠಾನಗರದಲ್ಲಿ ಇದ್ದಂತೆಯೂ ಇವನ ಸಭೆಯಲ್ಲಿ ಬೃಹತ್ಕಥೆಯನ್ನು ಬರೆದ ಗುಣಾಢ್ಯ, ಕಾಲಾಪವ್ಯಾಕರಣವನ್ನು ಬರೆದ ಶರ್ವವರ್ಮನೇ ಮೊದಲಾದ ವಿದ್ವಾಂಸರುಗಳು ಇದ್ದುದಾಗಿಯೂ ಕಥಾಸರಿತ್ಸಾಗರದ ಕಥಾಪೀಠಲಂಬಕದ ಆರನೆಯ ತರಂಗದಿಂದ ತಿಳಿಯಬರುತ್ತದೆ.

ರಾಜಶೇಖರಸೂರಿಯು ಬರೆದಿರುವ ಪ್ರಬಂಧಕೋಶದಲ್ಲಿ ಸಾತವಾಹನನ ವಿಚಾರ ವಾಗಿ ಬರೆಯುವಾಗ—

"ಅಧುನಾ ತು ದಕ್ಷಿಣದೇಶಸ್ಥಿತಂ ಪ್ರತಿಷ್ಠಾನಪುರಂ ಕ್ಷುಲ್ಲಕ ಗ್ರಾಮತುಲ್ಯಂ ವರ್ತತೇ ಇತ್ಯಸ್ತಿ"

ಈಗ ದಕ್ಷಿಣದೇಶದಲ್ಲಿ ಪ್ರತಿಷ್ಠಾನಪುರ*ವೆಂಬುದು ಸಣ್ಣ ಗ್ರಾಮದಂತಿರುವು ದಾಗಿ ಹೇಳಿರುವನು.

ವಾತ್ಸ್ಯಾಯನಕೃತಕಾಮಸೂತ್ರದ ಹನ್ನೆರಡನೆಯ ಅಧ್ಯಾಯದಲ್ಲಿ—

"ಕುಂತಲಃ ಶಾತಕರ್ಣಿಃ ಶಾತವಾಹನೋ ಮಹಾದೇವೀಂ ಮಲಯ ವತೀಂ ಜಘಾನ"

ಕುಂತಲರಾಜನಾದ ಶಾತವಾಹನನು (ಪರ್ಯಾಯನಾಮ ಶತಕರ್ಣಿ) ಮಹಾ ದೇವಿ(ರಾಣಿ)ಯಾದ ಮಲಯವತಿ‡ಯನ್ನು ಕೊಂದುಹಾಕಿದನೆಂದು ಹೇಳ ಲ್ಪಟ್ಟಿದೆ.

ಇದಲ್ಲದೆ ಸಾತವಾಸಕೃತ ಗಾಥಾಸಪ್ತಶತಿ ಎಂಬ ಕಾವ್ಯದ ಕೊನೆಯಲ್ಲಿ—

"ಶ್ರೀಮತ್ಕುಂತಲಜನಪದೇಶ್ವರ—ಪ್ರತಿಷ್ಠಾನಪತ್ತನಾಧೀಶ—ಶತಕ ರ್ಣೋಪನಾಮಕ-ಮಲಯವತ್ಯುಪದೇಶಪಣ್ಡಿತೀಭೂತ-ತ್ಯಕ್ತಭಾ ಷಾತ್ರಯಸ್ವೀಕೃತ—ಪೈಶಾಚಕ—ಪಣ್ಡಿತರಾಜ—ಗುಣಾಢ್ಯನಿರ್ಮಿತ ಭಸ್ಮೀಭವದ್ಬೃಹತ್ಕಥಾವಶಿಷ್ಟಸಪ್ತಮಾಂಶಾವಲೋಕನ-ಪ್ರಾಕೃ ತಾದಿವಾಕ್ಪಂಚಕ (?) ಪ್ರೀತ—ಕವಿವತ್ಸಲ—ಹಾಲಾದ್ಯುಪನಾಮಕ ಶ್ರೀಸಾತವಾಹನ—ನರೇಂದ್ರನಿರ್ಮಿತಾ ವಿವಿಧಾನ್ಯೋಕ್ತಿಮಯ ಪ್ರಾಕೃತಗೀರ್ಗುಂಭಿತಾ ಶುಚಿರಸಪ್ರಧಾನಾ ಕಾವ್ಯೋತ್ತಮಾ ಸಪ್ತಶತ್ಯವಸಾನಮಗಾತ್"

---

* ಈ ಹಳ್ಳಿಯು ಯಾವುದೆಂಬುದು ಸರಿಯಾಗಿ ತಿಳಿಯದು. ಆಗಿನ ಕಾಲಕ್ಕೆ ಅದು ದೊಡ್ಡರಾಜ್ಯವಾಗಿದ್ದು ರಾಜಶೇಖರಸೂರಿಯು ಪ್ರಬಂಧಕೋಶವನ್ನು ಬರೆಯುವ ವೇಳೆಗೆ ಸಣ್ಣ ಹಳ್ಳಿಯಾಗಿದ್ದರೂ ಇರಬಹುದು. ಗೋದಾವರೀ ತೀರದಲ್ಲಿರುವ ಈ ಪೈಠಣವು ಕುಂತಲದೇಶಕ್ಕೆ ರಾಜಧಾನಿಯಾಗಿತ್ತೆಂತಲೂ ಇದನ್ನು ಆಗ ಪ್ರತಿಷ್ಠಾನಪುರವೆಂದು ವ್ಯವಹರಿಸುತ್ತಿದ್ದ ಹಾಗೂ ರಾಜಶೇಖರಸೂರಿಯು ಹೇಳುತ್ತಾನೆ.

‡ ಕಥಾಸರಿತ್ಸಾಗರದಲ್ಲಿ ಮಲಯವತಿ ಎಂಬ ಹೆಸರಿಲ್ಲ. ವಿಷ್ಣುಶಕ್ತಿಯ ಮಗಳೆಂದಿದೆ.

ಎಂದು ಹೇಳಿರುವುದರಿಂದ ಕಥಾಸರಿತ್ಸಾಗರದಲ್ಲಿ ವರ್ಣಿತನಾಗಿರುವ ಸಾತವಾಹನನೂ, ವಾತ್ಸ್ಯಾಯನನಿಂದ ಹೇಳಲ್ಪಟ್ಟಿರುವ ಸಾತವಾಹನನೂ, ಗಾಥಾಸಪ್ತಶತಿಯನ್ನು ಬರೆದ ಸಾತವಾಹನನೂ ಒಬ್ಬನೇ ಆಗಿರಬೇಕು. ಇವನು ಪ್ರತಿಷ್ಠಾನಗರಾಧೀಶನಾಗಿದ್ದುದಲ್ಲದೆ, ಗುರ್ಜರ (ಗುಜರಾತ್) ದೇಶಕ್ಕೂ ರಾಜನಾಗಿದ್ದುದಾಗಿ ತಿಳಿಯಬರುತ್ತದೆ. ಕಾಲಾಪವ್ಯಾಕರಣವನ್ನು ತನಗೆ ತಿಳಿಯಹೇಳಿದ ಶರ್ವವರ್ಮನ ಪಾಂಡಿತ್ಯಕ್ಕೆ ಮೆಚ್ಚಿ ಭರುಕಚ್ಛ (ಬರೋಚ) ದೇಶದ ಆಡಳಿತವನ್ನು ಅವನಿಗೆ ಕೊಟ್ಟುದಾಗಿ—

> ರಾಜಾರ್ಹರತ್ನನಿಚಯೈರಥ ಶರ್ವವರ್ಮಾ
> ತೇನಾರ್ಚಿತೋ ಗುರುರಿತಿ ಪ್ರಣತೇನ ರಾಜ್ಞಾ ।
> ಸ್ವಾಮೀಕೃತಶ್ಚ ವಿಷಯೇ 'ಭರುಕಚ್ಛ'ನಾಮ್ನಿ
> ಕೂಲೋಪಕಂಠವಿನಿವೇಶಿನಿ ನರ್ಮದಾಯಾಃ ॥

ಎಂಬ ಶ್ಲೋಕದಿಂದ ತಿಳಿಯಬರುತ್ತದೆ. ಕಾಶ್ಮೀರದ ರಾಜರಾದ ಅನಂತರಾಜ, ಕಲಶದೇವ, ಹರ್ಷದೇವ ಮೊದಲಾದವರು ಸಾತವಾಹನನ ಕುಲೋತ್ಪನ್ನರೆಂದು ಕಲ್ಹಣನ ರಾಜತರಂಗಿಣಿಯಲ್ಲಿಯೂ ಮತ್ತು ಕಥಾಸರಿತ್ಸಾಗರದ ಕೊನೆಯಲ್ಲಿರುವ ಪ್ರಶಸ್ತಿಯಲ್ಲಿಯೂ ಹೇಳಲ್ಪಟ್ಟಿದೆ. ಗಾಥಾಸಂಗ್ರಹಕಾರನಾದ ಸಾತವಾಹನನನ್ನು ಮಹಾಕವಿ ಬಾಣನು ತಾನು ಬರೆದಿರುವ ಹರ್ಷಚರಿತಾರಂಭದಲ್ಲಿ—

> ಅವಿನಾಶಿನಮಗ್ರಾಮ್ಯಮಕರೋತ್ಸಾತವಾಹನಃ ।
> ವಿಶುದ್ಧಜಾತಿಭಿಃ ಕೋಶಂ ರತ್ನೈರಿವ ಸುಭಾಷಿತೈಃ ॥
> ಜಗತ್ಯಾಂ ಗ್ರಥಿತಾ ಗಾಥಾ ಸಾತವಾಹನಭೂಭುಜಾ ।
> ವ್ಯಧುರ್ಧೃತೇಸ್ತು ವಿಸ್ತಾರಮಹೋ ಚಿತ್ರಪರಂಪರಾ ॥

ಎಂದು ಹೇಳಿರುವನು. ಇದೇ ಶ್ಲೋಕವು ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿ ರಾಜಶೇಖರನ ಹೆಸರಿನಿಂದ ಉದ್ಧೃತವಾಗಿರುವುದು. ಸಾತವಾಹನನು "ಗಾಥಾಸಪ್ತಶತಿ"ಯನ್ನು ಬರೆದುದಲ್ಲದೆ ಸಾತವಾಹನಕೋಶವೆಂಬ ಮತ್ತೊಂದು ಗ್ರಂಥವನ್ನು ಬರೆದುದಾಗಿ

> ನಮಃ ಶ್ರೀಹಾರವರ್ಷಾಯ ಯೇನ ಹಾಲಾದನಂತರಂ ।
> ಸ್ವಃಕೋಶಃ ಕವಿಕೋಶಾನಾಮಾವಿರ್ಭಾವಾಯ ಸಂಭೃತಃ ॥

ಎಂಬ ಶ್ಲೋಕದಿಂದ ತಿಳಿಯಬರುತ್ತದೆ. ಇದೇ ಶ್ಲೋಕವು ಶತಾನಂದನನ ಮಗನಾದ ಅಭಿನಂದನನಿಂದ ವಿರಚಿತವಾದ ರಾಮಚರಿತವೆಂಬ ಮಹಾಕಾವ್ಯದ ಏಳನೆಯ ಮತ್ತು ಹದಿನೈದನೆಯ ಸರ್ಗಗಳ ಅಂತ್ಯದಲ್ಲಿ ಕಂಡುಬರುವುದು.

ಗಾಥಾಸಪ್ತಶತಿಯು ಕೇವಲ ಸಂಗ್ರಹೀತಗ್ರಂಥವೆಂದು ಮೇಲೆ ಹೇಳಿದ ರಾಮಚರಿತಕಾವ್ಯದ ಮೂವತ್ತೆರಡನೆಯ ಸರ್ಗದಲ್ಲಿ—

**ಹಾಲೇನೋತ್ತಮಪೂಜಯಾ ಕವಿವೃಷಃ ಶ್ರೀಪಾಲಿತೋ ಲಾಲಿತಃ**
**ಖ್ಯಾತಿಂ ಕಾಮಪಿ ಕಾಲಿದಾಸಕವಯೋ ನೀತಾಃ ಶಕಾರಾತಿನಾ ||**
**ಶ್ರೀಹರ್ಷೋ ವಿತತಾರ ಗದ್ಯಕವಯೇ ಬಾಣಾಯ ವಾಣೀಫಲಂ**
**ಸದ್ಯಃ ಸತ್ಕ್ರಿಯಯಾಭಿನಂದಮಪಿ ಚ ಶ್ರೀಹಾರವರ್ಷೋ ಗೃಹೀತ್ ||**

"ಏತೇನ ಶ್ರೀಪಾಲಿತಕವಿನೈವ ಧನಲಿಪ್ಸಯಾ ಸ್ವಪ್ರಭೋರ್ಹಾಲಸ್ಯ ನಾಮ್ನಾಽಯಂ ಗಾಥಾಸಪ್ತಶತಕ†ಗ್ರಂಥಃ ಸಂಗ್ರಹೀತಃ ಸ್ಯಾದಿತ್ಯಪ್ಯನುಮೀಯತೇ"

ಎಂದು ಹೇಳಿರುವುದರಿಂದ ಶ್ರೀಪಾಲಿತನೆಂಬ ಕವಿಯು ಹಣದಾಸೆಗಾಗಿ ಈ ಗಾಥಾಸಪ್ತಶತಿಯನ್ನು ಸಂಗ್ರಹಿಸಿ ತನಗೆ ಆಶ್ರಯದಾತನಾದ ಹಾಲನ ಹೆಸರಿನಲ್ಲಿ ಅಂಕಿತಮಾಡಿರಬೇಕೆಂದು ಕೆಲವರು ಅನುಮಾನಿಸುವರು. ಇದಲ್ಲದೆ,

"ಸಂಗ್ರಹರೂಪೇಽಸ್ಮಿನ್ ಗ್ರಂಥೇ ಕಶ್ಚನ ಗಾಥಾ ಹಾಲಪ್ರಣೀತಾ ಅಪಿ ಸಂತಿ। ಯತಃ ಕ್ವಚಿತ್ಪುಸ್ತಕೇ ಚತುರ್ಥಗಾಥಾಮಾರಭ್ಯ ದ್ವಾದಶಗಾಥಾಪರ್ಯಂತಂ ಪ್ರತಿಗಾಥಾಗ್ರೇ ತತ್ತದ್ಗಾಥಾಕರ್ತೄಣಾಂ ಹಾಲಸ್ಯ-ಮಕರಂದಸೇನಸ್ಯ—ಅಮರರಾಜಸ್ಯ—ಕುಮಾರಿಲಸ್ಯ— ಶ್ರೀರಾಜಸ್ಯ— ಭೀಮಸ್ವಾಮಿನಃ—ಹಾಲಸ್ಯ ಏತಾನಿ ಷಷ್ಠ್ಯಂತಾನಿ ನಾಮಾನಿ ಸಮುಪಲಭ್ಯಂತೇ। ಅಗ್ರೇ ಚ ಲೇಖಕಪ್ರಮಾದೇನ ಗಲಿತಾನೀತಿ ಭಾತಿ" ‡

ಎಂದು ಹೇಳಿರುವುದರಿಂದ ಸಂಗ್ರಹರೂಪವಾದ ಈ ಗ್ರಂಥದಲ್ಲಿ ಕೆಲವು ಗಾಥೆಗಳು ಹಾಲನಿಂದ ರಚಿತವಾದುದಾಗಿಯೂ ಮತ್ತೆ ಕೆಲವು ಪುಸ್ತಕಗಳಲ್ಲಿ ನಾಲ್ಕರಿಂದ ಹನ್ನೆರಡು ಗಾಥೆಗಳ ವರೆಗೆ ಪ್ರಾರಂಭದಲ್ಲಿ ಹಾಲ, ಮಕರಂದಸೇನ, ಅಮರರಾಜ, ಕುಮಾರಿಲ, ಶ್ರೀರಾಜ, ಭೀಮಸ್ವಾಮಿಯೇ ಮೊದಲಾದವರಿಂದ ಬರೆಯಲ್ಪಟ್ಟು ಉಳಿದ ಗಾಥೆಗಳು ಇಂತಹರಿಂದಲೇ ಬರೆಯಲ್ಪಟ್ಟಿತೆಂಬ ವಿಚಾರವು ಪ್ರಮಾದದಿಂದ ಕೈಬಿಟ್ಟುಹೋಗಿರುವುದಾಗಿ ತೋರುತ್ತದೆಂದೂ ಹೇಳಿದೆ. ಇದು ಸಮಂಜಸವೆಂದು ತೋರುವುದಿಲ್ಲ. ಹೇಗೆಂದರೆ ಶ್ರೀಪಾಲಿತಕವಿಯನ್ನು ಹಾಲನು ಹೇಗೆ ಮನ್ನಣೆಯಿಂದ ಇಟ್ಟುಕೊಂಡು

† Introduction to 'ಗಾಥಾಸಪ್ತಶತಿ' kavyamala series P. 2.
‡ Ibid. P. 3.

ಕೀರ್ತಿಯನ್ನು ಹೊಂದಿದನೊ ಶಕಾರಿಯಾದ ವಿಕ್ರಮನು ಕಾಳಿದಾಸಕವಿಗೆ ಹೇಗೆ ಆಶ್ರಯದಾತನಾಗಿದ್ದನೊ ಗದ್ಯಕವಿಯಾದ ಬಾಣನನ್ನು ಶ್ರೀಹರ್ಷನು ಹೇಗೆ ಮಾನ್ಯಮಾಡುತ್ತಿದ್ದನೊ ಹಾಗೆಯೇ ಶ್ರೀಹಾರವರ್ಷನು ತನ್ನನ್ನು ಕಾಪಾಡುತ್ತಿರುವನೆಂಬುದಾಗಿ ಅಭಿನಂದನನು ತನ್ನ ರಾಮಚರಿತಮಹಾಕಾವ್ಯದಲ್ಲಿ ಹೇಳಿಕೊಂಡಿರುವನು. ಇದು ಸ್ವಭಾವವಾಗಿರುವುದು. ಏಕೆಂದರೆ ಆಶ್ರಯದಲ್ಲಿ ರುವವನು ಆಶ್ರಯದಾತನನ್ನು ಹೊಗಳುವುದು ಸ್ವಾಭಾವಿಕವಾಗಿರುವುದು. ಆದರೆ ಪಾಲಿತನು ಬರೆದು ಹಾಲನ ಹೆಸರಿನಲ್ಲಿ ಅಂಕಿತಮಾಡಿದನೆಂಬ ಸಂಶಯೋತ್ಪಾದಕಶಬ್ದಗಳಾಗಲಿ ಅಭಿಪ್ರಾಯಗಳಾಗಲಿ ಶ್ಲೇಷೆಗಳಾಗಲಿ ಇರುವಂತೆ ಎಲ್ಲಿಯೂ ಕಂಡುಬರುವುದಿಲ್ಲ. ಗಾಥಾಸಪ್ತಶತಿಯಲ್ಲಿ ಹಾಲನಿಂದ ರಚಿತವಾದ ಕೆಲವು ಗಾಥೆಗಳು ಇರುವುವೆಂದು ಮೇಲೆ ಹೇಳಿರುವೆವು. ಇದರಿಂದ ಇವನು ರಾಜನೂ ಮತ್ತು ಕವಿತಾನೈಪುಣ್ಯವುಳ್ಳವನೂ ಎಂದು ಹೇಳಿದಂತಾಯಿತು. ನಾಲ್ಕರಿಂದ ಹನ್ನೆರಡರವರೆಗಿನ ಗಾಥೆಗಳು ಮಕರಂದಸೇನನೇ ಮೊದಲಾದ ಇತರರಿಂದ ಬರೆಯಲ್ಪಟ್ಟವೆಂದು ಹೇಳುವ ವಿಚಾರವೂ ಅಸಮಂಜಸವಾಗಿರುವುದು. ಹೇಗೆಂದರೆ ಕವಿಯು 'ಸಾತವಾಹನವಿರಚಿತಾ ಗಾಥಾಸಪ್ತಶತೀ' ಎಂದು ಕಾವ್ಯದ ಕೊನೆಯಲ್ಲಿ ಹೇಳಿರುವುದರಿಂದಲೂ

> "ಶ್ರೀಸಾತವಾಹನನರೇಂದ್ರನಿರ್ಮಿತಾ ವಿವಿಧಾನ್ಯೋಕ್ತಿಮಯೀ
> ಪ್ರಾಕೃತಗೀರ್ಗುಂಭಿತಾ ಶುಚಿರಸಪ್ರಧಾನಾ ಕಾವ್ಯೋತ್ತಮಾ
> ಸಪ್ತಶತ್ಯವಸಾನಮಗಾತ್"

ಎಂದು ಹೇಳಿರುವುದರಿಂದಲೂ ಬಾಣನು ಹರ್ಷಚರಿತಾರಂಭದಲ್ಲಿ "ಅವಿನಾಶಿನಿಮಗ್ರಾಮ್ಯ. . . .ಚಿತ್ರಪರಂಪರಾ" ಎಂದು ಹೇಳಿರುವುದರಿಂದಲೂ ಸಾತವಾಹನನೇ ಬರೆದುದಾಗಿ ವ್ಯಕ್ತಪಡುವುದು. ಸಾತವಾಹನನು ಮಹಾಕವಿಯಾಗಿದ್ದು ೭೦೦ ಶ್ಲೋಕಗಳಿಂದ ಕೂಡಿ ಮನೋಹರವಾಗಿರುವಂತೆ ಗ್ರಂಥವನ್ನು ಬರೆದು ೪ ರಿಂದ ೧೨ ಗಾಥೆಗಳ ವರೆಗೆ ಕಂಡುಬರುವ ಶ್ಲೋಕಗಳನ್ನು ಮೇಲೆ ಹೇಳಿದ ಇತರರಿಂದ ಸಂಗ್ರಹಿಸಿ ಪುಸ್ತಕ ಪೂರ್ತಿಮಾಡಿದನೆಂದರೆ ಎಂತಹರೂ ವಿಚಾರಪರರಾಗದಿರಲಾರರು. ಹಾಗೆ ಒಂದು ವೇಳೆ ೮ ಶ್ಲೋಕಗಳು ಸಾಲದೆ ಹೋಗಿದ್ದರೆ ತಾನಾದರೂ ಕವಿತ್ವವನ್ನು ಮಾಡಿ ಸೇರಿಸಬಹುದಾಗಿದ್ದಿತು. ಇಲ್ಲದಿದ್ದರೆ ೬೯೨ ಶ್ಲೋಕಗಳಿಗೆ ಮುಕ್ತಾಯಮಾಡಬಹುದಾಗಿದ್ದಿತು. ಈತನ ಶ್ಲೋಕಗಳು ಧ್ವನ್ಯಾಲೋಕ, ಧ್ವನ್ಯಾಲೋಕಲೋಚನ, ಸರಸ್ವತೀಕಂಠಾಭರಣ, ಕಾವ್ಯಪ್ರಕಾಶವೇ ಮೊದಲಾದ ಗ್ರಂಥಗಳಲ್ಲಿ ಉದಾಹೃತವಾಗಿವೆ.

ಸಾತನಾರು? ಹಾಲನಾರು? ಇವರಿಬ್ಬರೂ ಬೇರೆಬೇರೆ ವ್ಯಕ್ತಿಗಳೇ ಅಥವಾ ಒಬ್ಬರೇ ಎಂಬ ವಿಚಾರಮಾಡುವುದಾದರೆ-"ಶಾಲೋ ಹಾಲೋ ಮತ್ಸ್ಯಭೇದೇ"

ಶಾಲಃ ಹಾಲಃ ಎಂಬುದು ಮತ್ಸ್ಯಭೇದದಲ್ಲಿಯೂ "ಹಾಲವಾಹನಪಾರ್ಥಿವೇ" ಎಂಬುದು ಹಾಲ (ಸಾತ)ವಾಹನ ರಾಜನೆಂಬ ಅರ್ಥದಲ್ಲಿಯೂ ಹೇಳಲ್ಪಡುವುದು. (ಹೈಮಾನೇಕಾರ್ಥಃ) "ಶಲತಿ ಶಾಲಃ-ಶಯತಿ ವಾ-ಶಯಾನಾಶಯಾ-ಇತಿ ಲಃ-ಹಾಲಃ" ಎಂದರೆ ಸಾತವಾಹನನೃಪನೆಂದು ಆಯಿತು.

ವ್ಯಾಖ್ಯಾನದಲ್ಲಿಯೂ ಅನೇಕಾರ್ಥಕೈರವಾಕರಕೌಮುದಿಯಲ್ಲಿಯೂ

'ಜಜ್ಞೇ ಶಾಲಮಹೀಪಾಲಃ ಪ್ರತಿಷ್ಠಾನಪುರೇ ಪುರಾ' ಎಂದೂ
ದಿವಂಗತೇ ಹಾಲವಸುಂಧರಾಧಿಪೇ . . . . . ।

ಎಂದೂ ಹೈಮನಾಮಮಾಲೆಯಲ್ಲಿ "ಹಾಲಸ್ಯಾತ್ಸಾತವಾಹನಃ— ಎಂದೂ, ಹಲತ್ಯರಾತಿ ಹೃದಯಂ ಹಾಲಃ— ಸಾತಂ ದತ್ತಸುಖಂ ವಾಹನಮಸ್ಯ ಸಾತವಾಹನಃ ಎಂದೂ, ವ್ಯಾಖ್ಯಾನದಲ್ಲಿಯೂ ಮತ್ತು ಅಭಿಧಾನಚಿಂತಾಮಣಿಯಲ್ಲಿಯೂ ಸಾಲವಾಹನೋ 'ಪಿ' (ಸಾತವಾಹನನು ಕೂಡ) ಎಂದೂ— ದೇಶೀನಾಮಮಾಲೆಯಲ್ಲಿ— "ಸಾಲಾಹಣಮ್ಮಿ ಹಾಲೋ" ಎಂದೂ ಅದರ ವ್ಯಾಖ್ಯಾನದಲ್ಲಿ 'ಹಾಲೋ' ಸಾತವಾಹನಃ– (ಹಾಲನೇ ಸಾತವಾಹನ) ಎಂದೂ ತ್ರಿಕಾಂಡಶೇಷಾನೇಕಾರ್ಥದಲ್ಲಿ ಶಾಲೋ 'ಹಾಲನೃಪೇ'ಪಿ ಚ' ಎಂದೂ ಕಥಾಸರಿತ್ಸಾಗರದಲ್ಲಿ 'ಸಾ ತೇನ ಯಸ್ಮಾದೂಢೋಽಭೂತ್ತಸ್ಮಾತ್ತಂ ಸಾತವಾಹನಂ । ನಾಮ್ನಾ ಚಕಾರ ಕಾಲೇನ ರಾಜ್ಯೇ ಚೈನಂ ನ್ಯವೇಶಯತ್' ಎಂದೂ ಹೇಳಲ್ಪಟ್ಟಿರುವುದು. ಸಾತವಾಹನಪದವು ನಿರುಕ್ತದಲ್ಲಿಯೂ ಕಂಡುಬರುವುದು. (ಸಾತೋ ನಾಮ ಕಶ್ಚನ ಯಕ್ಷಃ ಕುಬೇರಶಾಪೇನ ಸಿಂಹತಾಂ ಪ್ರಾಪ್ತಃ ತೇನಾಯಂ ಸ್ವಪೃಷ್ಠೇಽಧಿರೋಪಿತ ಇತಿ ಕಥಾಪಿ ತತ್ರೈವಾಸ್ತಿ) ಸಾತನೆಂಬ ಹೆಸರುಳ್ಳ ಯಕ್ಷನೊಬ್ಬನು ಕುಬೇರಶಾಪದಿಂದ ಸಿಂಹಜನ್ಮವನ್ನು ಹೊಂದಿ ಇವನನ್ನು (ಸಾತವಾಹನ) ತನ್ನ ಬೆನ್ನಿನ ಮೇಲೆ ಹತ್ತಿಸಿಕೊಂಡು ತಿರುಗುತ್ತಿದ್ದುದರಿಂದ ಈ ಹೆಸರು ಬಂದಿತೆಂಬ ಕಥೆಯು ಅದರಲ್ಲಿರುವುದು. ಶಾತವಾಹನನೆಂಬ ಹೆಸರು ವಾತ್ಸ್ಯಾಯನಕೃತಕಾಮಸೂತ್ರದಲ್ಲಿಯೂ, ಹಾಲಮಹೀಪತಿಯ ಹೆಸರು ವಾಯು-ಮತ್ಸ್ಯ–ವಿಷ್ಣುಪುರಾಣ–ಭಾಗವತಗಳಲ್ಲಿಯೂ ಕೂಡ ದೊರಕುವುದಾಗಿ ವಿದ್ವದ್ವರ ರಾಮಕೃಷ್ಣ ಭಂಡಾರಕರರು ಬರೆದಿರುವ 'ದಕ್ಷಿಣಪ್ರಾಚೀನೇತಿಹಾಸ' ಎಂಬ ಗ್ರಂಥದ ೨೫ನೆಯ ಪುಟದಿಂದ ತಿಳಿಯುಬರುತ್ತದೆ. ಈವರೆಗೆ ದೊರೆತಿರುವ ಈ ಕೋಶಾಧಾರಗಳಿಂದ ಸಾಲ=ಹಾಲ=ಸಾತ; ಸಾತ=ಶಾಲ ಇವೆಲ್ಲಾ ಒಬ್ಬನ ಹೆಸರೆಂದೇ ಹೇಳಿದಂತಾಯಿತು. ಆದರೆ ಪ್ರಬಂಧಕೋಶದಲ್ಲಿ ಈ ಸಾತವಾಹನನಲ್ಲದೆ ಕಾಲಿಕಾಚಾರ್ಯನ ಸಮಕಾಲಿಕನಾದ ಮತ್ತೊಬ್ಬ ಸಾತವಾಹನನಿದ್ದನೆಂದೂ ಇವನು ಗಾಥಾಸಪ್ತಶತಿಕಾರನಾದ ಸಾತವಾಹನನಿಗೆ ಕೇವಲ

ಅರ್ವಾಚೀನನೆಂದೂ ಹೇಳಲ್ಪಟ್ಟಿದೆ. ಈ ಕಾಲಿಕಾಚಾರ್ಯನಾರೆಂಬುದು ಎಲ್ಲಿಯೂ ತಿಳಿಯಬರುವುದಿಲ್ಲ. ಪ್ರತಿಷ್ಠಾನಪುರವು ಕಳಿಂಗರಾಜ್ಯಕ್ಕೆ ರಾಜಧಾನಿಯಾಗಿ ಇತ್ತೆಂತಲೂ ಕಳಿಂಗರಾಜ್ಯವು ಕಾಮಗಿರಿಯಿಂದ ಹಿಡಿದು ದ್ವಾರಕಾಂತದವರೆಗೆ ಇದ್ದಿತೆಂದೂ "ಶಕ್ತಿಸಂಗಮತಂತ್ರ"ದ ಈ ಶ್ಲೋಕದಿಂದ ತಿಳಿಯಬರುತ್ತದೆ.

ಕಾಮಗಿರಿಂ ಸಮಾರಭ್ಯ ದ್ವಾರಕಾಂತಂ ಮಹೇಶ್ವರಿ ।
ಶ್ರೀಕುಂತಲಾಭಿಧೋ ದೇಶೋ . . . ॥

ಸಾತವಾಹನನ ಜನ್ಮಚರಿತೆಯ ವಿಚಾರವಾಗಿ ಬೃಹತ್ಕಥಾಮಂಜರಿಯಲ್ಲಿ ಮತ್ತು ಕಥಾಸರಿತ್ಸಾಗರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು.

ದೀಪಕರ್ಣರಾಯನಿಗೆ ಶಕ್ತಿಮತಿಯೆಂಬ ರಾಣಿಯಿದ್ದಳು. ಒಂದಾನೊಂದು ದಿವಸ ಪತಿಯೊಡನೆ ಏಕಶಯ್ಯೆಯಲ್ಲಿ ಮಲಗಿರುವಾಗ ಶಕ್ತಿಮತಿಯು ಸರ್ಪದಷ್ಟಳಾಗಿ ಇಹಲೋಕವನ್ನು ಬಿಟ್ಟಳು. ದೀಪಕರ್ಣನು ತನಗೆ ಸಂತಾನವಿಲ್ಲದುದನ್ನು ಕಂಡು ದುಃಖಿಸುತ್ತಿರುವಾಗ ಒಂದಾನೊಂದು ರಾತ್ರಿ ಸ್ವಪ್ನದಲ್ಲಿ ಪರಶಿವನು ಪ್ರತ್ಯಕ್ಷನಾಗಿ "ಎಲೆ ದೀಪಕರ್ಣರಾಯ! ನೀನು ಚಿಂತಿಸದಿರು. ಅರಣ್ಯಕ್ಕೆ ಹೋಗು. ಅಲ್ಲಿ ನಿನ್ನ ಎದುರಿಗೆ ಒಬ್ಬ ಹುಡುಗನು ಸಿಂಹವನ್ನೇರಿಕೊಂಡು ಬರುವನು. ನೀನು ಸಿಂಹವನ್ನು ಕೊಂದು ಹುಡುಗನನ್ನು ಕರೆದುಕೊಂಡು ಬಂದು ಮಗನಂತೆ ಸಾಕಿಕೊಂಡು ಸುಖವಾಗಿ ಬಾಳು" ಎಂದನು. ಅದರಂತೆಯೇ ಮಾರನೆಯ ದಿವಸ ದೀಪಕರ್ಣನು ಅರಣ್ಯಕ್ಕೆ ಹೋಗಿ ಸಿಂಹದ ಮೇಲೆ ಕುಳಿತುಕೊಂಡು ಬರುತ್ತಿದ್ದ ಹುಡುಗನನ್ನು ನೋಡಿ ಅತ್ಯಂತ ಸಂತೋಷಗೊಂಡು ಸಿಂಹವನ್ನು ಒಂದೇ ಬಾಣದಿಂದ ಪ್ರಹರಿಸಲು ಅದು ಸಿಂಹಶರೀರವನ್ನುಳಿದು ಯಕ್ಷರೂಪವನ್ನು ಹೊಂದಿ ಸಾಂಜಲಿಪುಟನಾಗಿ "ಎಲೆ ರಾಯ! ನಾನು ಸಾತವಾಹನನೆಂಬ ಕಿನ್ನರನು. ನೀರಿನಲ್ಲಿ ವಿಹಾಯುವದಕ್ಕೆಂದು ಬಂದ ಮುನಿಕುಮಾರಿಯೊಬ್ಬಳನ್ನೊಲಿದು ರಮಿಸಿದೆನು. ಈ ವಿಚಾರವು ಹಿರಿಯರಿಗೆ ತಿಳಿದು ನಮ್ಮಿಬ್ಬರನ್ನೂ ಸಿಂಹಜನ್ಮವನ್ನು ತಾಳಿರೆಂದು ಶಪಿಸಿದರು. ಶಾಪವಿಮೋಚನವೆಂದಿಗೆ ಆಗುವುದೆಂದು ನಾವು ಅಂಗಲಾಚಿ ಬೇಡಿಕೊಳ್ಳಲು ಪುತ್ರೋತ್ಪತ್ತಿಯಾದ ಕೂಡಲೇ ತಾಯಿಗೂ, ಅಂಬು ತಗುಲಿದ ಕೂಡಲೇ ತಂದೆಗೂ ಶಾಪವಿಮೋಚನವಾಗುವುದೆಂದು ಹೇಳಿದ್ದರು. ಅದರಂತೆ ಮಹಾತ್ಮನಾದ ನಿನ್ನಿಂದ ಈ ದಿವಸ ಆ ಶಾಪವಿಮೋಚನವಾಯಿತು. ಸಿಂಹಿಯು ಈ ಶಿಶುವನ್ನು ಪ್ರಸವಿಸಿ ಮೃತಳಾಗಲು ಇದನ್ನು ಕಾಪಾಡುವವರಿಲ್ಲದಿದ್ದುದರಿಂದ ಅಲ್ಲಲ್ಲಿ ಹೋಗಿ ಸಿಂಹಿಗಳ ಹಾಲನ್ನು ಕುಡಿಯಿಸಿ ನಾನೇ ಬೆನ್ನಿನ ಮೇಲೆ ಹತ್ತಿಸಿಕೊಂಡು ತಿರುಗುತ್ತಿದ್ದೆನು. ಇನ್ನು ನೀನು ಈ ಕಂದನನ್ನು

ಬೆಳೆಯಿಸಿಕೊಂಡು ಸಾತವಾಹನನೆಂದು ಕರೆ'' ಎಂದು ಹೇಳಿ ಹೊರಟುಹೋದನು. 'ಸಾತ' ಎಂದರೆ– ಸಾತನೆಂಬ ಯಕ್ಷನನ್ನು 'ವಾಹನಃ' ವಾಹನವಾಗಿ ಉಳ್ಳವನು ಯಾರೋ ಅವನು ''ಸಾತವಾಹನ''. ಇದೇ ನಮಗೆ ಪ್ರಕೃತ ದೊರಕಿರುವ ಸಾತವಾಹನನ ಚರಿತ್ರೆ. ಈ ಕಾರಣದಿಂದ ಸಾತವಾಹನನು ದೀಪಕರ್ಣಿಯ ಮಗನೆಂದು ವ್ಯವಹಾರಕ್ಕೆ ಬಂದಿತು. ಕಾಲಕ್ರಮದಲ್ಲಿ ಸಾತವಾಹನನು ದೊಡ್ಡವನಾಗಿ ತಂದೆಯನಂತರ ರಾಜ್ಯವನ್ನಾಳಲು ಪಕ್ರಮಿಸಿದನು. ಇವನಿಗೆ ಅನೇಕಜನ ರಾಣಿಯರಿದ್ದರು. ವಸಂತಮಾಸದ ಒಂದಾನೊಂದು ದಿವಸ ಉದ್ಯಾನವನಕಾಸಾರದಲ್ಲಿ ರಾಣಿಯರೊಡನೆ ಜಲಕೇಳೀಮಗ್ನನಾಗಿದ್ದ ರಾಜನು ಪ್ರಿಯತಮಯಾದ ಮಲಯವತಿಗೆ ನೀರನ್ನೆರಚಲು ಜಲಕೇಳಿಯಲ್ಲಿ ಬೇಸರಗೊಂಡಾರಮಣಿಯು ''ಪ್ರಾಣಾಧಿಕ! ಮೋದಕೈಸ್ತಾಡಯ'' ಎಂದು ಹೇಳಿದ್ದನ್ನು ರಾಜನು ಕೇಳಿ ಕಡುಬುಗಳನ್ನು ತರಿಸಿ ಹೊಡೆಯಲೆತ್ನಿಸಿದುದನ್ನು ನೋಡಿ ವಿದ್ಯಾಚತುರೆಯಾದ ಮಲಯವತಿಯು ಬೇಸರಗೊಂಡು ''ಜೀವಿತೇಶ! ನಾನು 'ಮಾ ಉದಕೈಸ್ತಾಡಯ' ನೀರನ್ನೆರಚಬೇಡವೆಂದು ಹೇಳಿದೆನೇ ಹೊರತು ಕಡುಬುಗಳನ್ನು ತರಿಸಿ ಹೊಡೆಯೆಂದು ಹೇಳಲಿಲ್ಲ. ಶಬ್ದಸಂಧಿಜ್ಞಾನವಿಲ್ಲದ ನಿನ್ನ ಅಜ್ಞತೆಗೆ ಏನೆಂದು ಹೇಳಲಿ'' ಎಂದು ಮೂದಲಿಸಿದಳು. ಈ ವಿಚಾರವಾಗಿ ಬೃಹತ್ಕಥಾಮಂಜರಿಯಲ್ಲಿ—

> ತತ್ರೈಕಾ ಮಹಿಷೀ ರಾಜ್ಞಾ ಹತಾ ಸಾವೇಗಮಂಬುನಾ ।
> ಮಾ ಮೋದಕೇನ ರಾಜೇಂದ್ರ ತಾಡಯೇತ್ಯಭ್ಯಧಾನ್ನೃಪಂ ॥ ೩೭ ॥
> ಶ್ರುತ್ವೇತಿ ಮೂರ್ಖೋ ಭೂಪಾಲಃ ಕ್ಷಿಪ್ರಮಾಹೃತಮೋದಕಃ ।
> ಮಾ ವಾರಿಣೇತಿ ದೇವ್ಯಾಸ್ತದ್ವಚಶ್ಶ್ರುತ್ವಾ ಹ್ರಿಯಂ ಯಯೌ ॥ ೩೮ ॥ ಎಂದೂ

ಕಥಾಸರಿತ್ಸಾಗರದ ಪ್ರಥಮಲಂಬಕ ೬ನೆಯ ತರಂಗದಲ್ಲಿ—

> ಅಥೈಕಾ ತಸ್ಯ ಮಹಿಷೀ ರಾಜ್ಞಃ ಸ್ತನಭರಾಲಸಾ ।
> ಶಿರೀಷಸುಕುಮಾರಾಂಗೀ ಕ್ರೀಡಂತೀ ಕ್ಲಮಮಭ್ಯಗಾತ್ ॥ ೧೧೩ ॥
> ಸಾ ಜಲೈರಭಿಷಿಂಚಂತಂ ರಾಜಾನಮಸಹಾಸತೀ ।
> ಅಬ್ರವೀನ್ಮೋದಕೈರ್ದೇವ ಪರಿತಾಡಯ ಮಾಮಿತಿ ॥ ೧೧೪ ॥
> ತಚ್ಛ್ರುತ್ವಾ ಮೋದಕಾನ್ರಾಜಾ ದ್ರುತಮಾನಾಯಯದ್ಬಹೂನ್ ।
> ತತೋ ವಿಹಸ್ಯ ಸಾ ರಾಜ್ಞೀ ಪುನರೇವಮಭಾಷತ ॥ ೧೧೫ ॥
> ರಾಜನ್ನವಸರಃ ಕೋಽತ್ರ ಮೋದಕಾನಾಂ ಜಲಾಂತರೇ ।
> ಉದಕೈಃ ಸಿಂಚ ಮಾ ತ್ವಂ ಮಾಮಿತ್ಯುಕ್ತಂ ಹಿ ಮಯಾ ತವ ॥ ೧೧೬ ॥
> ಸಂಧಿಮಾತ್ರಂ ನ ಜಾನಾಸಿ ಮಾಶಬ್ದೋದಕಶಬ್ದಯೋಃ ।
> ನ ಚ ಪ್ರಕರಣಂ ವೇತ್ಸಿ ಮೂರ್ಖಸ್ತ್ವಂ ಕಥಮೀದೃಶಃ ॥ ೧೧೭ ॥

ಎಂದೂ ಹೇಳಲ್ಪಟ್ಟಿರುವುದು.

ಇದನ್ನು ಕೇಳಿ ರಾಜನು ಮಹಾದುಃಖದಿಂದ ಹೇಗಾದರೂ ಮಾಡಿ ವ್ಯಾಕರಣವನ್ನು ಕಲಿಯಲೇಬೇಕೆಂದು ಮಂತ್ರಿವರನಾದ ಗುಣಾಢ್ಯನನ್ನು ಕರೆಸಿ ಕೇಳಿದುದಕ್ಕೆ ಆರುವರ್ಷಗಳಲ್ಲಿ ಕಲಿಸಲು ಸಾಧ್ಯವೆಂದನು. ಮತ್ತೊಬ್ಬನಾದ ಶರ್ವವರ್ಮನೆಂಬ ಬ್ರಾಹ್ಮಣನು ಆರುತಿಂಗಳಲ್ಲಿ ಕಲಿಸುವೆನೆಂದನು. ಇದನ್ನು ಕೇಳಿ ಗುಣಾಢ್ಯನು ಎಲೆ ಶರ್ವವರ್ಮ! ನೀನು ಆರು ತಿಂಗಳಲ್ಲಿ ಕಲಿಸುವೆಯಾದರೆ ಸಂಸ್ಕೃತ-ಪ್ರಾಕೃತ-ದೇಶಭಾಷೆಗಳಲ್ಲಿ ಒಂದು ಶಬ್ದವನ್ನಾದರೂ ಉಚ್ಚರಿಸುವುದಿಲ್ಲವೆಂದನು. ಹೀಗೆಂದುದನ್ನು ಶರ್ವವರ್ಮನು ಕೇಳಿ ನಾನು ಹಾಗೆ ಆರುತಿಂಗಳಲ್ಲಿ ಕಲಿಸದೆ ಇದ್ದರೆ ನಿನ್ನ ಹಾವಿಗೆಯನ್ನು ಹನ್ನೆರಡುವರ್ಷಗಳು ತಲೆಯ ಮೇಲೆ ಹೊರುವೆನೆಂದು ಪಂಥವನ್ನು ಕಟ್ಟಿ ಷಣ್ಮುಖನನ್ನು ಆರಾಧಿಸಿ ಅವನಿಂದ ಅನುಗ್ರಹೀತನಾಗಿ ಕಾಲಾಪವ್ಯಾಕರಣವನ್ನು ಕಲಿತು ಅದನ್ನು ರಾಜನಿಗೆ ಬೋಧಿಸಿ ವ್ಯಾಕರಣಪ್ರವೀಣನನ್ನಾಗಿ ಮಾಡಿದನು. ಇದಕ್ಕೆ ರಾಜನು ಸಂತುಷ್ಟನಾಗಿ ನರ್ಮದಾತೀರದಲ್ಲಿರುವ ಭರುಕಚ್ಛ (ಭರೋಚ) ದೇಶವನ್ನು ಬಳುವಳಿಯಾಗಿ ಶರ್ವಮರ್ನಿಗೆ ಕೊಟ್ಟನೆಂದು ಮೊದಲೇ ಹೇಳಿದೆ. ಈತನು ಬರೆದುದಾಗಿ ಹೇಳುವ ಸಾತವಾಹನಕೋಶವು ನಮಗೆ ಉಪಲಬ್ಧವಿಲ್ಲ. ಇವನ ಗಾಥಾಸಪ್ತಶತಿಯಲ್ಲಿನ ಒಂದೆರಡು ಶ್ಲೋಕಗಳನ್ನು ಮಾದರಿಗಾಗಿ ಕೊಡುವೆವು.

> ವಿರಹೇ ವಿಷಮಿವ ವಿಷಮಾ ಅಮೃತಮಯೀ ಭವತಿ ಸಂಗಮೇಽಧಿಕಂ |
> ಕಿಂ ವಿಧಿನಾ ಸಮಮೇವ ದ್ವಾಭ್ಯಾಮಪಿ ಪ್ರಿಯಾ ವಿನಿರ್ಮಿತಾ || ೩—೩೫ ||

ಪ್ರವಾಸಕ್ಕಾಗಿ ಹೋಗಿದ್ದು ಬಂದ ಗಂಡನು ಪ್ರಿಯಳ ಸಮಾಗಮವನ್ನು ಹೊಂದಿ ಆನಂದದಿಂದ ಹಾಗೆಯೇ ಯೋಚಿಸುತ್ತ ಅಹಹ! ಇದೆಂತಹ ಆಶ್ಚರ್ಯ!! ವಿಯೋಗಕಾಲದಲ್ಲಿ ವಿಷಮಯವಾಗಿಯೂ ಸಮಾಗಮಕಾಲದಲ್ಲಿ ಅಮೃತಮಯವಾಗಿಯೂ ಇರುವ ಈ ಸುದತಿಯನ್ನು ವಿಧಾತನು ವಿಷ ಮತ್ತು ಅಮೃತ ಇವುಗಳೆರಡರಿಂದಲೂ ಮಾಡಿರಬಹುದಾಗಿ ತೋರುತ್ತದೆ. ಆದುದರಿಂದಲೇ ಇವಳು ಸುಖದುಃಖಗಳನ್ನುಂಟುಮಾಡುತ್ತಿರುವಳು.

> ಉತ್ಪಾದಿತದ್ರವ್ಯಾಣಾಮಪಿ ಖಲಾನಾಂ ಕೋ ಭಾಜನಂ ಖಲ ಏವ |
> ಪಕ್ವಾನ್ಯಪಿ ನಿಂಬಫಲಾನಿ ಕೇವಲಂ ಕಾಕೈಃ ಖಾದ್ಯಂತೇ || ೩—೫೮ ||

ದುಷ್ಟರಿಂದ ಸಂಪಾದಿಸಲ್ಪಟ್ಟ ಹಣವು ದುಷ್ಟರಿಂದಲೇ ಅನುಭವಿಸಲ್ಪಡುವುದು. ಹೇಗೆಂದರೆ ಬೇವಿನಕಾಯಿ ಹಣ್ಣಾಗಿದ್ದರೂ ಕೂಡ ಕಾಗೆಗಳಿಂದಲೇ ತಿನ್ನಲ್ಪಡುವುದು. ನೋಡಿದಿರಾ! ಈ ನೀತಿಯು ಎಷ್ಟು ಮನೋಹರವೂ ಸುಂದರವೂ ಆಗಿರುವುದು. ಇಂತಹ ಹೃದ್ಯಪದ್ಯಗಳು ಈ ಗ್ರಂಥದಲ್ಲಿ ಎಷ್ಟೋ ಕಾಣಬರುವುವು.

ಇನ್ನುಳಿದಿರುವುದು ಇವನ ಕಾಲವಿಚಾರ–ಮಹಾತ್ಮನಾದ **ಗುಣಾಢ್ಯನು** ಕ್ರಿ. ಶ. ಮೊದಲನೆಯ ಶತಮಾನದವನು. ಇವನ ಸಮಕಾಲಿಕನೂ ಆಶ್ರಯದಾತನೂ ಆದ **ಸಾತವಾಹನನು** ಕ್ರಿ. ಶ. ಮೊದಲನೆಯ ಶತಮಾನದವನೆಂದು ಹೇಳುವುದರಲ್ಲಿ ಯಾವ ನ್ಯೂನತೆಯೂ ಇರದು.

ಅನೇಕರು ಹಿಂದೆ ಹೇಳಿರುವ ಅಂತಃಪ್ರಮಾಣ, ಬಾಹ್ಯಪ್ರಮಾಣ ಮತ್ತು ಕೋಶಾಧಾರಗಳಿಂದ ಸಾಲವಾಹನನೇ ಹಾಲನೆಂದೂ, ಸಾತವಾಹನನೆಂದೂ, ಸಾತವಾಹನನೇ ಶಾಲವಾಹನನೆಂದೂ ಕಾಲಕ್ರಮದಲ್ಲಿ ಶಾಲೀವಾಹನನೆಂದಾಯಿತೆಂದೂ ಹೇಳಿ ಇವನ ಬಾಲ್ಯದ ಕಥೆಯೊಂದನ್ನು ಹೀಗೆ ಹೇಳುವರು.

*ಪೂರ್ವದಲ್ಲಿ ದೇಶಾಟನವನ್ನು ಮಾಡುವದಕ್ಕಾಗಿ ಇಬ್ಬರು ಬ್ರಾಹ್ಮಣ ಸಹೋದರರು ಸೋದರಿಯೊಡನೆ ಹೊರಟು ಗೋದಾವರೀತೀರದಲ್ಲಿರುವ ಪ್ರೈಠಣಕ್ಕೆ ಬಂದು ಒಬ್ಬ ಕುಂಬಾರನ ಮನೆಯಲ್ಲಿಳಿದುಕೊಂಡರೆಂದೂ ನೀರು ತರುವುದಕ್ಕಾಗಿ ಹೋದ ಸೋದರಿಯ ರೂಪವನ್ನು ನಾಗರಾಜನೊಬ್ಬನು ನೋಡಿ ಮೋಹಿತನಾಗಿ ಇವಳನ್ನು ಒಲಿದು ರಮಿಸಿದನೆಂದೂ ವಿವಾಹಾತ್ಪೂರ್ವ ಗರ್ಭಿಣಿಯಾದ ಇವಳನ್ನು ಆ ಈರ್ವರು ಸೋದರರೂ ನೋಡಿ ಲೋಕಾಪವಾದಕ್ಕಂಜಿ ಅಲ್ಲಿಯೇ ಬಿಟ್ಟು ಹೊರಟು ಹೋದರೆಂದೂ ಅನಾಥಳಾದ ಆ ಅಬಲೆಯನ್ನು ಕೇವಲ ಆದರದಿಂದ ಆ ಕುಂಬಾರನೇ ಪೋಷಿಸುತ್ತಿದ್ದನೆಂದೂ ನವಮಾಸಾನಂತರ ಆಕೆಯು ಸರ್ವಲಕ್ಷಣೋಪೇತನಾದ ಒಂದು ಗಂಡು ಮಗುವನ್ನು ಪ್ರಸವಿಸಿದಳೆಂದೂ ಇವನೇ ಶಾಲೀವಾಹನನೆಂದೂ ಈ ಹುಡುಗನು ಕುಂಬಾರನ ಮನೆಯಲ್ಲಿಯೇ ಬೆಳೆಯುತ್ತಾ ಮಣ್ಣಿನಲ್ಲಿ ಹಸ್ತ್ಯಶ್ವರಥಪದಾತಿಗಳನ್ನು ಮಾಡಿಕೊಂಡು ತಾನು ರಾಜನೆಂದು ಆಟವಾಡುತ್ತಿದ್ದನೆಂದೂ ಇಷ್ಟರಲ್ಲಿ ನಾಗಾರ್ಜುನನೆಂಬ ಸಿದ್ಧನೊಬ್ಬನು ದೇಶಾಟನವನ್ನು ಮಾಡುತ್ತ ಈ ಕುಂಬಾರನ ಮನೆಗೆ ಬರಲು ಕುಂಬಾರನೂ ಸುರೂಪೆಯೂ "ಶಾಲೀವಾಹನನನ್ನು ಸಕಲವಿದ್ಯಾಪಾರಂಗತನನ್ನಾಗಿ ಮಾಡಿಕೊಡಬೇಕು" ಎಂದು ಸಿದ್ಧನನ್ನು ಪ್ರಾರ್ಥಿಸಿಕೊಂಡರೆಂದೂ ಅದರಂತೆ ಅವನು ಅವನನ್ನು ಸಕಲವಿದ್ಯಾಪಾರಂಗತನನ್ನಾಗಿ ಮಾಡಿದನೆಂದೂ ಶಕಪುರುಷನಾದ ವಿಕ್ರಮಾದಿತ್ಯನು ಈ ಹುಡುಗನ ವಿಚಿತ್ರವಾದ ಆಟವನ್ನು ಜನರಿಂದ ಕೇಳಿ ಇದರ ಮರ್ಮವನ್ನು ದೈವಜ್ಞರಿಂದ ತಿಳಿಯಬೇಕೆಂದು ಜ್ಯೋತಿಷ್ಕರನ್ನು ಕರೆಸಿ ವಿಚಾರಿಸಲಾಗಿ ಅವರು "ಮಹಾರಾಜ! ಇವನೇ **ಶಾಲೀವಾಹನನು;** ಅಂಶಪುರುಷನು; ಇವನು ನಿಮ್ಮನ್ನು ಜಯಿಸುವನು" ಎಂದು ಹೇಳಿದುದನ್ನು

*** ಕಾಲ ಹೇಳಲು ತಿಳಿಯದಿದ್ದರೆ "ಪೂರ್ವದಲ್ಲಿ" ಎಂದು ವ್ಯವಹರಿಸುವ ವಾಡಿಕೆ.**

ವಿಕ್ರಮಾದಿತ್ಯನು ಕೇಳಿ ಕೋಪಗೊಂಡು ಚತುರಂಗಬಲದೊಡನೆ ಕುಂಬಾರನ ಮನೆಗೆ ಮುತ್ತಿಗೆ ಹಾಕಿದನೆಂದೂ ಆಗ ಸುರೂಪೆಯು 'ಕಷ್ಟ ಬಂದಾಗ ತನ್ನನ್ನು ನೆನೆ' ಎಂದು ಹೇಳಿ ಹೋಗಿದ್ದ ನಾಗರಾಜನನ್ನು ಜ್ಞಾಪಿಸಿಕೊಂಡು ಈ ಕಷ್ಟದಿಂದ ತಪ್ಪಿಸಿ ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡಳೆಂದೂ ನಾಗ ರಾಜನು ತಕ್ಷಣ ಪ್ರತ್ಯಕ್ಷನಾಗಿ ಶಾಲೀವಾಹನನು ಇಟ್ಟುಕೊಂಡು ಆಡು ತ್ತಿದ್ದ ಮಣ್ಣಿನ ಚತುರಂಗಬಲದಲ್ಲಿ ಜೀವಕಳೆಯನ್ನು ತುಂಬಿ ಹೊರಟು ಹೋದನೆಂದೂ ಅನಂತರ ಶಾಲೀವಾಹನನಿಗೂ ವಿಕ್ರಮಾರ್ಕನಿಗೂ ಯುದ್ಧವಾಗಿ ವಿಕ್ರಮಾರ್ಕನು ಪರಾಜಿತನಾಗಿ ಹಿಮ್ಮೆಟ್ಟಲು ಶಾಲೀವಾಹನನು ಅಷ್ಟಕ್ಕೇ ಬಿಡದೆ ಬೆನ್ನಟ್ಟಿ ಬರಲು ನರ್ಮದಾನದಿಯ ದಂಡೆಯಲ್ಲಿ. ಇವರಿಬ್ಬರಿಗೂ ಕರಾರು ನಡೆದು ನರ್ಮದೆಯ ದಕ್ಷಿಣಕ್ಕಿರುವ ದೇಶವೆಲ್ಲವೂ ತನ್ನ ಶಕೆಯನ್ನು ನಡೆಸು ವಂತೆಯೂ ನರ್ಮದೆಯ ಉತ್ತರಕ್ಕಿರುವ ದೇಶವೆಲ್ಲವೂ ವಿಕ್ರಮಶಕೆಯನ್ನು ನಡೆ ಸುವಂತೆಯೂ ತೀರ್ಮಾನವಾಗಿ ಶಾಲೀವಾಹನನು ಚಕ್ರವರ್ತಿಯೂ ಶಕ ಪುರುಷನೂ ಆದುದಾಗಿ ಹೇಳುವರು.

ಇವನ ಶಕೆಯು ಕರಾರು ನಡೆದಂದಿನಿಂದ ಎಂದರೆ ಕ್ರಿ. ಶ. ೭೮ ರಿಂದ ಪ್ರಾರಂಭವಾಯಿತೆನ್ನುವರು. ಹೀಗೆ ಹೇಳಿರುವುದರಿಂದ ಹಿಂದೆ ಹೇಳಿದ ಸಾತವಾಹನನ ಜನ್ಮಚರಿತೆಗೂ ಈ ಶಾಲೀವಾಹನನ ಜನ್ಮಚರಿತೆಗೂ ಎಷ್ಟೋ ವ್ಯತ್ಯಾಸ ತೋರುವುದು. ಸಾತವಾಹನನ ಜನ್ಮಚರಿತೆಗೆ ಬೃಹತ್ಕಥಾ, ಕಥಾಸರಿ ತ್ಸಾಗರ ಇವುಗಳಲ್ಲಿ ಆಧಾರಗಳಾದರೂ ದೊರೆವುವು. ಶಾಲೀವಾಹನನ ಚರಿತೆಗೆ ಆಧಾರಗಳಾವುವೂ ಇಲ್ಲ. ಇದಲ್ಲದೆ ಶಾಲೀವಾಹನನ ಕಥೆಯು ಗುಣಾಢ್ಯನ ಜನ್ಮವೃತ್ತಾಂತವನ್ನು ಹೋಲುವುದು. ಹೇಗೆಂದರೆ ವತ್ಸ ಮತ್ತು ಗುಲ್ಮ ಎಂಬಿಬ್ಬರು ಸೋದರರು ಮತ್ತು ಶ್ರುತಾರ್ಥೆಯೆಂಬ ಸೋದರಿ– ಈ ಮೂವರು ಪ್ರತಿಷ್ಠಾನಗರದ ಸೋಮದತ್ತನೆಂಬ ಬ್ರಾಹ್ಮಣನ ಮಕ್ಕಳಾಗಿದ್ದು ಮಾತಾ ಪಿತೃವಿಯೋಗಾನಂತರ ಸೋದರರು ಶ್ರುತಾರ್ಥೆಯನ್ನು ಕಾಪಾಡುತ್ತಿದ್ದರೆಂದೂ ಇದ್ದಕ್ಕಿದ್ದಹಾಗೆಯೇ ಅವಳು ಗರ್ಭವತಿಯಾದುದನ್ನು ಕಂಡು ಸೋದರರು ಸಂದೇಹಪಡಲು ಶ್ರುತಾರ್ಥೆಯು ನಾಗರಾಜನ ತಮ್ಮನಾದ ಕೀರ್ತಿಸೇನನನ್ನು ತೋರಿಸಿದಳೆಂದೂ ಇವಳಲ್ಲಿ ಹುಟ್ಟಿದವನೇ ಗುಣಾಢ್ಯನೆಂದೂ ಕಥಾಸರಿತ್ಸಾಗರ ದಿಂದ ತಿಳಿಯಬರುತ್ತದೆ. ಇಲ್ಲಿಯೂ ಇಬ್ಬರು ಸೋದರರು, ಒಬ್ಬ ಸೋದರಿ ಇರುವಳು. ಅಲ್ಲಿಯೂ ಇಬ್ಬರು ಸೋದರರು, ಒಬ್ಬ ಸೋದರಿ ಇರುವಳು. ಇದರಲ್ಲಿ ಕೀರ್ತಿಸೇನನು ಶ್ರುತಾರ್ಥೆಯಲ್ಲಿ ರಮಿಸಿದ ಹಾಗೂ ಅದರಲ್ಲಿ ನಾಗ ರಾಜನು ಸುರೂಪೆಯಲ್ಲಿ ರಮಿಸಿದ ಹಾಗೂ ಹೇಳಲ್ಪಟ್ಟಿರುವುದು. ಇವಳಲ್ಲಿ ಹುಟ್ಟಿದವನು ಗುಣಾಢ್ಯ, ಅವಳಲ್ಲಿ ಹುಟ್ಟಿದವನು ಶಾಲೀವಾಹನ. ಇವರಿಬ್ಬರ

ಕಥಾಂದೋಳನದಲ್ಲಿ ಸಾತವಾಹನನೆಂಬ ಶಬ್ದವೂ ಮತ್ತು ಅವನ ಜನ್ಮ ಚರಿತೆಯೂ ಕೂಡ ಲೋಪವಾಗಿರುವುದು. ಆದುದರಿಂದಲೇ ಇವುಗಳನ್ನು ಮನೋರಂಜಕಕಥೆಯೆಂದು ಹೇಳಬೇಕಾಗಿದೆ. ಈ ಕಥಾಧಾರಗಳನ್ನಿಟ್ಟು ಕೊಂಡು ಹೇಳುವುದಾದರೆ ಸಾತವಾಹನನೇ ಬೇರೆ, ಶಾಲೀವಾಹನನೇ ಬೇರೆ ಇರಬೇಕೆಂದು ತೋರುವುದು. ಇವರಿಬ್ಬರೂ ಒಬ್ಬನೇ ಎಂದರೆ ಕಥೆಯು ಕಲ್ಪನಾಚತುರತೆಯು ಪರಸ್ಪರ ಭಿನ್ನವಾಗುವುದು. ಚರಿತ್ರಾಧಾರಗಳು ಯಾವುವೂ ಸರಿಯಾಗಿ ದೊರೆಯವೆಂದು ಬಿಡುವುದಾದರೆ ಶಕಪುರುಷನಾದ ಶಾಲೀವಾಹನನಿಗೆ ಜನ್ಮವೃತ್ತಾಂತವಿಲ್ಲದಂತಾಗುವುದು.

ಒಂದುವೇಳೆ ಕೋಶಾಧಾರಗಳು ಮಾನ್ಯವಾಗಿರಬಹುದಾಗಿ ಒಪ್ಪಿಕೊಳ್ಳ ಬಹುದಾದರೂ ಜನ್ಮಚರಿತಾದಿಗಳಲ್ಲಿ ಪರಸ್ಪರ ಸಂಬಂಧವಿಲ್ಲದೆ ಇರುವುದರಿಂದ ಶಾಲೀವಾಹನನನ್ನು ಬಿಟ್ಟು **ಸಾತವಾಹನನು** ಎಂದು ಹೇಳಿ ಮುಗಿಸಬೇಕಾಗಿದೆ.



## ಗುಣಾಢ್ಯ

ಇವನು ಒಂದು ಲಕ್ಷಶ್ಲೋಕಪರಿಮಿತಿಯುಳ್ಳ "**ಬೃಹತ್ಕಥೆ**"ಯೆಂಬ ಗ್ರಂಥವನ್ನು ಪೈಶಾಚಭಾಷೆಯಲ್ಲಿ ಬರೆದಿರುವನು. ಇದರಲ್ಲಿ ಪಾಂಡವ ವಂಶದ ವತ್ಸರಾಜನ ಮಗನಾದ ನರವಾಹನದತ್ತನ ಚರಿತೆಯು ಅಷ್ಟಾದಶ ಲಂಬಕಗಳಲ್ಲಿ ನವರಸಭರಿತವಾದ ಕಥೆಗಳಿಂದ ಹೇಳಲ್ಪಟ್ಟಿರುವುದು. ಇದು ಕಾದಂಬರಿ, ಮಾಲತೀಮಾಧವ, ಪ್ರಿಯದರ್ಶಿಕೆ, ನಾಗಾನಂದ, ರತ್ನಾವಳಿ, ಪಂಚತಂತ್ರ, ಮುದ್ರಾರಾಕ್ಷಸ– ಇವೇ ಮೊದಲಾದ ಅನೇಕ ಗ್ರಂಥಗಳಿಗೆ ಮೂಲಾಧಾರವಾಗಿರುವುದಲ್ಲದೆ ಜರ್ಮನ್, ಫ್ರೆಂಚ್– ಮೊದಲಾದ ವಿದೇಶೀಯ ಭಾಷೆಗಳಿಗೆ ಪರಿವರ್ತಿಸಲ್ಪಟ್ಟಿರುವುದು. **ಗುಣಾಢ್ಯನು** ಪ್ರತಿಷ್ಠಾನಾಧೀಶನಾದ ಸಾತವಾಹನನ ಸಭೆಯಲ್ಲಿ ಇದ್ದಂತೆಯೂ ಸಾತವಾಹನನು ಕ್ರಿ. ಶ. ಒಂದನೆಯ ಶತಮಾನದಲ್ಲಿದ್ದನೆಂದೂ ಇವನೂ ಸಾತವಾಹನನೂ ಸಮಕಾಲಿಕರೆಂದೂ ಸೋಮದೇವಭಟ್ಟಕೃತಕಥಾಸರಿತ್ಸಾಗರದ ಪೀಠಿಕೆಯಿಂದ ತಿಳಿಯಬರುತ್ತದೆ.

"ಶ್ರೀ'ಗುಣಾಢ್ಯ'ಮಹಾಕವಿಃ ಪ್ರತಿಷ್ಠಾನಾಧೀಶಶ್ರೀಸಾತವಾಹನ ಮಹೀಪತಿಸಭಾಯಾಮಾಸೀತ್ । ಸ ಚ ಲಕ್ಷಶ್ಲೋಕನಿಬದ್ಧಾ ಮದ್ಭುತಾಂ ಪಿಶಾಚಭಾಷಾಮಯೀಂ ಬೃಹತ್ಕಥಾಂ ಗ್ರಥಿತವಾನಿತಿ ತಾವತ್ಕಥಾ ಪೀಠಲಂಬಕೇ ಸ್ಫುಟಮೇವ । ಸ ಚ ಸಾತವಾಹನ

ಭೂಪತಿಃ ಕ್ರಿಸ್ತಾಬ್ದಪ್ರಥಮಶಕ ಆಸೀದಿತ್ಯಪಿ ಸರ್ವಪ್ರಸಿದ್ಧಂ।
ತಸ್ಮಾತ್ಸ ಏವ ಗುಣಾಢ್ಯಸ್ಯ ಸಮಯಃ''

ಗುಣಾಢ್ಯನ ಜನ್ಮವೃತ್ತಾಂತದ ವಿಚಾರವಾಗಿ ಕಥಾಸರಿತ್ಸಾಗರದಲ್ಲಿ ಈ ರೀತಿಯಾದ ಕಥೆಯೊಂದಿರುವುದು.

''ಒಂದಾನೊಂದು ದಿನ ಕಪಾಲಿಯು ಉಮೆಯೊಡನೆ ಲೀಲಾವಿನೋದದಲ್ಲಿರುವಾಗ ಉಮೆಯು ಕಪಾಲಿಯನ್ನು ಕುರಿತು ಎನ್ನರಸ! ಅಪೂರ್ವವಾಗಿಯೂ ಶ್ರಾವ್ಯವಾಗಿಯೂ ಇರುವ ಒಂದು ಕಥೆಯನ್ನು ಹೇಳೆಂದು ಕೇಳಿದಳು. ಇದಕ್ಕೆ ಕಪಾಲಿಯು ಒಪ್ಪಿ ಅತ್ಯಂತ ಗೋಪ್ಯವಾದ ''ಸಪ್ತವಿದ್ಯಾಧರಚರಿತ'' ಎಂಬ ಕಥೆಯನ್ನು ಹೇಳಿದನು. ಸೇವಕನಾದ ಪುಷ್ಪದಂತನೆಂಬ ಒಬ್ಬ ಗಣಪನು ಮರೆಯಲ್ಲಿ ಈ ಕಥೆಯನ್ನು ಕೇಳಿಕೊಂಡಿದ್ದು ಇದನ್ನು ತನ್ನ ಹೆಂಡತಿಯಾದ ಜಯೆಗೆ ತಿಳಿಸಿದನು. ಅವಳು ಅದನ್ನು ಉಮೆಗೆ ಹೇಳಿದಳು. ಅಂತರಂಗದಲ್ಲಿ ತನಗೆ ಹೇಳಲ್ಪಟ್ಟ ಈ ಕಥೆಯು ಈ ರೀತಿ ಬಹಿರಂಗವಾದುದನ್ನು ತಿಳಿದು ಗಿರಿಜೆಯು ಕುಪಿತಳಾಗಿ ಪುಷ್ಪದಂತನನ್ನು ಕುರಿತು ''ಎಲೈ ಪುಷ್ಪದಂತನೆ! ಪರಮೇಶ್ವರನಿಂದ ಅತ್ಯಂತ ಗೋಪ್ಯವಾಗಿ ನನಗೆ ಹೇಳಲ್ಪಟ್ಟ ಕಥೆಯನ್ನು ನೀನು ಮರೆಯಲ್ಲಿದ್ದು ಕೇಳಿ ಬಹಿರಂಗ ಪಡಿಸಿದ್ದರಿಂದ ನೀನು ಭೂಲೋಕದಲ್ಲಿ ಮನುಷ್ಯನಾಗಿ ಹುಟ್ಟು'' ಎಂದು ಶಪಿಸಿದಳು. ಇದನ್ನು ಕೇಳಿ ಪುಷ್ಪದಂತನ ಮಿತ್ರನಾದ ಮಾಲ್ಯವಂತನು ಶಿವೆಗೆ ನಮಸ್ಕರಿಸಿ ''ಮಾತೆ! ಭೃತ್ಯರ ಮೇಲೆ ಆಳುವವರು ಕೋಪಗೊಳ್ಳಲಾಗದು; ಮನ್ನಿಸತಕ್ಕದ್ದು'' ಎಂದು ಪರಿಪರಿಯಾಗಿ ಬೇಡಿಕೊಂಡಷ್ಟೂ ಚಂಡಿಯು ಕೇಳದೆ ರೋಷಕಷಾಯಿತಲೋಚನಳಾಗಿ ಮಾಲ್ಯವಂತನನ್ನು ಕುರಿತು ''ಎಲೈ ಮಾಲ್ಯವಂತನೆ! ನೀನೂ ಪುಷ್ಪದಂತನಂತೆಯೇ ಮನುಷ್ಯನಾಗಿ ಹುಟ್ಟು''. ಎಂದು ಶಪಿಸಿಬಿಟ್ಟಳು. ಪುಷ್ಪದಂತನ ಸತಿಯಾದ ಜಯೆಯು ಇದನ್ನು ತಿಳಿದು ಶೋಕಾಕುಲಿತಮನಸ್ಕಳಾಗಿ ಪುಷ್ಪದಂತ, ಮಾಲ್ಯವಂತರೊಡಗೂಡಿ ಪಾರ್ವತಿಯ ಪಾದತಲದಲ್ಲಿ ಬಿದ್ದು ''ನಮಗೆ ಶಾಪದಿಂದ ಮುಕ್ತಿಯು ಎಂದಿಗೆ?'' ಎಂದು ಬೇಡಿಕೊಳ್ಳಲು ಚಾಮುಂಡಿಯು ಪ್ರಸನ್ನಳಾಗಿ ''ಎಲೈ ಗಣಾಧಿಪರೆ! ಸುಪ್ರತೀಕನೆಂಬ ಯಕ್ಷನು ಕುಬೇರನ ಶಾಪದಿಂದ ಪಿಶಾಚವಾಗಿ ಕಾಣಭೂತಿಯೆಂಬ ಹೆಸರಿನಿಂದ ವಿಂಧ್ಯಾಟವಿಯಲ್ಲಿ ವಾಸಮಾಡುತ್ತಿರುವನು. ಪುಷ್ಪದಂತನು ಅವನನ್ನು ನೋಡಿದ ಕೂಡಲೆ ತನ್ನ ಪೂರ್ವಜನ್ಮವು ನೆನಪಿಗೆ ಬಂದು ಈ ಸಪ್ತವಿದ್ಯಾಧರಚರಿತೆಯನ್ನವನಿಗೆ ಹೇಳುವುದರಿಂದ ಶಾಪಾವಸಾನವಾಗುವುದು. ಮಾಲ್ಯವಂತನು ಕಾಣಭೂತಿಯಿಂದ ಈ ಕಥೆಗಳನ್ನು ಕೇಳಿ ಲೋಕದಲ್ಲಿ ಪ್ರಚುರಪಡಿಸಿದಕೂಡಲೆ ಅವನಿಗೂ ಶಾಪಾವಸಾನವಾಗುವುದು'' ಎಂದಳು. ದೇವಿಯ ಶಾಪದಂತೆ ಮನುಷ್ಯಜನ್ಮವನ್ನೆತ್ತಿದ ಪುಷ್ಪದಂತನು ವರರುಚಿ(ಕಾತ್ಯಾಯನ) ಎಂಬ ಹೆಸರಿನಿಂದ ಪ್ರಶಸ್ತಿಯನ್ನು ಹೊಂದಿ ಸಕಲವಿದ್ಯಾ

ಪಾರಂಗತನಾಗಿ ನಂದನೆಂಬ ರಾಜನ ಬಳಿ ಮಂತ್ರಿಯಾಗಿದ್ದು ಕಾರಣಾಂತರ ದಿಂದ ಸಂಸಾರದಲ್ಲಿ ಬಹಳ ಬೇಸರಗೊಂಡವನಾಗಿ ವಿಂಧ್ಯಾರಣ್ಯಕ್ಕೆ ಬಂದು ವಿಂಧ್ಯವಾಸಿನಿಯನ್ನು ಪೂಜಿಸುತ್ತಿರುವಲ್ಲಿ ಒಂದು ದಿನ ರಾತ್ರಿ ದೇವಿಯು ಸ್ವಪ್ನದಲ್ಲಿ ಪ್ರಸನ್ನಳಾಗಿ "ಎಲೆ ವರರುಚಿ! ನೀನು ಈ ಅರಣ್ಯದಲ್ಲಿ ವಾಸಿ ಸುತ್ತಿರುವ ಪಿಶಾಚರೂಪದ ಕಾಣಭೂತಿಯನ್ನು ನೋಡು" ಎಂದು ಅಪ್ಪಣೆ ಮಾಡಿದಳು. ಅದರಂತೆ ವರರುಚಿಯು ಎಚ್ಚತ್ತು ಕಾಡಿನಲ್ಲಿ ಕಾಣಭೂತಿ ಯನ್ನು ಹುಡುಕುತ್ತಿದ್ದಾಗ ಒಂದು ಆಲದಮರದ ಅಡಿಯಲ್ಲಿ ಪಿಶಾಚಸಮೂಹ ದಿಂದ ಕೂಡಿರುವ ಕಾಣಭೂತಿಯನ್ನು ಕಂಡು ಸಪ್ತವಿದ್ಯಾಧರಚರಿತೆಯನ್ನು ಹೇಳಲು ಕಾಣಭೂತಿಯು 'ಎಲೈ ಪುಷ್ಪದಂತನೆ! ಇನ್ನು ನಿನ್ನ ಚರಿತ್ರೆಯನ್ನು ಆಮೂಲಾಗ್ರವಾಗಿ ಹೇಳೆಂದು ಕೇಳಲು ತಾನು ಕೈಲಾಸವನ್ನು ಬಿಟ್ಟು ವರರುಚಿ ಎಂಬ ಹೆಸರಿನಿಂದ ಹುಟ್ಟಿದ್ದು ಮೊದಲು ಕಾಣಭೂತಿಯನ್ನು ನೋಡಿದ ವರೆಗೆ ನಡೆದ ಸಮಾಚಾರವೆಲ್ಲವನ್ನೂ ನಿರೂಪಿಸಿ "ಎಲೈ ಕಾಣಭೂತಿಯೆ! ಇಂದಿಗೆ ನನ್ನ ಶಾಪವು ಅಡಗಿತು. ಇನ್ನು ನಶ್ವರವಾದ ಮರ್ತ್ಯದೇಹವನ್ನು ಬಿಡಲಾಶಿಸು ತ್ತೇನೆ. ನನ್ನಂತೆಯೇ ಶಾಪಗ್ರಸ್ತನಾದ ಮಾಲ್ಯವಂತನು ಗುಣಾಢ್ಯನೆಂಬ ಹೆಸರಿನಿಂದ ಬ್ರಾಹ್ಮಣನಾಗಿ ಹುಟ್ಟಿ ಸಾತವಾಹನರಾಜನಲ್ಲಿ ಮಂತ್ರಿಯಾ ಗಿದ್ದು ಶರ್ವವರ್ಮನ ಸಂಗಡ ವಾದಸಂಬಂಧದಲ್ಲಿ ಕೋಪಗೊಂಡು ಇತಃಪರ ಸಂಸ್ಕೃತ, ಪ್ರಾಕೃತ, ದೇಶಭಾಷೆಗಳಲ್ಲಿ ಯಾವ ಗ್ರಂಥರಚನೆಯನ್ನೂ ಮಾಡುವು ದಿಲ್ಲವೆಂದು ಶಪಥಮಾಡಿ ವಿಂಧ್ಯಾರಣ್ಯವನ್ನು ಕುರಿತು ಬರುವನು. ಆತನ ಆಗಮನವನ್ನು ನಿರೀಕ್ಷಿಸುತ್ತಿದ್ದು ಮಹೇಶ್ವರನಿಂದ ಹೇಳಲ್ಪಟ್ಟ ಈ ಕಥೆಗಳನ್ನು ನೀನು ಅವನಿಗೆ ತಿಳಿಸಿ ಶಾಪಮುಕ್ತನಾಗು" ಎಂದು ಹೇಳಿ ಬದರಿಕಾಶ್ರಮಕ್ಕೆ ಹೊರಟುಹೋದನು. ಶಾಪಗ್ರಸ್ತನಾದ ಮಾಲ್ಯವಂತನು ಮೇಲೆ ಹೇಳಿ ದಂತೆ ಪ್ರತಿಷ್ಠಾನಾಧಿಪನಾದ ಸಾತವಾಹನನಲ್ಲಿ ಗುಣಾಢ್ಯನೆಂಬ ಹೆಸರಿನಿಂದ ಮಂತ್ರಿಯಾಗಿದ್ದು ಶರ್ವವರ್ಮನಲ್ಲಿ ಪಂಥವನ್ನು ಕಟ್ಟಿಕೊಂಡು ರಾಜ್ಯವನ್ನು ಬಿಟ್ಟು ವಿಂಧ್ಯವಾಸಿನಿಯನ್ನು ಸೇವಿಸಲು ವಿಂಧ್ಯಾರಣ್ಯಕ್ಕೆ ಬಂದು ದೇವಿಯ ಅಪ್ಪಣೆಯಂತೆ ಕಾಣಭೂತಿಯನ್ನು ನೋಡಲು ಕೂಡಲೇ ಪೂರ್ವಜನ್ಮ ಸ್ಮರಣೆಯುಂಟಾಯಿತು. ಆಗ ಅವನು ಪೈಶಾಚಭಾಷೆಯಲ್ಲಿ "ಅಯ್ಯಾ ಕಾಣಭೂತಿಯೇ! ನನ್ನ ಹೆಸರು ಮಾಲ್ಯವಂತನು. ಪುಷ್ಪದಂತನಂತೆಯೇ ನಾನೂ ಶಾಪಗ್ರಸ್ತನಾಗಿ ಗುಣಾಢ್ಯನೆಂಬ ಹೆಸರಿನಿಂದ ಇಲ್ಲಿಗೆ ಬಂದಿರುವೆನು. ನಮ್ಮಿಬ್ಬ ರ್ವರಿಗೂ ಏಕಕಾಲದಲ್ಲಿ ಶಾಪವಿಮೋಚನವಾಗಬೇಕಾದ ಕಾರಣ ಪುಷ್ಪದಂತ ನಿಂದ ನೀನು ಕೇಳಿರುವ ಸಪ್ತವಿದ್ಯಾಧರಚರಿತೆಯನ್ನು ಹೇಳು" ಎಂದು ಕೇಳಲು ಕಾಣಭೂತಿಯು ಸಂತೋಷಗೊಂಡು "ಅಯ್ಯಾ ಗುಣಾಢ್ಯನೆ! ಆ ಕಥೆಯನ್ನು ಹೇಳುವ ಮೊದಲು ನಿನ್ನ ಜನ್ಮವೃತ್ತಾಂತವನ್ನು ಕೇಳಲಾಶಿಸುವೆನು" ಎನ್ನಲು

ಅದಕ್ಕೆ ಗುಣಾಢ್ಯನು "ಕೇಳು ಮಿತ್ರ! ಪ್ರತಿಷ್ಠಾನಗರ(ಪೈಠಣ)ದಲ್ಲಿ ಸೋಮ ಶರ್ಮನೆಂಬ ವಿಪ್ರೋತ್ತಮನಿಗೆ ವತ್ಸ ಮತ್ತು ಗುಲ್ಮ ಎಂಬ ಇಬ್ಬರು ಗಂಡು ಮಕ್ಕಳೂ ಶ್ರುತಾರ್ಥೆ ಎಂಬ ಒಬ್ಬ ಮಗಳೂ ಇದ್ದರು. ಈ ಶ್ರುತಾರ್ಥೆಯೇ ನನ್ನ ಜನ್ಮಧಾರಿಣಿ. ನನ್ನ ತಾಯಿಯು ಚಿಕ್ಕಂದಿನಲ್ಲಿಯೇ ಮಾತಾಪಿತೃ ವಿಹೀನೆಯಾದುದರಿಂದ ತನ್ನ ಅಣ್ಣಂದಿರ ಪೋಷಣೆಯಲ್ಲಿ ಇರುತ್ತಿದ್ದಳು. ವಾಸು ಕಿಯ ಅಣ್ಣನ ಮಗನಾದ ಕೀರ್ತಿಸೇನನು ನನ್ನ ಜನ್ಮದಾತನು. ತಾಯಿ ಯು ನನ್ನನ್ನು ಪ್ರಸವಿಸಿದ ಕೂಡಲೇ ನಾನು ಗುಣಾಢ್ಯನೆಂಬ ಹೆಸರಿನಿಂದ ಮಹಾಕವಿಯಾಗುವೆನೆಂದು ಆಕಾಶವಾಣಿಯಾಯಿತಂತೆ; ಗಣಾವತಾರಿಯಾದ ನಾನು ಗುಣಾಢ್ಯನೆಂಬ ಹೆಸರನ್ನು ಹೊಂದಿ ದೊಡ್ಡವನಾಗಿ ವಿದ್ಯಾರ್ಜನೆ ಯನ್ನು ಮಾಡಿ ಪ್ರಸಿದ್ಧನಾದುದನ್ನು ದೊರೆಯಾದ ಸಾತವಾಹನನು ತಿಳಿದು ನನ್ನನ್ನು ಮಂತ್ರಿಪದಕ್ಕೆ ನೇಮಿಸಿಕೊಂಡನು." ಎಂದು ಹೇಳಿ ಮಾಲ್ಯವಂತ ನಾದ ತನಗೆ ಶಾಪಬಂದದ್ದು ಮೊದಲು ಕಾಣಭೂತಿಯನ್ನು ನೋಡಿದವರೆಗೆ ನಡೆದ ಎಲ್ಲಾ ಸಮಾಚಾರಗಳನ್ನೂ ವಿಸ್ತಾರವಾಗಿ ಹೇಳಿದನು. ಅನಂತರ ಕಾಣಭೂತಿಯು ಸಂತೋಷಪಟ್ಟವನಾಗಿ ಗುಣಾಢ್ಯನಿಗೆ ಸಪ್ತವಿದ್ಯಾಧರಚರಿತೆ ಯನ್ನು ಪೈಶಾಚಭಾಷೆಯಲ್ಲಿಯೇ ಹೇಳಿ "ಎಲೈ ಗುಣಾಢ್ಯನೆ! ನೀನು ಈ ಸಪ್ತ ವಿದ್ಯಾಧರಚರಿತೆಯನ್ನು ಲೋಕದಲ್ಲಿ ಪ್ರಖ್ಯಾತಿಗೊಳಿಸುವವನಾಗಿ ಶಾಪ ವಿಮೋಚನ ಹೊಂದಿ ಶಿವಸಾಯುಜ್ಯವನ್ನು ಪಡೆ"ಯೆಂದು ಹೇಳಿದನು. ಅದ ರಂತೆಯೇ ಗುಣಾಢ್ಯನು ಸಪ್ತವಿದ್ಯಾಧರಚರಿತೆಯನ್ನು ಪೈಶಾಚಭಾಷೆಯಲ್ಲಿ, ಕಾಡಿನಲ್ಲಿ ಮಸಿಯು ದೊರೆಯದೆ ಇದ್ದುದರಿಂದ ತನ್ನ ಶರೀರದ ರಕ್ತದಿಂದಲೇ ಸಪ್ತಲಕ್ಷಶ್ಲೋಕಗಳಲ್ಲಿ ಏಳುವರ್ಷಗಳು ಬರೆದು ಮುಗಿಸಿ ಇದನ್ನು ಲೋಕ ದಲ್ಲಿ ಪ್ರಚುರಗೊಳಿಸುವುದೆಂತೆಂದು ಯೋಚಿಸುತ್ತಿರುವಾಗ ಶಿಷ್ಯರಾದ ನಂದಿ ಮತ್ತು ಗುಣದೇವನು ಮುಂದೆ ಬಂದು ನಮಸ್ಕರಿಸಿ "ಎಲೈ ಆಚಾರ್ಯನೆ! ತಮ್ಮ ಗ್ರಂಥಗಳನ್ನು ನೋಡಿ ಕೇಳಿ ಓದಿ ಆನಂದಿಸುವವನು ಸಾತವಾಹನ ರಾಜನಲ್ಲದೆ ಮತ್ತೆ ಯಾರೂ ಇಲ್ಲ"ವೆಂದು ಬಿನ್ನವಿಸಲು ಅದನ್ನು ಕೇಳಿ ಗುಣಾಢ್ಯನು ಸಮ್ಮತಿಸಿ ಪ್ರತಿಷ್ಠಾನಗರದ ಬಳಿಯಲ್ಲಿರುವ ದೇವೀವನದಲ್ಲಿ ತಾನು ಇಳಿದುಕೊಂಡು ಶಿಷ್ಯರ ಸಂಗಡ ಗ್ರಂಥವನ್ನು ಕೊಟ್ಟು ಸಾತವಾಹನನ ಬಳಿಗೆ ಕಳುಹಿಸಿದನು. ಪೈಶಾಚಭಾಷೆಯಲ್ಲಿ ಬರೆದಿರುವ ಗ್ರಂಥವನ್ನು ನೋಡಿ ಸಾತ ವಾಹನನು ತಿರಸ್ಕಾರದಿಂದ "ಛೀ, ಇದು ಪೈಶಾಚಭಾಷೆ; ಸಂಖ್ಯೆಯೋ ಏಳು ಲಕ್ಷ, ಬರೆದಿರುವುದೋ ರಕ್ತದಲ್ಲಿ" ಎಂದು ಅಹಂಕಾರದಿಂದ ನೂಕಿಬಿಡಲು ಗುಣಾಢ್ಯನು ಇದನ್ನು ಶಿಷ್ಯರಿಂದ ತಿಳಿದು ಅನತಿದೂರದಲ್ಲಿರುವ ಗುಡ್ಡದಲ್ಲಿ ಹೋಮಕುಂಡವನ್ನು ಕಲ್ಪಿಸಿ ಮೃಗಪಕ್ಷಿಯೇ ಮೊದಲಾದವುಗಳೆಲ್ಲವೂ

ಕೇಳುವಂತೆ ಓದಿ ಅದು ಮುಗಿದ ಹಾಗೆಲ್ಲಾ ಆ ಹಾಳೆಗಳನ್ನು ಬೆಂಕಿಯಲ್ಲಿ ಹಾಕುತ್ತಾ ಬಂದನು. ಇದೇ ರೀತಿಯಲ್ಲಿ ಆರುಲಕ್ಷ ಗ್ರಂಥಗಳು ನಾಶವಾಗಿ ಹೋದುವು. ಇಷ್ಟರಲ್ಲಿ ರಾಜನಿಗೆ ಕುಕ್ಷಿಬಾಧೆಯುಂಟಾಯಿತು. ಕಾರಣ ವನ್ನು ವಿಚಾರಿಸಲಾಗಿ ಗುಣಾಢ್ಯನ ನವರಸಭರಿತವಾದ ಪದ್ಯಗಳ ಸವಿಯನ್ನುಂಡ ಮೃಗಪಕ್ಷಿಗಳು ಕಾವ್ಯರಸಾಸ್ವಾದನದಿಂದುಂಟಾದ ಆನಂದದಿಂದ ಮೇವನ್ನು ಬಿಟ್ಟು ನೀರಡಿಕೆಯನ್ನುಳಿದು ಗೋಣನ್ನೆತ್ತಿ ಆಲೈಸುತ್ತಿರುವುದರಿಂದ ಅವುಗಳ ಮೃದುವಲ್ಲದ ಮಾಂಸವನ್ನು ತಂದು ತಿಂದುದರಿಂದ ಈ ಕುಕ್ಷಿಬಾಧೆಗೆ ಕಾರಣ ವಾಯಿತೆಂದು ರಾಜವೈದ್ಯರು ಹೇಳಲಾಗಿ ಸಾತವಾಹನನು ಆಶ್ಚರ್ಯಪಟ್ಟು ಮಿತಪರಿವಾರದೊಡನೆ ಗುಣಾಢ್ಯನಿದ್ದ ಗುಡ್ಡಕ್ಕೆ ಹೋಗಿ ಅವನಲ್ಲಿ ಬಹುತೆರನಾಗಿ ಕ್ಷಮೆಯನ್ನು ಪ್ರಾರ್ಥಿಸಿ ಉಳಿದಿರುವ "ನರದತ್ತವಾಹನಚರಿತೆ"ಯನ್ನು ತೆಗೆದು ಕೊಂಡು ಬಂದು ಜಗತ್ಪ್ರಸಿದ್ಧವನ್ನಾಗಿ ಮಾಡಿದನು. ದೇವಿಯ ಹೇಳಿಕೆಯಂತೆ ಗುಣಾಢ್ಯನು ಶಾಪವಿಮೋಚನವನ್ನು ಹೊಂದಿ ಚಂದ್ರಚೂಡನ ಬಳಿ ಸಾರ್ದು ಕೃತಕೃತ್ಯನಾದನು. ಗುಣಾಢ್ಯನು ಪೈಶಾಚಭಾಷೆಯಲ್ಲಿ ಬರೆದ ಬೃಹತ್ಕಥೆಯು ಈಗ ಭಾರತಕ್ಷೇತ್ರದಲ್ಲಿ ಎಲ್ಲಿಯೂ ದೊರೆಯುವಂತಿಲ್ಲ.



# ಎರಡನೆಯ ಶತಮಾನ



## ಅಶ್ವಘೋಷ

ಇವನು ಸಾಕೇತನಗರದವನೆಂದೂ ಆರ್ಯಸುವರ್ಣಾಕ್ಷಿಯ ಮಗನೆಂದೂ ಸೌಂದರಾನಂದಕಾವ್ಯದ ಕೊನೆಯಲ್ಲಿ ಬರೆದಿರುವ—

"ಆರ್ಯಸುವರ್ಣಾಕ್ಷೀಪುತ್ರಸ್ಯ ಸಾಕೇತಕಸ್ಯ ಭಿಕ್ಷೋರಾಚಾರ್ಯ
ಭದಂತಾಶ್ವಘೋಷಸ್ಯ ಮಹಾಕವೇರ್ಮಹಾವಾದಿನಃ ಕೃತಿರಿಯಂ"†

ಎಂಬುದರಿಂದ ತಿಳಿಯಬರುತ್ತದೆ. *ಸಾಕೇತವೆಂಬುದು ಈಗಣ ಅಯೋಧ್ಯೆ

† ಸೌಂದರಾನಂದಕಾವ್ಯಂ P. 126.

* Saketa *i.e.* Ayodhya, Modern Oudh. Modern Review for October 1926–The Poet Asvaghosha and his school by Dr. M. Winternitz P. 386.

ಎಂದು ವ್ಯವಹರಿಸುವರು. ಇವನು ಬ್ರಾಹ್ಮಣನು. ಹರನಂದಪ್ರಸಾದ ಪಾಂಡೆಯವರು ಸಾಕೇತಕವೆಂಬುದನ್ನು 'ಸಂಕೇತಿಕ'ವೆಂದು ಹೇಳಿರುವರು.* ಭದಂತ ಎಂದರೆ (Venerable) ಪೂಜ್ಯನೆಂದು ಅರ್ಥವಾಗುವುದು. ಬುದ್ಧ ಸಂಘಾಧ್ಯಕ್ಷನಾದ ವಸುಮಿತ್ರನು ಇವನಿಗೆ ಬುದ್ಧದೀಕ್ಷೆಯನ್ನು ಕೊಡಿಸಿ ಬುದ್ಧಮತಕ್ಕೆ ಸೇರಿಸಿಕೊಂಡನು.† ವಸುಮಿತ್ರನಿಗೆ ಪೂರ್ಣಯಶಸ್ಸೆಂದು ಪರ್ಯಾಯನಾಮವಿದ್ದಿತು. ಈ ವಸುಮಿತ್ರನು ಆಚಾರ್ಯಪಾರ್ಶ್ವನೆಂಬ ವನ ಕಡೆಯವನು. ಪಾರ್ಶ್ವನು ಅಭಿಧರ್ಮಪಿಟಕಕ್ಕೆ "ಮಹಾವಿಭಾಷಾ" ಎಂಬ ವ್ಯಾಖ್ಯಾನವನ್ನು ಬರೆಯುವಾಗ ತನ್ನ ಸಹಾಯಕ್ಕೆ ಅಶ್ವಘೋಷನನ್ನು ಕಾಬೂಲಿಗೆ ಕರೆಸಿಕೊಂಡನು. ಈ ವ್ಯಾಖ್ಯಾನವು ಕನಿಷ್ಕನ ಕಾಲದಲ್ಲಿ ಬರೆಯಲ್ಪಟ್ಟಿತು. ಅಶ್ವಘೋಷನು ಕುಸುಮಪುರದಲ್ಲಿದ್ದುಕೊಂಡು ಬುದ್ಧ ಮತತತ್ವಪ್ರಚಾರಕ್ಕಾಗಿ ಬಹಳ ಪ್ರಯತ್ನಪಟ್ಟನು. ಇವನು ಮಹಾಕವಿ ಯಾಗಿದ್ದುದು ಮಾತ್ರವಲ್ಲದೆ ಮಹಾಬೋಧಕನೂ ಗಾನವಿಶಾರದನೂ ಆಗಿ ದ್ದನು. ಇವನು ಹಾಡುವಾಗ ಕುದುರೆಗಳು ಗಾನಪರವಶನಾಗಿ ಹುಲ್ಲು ತಿನ್ನುವುದನ್ನು ಕೂಡಾ ಬಿಟ್ಟು ಕೇಳುತ್ತಿದ್ದುದರಿಂದ ಇವನಿಗೆ **ಅಶ್ವಘೋಷ** ನೆಂಬ ಹೆಸರು ಬಂದುದಾಗಿ ಹೇಳುವರು. ಇವನು ತನಗೆ ಆಶ್ರಯದಾತನಾದ ಕನಿಷ್ಕನನ್ನೂ ಪಾರ್ಶ್ವ ಮತ್ತು ಪೂರ್ಣಯಶಸ್ಸ(ವಸುಮಿತ್ರ)ರನ್ನೂ ಸೂತ್ರಾ ಲಂಕಾರದ ಆರಂಭದಲ್ಲಿ ಸ್ತುತಿಸಿರುವನು.‡ ಇವನು ಬರೆದಿರುವ ಗ್ರಂಥಗ ಳೆಂದು ಪ್ರಕೃತ ದೊರೆತಿರುವುವು:—

1. ಬುದ್ಧಚರಿತ
2. ಸೌಂದರಾನಂದಕಾವ್ಯ
3. ಸೂತ್ರಾಲಂಕಾರಶಾಸ್ತ್ರ
4. ವಜ್ರಸೂಚಿ

ಇವುಗಳಲ್ಲದೆ ಅಶ್ವಘೋಷನದೆಂದು ಹೇಳುವ ಐದು ಶ್ಲೋಕಗಳು ವಲ್ಲಭದೇವನ ಸುಭಾಷಿತಾವಳಿಯಲ್ಲಿ ದೊರೆಯುವುವು.§

ಅಶ್ವಘೋಷನಿಗೆ ಮಾತೃಚೇತ, ಧಾರ್ಮಿಕ, ಸುಭೂತಿ, ಶೂರನೆಂಬ ಬೇರೆ ಬೇರೆ ಹೆಸರುಗಳಿದ್ದುದಾಗಿ ತಿಳಿಯಬರುತ್ತದೆ. ಮಾತೃಚೇತನೆಂಬುದು ಅಶ್ವಘೋಷನ ಹೆಸರಲ್ಲ. ಹೇಗೆಂದರೆ ತಿಬಟೀಯ ಭಾಷೆಯ ಗ್ರಂಥಗಳನ್ನು

* Modern Review— April, 1920—P. 390.
† G. R. Nandargikar's Intro. to Buddhacharita P. 2.
‡ Ibid P. 7.
§ Subhashitavali Nos. 198—528—529—3100—3142.

ಚೈನಾಭಾಷೆಗೆ ಪರಿವರ್ತಿಸಿರುವ ಇತ್ಸಿಂಗ(I-tsing)ನು 'ಸೂರೈವತ್ತು ಶ್ಲೋಕಗಳುಳ್ಳ 'ಶತಪಂಚಾಶತಿಕಸ್ತೋತ್ರ'ವೆಂಬ ಗ್ರಂಥವು ಅಶ್ವಘೋಷನ ಹೆಸರಿನಲ್ಲಿರುವುದಾಗಿ ತಿಬಟೀಯ ಗ್ರಂಥಗಳಿಂದ ತಿಳಿಯಬರುವುದಾದರೂ ಇದು ಖಂಡಿತವಾಗಿಯೂ ಅಶ್ವಘೋಷನು ಬರೆದುದಲ್ಲವೆಂದೂ ಈ ಸ್ತೋತ್ರಕಾರನು ಮಾತೃಚೇತನೆಂದೂ ಇವನು ಅಶ್ವಘೋಷನಂತೆ 'ಮಹಾಯಾನಪಥ'ಪ್ರವರ್ತಕನೆಂದೂ ಬೋಧಿಸತ್ವರಾದ 'ಅಸಂಗ' ಮತ್ತು 'ವಸುಬಂಧು' ಇವರು ಇವನ ಸ್ತೋತ್ರವನ್ನು ಮಾನಿಸುತ್ತಿದ್ದರೆಂದೂ ಬುದ್ಧಮತದೀಕ್ಷಾಪರನಾದ ಪ್ರತಿಯೊಬ್ಬ ಭಾರತೀಯನೂ ಪಂಚ ಅಥವಾ ದಶವಿಧ ನಿಯಮಗಳನ್ನು ಹೇಳುವುದಕ್ಕೆ ಬಂದ ಕೂಡಲೆ 'ಮಾತೃಚೇತ'ನ ಈ ಸ್ತೋತ್ರವನ್ನು ಕಲಿಯುತ್ತಿದ್ದನೆಂದೂ ಮಾತೃಚೇತನು ಹಿಂದಣ ಜನ್ಮದಲ್ಲಿ ಬುದ್ಧನ ಸ್ತುತಿಗಳನ್ನು ಶ್ರಾವ್ಯವಾಗಿ ಹಾಡುವ ನಿಶಾವಿಹಂಗ(Nightingale)ನಾಗಿದ್ದನೆಂದೂ ಹೇಳುವನು. ಆದರೆ ಚರಿತ್ರಕಾರರಾದ ತಾರಾನಾಥರು 'ಮಾತೃಚೇತ'ನೆಂಬುದು ಅಶ್ವಘೋಷನ ಮತ್ತೊಂದು ಹೆಸರೆಂದು ಹೇಳುವರು.* ಇದಲ್ಲದೆ ಕುಷನ್‌ವಂಶದ ಕನಿಕ(ಕನಿಷ್ಕ)ರಾಜನಿಗೆ ಮಾತೃಚೇತನಿಂದ ಕಳುಹಿಸಲ್ಪಟ್ಟ ಲೇಖನ(Epistle)ವು ತಿಬಟಿಯನ್ ಭಾಷೆಯಲ್ಲಿ ದೊರೆಯುವುದು. ಅಶ್ವಘೋಷನು ಕನಿಷ್ಕನನ್ನು ಕುಷನ್‌ವಂಶದವನೆಂದು ಸೂತ್ರಾಲಂಕಾರದಲ್ಲಿ ಹೇಳಿರುವನು. ಆದರೆ ಅದರಲ್ಲಿ ಅಶ್ವಘೋಷನಿಗೆ 'ಮಾತೃಚೇತ'ನೆಂಬ ಹೆಸರು ಪರ್ಯಾಯವೇ? 'ಕನಿಕ'ನೆಂಬುದೂ 'ಕನಿಷ್ಕ'ನೆಂಬುದೂ ಒಬ್ಬ ರಾಜನ ಹೆಸರೆ? ಎಂಬ ವಿಚಾರವನ್ನು ಹೇಳಿರುವುದಿಲ್ಲ.‡ ತಿಬೆಟ್ ಮತ್ತು ಚೀನಿಯರ ಗ್ರಂಥಗಳಲ್ಲಿ ಅಶ್ವಘೋಷನೆಂಬ ಹೆಸರಿನವರು ಆರು ಜನರಿದ್ದರೆಂದೂ ಈ ಆರು ಜನರೂ ಬುದ್ಧಚರಿತೆಯನ್ನು ಬರೆದ ಅಶ್ವಘೋಷನಾಗಿರಬೇಕೆಂದೂ''$ ತಾರತಮ್ಯವಿಲ್ಲದೆ ಹೇಳಿದೆ. ಈ ಆಧಾರಗಳಿಂದ ಮಾತೃಚೇತನೂ ಅಶ್ವಘೋಷನೂ ಬೇರೆ ಬೇರೆ ಎಂದು ಹೇಳಿದಂತಾಯಿತು.

'ವಜ್ರಸೂಚಿ' ಎಂಬುದರ ಗ್ರಂಥಕರ್ತನು ಅಶ್ವಘೋಷನೆಂದಿರುವುದು. ಚೀನಾಭಾಷೆಯಲ್ಲಿರುವ ವಜ್ರಸೂಚಿಯನ್ನು ನೋಡಿದರೆ 'ಫಾಹಿಯಾನ'ನದೆಂದಿರುವುದು. ಇವನ ಹೆಸರು 'ಧರ್ಮಯಶಸ್' ಎಂದೂ ಭಾಷಾಂತರಿಸಲ್ಪಟ್ಟಿದೆ. ಇದಕ್ಕೆ 'ಧಾರ್ಮಿಕ' 'ಸುಭೂತಿ'ಯೆಂದೂ ಅರ್ಥಮಾಡಬಹುದು.

---

* Modern Review for Oct. 1926 P. 388.
‡ Indian Antiquary 1903 P. 345.
$ G. R. Nandargikar's Intro. to Buddhacharita. P. 2.

ಆದುದರಿಂದ 'ಧಾರ್ಮಿಕ' 'ಸುಭೂತಿ'ಯೂ 'ಅಶ್ವಘೋಷನೂ' ಬೇರೆ ಬೇರೆ ಎಂದು ಹೇಳಿದಂತಾಯಿತು.

ಚೀನಾಭಾಷೆಯಲ್ಲಿ ಬರೆಯಲ್ಪಟ್ಟಿರುವ 'ಕರ್ಮಫಲಸಂಕ್ಷಿಪ್ತನಿರ್ದೇಶ ಸೂತ್ರ'ದ (The Distinctions of the Fruits of Works (Nanjio No. 1349). ಗ್ರಂಥಕರ್ತನು ಒಬ್ಬ ಬೋಧಿಸತ್ವನೆಂದಿದೆ. 'ಬೋಧಿಸತ್ವ' ಎಂಬ ಶಬ್ದವನ್ನು ಸಂಸ್ಕೃತಮಾಡಿದರೆ ಮಹಾಶೂರನೆಂದಾಗುವುದು. ಇದರಿಂದ ಶೂರ ನೂ ಅಶ್ವಘೋಷನೂ ಬೇರೆ ಬೇರೆ ಎಂದು ಹೇಳಿದಂತಾಯಿತು. ಇದಲ್ಲದೆ 'ಜನ್ಮಾಂತರ ರಹಸ್ಯಸ್ಥಲಷಟ್ಕ' (Transmigrationi n the Six Resorts)ದ ಗ್ರಂಥಕಾರನು ಅಶ್ವಘೋಷನೆಂದಿದೆ. ಇವುಗಳ ಶೈಲಿಯು ರೂಪು, ಕವಿತಾಸರ ಣಿಯನ್ನು ಬುದ್ಧಚರಿತದೊಡನೆ ಹೋಲಿಸಿನೋಡಿದರೆ ಇದನ್ನು ನಮ್ಮ ಕವಿಯು ಬರೆದಿರುವನೆಂದು ಹೇಳಲಾಗುವುದಿಲ್ಲ.

'ನಿರ್ಗ್ರಂಥ'ವೆಂಬ ಗ್ರಂಥಕಾರನು ಅಶ್ವಘೋಷನೆಂದಿದೆ. ಇದರಲ್ಲಿ ನಿತ್ಯಾನಿತ್ಯವಸ್ತುವಿಚಾರವರ್ಣನವಿದ್ದು ಪೂರ್ಣಯಶಸ್ಸು ಅಶ್ವಘೋಷನಿಗೆ ಬೋಧಿಸಿದಹಾಗೆ ಕಂಡುಬರುತ್ತದೆ. ಇದನ್ನೋದಿನೋಡಿದರೆ ನಮ್ಮ ಕವಿ ಯಾದ ಅಶ್ವಘೋಷನದಾಗಿದ್ದರೂ ಇರಬಹುದೆಂಬ ಸಂದೇಹವು ತೋರುತ್ತದೆ.

ಯೂಆನ್-ಚವಂಗ್ ( Yuan-Chwang ) ನ ಜೀವನಚರಿತದಲ್ಲಿ ಒಬ್ಬ ಅಶ್ವಘೋಷನ ಹೆಸರು ಕಂಡುಬರುವುದು. ಈ ಅಶ್ವಘೋಷನು ನಾಗಾ ರ್ಜುನ, ದೇವ, ಕುಮಾರಲಬ್ಧನ ಸಮಕಾಲೀಕನೆಂದು ತಿಳಿಯುಬರುತ್ತದೆ. ಇವನು ಬೋಧಿಸತ್ವನೆಂದು ಹೇಳಲ್ಪಟ್ಟಿರುವನಾದರೂ ಹಿಂದೆ ಹೇಳಿರುವ ಅಶ್ವಘೋಷ ರಲ್ಲಿ ಯಾರೆಂದು ಖಂಡಿತವಾಗಿ ಹೇಳಲಾಗುವುದಿಲ್ಲ.

'ಮತೋಜ್ಜೀವನ' (Awakening of Faith)ದ ಗ್ರಂಥಕಾರನು ಅಶ್ವ ಘೋಷನೆಂದು ಹೇಳಲ್ಪಟ್ಟಿದೆ. ಇವನು ಮೇಲೆ ಹೇಳಿರುವವರಲ್ಲಿ ಯಾರೆಂಬುದು ತಿಳಿಯದು. *

ಕ್ರಿ. ಶ. ೬೭೧ರಲ್ಲಿ ಭಾರತಪ್ರವಾಸಕ್ಕಾಗಿ ಬಂದ ಚೀನಾಯಾತ್ರಿಕನಾದ ಇತ್ಸಿಂಗನು (I-tsing) ತಾನು ಬರೆದಿರುವ ಪ್ರವಾಸವೃತ್ತಾಂತ(Memoirs)ದಲ್ಲಿ ಅಶ್ವಘೋಷನ ವಿಚಾರವಾಗಿ ಒಕ್ಕಣಿಸಿ ಇವನನ್ನು ಕ್ರಿ. ಶ. ೪ನೆಯ ಶತಮಾನ ಕ್ಕಿಂತಲೂ ಹಿಂದಿನವನೆಂದು ಹೇಳಿರುವನು‡ ಕುಷನ್‌ವಂಶದಲ್ಲಿ ಪ್ರಸಿದ್ಧನಾದ

* G. R. N's Intro. to Buddhacharita.
‡ Modern Review April 1920.

ಎರಡನೇ ಕಾಡ್‌ಫೈಸಿಸ್ ನಂತರ ಕನಿಷ್ಕನು (ಕ್ರಿ. ಶ. ೧೨೫) ಸಿಂಹಾಸನ ವನ್ನೇರಿದನು. ಇವನ ಕಾಲದಲ್ಲಿ(ಕ್ರಿ.ಶ.೧೨೫–೧೫೨)ಪೂರ್ವದಿಕ್ಕಿನಲ್ಲಿ ಪಾಟಲೀ ಪುತ್ರದ ವರೆಗಿನ ರಾಜ್ಯಗಳೂ ಉತ್ತರದಲ್ಲಿ ಕಾಶ್ಮೀರವೂ 'ಯಾರ್ಕಂಡ್, ಕ್ಯಾಷ್ ಗರ್' ಎಂಬ ಮಧ್ಯದತುರ್ಕಿಸ್ಥಾನದ ಪ್ರಾಂತಗಳೂ ಕನಿಷ್ಕನ ರಾಜ್ಯಕ್ಕೆ ಸೇರಿ ಕೊಂಡುವು.* ಅನಂತರ ಪರಾಕ್ರಮಿಯಾದ ಇವನು ಇಂಡಸ್ ಮುಖದ ವರೆಗೂ ಹೋಗಿ ಅಲ್ಲಿ ಕ್ರಿ. ಶ. ಒಂದನೆಯ ಶತಮಾನಾಂತ್ಯದಲ್ಲಿ ಆಳುತ್ತಿದ್ದ ಪಾರ್ಥಿಯನ್ ರಾಜರನ್ನು ಗೆದ್ದು ನಂತರ ಬಹು ಸುಂದರತಮವಾದ ಕಾಶ್ಮೀರದ ಕಣಿವೆಗಳನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಒಂದು ಪಟ್ಟಣವನ್ನು ಸ್ಥಾಪಿಸಿ ಅದಕ್ಕೆ ಕನಿಷ್ಕಪುರವೆಂದು ಹೆಸರಿಟ್ಟನು.† ಈಗ ಅದು ಒಂದು ಹಳ್ಳಿಯಾಗಿ ವರಹಮೂಲದಿಂದ ಶ್ರೀನಗರಕ್ಕೆ ಹೋಗುವ ದಾರಿಗೂ ಮತ್ತು ವಿತಸ್ತಾ (Bihet) ನದಿಗೂ ಮಧ್ಯದಲ್ಲಿರುವುದು. ಆಮೇಲೆ ಕನಿಷ್ಕನು ಪಾಟಲಿ ಪುತ್ರಕ್ಕೆ ದಾಳಿಯೆತ್ತಿ ಅಲ್ಲಿನ ರಾಜನನ್ನು ಜಯಿಸಿದುದಾಗಿಯೂ ಅಲ್ಲಿದ್ದ **ಅಶ್ವಘೋಷ**ನೆಂಬ ಯತೀಂದ್ರನನ್ನು ಕರೆದುಕೊಂಡುಹೋದಂತೆಯೂ ತಿಳಿಯ ಬರುತ್ತದೆ. §ಕನಿಷ್ಕನ ರಾಜಧಾನಿಗೆ 'ಪುರುಷಪುರ'ವೆಂದು ಹೆಸರು. ಈಗ ಇದನ್ನು 'ಪಿಶಾವರ' ಎಂದು ವ್ಯವಹರಿಸುವರು. ಇತ್ಸಿಂಗನು (I-tsing) ಇಂಡಿಯಾಕ್ಕೆ ಬಂದಾಗ ಅಲ್ಲಲ್ಲಿ ಚೈತ್ಯವಿಹಾರ(Monasteries)ಗಳಲ್ಲಿ ಅಶ್ವಘೋಷಕೃತ ಕೆಲವು ಶ್ಲೋಕಗಳು ಹೇಳಲ್ಪಡುತ್ತಿದ್ದುವೆಂದು ಒಕ್ಕಣಿಸಿರುವನು. ಇದರಿಂದ ಅಶ್ವ ಘೋಷನ ನಂತರ ಎಷ್ಟೋ ಶತಮಾನಗಳ ಮೇಲೆ ನಾಮಾವಶೇಷವಾಗಿ ದೊರೆತಿರುವ ಅಲ್ಲೊಂದು ಇಲ್ಲೊಂದು ಶ್ಲೋಕಗಳನ್ನು ಜತೆಗೂಡಿಸಿ ಹೇಳ ಬೇಕಾದರೆ ಕನಿಷ್ಠಪಕ್ಷ ಒಂದೆರಡು ಶತಮಾನಗಳಾದರೂ ಬೇಕಾಗಿತೋರು ವುದು. ಕ್ರಿ. ಶ. ಮೂರನೆಯ ಶತಮಾನಾಂತ್ಯದಲ್ಲಿ ಉತ್ತರ ಹಿಂದುಸ್ಥಾನವು ಪಾಳ್ಯಪಟ್ಟುಗಳಾಗಿ ಅಂತಃಕಲಹದಿಂದ ಗಲಭೆಯಾಗಿದ್ದಿತೆಂದೂ ಪ್ರಬಲರಾದ ರಾಜರು ಯಾರೂ ಇದ್ದಂತೆ ಕಂಡು ಬರುವುದಿಲ್ಲವೆಂದೂ ಮೌರ್ಯರ ತರು ವಾಯ ಬೌದ್ಧಮತಕ್ಕೆ ಪ್ರೋತ್ಸಾಹವು ಕಡಿಮೆಯಾದ ಹಾಗೆಲ್ಲಾ ಇತರ ಮತ ಗಳು ತಲೆಯೆತ್ತಿಕೊಂಡುವೆಂದೂ ಕನಿಷ್ಕನ ಕಾಲಾನಂತರ ಬಂದವರು ಕನಿಷ್ಕನ ಹಾಗೆ ಬೌದ್ಧಮತಪ್ರಚಾರಕರಾಗಿರಲಿಲ್ಲವಾದುದರಿಂದ ಕನಿಷ್ಕನ ನಂತರವೇ ಬೌದ್ಧಮತದ ಕ್ಷೀಣದೆಸೆಗೆ ಕಾರಣವಾಯಿತೆಂದೂ ಚರಿತ್ರೆಯು ಹೇಳಿಕೊ ಡುವುದು. ಕನಿಷ್ಕನ ತರುವಾಯ ಹವಿಷ್ಕನು ೩೦ ವರ್ಷಗಳ ಕಾಲ

* Charitra Sangraha P. 72.

† V. A. Smith's Early History of India P. 226.

§ Ibid. 3rd Edition P. 260.

(ಕ್ರಿ. ಶ. ೧೫೨–೧೮೨) ರಾಜ್ಯವನ್ನು ಆಳಿದನು. ನಂತರ ವಶಿಷ್ಕನೆಂಬುವನು ೨೫ ವರ್ಷಗಳು (ಕ್ರಿ. ಶ. ೧೮೨–೨೦೭) ಆಳಿದನು. ಇದರಿಂದ ಕ್ರಿ. ಶ. ಮೂರನೆಯ ಶತಮಾನಾರಂಭವೆನ್ನಬಹುದು. ಇದಕ್ಕೆ ಪೂರ್ವವೇ ಬೌದ್ಧಮತವು ಅತ್ಯಂತೋಚ್ಛ್ರಾಯಸ್ಥಿತಿಯಲ್ಲಿದ್ದಿತೆಂದೂ ಕಾಲಕ್ರಮದಲ್ಲಿ ಕಾರಣಾಂತರಗಳಿಂದ ಕ್ಷೀಣದೆಸೆಗೆ ಬಂದಿತೆಂದೂ ಬೌದ್ಧಮತವು ಅತ್ಯಂತ ಪ್ರಬಲಸ್ಥಿತಿಯಲ್ಲಿದ್ದ ಒಂದೆರಡನೆಯ ಶತಮಾನಗಳಲ್ಲಿ "ಮಹಾವಿಭಾಷಾ" ಎಂಬ ವ್ಯಾಖ್ಯಾನವು ಬರೆಯಲ್ಪಟ್ಟಿತೆಂದೂ ಆ ಕಾಲದಲ್ಲಿಯೇ ಬೌದ್ಧರ ನಾಲ್ಕನೆಯ ಸಭೆಯು ಸೇರಿತ್ತೆಂತಲೂ **ಬುದ್ಧಚರಿತ**ದಂತಹ ಪ್ರಾಚೀನ ಕಾವ್ಯಗಳು ಆಗಲೇ ಬರೆಯಲ್ಪಟ್ಟಿರಬೇಕೆಂತಲೂ ಅದೇ ಕನಿಷ್ಕನ ಕಾಲವಾಗಿರಬೇಕೆಂತಲೂ ಕನಿಷ್ಕನು ಕ್ರಿ. ಶ. ೨ನೆಯ ಶತಮಾನದವನಾದುದರಿಂದ ನಮ್ಮ ಕವಿಯಾದ ಅಶ್ವಘೋಷನೂ ಕೂಡಾ ಅವನ ಸಮಕಾಲಿಕನೆಂದೂ ಹೇಳುವುದರಲ್ಲಿ ಯಾವ ನ್ಯೂನತೆಯೂ ಇರದು. ಇದೇ ಅಭಿಪ್ರಾಯವನ್ನು ಡಾ. ವಾರ್ಷಲರವರೂ ಅನುಮೋದಿಸಿರುವರು.†

**ಬುದ್ಧಚರಿತ:**–ಇದು ಮೂರುಸಾವಿರಶ್ಲೋಕಪರಿಮಿತಿಯುಳ್ಳಗ್ರಂಥವಾಗಿರಬೇಕೆಂದು ಪ್ರೊ. ತಕಕುಸುರವರು ಹೇಳುವರು. ಈಗ ನಮಗೆ ದೊರೆತಿರುವ ಸಂಸ್ಕೃತದ ಮೂಲಬುದ್ಧಚರಿತೆಯು ೧೩೬೮ಶ್ಲೋಕಗಳುಳ್ಳದ್ದಾಗಿ ೧೭ಸರ್ಗಗಳು ಮಾತ್ರವಿರುತ್ತವೆ. ಮೊದಲಿನ ೧೩ ಸರ್ಗಗಳು **ಅಶ್ವಘೋಷ**ನು ಬರೆದುದಾಗಿಯೂ ಕೊನೆಯ ೪ ಸರ್ಗಗಳನ್ನು ಅಮೃತಾನಂದನೆಂಬ ಕವಿಯು ಬರೆದುದಾಗಿಯೂ ತಿಳಿಯಬರುತ್ತದೆ. ಚೈನಾಭಾಷೆಗೆ ಪರಿವರ್ತನವಾಗಿರುವ ಬುದ್ಧಚರಿತೆಯಲ್ಲಿಯೂ ಕ್ರಿ. ಶ. ೭–೮ನೆಯ ಶತಮಾನಗಳಲ್ಲಿ ತಿಬಟೀಯ ಭಾಷೆಗೆ ಭಾಷಾಂತರಿಸಲ್ಪಟ್ಟಿರುವ ಬುದ್ಧಚರಿತೆಯಲ್ಲಿಯೂ ೨೮ ಸರ್ಗಗಳಿರುವುದರಿಂದ ಸಂಸ್ಕೃತದ ಬುದ್ಧಚರಿತೆಯಲ್ಲಿಯೂ ಕೂಡಾ ೨೮ಸರ್ಗಗಳಿರಬೇಕೆಂದು ತೋರುವುದು. ಆದರೆ ನಮಗೆ ೧೭ ಸರ್ಗಗಳು ಮಾತ್ರವೇ ದೊರೆತಿರುವುದರಿಂದ ಮಿಕ್ಕವು ಹೋಗಿ ಬುದ್ಧಚರಿತೆಯ ಕೊಂಚಭಾಗವು ಮಾತ್ರ ದೊರೆತಿರುವುದೆಂದೂಹಿಸಬಹುದಾಗಿದೆ. ‡

"ಸರ್ಗಬಂಧೋ ಮಹಾಕಾವ್ಯಂ ತತ್ರೈಕೋ ನಾಯಕಸ್ಸುರಃ ।
ಸದ್ವಂಶಃ ಕ್ಷತ್ರಿಯೋ ವಾಪಿ ಧೀರೋದಾತ್ತಗುಣಾನ್ವಿತಃ ॥
ಏಕವಂಶಭವಾ ಭೂಪಾ ಕುಲಜಾ ಬಹವೋ ಪಿವಾ ।

† V. A. Smith's Early History of India 3rd Edition P. 256.

‡ Modern Review April 1920. P. 390.

ಶೃಂಗಾರವೀರಶಾಂತಾನಾಮೇಕೋಂಗೀರಸ ಇಷ್ಯತೇ ||
ಇತಿಹಾಸೋದ್ಭವಂ ವೃತ್ತಂ ಅನ್ಯದ್ವಾ ಸಜ್ಜನಾಶ್ರಯಂ ||

ಎಂಬ ಕಾವ್ಯಾದರ್ಶದ ಸೂತ್ರಾಧಾರದಿಂದ ಇದನ್ನು ಮಹಾಕಾವ್ಯವೆನ್ನುವರು. ಸಂಘವರ್ಮನೆಂಬವನು ಬುದ್ಧಚರಿತೆಯನ್ನು ಚೀನಾ ಭಾಷೆಗೆ ಕ್ರಿ. ಶ. ೪೧೪–೪೨೧ರಲ್ಲಿ ಭಾಷಾಂತರ ಮಾಡಿದನು. ಕುಮಾರಜೀವನೆಂಬವನು ಅಶ್ವಘೋಷನ ಜೀವನಚರಿತೆಯನ್ನೂ ಮತ್ತು ಸೂತ್ರಾಲಂಕಾರವನ್ನೂ ಚೀನಾ ಭಾಷೆಗೆ ಕ್ರಿ. ಶ. ೪೦೧ರಲ್ಲಿ ಭಾಷಾಂತರಿಸಿದನು. * ಅಶ್ವಘೋಷನ ಶೈಲಿಯೂ ಕಾಲಿದಾಸನ ಶೈಲಿಯೂ ಸ್ವಭಾವವರ್ಣನದಲ್ಲಿ ಒಂದೇಯಾಗಿ ತೋರಬಹುದಾದರೂ ಕಲ್ಪನಾಚತುರತೆ, ಉಪಮಾ, ಸರಸತರ ಶಬ್ದಾರ್ಥಸಂಯೋಜನಕೌಶಲದಲ್ಲಿ ಕಾಲಿದಾಸನ ಕವಿತಾಮಾಧುರ್ಯವನ್ನು ಅನುಭವಿಸಿದವರಿಗೆ ಅಶ್ವಘೋಷನ ಶೈಲಿಯು ಅಷ್ಟು ಹೃದಯಂಗಮವಾಗಿರುವಂತೆ ತೋರದು. ಇವರಿಬ್ಬರ ಕಾವ್ಯಗಳಲ್ಲಿಯೂ ಅಲ್ಲಲ್ಲಿ ಪರಸ್ಪರಸಮಾನಪದಪ್ರಯೋಗ, ಸಮಾನಾಭಿಪ್ರಾಯಗಳುಳ್ಳ ಶ್ಲೋಕಗಳು ಕಂಡು ಬರುವುವು. ಇದಲ್ಲದೆ ಇವರಿಬ್ಬರೂ 'ಧಿಷ್ಣ್ಯ' 'ನಿರ್ವಾಹಣ' ಮೊದಲಾದ ವಿಶೇಷಶಬ್ದಗಳನ್ನು ಉಪಯೋಗಿಸಿರುವರು. ಕಾಳಿದಾಸನು ಉಪಯೋಗಿಸಿದ ಅರ್ಥದಲ್ಲಿಯೇ ಅಶ್ವಘೋಷನೂ ಉಪಯೋಗಿಸಿರುವುದಾಗಿ ಕಂಡುಬರುವುದು.

ಸಮಾನ ಪದಪ್ರಯೋಗಕ್ಕೆ ಉದಾಹರಣೆ:—

| ರಘುವಂಶ:– | ಬುದ್ಧಚರಿತೆ:– |
|---|---|
| ದಿಶಃ ಪ್ರಸೇದುರ್ಮರುತೋ ವವುಸ್ಸುಖಾಃ | ದಿಶಃ ಪ್ರಸೇದುಃ ಪ್ರಬಭೌ ನಿಶಾಕರಃ |
| ಕುಮಾರಸಂಭವ:– | |
| ವಾತಾವವುಸ್ಸ್ಪರ್ಶಸುಖಾಃ ಪ್ರಸೇದುಃ ೧೧-೩೭ | ವಾತಾವವುಃ ಸ್ಪರ್ಶಸುಖಾ ಮನೋಜ್ಞಾಃ೧-೪೧ |

ಸಮಾನಾಭಿಪ್ರಾಯಕ್ಕೆ ಉದಾಹರಣೆ:—

| ರಘುವಂಶ:– | ಬುದ್ಧಚರಿತ:– |
|---|---|
| ಅರಿಷ್ಟಶಯ್ಯಾಂ ಪರಿತೋ ವಿಸಾರಿಣಾ<br>ಸುಜನ್ಮನಸ್ತಸ್ಯ ನಿಜೇನ ತೇಜಸಾ ।<br>ನಿಶೀಥದೀಪಾಸ್ಸಹಸಾ ಹತತ್ವಿಷೋ<br>ಬಭೂವುರಾಲೇಖ್ಯ ಸಮರ್ಪಿತಾ ಇವ॥<br>೩—೧೫ | ಸ ಹಿ ಸ್ವಗಾತ್ರಪ್ರಭಯೋಜ್ಜ್ವಲಂತ್ಯಾ<br>ದೀಪಪ್ರಭಾಂ ಭಾಸ್ಕರವನ್ಮುಮೋಷ ।<br>ಮಹಾರ್ಹಜಾಂಬೂನದಚಾರುವರ್ಣಃ<br>ಪ್ರದ್ಯೋತಯಾಮಾಸ ದಿಶಶ್ಚ ಸರ್ವಾಃ ॥<br>೧-೩೨ |

* The age of Kumarajeeva P. 66—67. by Mr. Phanindra Nath Bose.

| ಮೇಘಸಂದೇಶ:– | ಬುದ್ಧಚರಿತ |
|---|---|
| ಕಸ್ಯೈಕಾಂತಂ ಸುಖಮುಪನತಂ<br>ದುಃಖಮೇಕಾಂತತೋ ವಾ \|<br>ನೀಚೈರ್ಗಚ್ಛತ್ಯುಪರಿ ಚ ದಶಾ<br>ಚಕ್ರನೇಮಿಕ್ರಮೇಣ \|\| ೧೧೪ \|\| | ಅತೋಽಪಿ ನೈಕಾಂತ ಸುಖೋಽಸ್ತಿ ಕಶ್ಚಿ<br>ನ್ನೈಕಾಂತದುಃಖಃ ಪುರುಷಃ ಪೃಥಿವ್ಯಾಂ\|\| |

ಕವಿಯಾದವನು ತಾನು ಮೊದಲು ಬರೆದಿರುವ ಕಾವ್ಯಾಭಿಪ್ರಾಯ, ಶಬ್ದ, ಅರ್ಥ, ಶೈಲಿಯೇ ಮೊದಲಾದುವುಗಳನ್ನು ಮತ್ತೊಂದು ಕಾವ್ಯದಲ್ಲಿ ಬದಲಾಯಿಸಿ ಹೇಳುವುದೂ ಬರೆಯುವುದೂ ಸ್ವಾಭಾವಿಕವಾಗಿರುವುದು. ಅವನು ಎಷ್ಟು ಬಗೆಯಾಗಿ ಬೇರೆ ಬೇರೆ ಶಬ್ದ, ಅರ್ಥ, ಅಭಿಪ್ರಾಯಗಳನ್ನು ಭಿನ್ನವಿಸಿ ಭಿನ್ನವಿಸಿ ಬರೆಯಬೇಕೆಂದೆಣಿಸಿದರೂ ಮೊದಲಿನ ಕಾವ್ಯವನ್ನು ಬರೆಯುವಾಗ ಬುದ್ಧಿಯು ಪೂರ್ವಪದಪ್ರಯೋಗಗಳೊಡನೆ ಪಳಗಿರುವುದರಿಂದ ಇತರ ಶಬ್ದಗಳ ಹುಡುಕುವಿಕೆಯನ್ನು ತಪ್ಪಿಸಿ ಸಿದ್ಧವಾಗಿ ಅನುಭವಕ್ಕೆ ಬಂದಿರುವ ಶಬ್ದಗಳನ್ನೇ ಹವಣಿಸಿಕೊಡುವುದು. ಉದಾಹರಣೆ:—ರಘುವಂಶದಲ್ಲಿರುವ ಅನೇಕ ಶ್ಲೋಕಗಳು ಕೊಂಚಕೊಂಚ ಕ್ರಿಯಾಭೇದದೊಡನೆ ಕುಮಾರಸಂಭವದಲ್ಲಿಯೂ ಕಂಡುಬರುವುವು. ಇವುಗಳಲ್ಲದೆ ಇವೆರಡರಲ್ಲಿಯೂ ಸಮಾನಾರ್ಥಗಳನ್ನು ಕೊಡುವ ಬೇರೆ ಬೇರೆ ಶಬ್ದಗಳಿಂದ ಕೂಡಿದ ಅನೇಕ ಶ್ಲೋಕಗಳೂ ದೊರೆಯುವುವು. ಬುದ್ಧಚರಿತದಲ್ಲಿಯೂ ಹಾಗೆಯೇ ಕಂಡುಬರುವುದು. ಹೀಗೆ ಹೇಳುವುದರಿಂದ ಬುದ್ಧಚರಿತದಲ್ಲಿ ಕಲ್ಪನಾಚಾತುರ್ಯ ಸೌಂದರ್ಯವು ಇಲ್ಲದೆ ಇಲ್ಲ. ಕಾಳಿದಾಸನ ಕಲ್ಪನಾಶಕ್ತಿಯು ಅತ್ಯಂತ ಪ್ರತಿಭಾಶಕ್ತಿಯನ್ನುಳ್ಳದ್ದಾಗಿರುವುದು. ಅಶ್ವಘೋಷನ ಕಲ್ಪನಾಶಕ್ತಿಯು ಹಾಗೆ ಇರದೆ ಒಂದೇ ಸ್ಥಳದಲ್ಲಿ ಒಟ್ಟುಗೂಡಿಸಿ ಇಟ್ಟಂತೆ ತೋರುವುದು. ಇದೇ ಇವರಿಬ್ಬರಿಗೂ ಇರುವ ವೈಲಕ್ಷಣ್ಯ. ರಘುವಂಶದ ೭ನೆಯ ಸರ್ಗದ ಪುರಂಧ್ರಿಯರ ವರ್ಣನವೂ ಕುಮಾರಸಂಭವದ ೩ನೆಯ ಸರ್ಗದ ಕಾಮವರ್ಣನವೂ ಕ್ರಮವಾಗಿ ಬುದ್ಧಚರಿತೆಯ ೩ ಮತ್ತು ೧೩ನೆಯ ಸರ್ಗಗಳ ಅದೇ ವರ್ಣನೆಯನ್ನು ಹೋಲುವುದು. ರಘುವಂಶದ ೭ನೆಯ ಸರ್ಗದಲ್ಲಿ (೫–೧೩) ಇಂದುಮತಿಯಿಂದ ವರಿಸಲ್ಪಟ್ಟು ಸ್ವಯಂವರಮಂಟಪದಿಂದ ಬರುತ್ತಿರುವ ಅಜನನ್ನು ನೋಡಬೇಕೆಂಬ ತವಕದಿಂದ ಪತ್ತನಪುರಂಧ್ರಿಯರು ಗುಂಪುಗುಂಪಾಗಿ ನಿಂತು ಕಿಟಿಕಿಗಳಲ್ಲಿ ನೋಡುತ್ತಿದ್ದರೆಂಬುದನ್ನು ತೆಗೆದುಕೊಂಡು ಅಶ್ವಘೋಷನು ಬುದ್ಧಚರಿತದ ೩ನೆಯ ಸರ್ಗದಲ್ಲಿ ರಾಜಧಾನಿಗೆ ಬರುತ್ತಿರುವ ರಾಜಕುಮಾರನನ್ನು ನೋಡುವುದಕ್ಕೆ ರಮಣಿಯರು ಗುಂಪುಗುಂಪಾಗಿ ನಿಂತು ಕಿಟಿಕಿಗಳಲ್ಲಿ ನೋಡುತ್ತಿದ್ದರೆಂದು ಬಹು ಚಮತ್ಕಾರವಾಗಿ ವರ್ಣಿಸಿರುವನು. ಪ್ರೊ. ಕೊವೆಲ್ (Cowell) ಸಾಹೇಬರು–

ವಾತಾಯನೇಭ್ಯಶ್ಚ ವಿನಿಃಸೃತಾನಿ
ಪರಸ್ಪರೋಪಾಶ್ರಿತಕುಂಡಲಾನಿ ।
ಸ್ತ್ರೀಣಾಂ ವಿರೇಜುರ್ಮುಖಪಂಕಜಾನಿ
ಸಕ್ತಾನಿ ಹರ್ಮ್ಯೇಷ್ವಿವ ಪಂಕಜಾನಿ ॥ ೩—೧೯ ॥

ವಾತಾಯನಾನಾಮವಿಶಾಲಭಾವಾ
ದನ್ಯೋನ್ಯಗಂಡಾರ್ಪಿತಕುಂಡಲಾನಿ ।
ಮುಖಾನಿ ರೇಜುಃ ಪ್ರಮದೋತ್ತಮಾನಾಂ
ಬದ್ಧಾಃ ಕಲಾಪಾ ಇವ ಪಂಕಜಾನಾಂ ॥ ೩—೨೦ ॥

ಎಂಬ ಅಶ್ವಘೋಷನ ಬುದ್ಧಚರಿತದ ಶ್ಲೋಕಗಳನ್ನು ತೆಗದುಕೊಂಡು ಕಾಳಿದಾಸನು ರಘುವಂಶದಲ್ಲಿ—

ತಾಸಾಂ ಮುಖೈರಾಸವಗಂಧಗರ್ಭೈಃ
ವ್ಯಾಪ್ತಾಂತರಾಃ ಸಾಂದ್ರಕುತೂಹಲಾನಾಂ ।
ವಿಲೋಲನೇತ್ರಭ್ರಮರೈರ್ಗವಾಕ್ಷಾಃ
ಸಹಸ್ರಪತ್ರಾಭರಣಾ ಇವಾಸನ್ ॥ ರಘುವಂ. ೭—೧೧ ॥

ಎಂದು ಹೇಳಿಕೊಂಡಿರಬೇಕೆನ್ನುವರು. ಅಲ್ಲದೆ, ಕಾಳಿದಾಸನಿಗಿಂತಲೂ ಅಶ್ವಘೋಷನು ಮೊದಲಿನವನೆಂದು ಅಭಿಪ್ರಾಯ ಪಡುವರು.* ಡಾ॥ ಎಂಟರ್ ನಿಟ್ಸ್‌ರವರು ಕೂಡ ಇದೇ ಅಭಿಪ್ರಾಯಪಡುವರು.† ಇದು ಸಾಧುವಾಗಿ ತೋರುವುದಿಲ್ಲ. ಏಕೆಂದರೆ, ಅಶ್ವಘೋಷನು ಕಲ್ಪನಾಚಾತುರ್ಯವಿಚಾರದಲ್ಲಿ ಕಾಳಿದಾಸನಿಗೆ ಸರಿಹೋಗನೆಂದು ಮೊದಲೇ ಹೇಳಿದೆ. ಇದಲ್ಲದೆ ರಘುವಂಶಾದಿ ಕಾವ್ಯಕಾರನಾದ **ಕಾಳಿದಾಸನು** ಅಶ್ವಘೋಷನಿಗಿಂತಲೂ ಪೂರ್ವದವನೆಂತಲೂ ಆ ಕಾಳಿದಾಸನು **ಕ್ರಿ. ಪೂ.** ಒಂದನೆಯ ಶತಮಾನದವನೆಂತಲೂ ಅವನ ಜೀವನ ಚರಿತೆಯಲ್ಲಿ ಹೇಳಿರುವುದರಿಂದ ಕಾಳಿದಾಸನ ಕಾವ್ಯಗಳನ್ನು ನೋಡಿಯೇ ಅಶ್ವಘೋಷನು ಬರೆದಿರಬೇಕಾಗಿ ತೋರುತ್ತದೆ. ಬುದ್ಧಚರಿತೆಯಲ್ಲಿ ಸುದತಿಯರು ರಾಜಕುಮಾರನನ್ನು ಗುಂಪುಗುಂಪಾಗಿ ನೋಡುತ್ತಿದ್ದರೆಂಬುದು ಹೊರತು ಎಂಕ್ಕವುಗಳೆಲ್ಲವೂ ಕವಿಚಮತ್ಕಾರವಾಗಿರುವುದು.

ತಾಃ ಸ್ರಸ್ತಕಾಂಚೀಗುಣವಿಘ್ನಿತಾಶ್ಚ
ಸುಪ್ತಪ್ರಬುದ್ಧಾಕುಲಲೋಚನಾಶ್ಚ ।
ವೃತ್ತಾಂತವಿನ್ಯಸ್ತವಿಭೂಷಣಾಶ್ಚ
ಕೌತೂಹಲೇನಾಭಿಭೃತಾಃ ಪರೀಯುಃ ॥ ೩—೧೪ ॥

---

* G. R. N's Intro to Buddha Charita P. 17.

† Kalidasa has imitated the description of Asvaghosha. Buddhacharita III. 13–14 and Raghuvamsha VIII 5–12 Modern Review Oct. 1926.

ಎಂಬಲ್ಲಿ ರಾಜಕುಮಾರನನ್ನು ನೋಡಬೇಕೆಂದು ಸ್ತ್ರೀಯರು ತಮ್ಮ ತಮ್ಮ ಆಭರಣಗಳನ್ನು ವ್ಯತ್ಯಸ್ತವಾಗಿ ಅಲಂಕರಿಸಿಕೊಂಡು ಹೋಗುವ ಸಮಾರಂಭದಲ್ಲಿ ಒಡ್ಯಾಣವು ಜಾರಿಹೋದುದನ್ನು ಕೂಡ ನೋಡದೆ ಕೌತೂಹಲವಿಶಿಷ್ಟರಾಗಿ ಓಡಿದರೆಂದು ಹೇಳಿರುವನು. ಈ ವಿಚಾರವನ್ನು ಕುಮಾರ ಸಂಭವದಲ್ಲಿ ಕಾಳಿದಾಸನು—

ಯಶ್ಚಾಪ್ಸರೋವಿಭ್ರಮಮಂಡನಾನಾಂ
　ಸಂಪಾದಯಿತ್ರೀಂ ಶಿಖರೈರ್ಬಿಭರ್ತಿ ।
ಬಲಾಹಕಚ್ಛೇದವಿಭಕ್ತರಾಗಾ
　ಮಕಾಲಸಂಧ್ಯಾಮಿವ ಧಾತುಮತ್ತಾಂ ॥ ೧—೪ ॥ ಎಂದೂ

ಅವಸರವಸರದಿಂದ ಹೋಗುವ ವ್ಯಾಜದಲ್ಲಿ ಕಾಂಚೀದಾಮವು ಸಡಲಿ ಹೋಯಿತೆಂಬ ವಿಚಾರದಲ್ಲಿ—

ಸ್ರಸ್ತಾಂ ನಿತಂಬಾದವಲಂಬಮಾನಾ
　ಪುನಃ ಪುನಃ ಕೇಸರದಾಮಕಾಂಚೀಂ ।
ನ್ಯಾಸೀಕೃತಾಂ ಸ್ಥಾನವಿದಾ ಸ್ಮರೇಣ
　ಮೌರ್ವೀಂ ದ್ವಿತೀಯಾಮಿವ ಕಾರ್ಮುಕಸ್ಯ ॥ ೩—೫೫ ॥ ಎಂದೂ

ಹೇಳಿರುವುದನ್ನು ಅಶ್ವಘೋಷನ ಬುದ್ಧಚರಿತೆಯೊಡನೆ ಹೋಲಿಸಿ ನೋಡಿದರೆ ಬುದ್ಧಚರಿತೆಯ ಶ್ಲೋಕವು ಸ್ವಭಾವಸೌಂದರ್ಯಕ್ಕೆ ವಿರುದ್ಧವಾಗಿರುವಂತೆ ತೋರುವುದು. ಅಶ್ವಘೋಷನು ವರ್ಣಿಸಿರುವ ಈ ಶ್ಲೋಕಗಳು ಸಮಯಕ್ಕೆ ತಕ್ಕುವಾಗಿರುವುದಿಲ್ಲ. ಹೇಗೆಂದರೆ—

ತತೋ ನೃಪಸ್ತಸ್ಯ ನಿಶಮ್ಯ ಭಾವಂ
　ಪುತ್ರಾಭಿಧಾನಸ್ಯ ಮನೋರಥಸ್ಯ ।
ಸ್ನೇಹಸ್ಯ ಲಕ್ಷ್ಮ್ಯಾ ವಯಸಶ್ಚ ಯೋಗ್ಯಾ
　ಮಾಜ್ಞಾಪಯಾಮಾಸ ವಿಹಾರಯಾತ್ರಾಂ ॥ ೩—೩ ॥

ನಿವರ್ತಯಾಮಾಸ ಚ ರಾಜಮಾರ್ಗಾತ್
　ಸಂಪಾತಮಾರ್ತಸ್ಯ ಪೃಥಗ್ಜನಸ್ಯ ।
ಮಾಭೂತ್ಕುಮಾರಃ ಸುಕುಮಾರಚಿತ್ತಃ
　ಸಂವಿಗ್ನಚೇತಾ ಇವ ಮನ್ಯಮಾನಃ ॥ ೩—೪ ॥

ಪ್ರತ್ಯಂಗಹೀನಾನ್ವಿಕಲೇಂದ್ರಿಯಾಂಶ್ಚ
　ಜೀರ್ಣಾತುರಾದೀನ್ಕೃಪಣಾಂಶ್ಚ ಭಿಕ್ಷೂನ್ ।
ತತಃ ಸಮುತ್ಸಾರ್ಯ ಪರೇಣ ಸಾಮ್ನಾ
　ಶೋಭಾಂ ಪರಾಂ ರಾಜಪಥಸ್ಯ ಚಕ್ರುಃ ॥ ೩—೫ ॥

ಎಂದು ಹೇಳಿರುವುದರಿಂದ ರಾಜಕುಮಾರನು ಹೊರಡುವನೆಂಬುದು ಎಷ್ಟೋ ದಿವಸಗಳಿಂದ ಗೊತ್ತಿತ್ತು. ಅವಸರಕ್ಕೆ ಕಾರಣವೂ ಇರಲಿಲ್ಲ. ಇದಲ್ಲದೆ,

ತಥಾಕೃತೇ ಶ್ರೀಮತಿ ರಾಜಮಾರ್ಗೇ
ಶ್ರೀಮಾನ್ವಿನೀತಾನುಚರಃ ಕುಮಾರಃ ।
ಪ್ರಾಸಾದಪೃಷ್ಠಾದವತೀರ್ಯ ಕಾಲೇ
ಕೃತಾಭ್ಯನುಜ್ಞೋ ನೃಪಮಭ್ಯಗಚ್ಛತ್ ॥ ೩—೬ ॥

ಎಂದು ಹೇಳಿದೆಯಾದುದರಿಂದ ಹೊರಡತಕ್ಕ ಕಾಲವೂ ನಿಷ್ಕರ್ಷಿಸಲ್ಪಟ್ಟಿತ್ತು. ಮತ್ತು—

ಕೌತೂಹಲಾತ್ಸ್ಫೀತತರೈಶ್ಚ ನೇತ್ರೈಃ
ನೀಲೋತ್ಪಲಾಭೈರಿವ ಕೀರ್ಯಮಾಣಃ ।
ಶನೈಃ ಶನೈ ರಾಜಪಥಂ ಜಗಾಹೇ
ಪೌರೈಃ ಸಮಂತಾದಭಿವೀಕ್ಷ್ಯಮಾಣಃ ॥ ೩—೧೦ ॥

ಎಂದಿರುವುದರಿಂದ ರಾಜಪುತ್ರನ ರಥವು ನೋಡುವವರಿಗೆ ತೊಂದರೆಯಾಗದ ಹಾಗೆ ನಿಧಾನವಾಗಿ ಹೋಗುತ್ತಿತ್ತೆಂದು ಹೇಳಿದಂತಾಯಿತು. ದಾರಿಯಲ್ಲಿ ಬಂದು ನಿಂತು ನೋಡಲಾಗದಿದ್ದವರೂ ಮತ್ತು ಅನುಕೂಲಸ್ಥರಾದ ಇತರರೂ ತಮ್ಮ ತಮ್ಮ ಮನೆಯಲ್ಲಿರುವ ವೃದ್ಧರ ಅಪ್ಪಣೆಯನ್ನು ಪಡೆದು ರಾಜಕುಮಾರನನ್ನು ಕಿಟಿಕಿಗಳಲ್ಲಿ ನೋಡಲು ಹೊರಟರೆಂಬುದನ್ನು

ತತಃ ಕುಮಾರಃ ಖಲು ಗಚ್ಛತೀತಿ
ಶ್ರುತ್ವಾ ಸ್ತ್ರಿಯಃ ಪ್ರೇಷ್ಯಜನಾತ್ಪ್ರವೃತ್ತಿಂ ।
ದಿದೃಕ್ಷಯಾ ಹರ್ಮ್ಯತಲಾನಿ ಜಗ್ಮು
ರ್ಜನೇನ ಮಾನ್ಯೇನ ಕೃತಾಭ್ಯನುಜ್ಞಾಃ ॥ ೩—೧೩ ॥

ಎಂಬ ಶ್ಲೋಕವು ಹೇಳುವುದರಿಂದ ಎಲ್ಲವೂ ಅವಸರವಿಲ್ಲದೆ ನಿಧಾನವಾಗಿ ನಡೆಯಿತೆಂದು ಹೇಳಿದಂತಾಯಿತು. ಹೀಗೆ ಇರುವಾಗ ಇದ್ದಕ್ಕಿದ್ದ ಹಾಗೆ ಜನರು ಗಾಬರಿಗೊಂಡವರಂತೆ ನಿದ್ರೆಯಿಂದೆಚ್ಚತ್ತು ತಮ್ಮ ತಮ್ಮ ಉಡುಪುಗಳನ್ನು ಸರಿಪಡಿಸಿಕೊಳ್ಳುವ ನೆವದಲ್ಲಿ ಆಭರಣಗಳನ್ನು ವ್ಯತ್ಯಸ್ತವಾಗಿ ಇಟ್ಟುಕೊಂಡರೆಂದು ಹೇಳುವುದು ಅಸಮಂಜಸವಾಗಿಯೂ, ರಸಾಭಾಸವಾಗಿಯೂ ತೋರುವುದು. ರಾಜಕುಮಾರನು ಮಧ್ಯರಾತ್ರಿಯ ಅವೇಳೆಯಲ್ಲಿ ಹೊರಡಲಿಲ್ಲವಾಗಿ ಇಲ್ಲಿ ನಿದ್ರೆಗೆ ಕಾರಣವೇನು? ಇಂತಹ ವರ್ಣನೆಯು ಇಂತಹ ಸಂಭವದಲ್ಲಿ ಚಾತುರ್ಯಯುಕ್ತವಲ್ಲವೆಂದು ಅಶ್ವಘೋಷನಿಗೆ ಹೊಳೆಯದೇ ಹೋದುದರಿಂದಲೇ ಕಲ್ಪನಾಚತುರತೆಯಲ್ಲಿ ಕಾಳಿದಾಸನಿಗಿಂತಲೂ ಹಿಂದಾ

ಗಿರುವನೆಂದು ಹೇಳಬೇಕಾಗಿದೆ. ಬುದ್ಧಚರಿತೆಯು ಸರಳವೂ, ಯೋಗ್ಯವೂ, ನಿರ್ದುಷ್ಟಕಾವ್ಯವೂ ಆಗಿರುವುದಲ್ಲದೆ ಅನುಕರಣೀಯವೂ, ಬೋಧಪ್ರದವೂ ಆಗಿರುವುದು. ಇದು 'ಲಲಿತವಿಸ್ತರ' ಮತ್ತು 'ಮಹಾವಸ್ತು'ಕಾವ್ಯಗಳಂತೆ ಅತಿಶಯೋಕ್ತಿ ಮತ್ತು ಇತರ ಅಲಂಕಾರಾಡಂಬರಗಳಿಂದ ಕೂಡಿರದೆ ಸುಲಭವಾಗಿಯೂ ನೈಜವಾಗಿಯೂ ಬರೆಯಲ್ಪಟ್ಟಿರುವುದು. ಉದಾಹರಣೆಗಾಗಿ ರಾಜಕುಮಾರನ ವಿಹರಣ ವಿಚಾರಗಳನ್ನೊಳಕೊಂಡಿರುವ ಬುದ್ಧಚರಿತದ ೩-ಳನೆಯ ಅಧ್ಯಾಯಗಳನ್ನು ಲಲಿತವಿಸ್ತರಕಾವ್ಯಕ್ಕೆ ಹೋಲಿಸಿನೋಡಬಹುದು. ಬುದ್ಧಚರಿತದ ಶೈಲಿಯನ್ನು ನೋಡಿದರೆ ಅಶ್ವಘೋಷನನ್ನು 'ಪಟ್ಟಾಚಾರ್ಯ' (Monk)ನೆಂದು ಕರೆಯುವುದಕ್ಕಿಂತಲೂ 'ಮಹಾಕವಿ'ಯೆಂದು ಕರೆಯುವುದರಲ್ಲಿ ಅತಿಶಯೋಕ್ತಿಯಿರದು.

ಬುದ್ಧನು ವೈರಾಗ್ಯವನ್ನು ತಾಳಲು ಕಾರಣವೇನೆಂಬ ವಿಚಾರವನ್ನು ಅಶ್ವಘೋಷನು ಹೀಗೆಂದು ವರ್ಣಿಸಿರುವನು. ದೇವತೆಗಳಿಂದ ಕಳುಹಿಸಲ್ಪಟ್ಟ ವಯೋವೃದ್ಧನನ್ನು ನೋಡಿ ರಾಜಕುಮಾರನು ಸೂತನನ್ನು ಕುರಿತು—

> ಕ ಏಷ ಭೋಃ ಸೂತ ನರೋಽಭ್ಯುಪೇತಃ
> ಕೇಶೈಃ ಸಿತೈರ್ಯಷ್ಟಿವಿಷಕ್ತಹಸ್ತಃ ।
> ಭ್ರೂಸಂವೃತಾಕ್ಷಃ ಶಿಥಿಲಾನತಾಂಗಃ
> ಕಿಂ ವಿಕ್ರಿಯೈಷಾ ಪ್ರಕೃತಿರ್ಯದೃಚ್ಛಾ ॥ ೩—೨೮ ॥

ಎಲೈಯ್ಯ ಸೂತ! ನರೆತಕೂದಲುಗಳಿಂದಲೂ, ಗುಳಿಬಿದ್ದ ಕಣ್ಣುಗಳಿಂದಲೂ ಕೂಡಿ ಸೊಂಟವು ಬಗ್ಗಿಹೋಗಿ ನೆರಿಹಿಡಿದು ಸಡಿಲವಾದ ಅವಯವಗಳುಳ್ಳವನಾಗಿ ನಡೆಯುವುದಕ್ಕೆ ಕೂಡಾ ತ್ರಾಣವಿಲ್ಲದೆ ಕೋಲನ್ನು ಊರಿಕೊಂಡು ಅಲ್ಲಿ ಬರುವವನಾರು? ಇವನ ಹುಟ್ಟೇ ಹೀಗೋ? ಅಥವಾ ಮತ್ತಾವ ಕಾರಣದಿಂದಲಾದರೂ ಹೀಗೆ ಆಗಿರುವನೋ? ಎಂದು ಕೇಳಿದುದಕ್ಕೆ ಸೂತನು ವಿನಯದಿಂದ—

> ರೂಪಸ್ಯ ಹಂತ್ರೀ ವ್ಯಸನಂ ಬಲಸ್ಯ
> ಶೋಕಸ್ಯ ಯೋನಿರ್ನಿಧನಂ ರತೀನಾಂ ।
> ನಾಶಃ ಸ್ಮೃತೀನಾಂ ರಿಪುರಿಂದ್ರಿಯಾಣಾಂ
> ಏಷಾ ಜರಾ ನಾಮ ಯಯೈಷ ಭಗ್ನಃ ॥ ೩—೩೦ ॥

ಮಹಾರಾಜ! ಮುಪ್ಪು, ಮನುಷ್ಯನನ್ನು ಅರೂಪನನ್ನಾಗಿಯೂ ದುರ್ಬಲನನ್ನಾಗಿಯೂ ದುಃಖಿಯನ್ನಾಗಿಯೂ ಇಂದ್ರಿಯಪಾಟವವಿಲ್ಲದವನನ್ನಾಗಿಯೂ ಸ್ಮೃತಿಹೀನನನ್ನಾಗಿಯೂ ಮಾಡಿಬಿಡುತ್ತದೆ.

ಪೀತಂ ಹ್ಯನೇನಾಪಿ ಪಯಃ ಶಿಶುತ್ವೇ
ಕಾಲೇನ ಭೂಯಃ ಪರಿಮೃಷ್ಟಮುರ್ವ್ಯಾಂ ।
ಕ್ರಮೇಣ ಭೂತ್ವಾ ಚ ಯುವಾ ವಪುಷ್ಮಾನ್
ಕ್ರಮೇಣ ತೇನೈವ ಜರಾಮುಪೇತಃ ॥ ೩—೩೧ ॥

'ಅವನೂ ಶೈಶವದಲ್ಲಿ ಎಲ್ಲರಂತೆ ತಾಯಿಯ ಸ್ತನ್ಯದಿಂದ ಪೋಷಿತನಾಗಿ ಕಾಲ ಕ್ರಮದಲ್ಲಿ ಯೌವನದಿಂದ ಕೂಡಿ ಕ್ರಮೇಣ ಜರಾಗ್ರಸ್ತನಾಗಿ ಹೋಗಿರುವನು' ಎಂದನು.

ರಾಜಕುಮಾರನು ವಿಹಾರಕ್ಕೆಂದು ಮೂರಾವೃತ್ತಿ ಹೊರಟಾಗ ಹೀಗೆಯೇ ವಯೋಧಿಕನನ್ನೂ, ರೋಗಿಯನ್ನೂ, ಪ್ರೇತವನ್ನೂ ನೋಡಿ ವಿಚಾರಚಿತ್ತನಾದನು. ರಾಜನು ಕೇಳಿಕೊಂಡ ಮೇರೆಗೆ, ರಾಜಪುರೋಹಿತನು ಕುಮಾರನ ಮನಸ್ಸನ್ನು ಹಿಂದಿರುಗಿಸಲೆಷ್ಟು ಪ್ರಯತ್ನಿಸಿದರೂ ವ್ಯಸ್ತವಾಗಿ ಹೋಗಿರುವ ಚಿತ್ತವೃತ್ತಿಯು ಶಾಂತವಾಗಲಿಲ್ಲ. ರಾಜನು ಇದನ್ನು ತಿಳಿದು ತಾನು ತನ್ನ ಮಗನ ಮನಸ್ಸನ್ನು ಹಿಂದಿರುಗಿಸಲು ಸುರಸುಂದರಿಯರಂತಿರುವ ಹೆಂಗಳೆಯರನ್ನು ಕಳುಹಿಸಿದನು. ಅವರ ಹಾವಭಾವವಿಲಾಸಗಳೊಂದೂ ಫಲಕಾರಿಯಾಗದೆ, ಅವರ ಚೇಷ್ಟೆಗಳನ್ನು ನೋಡುತ್ತ ರಾಜಕುಮಾರನು ಸ್ತಂಭೀಭೂತನಾಗಿ ಮನಸ್ಸಿನಲ್ಲಿ "ಅಹಹ! ಇದೆಂತಹ ದಯಾಶೂನ್ಯ ಪ್ರಪಂಚ! ಕಾಡಿನಲ್ಲಿರುವ ಮರಗಳು ಮತ್ತೊಂದು ಮರದ ಹೂವು, ಮಿಡಿ, ಹೀಚು, ಕಾಯಿ, ಹಣ್ಣುಗಳು ಕೊಯ್ಯಲ್ಪಟ್ಟು ಕೊಡಲಿಯಿಂದ ಕಡಿಯಲ್ಪಟ್ಟು ನೆಲಕ್ಕೆ ಉರುಳುತ್ತಿರುವುವಾದರೂ ನೋಡಿ ನೋಡಿ ಕನಿಕರಗೊಳ್ಳದಂತೆ, ಲೋಕವು ನೆರೆಯುವನ ರೋಗ, ವಾರ್ಧಿಕ್ಯ, ಮರಣಗಳನ್ನು ನೋಡಿ ನೋಡಿಯೂ ಮರುಕಗೊಳ್ಳದಲ್ಲ!" ಎಂದು ಯೋಚಿಸುತ್ತಿದ್ದನು. ಹೀಗೆ ಹೇಳುವುದರಿಂದ ಈ ಗ್ರಂಥದಲ್ಲಿ ಶೃಂಗಾರರಸಪೋಷಣವಿಲ್ಲವೆಂದು ತಿಳಿಯಬಾರದು. ಕಾವ್ಯಗಳಲ್ಲಿ ಶೃಂಗಾರರಸವು ಪ್ರಧಾನವಾದುದು. ಆದುದರಿಂದ ನಮ್ಮ ಕವಿಯು ರಾಜಕುಮಾರನನ್ನು ಮೋಹಗೊಳಿಸಲೆತ್ನಿಸಲು ಬಂದ ಸುರಸುಂದರಿಯರ ಶೃಂಗಾರಚೇಷ್ಟೆಗಳನ್ನು ಬಹು ಚೆಲುವಾಗಿ ವರ್ಣಿಸಿರುವನು. ಆಸ್ಥಾನಪಂಡಿತನು ನೀತಿಶಾಸ್ತ್ರಕೋವಿದನಾಗಿರಬೇಕೆಂಬುದನ್ನು ರಾಜಪುರೋಹಿತನು ರಾಜಕುಮಾರನಿಗೆ ಹೇಳಿದಂತೆ ವರ್ಣಿಸಿರುವನು. ಯುದ್ಧರಂಗವಿಚಾರವು ಅಶ್ವಘೋಷನಿಗೆ ತಿಳಿಯದೆ ಇರಲಿಲ್ಲ. ಕವಿಯು ಬುದ್ಧನಿಗೂ, ಮಾರ ಮತ್ತು ಅವನ ಸೈನಿಕರಿಗೂ ನಡೆದ ಯುದ್ಧವಿಚಾರಗಳನ್ನು ಹೃದಯಂಗಮವಾಗಿರುವಂತೆ ೧೩ನೆಯ ಅಧ್ಯಾಯದಲ್ಲಿ ವರ್ಣಿಸಿರುವನು.

ಇವನ ಎರಡನೆಯ ಕಾವ್ಯಕ್ಕೆ 'ಸೌಂದರಾನಂದಕಾವ್ಯ'ವೆಂದು ಹೆಸರು. ಪರಸ್ಪರಪ್ರಣಯಮುಗ್ಧರಾದ ಸುಂದರಿ ಮತ್ತು ನಂದನ (ಇವನು ಬುದ್ಧನಿಗೆ ಸೋದರನಾಗಬೇಕು.) ಇವರು ವಿಷಯಸುಖವನ್ನು ಬಿಡಲಾರದುದನ್ನು ನೋಡಿ, ನಂದನನಿಗೆ ತತ್ತ್ವೋಪದೇಶದ ಮೂಲಕ ನಿರ್ವಾಣಾಮೃತವನ್ನು ಬುದ್ಧನು ಕುಡಿಸಿದನೆಂಬುದೇ ಕಥೆಯ ತತ್ತ್ವ. ನಂದನನು ಹೇಗೆ ಸುಂದರಿಯನ್ನು ಬಿಡಲಾರದೆ ಇದ್ದನೋ ಹಾಗೆಯೇ ಸುಂದರಿಯೂ ನಂದನನನ್ನು ಬಿಡಲಾರದಿದ್ದಳು. ಯಾರ ಬುದ್ಧಿವಾದವನ್ನೂ ಕೇಳಲಿಲ್ಲ. ಕೊನೆಗೆ ಬುದ್ಧನೇ ತನ್ನ ತಮ್ಮನ ಕೈಹಿಡಿದುಕೊಂಡು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವಾಗ ಹಿಮವತ್ಪರ್ವತದ ಮಾರ್ಗದಲ್ಲಿ ಕುರೂಪಿಯಾಗಿಯೂ ಏಕಾಕ್ಷಿಯಾಗಿಯೂ ಇದ್ದ ಕಪಿಯೊಂದನ್ನು ತೋರಿಸಿ ನಂದನ! ನಿನ್ನ ಸುಂದರಿಯು ಇದಕ್ಕಿಂತಲೂ ಸುಂದರಳಾಗಿರುವಳೇ? ಎಂದುದಕ್ಕೆ ನಂದನನು ಹೌದು ಎಂದನು. ಅನಂತರ ಸ್ವರ್ಗದಲ್ಲಿರುವ ಅಪ್ಸರೆಯರನ್ನು ನೋಡಿದಾಗ ಅವರಿಗೂ ತನ್ನ ಹೆಂಡತಿಗೂ, ತನ್ನ ಹೆಂಡತಿಗೂ ಆ ಕಪಿಗೂ ಇರುವ ಭೇದವು ಕಂಡುಬಂದು ಹೇಗಾದರೂ ಆ ಸುರಸುಂದರಿಯರನ್ನು ಹೊಂದಿ ಸುಖಿಸಲಾಶಿಸಿ ತಪವನ್ನಾಚರಿಸಿದನು. ಕಾಲಕ್ರಮದಲ್ಲಿ ಇಂತಹ ಸ್ವರ್ಗವೂ ಅಲ್ಲಿನ ವಸ್ತುಗಳೂ ಕ್ಷಣಿಕವೆಂಬುದು ಗೊತ್ತಾಗಿ ಬುದ್ಧನ ಬಳಿಗೆ ಬಂದು ಮಹಾತ್ಮನೆ! ನನಗೆ ಸ್ವರ್ಗದಲ್ಲಾಗಲಿ, ಸ್ವರ್ಗದಲ್ಲಿನ ಪದಾರ್ಥಗಳಲ್ಲಾಗಲಿ ಆಸೆಯಿಲ್ಲವೆಂದನು. ಬುದ್ಧನು ಇದನ್ನು ಕೇಳಿ ಸಂತೋಷಗೊಂಡು ಅವನಿಗೆ ತತ್ತ್ವೋಪದೇಶವನ್ನು ಮಾಡಿದನು. ಇದೇ ಅನೇಕ ಸರ್ಗಗಳಲ್ಲಿ ಅಡಗಿದೆ. ಅನಂತರ ನಂದನನು ಅರಣ್ಯದಲ್ಲಿ ತಪವನ್ನಾಚರಿಸಿ ಅರ್ಹತ್ಪದವಿಯನ್ನು ಹೊಂದಿ ಬುದ್ಧನ ಬಳಿಗೆ ಬಂದು ಕೃತಜ್ಞತೆಯಿಂದ ಬಿನ್ನವಿಸಲು, ಬುದ್ಧನು ಸಂತುಷ್ಟಾಂತರಂಗನಾಗಿ ನಂದನ! ನೀನೊಬ್ಬನು ಅರ್ಹತ್ಪದವಿಯನ್ನು ಹೊಂದಿದುದು ದೊಡ್ಡದಲ್ಲ; ಇದನ್ನು ಸಕಲರಿಗೂ ಬೋಧಿಸಿ ಅರ್ಹತ್ಪದವಿಗೆ ಯೋಗ್ಯರನ್ನಾಗಿ ಮಾಡಿ ಕೃತಕೃತ್ಯನಾಗೆಂದು ಹೇಳಿ ಕಳುಹಿಸಿದನು. ಬುದ್ಧಚರಿತೆಯನ್ನೂ ಸೌಂದರಾನಂದಕಾವ್ಯವನ್ನೂ ಪರಸ್ಪರ ಹೋಲಿಸಿ ನೋಡುವುದವಶ್ಯಕ. ಇವೆರಡೂ ಕಥಾಭಾಗದಲ್ಲಿ ಒಂದನ್ನೊಂದು ಹೋಲುವುವು. ಇವೆರಡರಲ್ಲಿಯೂ ಬುದ್ಧನ ಜೀವನಚರಿತವು ವರ್ಣಿತವಾಗಿರುವುದು. ಬುದ್ಧನು ಅರಮನೆಯನ್ನು ಬಿಟ್ಟುದು, ವಿದ್ಯಾಭ್ಯಾಸ, ವಿವಾಹ, ಧ್ಯಾನ, ಸಮಾಧಿಯೇ ಮೊದಲಾದುವು ಬುದ್ಧಚರಿತದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಸೌಂದರಾನಂದಕಾವ್ಯದಲ್ಲಿ ಎಲ್ಲಿಯೋ ಕೊಂಚವಾಗಿ ಹೇಳಲ್ಪಟ್ಟಿವೆ. ಕಪಿಲವಸ್ತುವನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ವಿಚಾರವಾಗಿ ಸೌಂದರಾನಂದಕಾವ್ಯದಲ್ಲಿ

ವಿಶದವಾಗಿ ಹೇಳಿದೆ. ಬುದ್ಧಚರಿತೆಯಲ್ಲಿ ಕೊಂಚವಾಗಿ ಹೇಳಿದೆ. ಬುದ್ಧಚರಿತೆಯಲ್ಲಿ ನಂದನನಿಗೆ ಆಶ್ರಮಸ್ವೀಕಾರವನ್ನು ಮಾಡಿಸಿದುದು ಮಾತ್ರವೇ ಹೇಳಲ್ಪಟ್ಟಿದೆ. ಸೌಂದರಾನಂದಕಾವ್ಯದಲ್ಲಿ ಪೂರ್ವಕಥಾವೃತ್ತಾಂತವು ಮೊದಲಿನಿಂದ ಸಾಂಗೋಪಾಂಗವಾಗಿ ಬರೆಯಲ್ಪಟ್ಟು ಪುಸ್ತಕವೇ ಮುಕ್ತಾಯವಾಗಿದೆ. ಪುರಾಣ, ಮತ್ತು ವೇದಗಳಲ್ಲಿ ಪ್ರತಿಪಾದಿತವಾಗಿರುವ ಹೆಸರು ಮತ್ತು ಉದಾಹರಣೆಗಳು ಇವುಗಳೆರಡರಲ್ಲಿಯೂ ಇರುವುದಾಗಿ ಕಂಡುಬರುತ್ತದೆ.

| | |
|---|---|
| ಪರಾಶರನ ಅಪಕರ್ಷತೆ (Failings) | ಬುದ್ಧಚರಿತ ೪–೭೬ |
| ,, ,, | ಸೌಂದರಾನಂದಕಾವ್ಯ ೭–೨೯ |
| ವಸಿಷ್ಠನ ಅಪಕರ್ಷತೆ | ಬುದ್ಧಚರಿತ ೪–೭೭ |
| ,, ,, | ಸೌಂದರಾನಂದಕಾವ್ಯ ೭–೨೮ |
| ಪಾಂಡುವಿನ ಅಪಕರ್ಷತೆ | ಬುದ್ಧಚರಿತ ೪–೭೯ |
| ,, ,, | ಸೌಂದರಾನಂದಕಾವ್ಯ ೭–೪೫ |
| ಕಾಶಿಯಲ್ಲಿ ವ್ಯಾಸರಿಗೆ ರೂಪಾಜೀವೆಯೊಬ್ಬಳ ಸಂಪರ್ಕದಿಂದುಂಟಾದ ತೊಂದರೆಗಳು | ಬುದ್ಧಚರಿತ ೪–೧೬ |
| ,, ,, | ಸೌಂದರಾನಂದಕಾವ್ಯ ೭–೩೦ |

ರಲ್ಲಿಯೂ ವರ್ಣಿತವಾಗಿವೆ. ಹೀಗೆಯೇ ಋಷ್ಯಶೃಂಗ, ಗೌತಮ, ವಿಶ್ವಾಮಿತ್ರರೇ ಮೊದಲಾದವರ ಅಪಕರ್ಷತೆಯು ಎರಡು ಕಾವ್ಯಗಳಲ್ಲಿಯೂ ಹೇಳಲ್ಪಟ್ಟಿದೆ. ಈ ಕಾವ್ಯಗಳೆರಡೂ ವೈದರ್ಭೀರೀತಿಯಲ್ಲಿ ಬರೆಯಲ್ಪಟ್ಟು ಪ್ರಸಾದಗುಣದೊಂದಿಗೆ ಕೂಡಿದೆ. ಸೌಂದರಾನಂದಕಾವ್ಯದ ಶೈಲಿಯನ್ನೂ ಬುದ್ಧಚರಿತದ ಶೈಲಿಯನ್ನೂ ಓದಿ ಪರಸ್ಪರ ತೋಲನಮಾಡಿ ನೋಡಿದರೆ ರಸಭೇದದಿಂದ ಬುದ್ಧಚರಿತದ ಶೈಲಿಯು ಕೊಂಚ ಮಟ್ಟಿಗೆ ಮಾರ್ದವಹೀನವಾಗಿರುವಂತೆ ಕಂಡು ಬರುವುದು. ಸೌಂದರಾನಂದಕಾವ್ಯದ ಭಾಷೆಯು ಸುಲಭವಾಗಿಯೂ, ಹೃದಯಂಗಮವಾಗಿಯೂ ಇರುವುದು. "ಉಪಮಾ ಕಾಳಿದಾಸಸ್ಯ" ಎಂದು ಹೇಳುವುದಾದರೆ ಅದಕ್ಕಿಂತಲೂ ಸೊಗಸೆನಿಸುವ ಈ ಎರಡು ಶ್ಲೋಕಗಳನ್ನು ಪರಸ್ಪರ ಹೋಲಿಸಿ ನೋಡಬಹುದು.

> ತಾಂ ಸುಂದರೀಂ ಚೇನ್ನ ಲಭೇತ ನಂದಃ
> ಸಾ ವಾ ನಿಷೇವೇತ ನತಂ ನತಭ್ರೂಃ ।
> ದ್ವಂದ್ವಂ ಧ್ರುವಂ ತದ್ವಿಕಲಂ ನ ಶೋಭೇ
> ತಾನ್ಯೋನ್ಯಹೀನಾವಿವ ರಾತ್ರಿಚಂದ್ರೌ ॥ ಎಂಬುದನ್ನು

ಪರಸ್ಪರೇಣಸ್ಪೃಹಣೀಯಶೋಭಂ
ನಚೇದಿದಂ ದ್ವಂದ್ವ ಪ್ರಯೋಜಯಿಷ್ಯತ್ ।
ಅಸ್ಮಿನ್ ದ್ವಯೇ ರೂಪವಿಧಾನಯತ್ನಃ
ಪತ್ಯುಃ ಪ್ರಜಾನಾಂ ವಿತಥೋಭವಿಷ್ಯತ್ ॥ ಎಂಬುದರೊಡನೆಯೂ
ತಂ ಗೌರವಂ ಬುದ್ಧಗತಂ ಚಕರ್ಷ
ಭಾರ್ಯಾನುರಾಗಃ ಪುನರಾಚಕರ್ಷ ।
ಸೋನಿಶ್ಚಯಾನ್ನಾಪಿ ಯಯೌ ನ ತಸ್ಥೌ
ತರಂಸ್ತರಂಗೇಷ್ವಿವ ರಾಜಹಂಸಃ ॥ ಎಂಬುದನ್ನು
ಮಾರ್ಗಾಚಲವ್ಯತಿಕರಾಕುಲಿತೇವ ಸಿಂಧುಃ
ಶೈಲಾಧಿರಾಜತನಯಾ ನ ಯಯೌ ನ ತಸ್ಥೌ ॥
ಎಂಬುದರೊಡನೆಯೂ ಹೋಲಿಸಿದರೆ ಪರಸ್ಪರ ವ್ಯತ್ಯಾಸವು ಚೆನ್ನಾಗಿ ಕಾಣು ವುದು.

ಬುದ್ಧಚರಿತವಲ್ಲಿ ಬುದ್ಧಮತದ ಸಾಂಕೇತಿಕ (Technical terms) ಶಬ್ದಗಳು ಹೇರಳವಾಗಿರುವುವು. ಸೌಂದರಾನಂದಕಾವ್ಯದಲ್ಲಿ ಬುದ್ಧಮತ ವೇದಾಂತತತ್ತ್ವಗಳು ಬಹು ಸುಲಭವಾಗಿ ವಾಡಿಕೆಯಲ್ಲಿರುವ ಉಪಮಾನೋಪ ಮೇಯಗಳಿಂದ ಕೂಡಿ ಚೆಲುವಾಗಿರುವುವು. ಅಶ್ವಘೋಷನು ಮಹಾಯಾನ ಪಥಕ್ಕೆ* ಉತ್ತೇಜಕನೆಂದು ಬುದ್ಧಚರಿತದ (XVI 28–29) ಶ್ಲೋಕಗಳಿಂದ ತಿಳಿಯಬರುತ್ತದೆ. ಈ ವಿಚಾರದಲ್ಲಿ ಈ ಪಥಕ್ಕೆ ಮೂಲಕಾರಣನು ಈತನೇ ಎಂದು ಅನೇಕರು ಹೇಳುವರು. ಮಹಾಯಾನಪಥದ ಮೂಲಕಾರಣವನ್ನು ಕಂಡುಹಿಡಿದವನು ನಾಗಾರ್ಜುನ. ಅಶ್ವಘೋಷನು ಮಹಾಯಾನಪಥವನ್ನ ವಲಂಬಿಸಿ 'ಮಹಾಯಾನಶ್ರದ್ಧೋತ್ಪಾದ'ವೆಂಬ ಶಾಸ್ತ್ರವನ್ನು ಬರೆಯುವುದಕ್ಕೆ ಮುಂಚಿತವಾಗಿಯೇ 'ಲಂಕಾವತಾರಸೂತ್ರ' 'ಶ್ರೀಮಾಲಸೂತ್ರ'ಗಳೆಂಬ ಮಹಾ ಯಾನ ಗ್ರಂಥಗಳನೇಕಗಳು ರಚಿತವಾಗಿದ್ದುವು. ಇದರಿಂದ ನಾಗಾರ್ಜುನನು ಮಹಾಯಾನದ ಯಾವುದೋ ಒಂದು ಉಪಪಂಗಡವನ್ನು ಕಂಡುಹಿಡಿದಿರಬಹು ದಾಗಿ ಊಹಿಸಬಹುದಾಗಿದೆ.

ಅಶ್ವಘೋಷನ ಮೂರನೆಯ ಗ್ರಂಥವು "ಸೂತ್ರಾಲಂಕಾರ." ಇದು ಚೀನಾಭಾಷೆಗೆ ಪರಿವರ್ತಿಸಲ್ಪಟ್ಟಿರುವುದು. ಕ್ರಿ. ಶ. ಸುಮಾರು ೪೦೫ರಲ್ಲಿ ಫ್ರೆಂಚುಭಾಷೆಗೆ ಪರಿವರ್ತಿಸಲ್ಪಟ್ಟಿರುವುದು. ಇದರಲ್ಲಿ 'ಹೀನಯಾನಪಥ'ದ ಅನೇಕ ಕಥೆಗಳಿರುವುವು. ಈ ಕಥೆಗಳು ಬುದ್ಧನ 'ಜಾತಕ' ಮತ್ತು 'ಅವದಾನ' ಗಳಿಂದ ತೆಗೆಯಲ್ಪಟ್ಟುಗದ್ಯಪದ್ಯಗಳಿಂದ ಕೂಡಿದುವುಗಳಾಗಿವೆ. ಅನೇಕ ಕಥೆಗಳು ಬಹು ಪುರಾತನವಾದುದಾಗಿ ಎಲ್ಲರಿಗೂ ತಿಳಿವುವುಗಳಾಗಿವೆ. ಉದಾಹರಣೆಗಾಗಿ

* 'ಮಹಾಯಾನ' ಮತ್ತು 'ಹೀನಯಾನ' ಇವು ಬುದ್ಧಮತದ ಶಾಖೆಗಳು.

ದೀರ್ಘಾಯು ಮತ್ತು ಶಿಬಿಯ ಕಥೆಗಳು ಸಾಕೆಂದು ತೋರುವುವು. ಉಳಿದುವು ಮಹಾಯಾನದ ರೀತಿಯನ್ನು ಹೋಲುವುವು. ಇದರ ೫೭ನೆಯ ಕಥೆಯು ಮಾದರಿಯಾಗಿರುವುದಲ್ಲದೆ ಉಳಿದ ಎಲ್ಲಾ ಕಥೆಗಳಿಗಿಂತಲೂ ಸುಂದರವಾಗಿರುವುದು. 'ಸೂತ್ರಾಲಂಕಾರ'ವು ಬುದ್ಧಚರಿತೆಗಿಂತ ಈಚಿನದು. ಇದರಲ್ಲಿ ಬುದ್ಧಚರಿತದ ಕೆಲವು ಶ್ಲೋಕಗಳು ಉದಹರಿಸಲ್ಪಟ್ಟಿರುವುವು. ಇದರ ಎರಡು ಕಥೆಗಳಲ್ಲಿಯೂ ಕನಿಷ್ಕರಾಜನ ಪ್ರಸ್ತಾಪವಿರುವುದು.

'ವಜ್ರಸೂಚಿಯು' ಇವನದೆಂದು ಹೇಳುವುದಕ್ಕೆ ಸರಿಯಾದ ಆಧಾರಗಳು ದೊರೆತಿಲ್ಲ. ಇದು ಚೀನಾಭಾಷೆಗೆ (ಕ್ರಿ. ಶ. ೯೭೩–೯೮೧)ಪರಿವರ್ತಿಸಲ್ಪಟ್ಟು ಚೀನೆಯರ ತ್ರಿಪಿಟಕಗಳಲ್ಲಿ ಸೇರಿಸಲ್ಪಟ್ಟಿತೆಂದೂ ಇದನ್ನು ಬರೆದವನು 'ಧರ್ಮಕೀರ್ತಿ'ಯೆಂತಲೂ ತಿಳಿಯಬರುತ್ತದೆ.

ಇವಲ್ಲದೆ ಅಶ್ವಘೋಷನು "ಸರಿಪುತ್ರಪ್ರಕರಣ"* ಎಂಬ ನಾಟಕವನ್ನು ಬರೆದಿರುವನೆಂದೂ ತಿಳಿಯಬರುವುದು.

ಬುದ್ಧಚರಿತೆಯ ಶ್ಲೋಕಗಳ ಕೆಲವು ಉದಾಹರಣೆಗಳು—

**ನಾವಜಾನಾಮಿ ವಿಷಯಾನ್ ಜಾನೇ ಲೋಕಂ ತದಾತ್ಮಕಂ ।**
**ಅನಿತ್ಯಂ ತು ಜಗನ್ಮತ್ವಾ ನಾತ್ರ ಮೇ ರಮತೇ ಮನಃ ॥ ೪—೮೫ ॥**

ಲೋಕವೆಲ್ಲವೂ ವಿಷಯಾತ್ಮಕವಾಗಿರುವುದರಿಂದ ವಿಷಯಗಳನ್ನು ನಾನು ಅವಹೇಳನಮಾಡುವುದಿಲ್ಲ. (ಎಂದರೆ ವಿಷಯಗಳು ಸ್ವರೂಪತಃ ದುಷ್ಟವಲ್ಲವೆಂದೂ, ಅವುಗಳಲ್ಲಿನ ಅಭಿಮಾನದಿಂದ ತನ್ಮಯವಾಗುವುದೇ ದೋಷವೆಂದೂ ಅಭಿಪ್ರಾಯ.) ಈ ವಿಶ್ವವು ಅಶಾಶ್ವತವೆಂದು ತಿಳಿದ ನನ್ನ ಮನಸ್ಸು ಇಂತಹ ವಿಷಯಗಳಲ್ಲಿ ಅನುರಕ್ತವಾಗುವುದಿಲ್ಲ.

**ಜರಾ ಮೃತ್ಯುಶ್ಚ ವ್ಯಾಧಿಶ್ಚ ಯದಿ ನ ಸ್ಯಾದಿದಂ ತ್ರಯಂ ।**
**ಮಮಾಪಿ ಹಿ ಮನೋಜ್ಞೇಷು ವಿಷಯೇಷು ರತಿರ್ಭವೇತ್ ॥**

ಜರಾ, ವ್ಯಾಧಿ, ಮೃತ್ಯು ಈ ಮೂರು ಇಲ್ಲದೆ ಇದ್ದಪಕ್ಷದಲ್ಲಿ ಮನೋಹರವೆಂದು ತೋರುತ್ತಿರುವ ಈ ವಿಷಯಗಳಲ್ಲಿ ನನಗೂ ಆಸಕ್ತಿಯುಂಟಾಗುತ್ತಿತ್ತು.

**ಯದಾ ತು ಜರಯಾ ಪೀತಂ ರೂಪಮಾಸಾಂ ಭವಿಷ್ಯತಿ ।**
**ಆತ್ಮನೋಽಪ್ಯನಭಿಪ್ರೇತಂ ಮೋಹಾತ್ತತ್ರ ರತಿರ್ಭವೇತ್ ॥**

---

* Kavindra-vachana-samuchaya, Intro. P. 25.

ವಿಷಯಸ್ವರೂಪಗಳು ತಪ್ಪಿಹೋಗುವುದು ಇಷ್ಟವಲ್ಲದಿದ್ದರೂ ಮುಪ್ಪಿನಿಂದ ನಷ್ಟವಾಗುವುದಾದುದರಿಂದ ಅಂತಹ ವಿಷಯಗಳಲ್ಲಿ ಮಮತ್ವವು ಅಜ್ಞಾನದಿಂದುಂಟಾಗುವುದು.

**ತದೇವಂ ಸತಿ ದುಃಖಾರ್ತಂ ಜರಾಮರಣಭೋಗಿನಂ |**
**ನ ಮಾಂ ಕಾಮೇಷ್ವನಾರ್ಯೇಷು ಪ್ರತಾರಯಿತುಮರ್ಹಸಿ || ೪—೯೬ ||**

ಆದುದರಿಂದ ಎಲೈ ಸ್ವಾಮಿಯೆ! ದುಃಖಾರ್ತನಾಗಿ ಮುಪ್ಪು ಮತ್ತು ಮರಣಗಳಿಗೆ ಈಡಾಗಿರತಕ್ಕ ನನ್ನನ್ನು ಇಂತಹ ಅಯುಕ್ತಕಾರ್ಯಗಳಲ್ಲಿ ಪ್ರವರ್ತಕನಾಗದ ಹಾಗೆ ಕಾಪಾಡಲು ನೀನು ಅರ್ಹನಾಗಿರುವೆ.

## ಶೂದ್ರಕ

ಇವನು ‘**ಮೃಚ್ಛಕಟಿಕ**’ವೆಂಬ ಹತ್ತು ಅಂಕಗಳುಳ್ಳ ನಾಟಕವನ್ನು ಬರೆದಿರುವನು. ಇವನ ವಿಚಾರವಾಗಿ ಪ್ರಸ್ತಾವನೆಯಲ್ಲಿ—

ಅಲಮನೇನ ಪರಿಷತ್ಕುತೂಹಲವಿಮರ್ದಕಾರಿಣಾ ಪರಿಶ್ರಮೇಣ, ಏವಮಹಮಾರ್ಯಮಿಶ್ರಾನ್ಪ್ರಣಿಪತ್ಯ ವಿಜ್ಞಾಪಯಾಮಿ–ಯದಿದಂ ವಯಂ ಮೃಚ್ಛಕಟಿಕಂ ನಾಮ ಪ್ರಕರಣಂ ಪ್ರಯೋಕ್ತುಂ ವ್ಯವಸಿತಾಃ ! ಏತತ್ಕವಿಃ ಕಿಲ—

**ದ್ವಿರದೇಂದ್ರಗತಿಶ್ಚಕೋರನೇತ್ರಃ**
**ಪರಿಪೂರ್ಣೇಂದುಮುಖಃ ಸುವಿಗ್ರಹಶ್ಚ |**
**ದ್ವಿಜಮುಖ್ಯತಮಃ* ಕವಿರ್ಬಭೂವ**
**ಪ್ರಥಿತಃ ‘ಶೂದ್ರಕ’ ಇತ್ಯಗಾಧಸತ್ತ್ವಃ || ೩ ||**

ಅಪಿ ಚ—

**ಋಗ್ವೇದಂ ಸಾಮವೇದಂ ಗಣಿತಮಥ ಕಲಾಂ ವೈಶಿಕೀಂ ಹಸ್ತಿಶಿಕ್ಷಾಂ**
**ಜ್ಞಾತ್ವಾ ಶರ್ವಪ್ರಸಾದಾದ್ವ್ಯಪಗತತಿಮಿರೇ ಚಕ್ಷುಷೀ ಚೋಪಲಭ್ಯ |**
**ರಾಜಾನಂ ವೀಕ್ಷ್ಯ ಪುತ್ರಂ ಪರಮಸಮುದಯೇನಾಶ್ವಮೇಧೇನ ಚೇಷ್ಟ್ವಾ**
**ಲಬ್ಧ್ವಾ ಚಾಯುಃ ಶತಾಬ್ದಂ ದಶದಿನಸಹಿತಂ ಶೂದ್ರಕೋಽಗ್ನಿಂ ಪ್ರವಿಷ್ಟಃ||೪||**

* ‘ತ್ರಯೋವರ್ಣಾ ದ್ವಿಜಾತಯಃ’ ಎಂಬ ಸ್ಮೃತ್ಯುಕ್ತಿಪ್ರಕಾರ ಇಲ್ಲಿ ‘ದ್ವಿಜಮುಖ್ಯತಮಃ’ ಎಂಬುದಕ್ಕೆ ‘ಕ್ಷತ್ರಜಾತಿಶ್ರೇಷ್ಠಃ’ ಎಂದರ್ಥ. (ಮೃಚ್ಛಕಟಿಕವ್ಯಾಖ್ಯಾನ ಪುಟ ೨)

ಅಪಿ ಚ—

ಸಮರವ್ಯಸನೀ ಪ್ರಮಾದಶೂನ್ಯಃ
ಕಕುದೋ ವೇದವಿದಾಂ ತಪೋಧನಶ್ಚ ।
ಪರವಾರಣಬಾಹುಯುದ್ಧಲುಬ್ಧಃ
ಕ್ಷಿತಿಪಾಲಃ ಕಿಲ ಶೂದ್ರಕೋ ಬಭೂವ ॥ ೫ ॥

ಎಂದು ಹೇಳಿರುವುದರಿಂದ ಮಹಾವಿದ್ಯಾವಂತನೂ ಪರಾಕ್ರಮಿಯೂ ಕ್ಷತ್ರಿಯೋತ್ತಮನೂ ಕವಿಯೂ ಆದ **ಶೂದ್ರಕ**ನೆಂಬ ರಾಜನು ಅವಂತಿ*ಯಲ್ಲಿ ಒಂದು ನೂರುವರ್ಷ ಮತ್ತು ಹತ್ತುದಿನಗಳು ರಾಜ್ಯಭಾರವಮಾಡಿ ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ ತಾನು ಅಗ್ನಿಪ್ರವೇಶವನ್ನುಮಾಡಿದುದಾಗಿ ತಿಳಿಯುಬರುತ್ತೆ. ಇವನ ಮಗನು ಯಾರು? ಹೆಸರೇನು? ಎಂಬ ವಿಚಾರವಾಗಲಿ, ಇವನು ರಾಜ್ಯವನ್ನು ಮಗನಿಗೆ ಯಾವಾಗ ಕೊಟ್ಟನೆಂಬ ವಿಚಾರವಾಗಲಿ ಎಲ್ಲಿಯೂ ಹೇಳಿರುವುದಿಲ್ಲ. ವಾಮನನು ತಾನು ಬರೆದಿರುವ 'ಕಾವ್ಯಾಲಂಕಾರಸೂತ್ರವೃತ್ತಿ'ಯಲ್ಲಿ—

"ಶೂದ್ರಕಾದಿರಚಿತಪ್ರಬಂಧೇ ಅಸ್ಯ ಭೂಯಾನ್ ಪ್ರಪಂಚೋ ದೃಶ್ಯತೇ ।"

ಎಂದು ಹೇಳಿರುವುದರಿಂದ **ಶೂದ್ರಕ**ನು ಕವಿಯೆಂದು ಹೇಳಿದಂತಾಯಿತು. ಸಂಸ್ಕೃತವಾಙ್ಮಯದಲ್ಲಿ 'ಶೂದ್ರಕ'ನೆಂಬ ಹೆಸರಿನವರು ಈ ಮೂರು ಜನರು ದೊರೆಯುವರು—

(೧) ಮಹಾಕವಿ ಬಾಣನು ತನ್ನ ಕಾದಂಬರಿಯಲ್ಲಿ ಹೇಳಿರುವ ಶೂದ್ರಕ.
(೨) ಯಕ್ಷಪಾಲನ ಪಿತಾಮಹನಾದ ಗಯುದ ಶೂದ್ರಕ.†
(೩) ಸ್ಕಾಂದಪುರಾಣದ ಕುಮಾರಿಕಾಖಂಡದಲ್ಲಿ ಕಲಿ ೩೨೯೦ನೆಯ ವರ್ಷದಲ್ಲಿ ಹುಟ್ಟುವನೆಂದು ಹೇಳಿರುವ ಶೂದ್ರಕ.

ಇವರಲ್ಲಿ 'ಮೃಚ್ಛಕಟಿಕ'ಕಾರನಾದ ಶೂದ್ರಕನು ಯಾವನೆಂಬುದು ತಿಳಿಯಬೇಕಾಗಿದೆ.

(೧) ಇವನು ಮೃಚ್ಛಕಟಿಕೆಯ ಶೂದ್ರಕನಲ್ಲ. ಹೇಗೆಂದರೆ— ಬಾಣನು ತನ್ನ ಕಾದಂಬರಿಯಲ್ಲಾಗಲಿ ಅಥವಾ ತನ್ನ ಇತರ ಗ್ರಂಥಗಳಲ್ಲಾಗಲಿ ಮೃಚ್ಛಕಟಿಕದ ವಿಚಾರವಾಗಿ ಹೇಳದಿರುವುದರಿಂದಲೂ ಮತ್ತು ಬಾಣನು ಕ್ರಿ. ಶ. ಏಳನೆಯ ಶತಮಾನದವನಾದುದರಿಂದಲೂ ಮೃಚ್ಛಕಟಿಕಕಾರನಾದ ಶೂದ್ರಕನು ಬಾಣನು ಹೇಳುವ ಶೂದ್ರಕನಿಗಿಂತ ಪ್ರಾಚೀನನಾಗಿರಬೇಕು.

* 'ಅವಂತೀ ವಿಶಾಲಾ ಚೋಜ್ಜಯಿನ್ಯಪಿ' ಅವಂತೀ, ವಿಶಾಲ ಇವು ಉಜ್ಜಯಿನಿಗೆ ಹೆಸರುಗಳು. (ನಾಮಲಿಂಗಾನುಶಾಸನ. ಪುರವರ್ಗ)

†The Indian Antiquary. 1909. Vol. 38. P. 248.

(೨) ಇವನು ಸಾಮಾನ್ಯಮನುಷ್ಯನಾಗಿದ್ದನೇಹೊರತು ರಾಜನಾಗಿರಲಿಲ್ಲ.

(೩) ಇವನನ್ನು ಮೃಚ್ಛಕಟಿಕಕಾರನೆಂದು ಹೇಳಲು ಕೆಲವು ಆಧಾರಗಳು ದೊರೆತಿವೆ. ಕಲಿ ೩೨೯೦ನೆಯ ವರ್ಷವೆಂದರೆ ಕ್ರಿ. ಶ. ೧೯೦ ಆಗುವುದು. ಮಗಧದೇಶದಲ್ಲಿ ಆಳಿದ ಆಂಧ್ರವಂಶದ ಕೊನೆಯ ಅರಸನಾದ 'ಪುಲಿಮತ'ನೆಂಬು ವನು ಕ್ರಿ. ಶ. ೬೪೮ರಲ್ಲಿ ಮೃತನಾದನು. ಇವನಿಗೆ ಹಿಂದೆ ಎಂದರೆ ಸುಮಾರು ಕ್ರಿ. ಶ. ೪೫೬ ವರ್ಷಗಳ ಹಿಂದೆ ಆಂಧ್ರರಾಜರ ಮೊದಲನೆಯರಸನು ಆಳಿದನೆಂದು ಪ್ರೊ. ಏಲಾಫರ್ಡ್‌ರವರು ಹೇಳಿರುವರು. ಆಂಧ್ರರಾಜರ ಮೊದಲನೆಯ ಅರಸನ ಕಾಲವೂ (ಕ್ರಿ. ಶ. ೧೯೨) ಕುಮಾರಿಕಾಖಂಡದಲ್ಲಿ ಹೇಳಿರುವ ಶೂದ್ರಕನ ಕಾಲವೂ (ಕ್ರಿ. ಶ. ೧೯೦) ಒಂದೆರಡು ಸಂವತ್ಸರಗಳ ವ್ಯತ್ಯಾಸ ದಿಂದ ಸರಿಹೋಗುವುದಾದುದರಿಂದ ಕುಮಾರಿಕಾಖಂಡದಲ್ಲಿ ಹೇಳಿರುವ ಶೂದ್ರ ಕನೇ ಮೃಚ್ಛಕಟಿಕಕಾರನಾದ ಶೂದ್ರಕನೆಂದೂ ಇವನ ಕಾಲವು ಕ್ರಿ. ಶ. ೧೯೨ ಆಗಿರಬೇಕೆಂದೂ ಊಹಿಸಬೇಕಾಗಿದೆ.* ತ್ರ್ಯಂಬಕಗುರುನಾಥಕಾಳೆ ಯವರು ಬುದ್ಧನ ಕಾಲದಲ್ಲಿ 'ಶ್ರಾವಸ್ತಿ'ನಗರದಲ್ಲಿ ಆಳುತ್ತಿದ್ದ ಸೂರ್ಯ ವಂಶದ ರಾಜನಾದ ಪ್ರಸೇನಜಿತ್ತೆಂಬುವನಿಗೆ ಶೂದ್ರಕ ಅಥವಾ ಕ್ಷುದ್ರಕನೆಂಬ ಮಗನಿದ್ದಿರಬೇಕೆಂದೂ ಉಜ್ಜಯಿನಿಯಲ್ಲಿ ರಾಜ್ಯಕ್ರಾಂತಿಯುಂಟಾಗಿದ್ದಾಗ 'ಆರ್ಯಪಾಲಕ'ನೆಂಬುವನು ಗಾದಿಯನ್ನೇರಿ ರಾಜ್ಯಭಾರವನ್ನು ನಡೆಸುತ್ತಿ ದ್ದನೆಂದೂ ಆರ್ಯಪಾಲಕನು ಪ್ರದ್ಯೋತನ ಮಗ ಪಾಲಕನಾಗಿರಬಹು ದೆಂದೂ ಇವನು ಕ್ರಿ. ಶ. ೬ನೆಯ ಶತಮಾನಕ್ಕೆ ಹಿಂದೆ ಮಹಾವೀರವರ್ಧಮಾನನ ಕಾಲದಲ್ಲಿ ರಾಜ್ಯಾಭಿಷಿಕ್ತನಾದನೆಂದೂ† ಒಕ್ಕಣಿಸಿರುವರು. ಇದಕ್ಕೆ ಸರಿ ಯಾದ ಆಧಾರಗಳನ್ನು ಇವರು ಕೊಟ್ಟಿರುವುದಿಲ್ಲ. 'ಸೂರ್ಯಚಂದ್ರವಂಶಾನು ಚರಿತಗ್ರಂಥ' (ಪು. ೨)ದಲ್ಲಿ ಪ್ರಸೇನಜಿತ್ತೆಂಬುವನ ಮಗ ಯುವನಾಶ್ವನೆಂದಿದೆ. ಪ್ರೊ. ಹಾರ್ವಿಟ್ಸರು ಮೃಚ್ಛಕಟಿಕವನ್ನು ಶೂದ್ರಕರಾಜನ ಆಳ್ವಿಕೆಯಲ್ಲಿ ಅವನ ಆಶ್ರಯದಲ್ಲಿದ್ದ ಯಾವನೋ ಒಬ್ಬ ಕವಿಯು ಬರೆದು ರಾಜನ ಹೆಸರಿನಲ್ಲಿ ಅಂಕಿತ ಮಾಡಿರಬೇಕೆಂದೂ ಶೂದ್ರಕನು ಕ್ರಿ. ಶ. ಸುಮಾರು ಆರನೆಯ ಶತಮಾನದಲ್ಲಿ ಆಳಿರಬೇಕೆಂದೂ‡ ಹೇಳುವರು. ಪ್ರೊ. ಮ್ಯಾಗ್ಡೊನೆಲ್‌ರವರು ಮೃಚ್ಛಕಟಿಕ ನಾಟಕವನ್ನು ದಂಡಿಯು ಬರೆದು ಶೂದ್ರಕನ ಹೆಸರಿನಲ್ಲಿ ಅಂಕಿತಮಾಡಿರುವು ದಾಗಿಹೇಳಿ ಇದು ಕ್ರಿ. ಶ. ೬ನೆಯ ಶತಮಾನದಲ್ಲಿರಬಹುದೆಂದು ಹೇಳಿರುವರು.$

---

* Prof. Wilson's translation. Intro. to Mrichakatika P. 5

† ಟಿ. ಜಿ. ಕಾಳೆಯವರ ಮಹಾರಾಷ್ಟ್ರಭಾಷೆಯಲ್ಲಿನ 'ಸಂಸ್ಕೃತಕವಿಚರಿತ್ರೆ' ಪುಟ ೬೭.

‡ The Indian theatre by E. P. Harrwitz P. 78.

$ Macdonell's History of Sanskrit Literature P. 361.

ಕ್ರಿ. ಶ. ೬ನೆಯ ಶತಮಾನದಲ್ಲಿ ಶೂದ್ರಕನೆಂಬ ಹೆಸರಿನ ರಾಜನು ಆಳಿದುದಾಗಿ ಚರಿತ್ರೆಗಳಿಂದಾಗಲಿ, ಮೃಚ್ಛಕಟಿಕವನ್ನು ದಂಡಿಯು ಬರೆದುದಾಗಿ ಅವನ ಗ್ರಂಥಗಳಿಂದಾಗಲಿ ತಿಳಿದು ಬರುವುದಿಲ್ಲ. ದಂಡಿಯು ಆರನೆಯ ಶತಮಾನದವನು. ಇವನ ಗ್ರಂಥದ ಶೈಲಿಗೂ ಮೃಚ್ಛಕಟಿಕದ ಶೈಲಿಗೂ ಅಜಗಜಾಂತರವಿರುವುದು. ದಂಡಿಯು ಮೃಚ್ಛಕಟಿಕವನ್ನು ತಾನು ಬರೆದಿರುವುದಾಗಿ ಹೇಳದೆ ಹೋಗಿದ್ದರೂ ಕ್ರಿ. ಶ. ಏಳನೆಯ ಶತಮಾನದ ಕವಿಗಳಲ್ಲಾರಾದರೂ ಇಂತಹ ಉತ್ಕೃಷ್ಟನಾಟಕದ ವಿಚಾರವಾಗಿ ತಮ್ಮ ಗ್ರಂಥಗಳಲ್ಲಿ ಹೇಳಬಹುದಾಗಿದ್ದಿತು. ಮೃಚ್ಛಕಟಿಕನಾಟಕವು ಬೌದ್ಧರ ಉತ್ಕರ್ಷಕಾಲವನ್ನು ಹೇಳುವುದು. ದಂಡಿಯು ಕಾಲದಲ್ಲಿ ಬೌದ್ಧರ ಪ್ರಾಬಲ್ಯವು ಅಷ್ಟಿರಲಿಲ್ಲ. ಕನಿಷ್ಕನ ತರುವಾಯ ಎಂದರೆ ಕ್ರಿ. ಶ. ಎರಡನೆಯ ಶತಮಾನದಿಂದೀಚೆಗೆ ಬೌದ್ಧಮತಪ್ರಾಬಲ್ಯವು ಕ್ಷೀಣಿಸಿ ಬ್ರಾಹ್ಮಣ ಮತ್ತು ಜೈನರ ಉತ್ಕರ್ಷಮಧ್ಯದಲ್ಲಿ ಆಂದೋಳನವಾಡುತ್ತಿತ್ತು. ಪ್ರೊ. ಮ್ಯಾಗ್ಡೊನೆಲ್‌ರವರಾಗಲಿ, ಅವರು ಹೇಳಿರುವ ಮಿ. ಪಿಚಲ್‌ರವರಾಗಲಿ ತಮ್ಮ ಹೇಳಿಕೆಯನ್ನು ಸರಿಯಾದ ಕಾರಣಗಳಿಂದ ಸಮರ್ಥಿಸಿರುವುದಿಲ್ಲ. ಆದುದರಿಂದ ಮೃಚ್ಛಕಟಿಕವು ಕ್ರಿ. ಶ. ಎರಡನೆಯ ಶತಮಾನದಲ್ಲಿ ಬರೆಯಲ್ಪಟ್ಟಿರಬೇಕೆಂದು ಹೇಳಬೇಕಾಗಿದೆ. ಮತಿಪುರದಲ್ಲಿ ಒಬ್ಬ ಶೂದ್ರರಾಜನು ಇದ್ದುದಾಗಿ ತಿಳಿಯಬರುತ್ತದೆ.* ಈ ಮತಿಪುರವು ಯಾವುದೆಂಬುದು ತಿಳಿಯದು. ಶೂದ್ರಕನು ಸಕಲವೇದವೇದಾಂಗಗಳನ್ನೂ ತಿಳಿದವನಾಗಿ ಅಗ್ನಿಪ್ರವೇಶಮಾಡಿದುದು ವಿಧಿವಿಹಿತವೆಂಬುದಾಗಿ ಹೇಳಲ್ಪಟ್ಟಿರುವುದು. ಹೇಗೆಂದರೆ ಕರ್ಮನಿಷ್ಠನಾದವನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಕೊನೆಯಲ್ಲಿ 'ಸರ್ವಸ್ವಾರ'ವೆಂಬ ಯಜ್ಞವನ್ನು ಮಾಡಿ ಅಗ್ನಿಪ್ರವೇಶಮಾಡಬಹುದು.†

ಮೃಚ್ಛಕಟಿಕದ ನಾಯಕನಾದ ಚಾರುದತ್ತನು ಗೃಹಸ್ಥಾಶ್ರಮನಿಷ್ಠಾಗರಿಷ್ಠನಾದ ಬ್ರಾಹ್ಮಣನಾಗಿದ್ದು ಆಶ್ರಮಧರ್ಮವಿರುದ್ಧವಾದ ವಾಣಿಜ್ಯವೃತ್ತಿಯನ್ನು ಸ್ವೀಕರಿಸಿದುದಲ್ಲದೆ ವಸಂತಸೇನಾತತ್ಪರನಾದುದು ಕುಟುಂಬಧರ್ಮಕ್ಕೆ ಲೋಪವೆಂದು ತೋರುವುದು. ಇದನ್ನು ಪರ್ಯಾಲೋಚಿಸಿದರೆ ಪರಸ್ತ್ರೀ, ಅದರಲ್ಲಿಯೂ ಶೂದ್ರಸ್ತ್ರೀ, ಅದರಲ್ಲೂ ವೇಶ್ಯಾಸ್ತ್ರೀಯನ್ನು ಮೋಹಿಸುವುದು ಪಾತಕವೆಂದೂ ಉಳಿದವರ್ಣತ್ರಯಗಳಲ್ಲಿ ಸಂಪರ್ಕಮಾಡುವುದು ದೂಷ್ಯವೆಂದೂ; ವರ್ಣಾಶ್ರಮಧರ್ಮಗಳು ಹೀಗೆಯೇ ಸರಿಯೆಂದೂ ಮತ್ತು ಇಂತಹ

---

* ಭರತಖಂಡದಪೂರ್ವವೃತ್ತ ಪುಟ ೭೨.

† ಮೃಚ್ಛಕಟಿಕವ್ಯಾಖ್ಯಾನ— ಕಾವ್ಯಮಾಲಾ, ಪುಟ ೩.

ಕೃತ್ಯಗಳು ಹೇಯವೆಂದೂ ಪಾಪಕರವೆಂದೂ ನೀತಿಮಾರ್ಗ ವಿರುದ್ಧವೆಂದೂ ಸಾರುವ ಸಮಾಜ ಸ್ಮೃತಿಪುರಾಣಗಳು ಹುಟ್ಟುವುದಕ್ಕಿಂತಲೂ ಮೊದಲೇ 'ಮೃಚ್ಛಕಟಿಕ'ವು ಬರೆಯಲ್ಪಟ್ಟಿರಬೇಕೆಂದು ತೋರುವುದು.

ಶೂದ್ರಕನು ಮೃಚ್ಛಕಟಿಕನಾಟಕವಲ್ಲದೆ "ಪದ್ಮಪ್ರಾಭೃತಕ"ವೆಂಬ ಭಾಣವನ್ನು ರಚಿಸಿರುವನು. ಇದು ಒಂದೇ ಅಂಕವುಳ್ಳದ್ದಾಗಿಯೂ ಶೃಂಗಾರ ರಸಪ್ರಧಾನವಾಗಿಯೂ ಇರುವುದು. ಇದರಲ್ಲಿ ಸೂಳೆಗೇರಿಯ ವರ್ಣನವಿರುವುದು. ಶೂದ್ರಕನು ಇದನ್ನು ತನ್ನ ಪೂರ್ವವಯಸ್ಸಿನಲ್ಲಿ ಬರೆದಿರಬಹುದು.

ಮೃಚ್ಛಕಟಿಕವು ರೂಪಕಭೇದದಲ್ಲಿ ಪ್ರಕರಣಕ್ಕೆ ಸೇರಿದುದು. ಚಾರುದತ್ತನ ಮಗನಾದ ರೋಹಸೇನನು ತನಗೊಂದು ಸ್ವರ್ಣಶಕಟವನ್ನು ಕೊಡೆಂದು 'ರದನಿಕೆ' (ದಾಸಿ)ಯನ್ನು ಕೇಳಿದುದಕ್ಕೆ ಅವಳು ಒಂದು ಮಣ್ಣಿನಗಾಡಿಯನ್ನು ತರಿಸಿಕೊಟ್ಟಳೆಂಬುದನ್ನು ಆಧಾರವಾಗಿಟ್ಟುಕೊಂಡು ಕಥೆಯನ್ನು ಬಹು ಜಾಣ್ಮೆಯಿಂದ ಜೋಡಿಸಿ ಆಗಣ ಸಾಮಾಜಿಕ, ಔದ್ಯೋಗಿಕ, ನೈತಿಕ, ರಾಜಕೀಯ, ವ್ಯವಹಾರ, ಲೋಕನಡತೆಗಳು ಮೂರ್ತೀಭವಿಸಿ ಕಾಣುವಂತೆ ಬರೆಯಲ್ಪಟ್ಟಿರುವುವು. (ಮೃಚ್ಛಕಟಿಕ ಆರನೆಯ ಅಂಕ)

**ಕಥಾಸಾರಾಂಶ—** ಪ್ರಸಿದ್ಧವಾದ ಉಜ್ಜಯಿನಿಯಲ್ಲಿ ಸುಂದರಾಂಗಿಯಾದ 'ವಸಂತಸೇನೆ'ಯೆಂಬೋರ್ವ ವೇಶ್ಯೆಯು ಅದೇ ಊರಿನ ಸದ್ಗುಣಿಯೂ, ಬ್ರಾಹ್ಮಣನೂ ದರಿದ್ರನೂ ಆದ 'ಚಾರುದತ್ತ'ನೆಂಬುವನಲ್ಲಿ ಗುಣಲುಬ್ಧಳಾಗಿ ಒಂದಾನೊಂದು ದಿನ ರಾತ್ರಿ ರಾಜಬೀದಿಯಲ್ಲಿ ಬರುತ್ತ ಶಕಾರ (ರಾಜನ ಮೈದುನ)ನಿಂದ ಪೀಡಿಸಲ್ಪಟ್ಟವಳಾಗಿ ಚಾರುದತ್ತನ ಮನೆಯನ್ನು ಸೇರಿ ಪುನಃ ಆಭರಣಗಳೊಡನೆ ತನ್ನ ಮನೆಗೆ ಹೋಗುವುದು ಸರಿಯಲ್ಲವೆಂದು ತಿಳಿದು ಚಾರುದತ್ತನ ಬಳಿಯಲ್ಲೇ ತನ್ನ ಆಭರಣಗಳನ್ನಿಟ್ಟು ಹೋದುದನ್ನು ಚೋರಾಗ್ರಣಿಯಾದ ಶರ್ವಿಲಕನು ತಿಳಿದು ಚಾರುದತ್ತನ ಮನೆಗೆ ಕನ್ನವನ್ನಿಟ್ಟು ಆ ಒಡವೆಗಳನ್ನು ಸಂಗ್ರಹಿಸಿ ತಾನು ಅನುರಕ್ತನಾಗಿದ್ದ ವಸಂತಸೇನೆಯ ದಾಸಿಯಾದ ಮದನಿಕೆಗೆ ತಂದುಕೊಡುವನು. ನಿರ್ಭಾಗ್ಯನಾದ ಚಾರುದತ್ತನು ಆಭರಣಗಳೆಲ್ಲ ಕಳುವಾಗಿ ಹೋಗಿರುವುದನ್ನು ಕಂಡು ಲೋಕಾಪವಾದಕ್ಕಂಜಿ ಆ ಒಡವೆಗಳಿಗೆ ಬದಲು ತನ್ನ ಹೆಂಡತಿಯ ರತ್ನಹಾರವನ್ನು ವಸಂತಸೇನೆಗೆ ಕಳುಹಿಸಿಕೊಡುವನು. ಅವಳು ಅದನ್ನು ತೆಗೆದುಕೊಂಡು ಚಾರುದತ್ತನೊಡನೆ ಆ ರಾತ್ರಿಯನ್ನು ಸುಖವಾಗಿ ಕಳೆದು ಪುಷ್ಪಕರಂಡಕವೆಂಬ ಜೀರ್ಣೋದ್ಯಾನಕ್ಕೆ ಚಾರುದತ್ತನು ತನ್ನನ್ನು ಬರಹೇಳಿರುವುದಾಗಿ ತಿಳಿದು ಅಲ್ಲಿಗೆ ಹೋಗುವುದಕ್ಕಾಗಿ ಗಾಡಿಯನ್ನು

ತಾರೆಂದು ವರ್ಧಮಾನಕನಿಗೆ ಹೇಳಿಕಳುಹಿಸಿ ತಾನು ಹೊರಗೆ ಬಂದು, ಸಿದ್ಧವಾಗಿ ನಿಂತಿರುವ ಗಾಡಿಯು ದುರಾತ್ಮನಾದ ಶಕಾರನದೆಂದು ತಿಳಿಯದೆ ತನ್ನ ಗಾಡಿಯೆಂದು ತಿಳಿದು ಅದರಲ್ಲಿ ಕುಳಿತು ಉದ್ಯಾನದ ಬಳಿಗೆ ಹೋಗಿ ಅಲ್ಲಿಗೆ ಬಂಡ ಶಕಾರನನ್ನು ತಿರಸ್ಕರಿಸಿಮಾತನಾಡಿ ಅವನಿಂದ ಪೆಟ್ಟು ತಿಂದು ಕುತ್ತಿಗೆ ಹಿಸುಕಲ್ಪಟ್ಟು ತರಗೆಲೆಗಳ ಮಧ್ಯದಲ್ಲಿ ಹಾಕಲ್ಪಟ್ಟಿರಲು, ಹಿಂದೆ ಜೂಜುಗಾರನಾಗಿದ್ದು ಜೂಜಿನಲ್ಲಿ ಹತ್ತು ಮೊಹರೆಗಳನ್ನು ಸೋತು ಕೊಡುವುದಕ್ಕೆ ಗತಿಯಿಲ್ಲದೆ ಸಂಗಡಿಗರಿಂದ ಪೆಟ್ಟುತಿಂದು ವಸಂತಸೇನೆಯಿಂದ ಉಪಕೃತನಾಗಿ ಲೋಕಬಾಳಿಕೆಯಲ್ಲಿ ವಿರಕ್ತನಾಗಿ ಬೌದ್ಧಸನ್ಯಾಸಿಯಾಗಿದ್ದ ಸಂವಾಹಕನು ವಸಂತಸೇನೆಯ ಸ್ಥಿತಿಯನ್ನು ನೋಡಿ ಉಪಚರಿಸಿ ಅವಳನ್ನು ಊರಿನೊಳಕ್ಕೆ ಕರೆದುಕೊಂಡು ಹೋಗುತ್ತಿರುವಾಗ, ಆಭರಣಗಳ ಆಸೆಯಿಂದ ಚಾರುದತ್ತನು ವಸಂತಸೇನೆಯನ್ನು ಕೊಂದುಹಾಕಿರುವನೆಂದು ಶಕಾರನಿಂದ ಗುಲ್ಲುಮಾ[illegible] ರಾಜಾಸ್ಥಾನದಲ್ಲಿಯೂ ಹಾಗೆಯೇ ತೀರ್ಮಾನಿಸಲ್ಪಟ್ಟು ಶೂಲ[illegible]ಮಾಡಿಸಲು ವಧ್ಯಸ್ಥಾನದಬಳಿಗೆ ಕರೆದುಕೊಂಡು ಹೋಗುವಷ್ಟರಲ್ಲಿ [illegible]ವಾಹಕನೊಡನೆ ಬರುತ್ತಿದ್ದ ವಸಂತಸೇನೆಯು ವಧ್ಯಸ್ಥಾನಕ್ಕೆ ಹೋಗುತ್ತಿರುವ ಜನಸಂದಣಿಯನ್ನು ರಾಜಮಾರ್ಗದಲ್ಲಿ ನೋಡಿ ಚಾರುದತ್ತನ ವೃತ್ತಾಂತವನ್ನು ತಿಳಿದು ವಧ್ಯಸ್ಥಾನಕ್ಕೆ ಓಡಿಬಂದು ತನ್ನ ವೃತ್ತಾಂತವೆಲ್ಲವನ್ನೂ ಹೇಳಿ ಚಾರುದತ್ತನನ್ನು ಶೂಲಾರೋಪಣದಿಂದ ಬಿಡಿಸಿಕೊಂಡು ಅವನೊಡನೆ ಸುಖವಾಗಿದ್ದಳು.

ಮೃಚ್ಛಕಟಿಕವು ಭಾಸಮಹಾಕವಿಯ 'ದರಿದ್ರಚಾರುದತ್ತ'ವೆಂಬ ನಾಟಕವನ್ನು ಹೋಲುವುದು. ಭಾಸಮಹಾಕವಿಯು ಶೂದ್ರಕನಿಗಿಂತಲೂ ಅತ್ಯಂತ ಪ್ರಾಚೀನನು. ಇವನು 'ಚಾರುದತ್ತ'ವೆಂಬ ನಾಲ್ಕು ಅಂಕಗಳುಳ್ಳ ನಾಟಕವನ್ನು ಬರೆದಿರುವನು. ಚಾರುದತ್ತನಾಟಕದ ಕಥೆಯು ಪೂರ್ತಿಯಾಗದೆ ಅಭಿಸಾರಿಕಳಾದ ವಸಂತಸೇನೆಯು ಶೃಂಗರಿಸಿಕೊಂಡು ಚಾರುದತ್ತನ ಬಳಿಗೆ ಹೋಗಲು ಅನುವಾದಳು. ಎಂಬಲ್ಲಿಗೆ—

> "ನಿಷ್ಕ್ರಾಂತೇ ಇತಿ ಅಭಿಸರಣಪ್ರಸ್ಥಾನೇನ ಚತುರ್ಥಾಂಕಃ
> ಪರಿಸಮಾಪಿತಃ ।"ಎಂದು ಮುಗಿಸಲ್ಪಟ್ಟಿದೆ.

ಚಾರುದತ್ತವು ಅಪೂರ್ಣವಾಗಿದೆ. ಮೃಚ್ಛಕಟಿಕವು ಸಂಪೂರ್ಣವಾಗಿದೆ. ಕಥಾನಾಯಕನಾಯಕಿಯರು ಎರಡರಲ್ಲಿಯೂ ಒಂದೇ. ಇವೆಲ್ಲವನ್ನೂ ನೋಡಿದರೆ ಶೂದ್ರಕನು ಭಾಸನ ಚಾರುದತ್ತನಾಟಕವನ್ನೇ ಆಧಾರವಾಗಿಟ್ಟುಕೊಂಡು ಮೃಚ್ಛಕಟಿಕವನ್ನು ಬರೆದಿರುವುದಾಗಿ ತೋರುತ್ತದೆ. ಚಾರುದತ್ತನಾಟಕದಲ್ಲಿ

ರುವುದಕ್ಕಿಂತಲೂ ಹೃದಯಂಗಮವಾದ ಮತ್ತು ಅದರಲ್ಲಿ ಇಲ್ಲದ ಅನೇಕ ಸುಂದರವಾದ ಶ್ಲೋಕಗಳು ಮೃಚ್ಛಕಟಿಕದಲ್ಲಿರುವುವು. ಇದನ್ನು ನೋಡಿದರೆ ನಾಗರಿಕಪ್ರಪಂಚಕ್ಕೆ ಸರಿಯಾಗಿರಬೇಕೆಂದು ಹಳೆಯ ಮನೆಯನ್ನು ಅಲ್ಲಲ್ಲಿ ಕೊಂಚ ಮಾರ್ಪಡಿಸಿ ಹಳೆಯ ಸಾಮಾನುಗಳ ಜತೆಗೆ ಇನ್ನು ಕೊಂಚ ಗಟ್ಟಿ ತರದ ಸಾಮಾನುಗಳನ್ನು ಹಾಕಿ ಹೊಸದಾಗಿ ಕಾಣುವಂತೆ ಕಟ್ಟಿದ ಮನೆಯಂತೆ, ಚಿಕ್ಕದೂ ಅಪೂರ್ಣವೂ ಆದ ಭಾಸನ ಚಾರುದತ್ತನಾಟಕವನ್ನು ಶೂದ್ರಕನು ದೊಡ್ಡದಾಗಿಯೂ ಭವ್ಯವಾಗಿಯೂ ಸುಂದರವಾಗಿಯೂ ಮಾಡಿ **ಮೃಚ್ಛಕಟಿಕ**ವೆಂದು ಕರೆದಿರಬಹುದಾಗಿ ತೋರುತ್ತದೆ.

ಚಾರುದತ್ತದ ಶ್ಲೋಕಗಳಲ್ಲಿ ಕೆಲವನ್ನು ಕೊಂಚ ಕೊಂಚ ಬದಲಾಯಿಸಿ ಮೃಚ್ಛಕಟಿಕದಲ್ಲಿ ಬರೆದಿರುವುದಕ್ಕೆ ಕೆಲವು ಉದಾಹರಣೆಗಳು—

ಚಾರುದತ್ತ ಒಂದನೆಯ ಅಂಕ—

**ಯಾಸಾಂ ಬಲಿರ್ಭವತಿ ಮದ್ಗೃಹದೇಹಲೀನಾಂ**
**ಹಂಸೈಶ್ಚ ಸಾರಸಗಣೈಶ್ಚ ವಿಭಕ್ತಪುಷ್ಪಃ ।**
**ತಾಸ್ವೇವ ಪೂರ್ವಬಲಿರೂಢಯವಾಂಕುರಾಸು**
**ಬೀಜಾಂಜಲಿಃ ಪತತಿ ಕೀಟಮುಖಾವಲೀಢಃ ॥**

ಮೃಚ್ಛಕಟಿಕ ಒಂದನೆಯ ಅಂಕ—

**ಯಾಸಾಂ ಬಲಿಃ ಸಪದಿ ಮದ್ಗೃಹದೇಹಲೀನಾಂ**
**ಹಂಸೈಶ್ಚ ಸಾರಸಗಣೈಶ್ಚ ವಿಲುಪ್ತಪೂರ್ವಃ ।**
**ತಾಸ್ವೇವ ಸಂಪ್ರತಿ ವಿರೂಢತೃಣಾಂಕುರಾಸು**
**[illegible]ಜಾಂಜಲಿಃ ಪತತಿ ಕೀಟಮು[illegible]ವಲೀಢಃ ॥ ೧—೯ ॥**

ಚಾರುದತ್ತ ಮ[illegible]ಯ ಅಂಕ—

**[illegible]ಪ್ಲವನೇ ವೃಕೋಪಸರಣೇ ಶ್ಯೇನೋ ಗೃಹಾಲೋಕನೇ**
**[illegible]ಸುಪ್ತಮನುಷ್ಯವೀರ್ಯತುಲನೇ ಸಂಸರ್ಪಣೇ ಪನ್ನಗಃ ।**
**[illegible]ಮಾ ವರ್ಣ[illegible]ಶರೀರಭೇದಕರಣೇ ವಾಗ್ದೇಶಭಾಷಾಂತರೇ**
**ದೀಪೋ ರಾತ್ರಿಷು ಸಂಕಟೇ ಚ ತಿಮಿರಂ ವಾಯುಸ್ಥಲೇ ನೌರ್ಜಲೇ ॥**

ಮೃಚ್ಛಕಟಿಕ ಮೂರನೆಯ ಅಂಕ—

**ಮಾರ್ಜಾರಃ ಕ್ರಮಣೇ ಮೃಗಃ ಪ್ರಸರಣೇ ಶ್ಯೇನೋ ಗ್ರಹಾಲುಂಚನೇ**
**ಸುಪ್ತಾಸುಪ್ತಮನುಷ್ಯವೀರ್ಯತುಲನೇ ಶ್ವಾ ಸರ್ಪಣೇ ಪನ್ನಗಃ ।**
**ಮಾಯಾ ರೂಪಶರೀರವೇಷರಚನೇ ವಾಗ್ದೇಶಭಾಷಾಂತರೇ**
**ದೀಪೋ ರಾತ್ರಿಷು ಸಂಕಟೇಷು ಡುಡುಮೋ ವಾಜೀ ಸ್ಥಲೇ ನೌರ್ಜಲೇ॥೩-೨೦॥**

ಚಾರುದತ್ತ ನಾಲ್ಕನೆಯ ಅಂಕ—

ವಿಷಾದಸ್ರಸ್ತಸರ್ವಾಂಗೀ
ಸಂಭ್ರಮೋತ್ಫುಲ್ಲಲೋಚನಾ ।
ಮೃಗೀವ ಶರವಿದ್ಧಾಂಗೀ
ಕಂಪಸೇ ಚಾನುಕಂಪಸೇ ॥

ಮೃಚ್ಛಕಟಿಕ ನಾಲ್ಕನೆಯ ಅಂಕ—

ವಿಷಾದಸ್ರಸ್ತಸರ್ವಾಂಗೀ
ಸಂಭ್ರಮಭ್ರಾಂತಲೋಚನಾ ।
ನೀಯಮಾನಾ ಭುಜಿಷ್ಯಾತ್ವಂ
ಕಂಪಸೇ ನಾನುಕಂಪಸೇ ॥

ಇವುಗಳಲ್ಲದೆ ಎಷ್ಟೋ ಶಬ್ದಗಳೂ ವಾಕ್ಯಗಳೂ ಚಾರುದತ್ತನಾಟಕದಲ್ಲಿರುವಂತೆಯೇ ಮೃಚ್ಛಕಟಿಕನಾಟಕದಲ್ಲೂ ಕಂಡುಬರುವುವು. ಗ್ರಂಥವಿಸ್ತರಭಯದಿಂದ ಎಲ್ಲವನ್ನೂ ಹೇಳಿರುವುದಿಲ್ಲ.

ಇವೆರಡರ ಪರಸ್ಪರಭೇದಗಳು—

| ಚಾರುದತ್ತದಲ್ಲಿ— | ಮೃಚ್ಛಕಟಿಕದಲ್ಲಿ— |
|---|---|
| ಕಥಾನಾಯಕಿಯಾದ ವಸಂತಸೇನೆಯು ಶಕಾರ ಮತ್ತು ವಿಟ ಈ ಇಬ್ಬರಿಂದ ಹಿಂಬಾಲಿಸಲ್ಪಟ್ಟಿರುವಳು. | ಈ ಇಬ್ಬರ ಜತೆಗೆ ಚೇಟನೊಬ್ಬನು ಸೇರಿ ಮೂರು ಜನರಿಂದ ಹಿಂಬಾಲಿಸಲ್ಪಟ್ಟಿರುವಳು. |
| ಈ ಪಾತ್ರಗಳು ಇರುವುದಿಲ್ಲ. | ಮಾಥುರಿಕ, ದ್ಯೂತಕಾರ ಮತ್ತು ದುರ್ದರಕ ಈ ಪಾತ್ರಗಳು ಇರುವುವು. |
| ಪರಿವ್ರಾಟನೆಂದಿದೆ. | ಸಂವಾಹಕನು ಶಾಕ್ಯಶ್ರಮಣಕನಾದನೆಂದಿದೆ. |

ಮೂರನೆಯ ಅಂಕದ ಎರಡರ ವಿಚಾರವೂ ಒಂದೇಯಾಗಿದೆ.

| | |
|---|---|
| ನಾಲ್ಕನೆಯ ಅಂಕದಲ್ಲಿ ವಿದೂಷಕನು ಮದನಿಕೆ,ಶರ್ವಿಲಕರ ಭಾಷಣಾನಂತರ ವಸಂತಸೇನೆಯ ಬಳಿಗೆ ಬರುವನು. ಶರ್ವಿಲಕನು ವಿದೂಷಕನು ಹೊರಟುಹೋದನಂತರ ವಸಂತಸೇನೆಯನ್ನು ಪುನಃ ನೋಡುವನು. | ಮೃಚ್ಛಕಟಿಕದಲ್ಲಿ ಹೀಗೆ ಇರುವುದಿಲ್ಲ. |
| ಶಕಾರನ ಹೇಳಿಕೆಯೆಂದು ಅಸಂಬದ್ಧವಾದ ಮೂರುಶ್ಲೋಕಗಳು ಮಾತ್ರವೇ ಕಂಡುಬರುವುವು. | ಇನ್ನೂ ಹೆಚ್ಚಾಗಿರುವುವು. |

| ವಸಂತಸೇನೆಯ ಗೃಹವರ್ಣನೆಯು ಮಿತವಾಗಿ ವರ್ಣಿಸಲ್ಪಟ್ಟಿರುವುದು. | ಬಹಳ ಹೆಚ್ಚಾಗಿ ಬರೆಯಲ್ಪಟ್ಟಿರುವುದು |
|---|---|

**ಪಾತ್ರಪ್ರಯೋಜನ—** ನಾಯಕ ಚಾರುದತ್ತನ ಪಾತ್ರ— ದಾನಿಯು ಕಾಲಕ್ರಮದಲ್ಲಿ ಧನಹೀನನಾಗಿ ರಿಕ್ತಹಸ್ತನಾದರೂ ಎಂತಹ ಕಷ್ಟವು ಸಂಭವಿಸಿದರೂ ತನ್ನಲ್ಲಿದ್ದುದನ್ನು ಕೊಡಲು ಹಿಂದೆಗೆಯನು. "ಕರ್ಣಪೂರಕ! ಇದಂ ತೇ ಪಾರಿತೋಷಿಕಂ!" ಎಂದು ಹೊದ್ದಿರುವ ಉತ್ತರೀಯವನ್ನೂ ಆಭರಣವನ್ನೂ ಕೊಡುವನು. ಲೋಕಾಪವಾದಕ್ಕಂಜಿ ತನಗೆ ತಿಳಿಯದೆ ಕಳುವಾಗಿರುವ ವಸಂತಸೇನೆಯ ಆಭರಣಗಳಿಗೆ ಪ್ರತಿಯಾಗಿ ತನ್ನ ರತ್ನದ ಹಾರವನ್ನು ಕಳುಹಿಸಿ ಕೊಟ್ಟಿರುವನು. ಚಾರುದತ್ತನೂ ವಿದೂಷಕನೂ ತೋಟದ ವೃಕ್ಷವಾಟಿಕೆಯ ಬಳಿ ಕುಳಿತಿರುವಾಗ ಚೇಟನು ವಸಂತಸೇನಾಗಮನವನ್ನು ವಿದೂಷಕನಿಗೆ ತಿಳಿಯದಹಾಗೆ ಗೋಪ್ಯವಾಗಿ ಚಾರುದತ್ತನಿಗೆ ತಿಳಿಸಬೇಕೆಂಬ ಉದ್ದೇಶದಿಂದ ಸಣ್ಣ ಸಣ್ಣ ಹೆಂಟೆಗಳನ್ನು ಎಸೆಯುವುದನ್ನು ನೋಡಿ, ಮೇಲಿರುವ ಪಾರಿವಾಳಗಳು ಮಣ್ಣಿನ ಹೆಂಟೆಗಳನ್ನು ಉದರಿಸುತ್ತಿರುವುವೆಂಬ ಭ್ರಾಂತಿಯಿಂದ ಅವುಗಳನ್ನು ಹೊಡೆದೋಡಿಸುವುದಕ್ಕೆ ಮೈತ್ರೇಯ(ವಿದೂಷಕ)ನು ಪ್ರಯತ್ನಿಸಿದುದನ್ನು ಚಾರುದತ್ತನು ನೋಡಿ ಭೂತದಯೆಯಿಂದ "ಮಿತ್ರ! ಕುಳಿತುಕೋ; ಆ ಪಾರಿವಾಳವನ್ನು ಹೊಡೆಯಬೇಡ; ಅದು ತನ್ನ ಪ್ರಿಯಳೊಡನೆ ಆನಂದಿಸುತ್ತಿರಲಿ" ಎಂದು ಹೇಳಿ ಹೊಡೆಯುವುದನ್ನು ತಪ್ಪಿಸಿದನು. ಇದಲ್ಲದೆ ಶರಣಾಗತರಕ್ಷಕತ್ವ, ಪರಶ್ರೇಯಸ್ಸಹನಬುದ್ಧಿ, ಸತ್ಯಪರಿಪಾಲನ, ಧರ್ಮಾಚರಣಶೀಲತೆ ಈ ಮೊದಲಾದುವು ಇವನಲ್ಲಿ ತಿಳಿಯಬರುವುದು.

ವಸಂತಸೇನಾಪಾತ್ರವು– ಕಂಟಕಮಯವಾದ ಗಿಡದಲ್ಲಿಯೂ ಸುವಾಸನೆಯುಳ್ಳ ಹೂವುಬಿಡುವುದೆಂಬುದನ್ನು ತೋರಿಸುವಂತೆ "ತಾನು ವೇಶ್ಯಾಕುಲಜಾತಳಾದರೂ ಕೇವಲದ್ರವ್ಯಾರ್ಜನೆಗಾಗಿ ಅವನಿವನೆಂಬ ತಾರತಮ್ಯವಿಲ್ಲದೆ ಶರೀರವನ್ನು ವಿಕ್ರಯಿಸಿಕೊಳ್ಳುವುದಕ್ಕಿಂತಲೂ ಪಾತಿವ್ರತ್ಯದಿಂದ ಇರುವುದು ಸಾಧ್ಯ"ವೆಂಬುದನ್ನು ಬೋಧಿಸುವುದು.

ತನ್ನ ಗಂಡನ ಕಷ್ಟವೇ ತನ್ನ ಕಷ್ಟವೆಂದೂ ಅವನ ಮಾನಾವಮಾನವೇ ತನ್ನದೆಂದೂ ತಿಳಿದು, ತನ್ನಲ್ಲಿದ್ದ ಎಲ್ಲವೂ ಹೋಗಿ ಏಕಮಾತ್ರವಾಗಿ ಉಳಿದುಕೊಂಡಿರುವ ರತ್ನಹಾರದಲ್ಲಿ ಕೂಡ ಆಸೆಗೊಳ್ಳದೆ ಚಾರುದತ್ತನ ಹೆಂಡತಿಯು ಕೊಟ್ಟದ್ದು, "ಪತಿವ್ರತೆಯರು ತನ್ನೊಡೆಯನ ಕಷ್ಟಕಾಲದಲ್ಲಿ ಯಾವುದನ್ನು ಬೇಕಾದರೂ ತ್ಯಾಗಮಾಡಬಲ್ಲರು" ಎಂಬುದನ್ನು ಬೋಧಿಸುವುದು.

ಮದನಿಕೆಶರ್ವಿಲಕರ ಪಾತ್ರ– "ಪ್ರಣಯವು ಬಲವತ್ತರವಾದುದೆಂದೂ ಸ್ತ್ರೀವ್ಯಾಮೋಹಾವೃತನಾದ ಮನುಷ್ಯನು ಎಂತಹ ಅಕಾರ್ಯವನ್ನಾದರೂಮಾಡಲು ಹಿಂದೆಗೆಯನು" ಎಂದೂ ವ್ಯಕ್ತವಾಗುವುದು.

ಸಂವಾಹಕದುರ್ದುರಕರ ಪಾತ್ರ–"ಜೂಜು ಮಹದನರ್ಥಕಾರಿಯೆಂದೂ ಹೇಳನವನ್ನೂ ಸ್ಥಾನ-ಜ್ಞಾನಭ್ರಷ್ಟತೆಯನ್ನೂ ಉಂಟುಮಾಡುವುದೆಂದೂ ಸಮಾಜನಷ್ಟಕ್ಕೆ ಇದೊಂದು ಕಾರಣವೆಂದೂ" ಗೊತ್ತಾಗುವುದು.

ವಿಟ ಮತ್ತು ಶಕಾರ ಇವರ ಪಾತ್ರ– "ಕಾಮುಕನಿಗೂ ಕುಡುಕನಿಗೂ ಯುಕ್ತಾಯುಕ್ತವಿವೇಚನೆ, ಪಾತ್ರಾಪಾತ್ರಗೌರವ ಇವೇ ಮೊದಲಾದುವು ಇಲ್ಲದೆ ಹೋಗುವುವು"ಎಂದು ಬೋಧೆಯಾಗುವುದು.

ಪಾಲಕನ ಪಾತ್ರ— "ರಾಜನು ವಿವೇಕಿಯೂ ಸನ್ಮಾರ್ಗಪ್ರವರ್ತಕನೂ ಇತರರ ಹೇಳಿಕೆಯಂತೆ ನಡೆಯುದವನೂ ಇಂಗಿತಜ್ಞನೂ ವಿಚಾರಪರನೂ ಧರ್ಮನಿರತನೂ ಆಗಿರಬೇಕು"ಎಂಬುದು ಬೋಧೆಯಾಗುವುದು.

**ಮೃಚ್ಛಕಟಿಕವು** ಸಂಸ್ಕೃತವಾಙ್ಮಯದಲ್ಲಿ ಅತ್ಯಂತಪ್ರಾಚೀನವೆಂದು ಹೇಳುವುದಕ್ಕೆ ಯಾವ ಅಡ್ಡಿಯೂ ಇರದು. ಇದರಲ್ಲಿ ಸ್ವಕಪೋಲಕಲ್ಪಿತಗಳಾಗಲಿ, ಅಲಂಕಾರಾಡಂಬರಗಳಾಗಲಿ ಯಾವುವೂ ಇಲ್ಲದೆ, ಇದ್ದುದು ಇದ್ದಹಾಗೆಯೇ ಬರೆಯಲ್ಪಟ್ಟಿರುವುದು. ಇಂತಹ ನಾಟಕಗಳಲ್ಲಿ ವಿಶಾಖದತ್ತನ "ಮುದ್ರಾರಾಕ್ಷಸನಾಟಕ"ವನ್ನು ಬಿಟ್ಟರೆ ಇದೇ ಮೊದಲನೆಯದೆಂದು ಹೇಳುವುದರಲ್ಲಿ ಅತ್ಯುಕ್ತಿಯಿರದು.

ಈ ವಿಚಾರದಲ್ಲಿ ನಮ್ಮ ಪಾಶ್ಚಾತ್ಯಸ್ನೇಹಿತರೊಬ್ಬರು ಹೇಳಿರುವುದನ್ನು ಈ ಕೆಳಗೆ ಕೊಟ್ಟಿದೆ.*

* The most recent translation of the play is by W. Ryder (Cambridge, Mass., 1905.) Why does not an enterprising theatrical manager produce in cosmopolitan New-York or London the best of the world's dramatic literature? Master-pieces like Goethe's *Egmont*, Calderon's *Judge of Zalamea*, or Sudraka's *Toy Cart*, if only staged and para,-phrased well, are sure to be appreciated by large and enthusiastic audiences —The Indian Theatre by Mr. E. P. Horrwitz P. 91.

ಮೃಚ್ಛಕಟಿಕದ ಶ್ಲೋಕಗಳ ಕೆಲವು ಉದಾಹರಣೆಗಳು—

ಶರ್ವಿಲಕನು ಕಾಲವಿಳಂಬವನ್ನು ಮಾಡುತ್ತಿರುವ ಮದನಿಕೆಯನ್ನು ಕುರಿತು—

ನ ಪರ್ವತಾಗ್ರೇ ನಳಿನೀ ಪ್ರರೋಹತಿ
ನ ಗರ್ದಭಾಃ ವಾಜಿಧುರಂ ವಹಂತಿ ।
ಯವಾಃ ಪ್ರಕೀರ್ಣಾ ನ ಭವಂತಿ ಶಾಲಯೋ
ನ ವೇಶಜಾತಾಃ ಶುಚಯಸ್ತಥಾಂಗನಾಃ ॥ ೪—೧೭ ॥

ಎಲೆ ಮದನಿಕೆ! ಪರ್ವತಾಗ್ರದಲ್ಲಿ ಕಮಲವು ಹುಟ್ಟುವುದಿಲ್ಲ; ಕತ್ತೆಗಳು ಕುದುರೆಯಷ್ಟು ಭಾರವನ್ನು ಹೊರುವುದಿಲ್ಲ; ಯವೆಯನ್ನು ಬಿತ್ತಿದರೆ ಭತ್ತದ ಕಾಳಾಗುವುದಿಲ್ಲ; ಹಾಗೆಯೇ ವೇಶ್ಯಾಸ್ತ್ರೀಯರು ಪವಿತ್ರರಾಗಿರುವುದಿಲ್ಲ.

ವರ್ಷರ್ತುವರ್ಣನೆ:—

ಅಮೂರ್ಹಿ ಭಿತ್ವಾ ಜಲದಾಂತರಾಣಿ
ಪಂಕಾನ್ತರಾಣೀವ ಮೃಣಾಳಸೂಚ್ಯಃ ।
ಪತಂತಿ ಚಂದ್ರವ್ಯಸನಾದ್ವಿಮುಕ್ತಾಃ
ದಿವೋಶ್ರುಧಾರಾಃ ಇವ ವಾರಿಧಾರಾಃ ॥ ೫—೪೪ ॥

ಕೆಸರಿನಿಂದ ಮೃಣಾಳಾಂಕುರಗಳು ಹೊರಗೆ ಬರುವಂತೆ ದಟ್ಟವಾದ ಮೋಡಗಳಿಂದ ಜಲಧಾರೆಗಳು ಚಂದ್ರನಿಗೆ ವಿಪತ್ತು ಬಂದುದನ್ನು ನೋಡಿ ಆಕಾಶವು ಕಣ್ಣೀರುಬಿಡುತ್ತಿರುವುದೋ ಎಂಬಂತೆ ಬೀಳುತ್ತಿವೆ.

ಧಾರಾಭಿರಾರ್ಯಜನಚಿತ್ತಸುನಿರ್ಮಲಾಭಿಃ
ಚಂಡಾಭಿರರ್ಜುನಶರಪ್ರತಿಕರ್ಕಶಾಭಿಃ ।
ಮೇಘಾಃ ಸ್ರವಂತಿ ಬಲದೇವಪಟಪ್ರಕಾಶಾಃ
ಶಕ್ರಸ್ಯ ಮೌಕ್ತಿಕನಿಧಾನಮಿವೋದ್ಗಿರಂತಃ ॥ ೫—೪೫ ॥

ಬಲರಾಮನ ನೀಲಾಂಬರದಂತೆ ಇರುವ ಕಪ್ಪುಮೇಘಗಳು ಇಂದ್ರನ ಮೌಕ್ತಿಕಭಂಡಾರವನ್ನು ಕಕ್ಕುವಂತೆಯೂ; ಅರ್ಜುನನ ಅತಿಕರ್ಕಶಗಳಾದ ಬಾಣಗಳಂತೆಯೂ; ಸತ್ಪುರುಷರ ಮನಸ್ಸಿನಂತೆ ನಿರ್ಮಲವಾಗಿಯೂ ಇರುವ ಜಲಧಾರೆಗಳನ್ನು ಸುರಿಸುತ್ತಿವೆ.

ಚಾರುದತ್ತಮೈತ್ರೇಯರ ಸಂವಾದ:—

ಏತತ್ತದ್ಧೃತರಾಷ್ಟ್ರವಕ್ತ್ರಸದೃಶಂ ಮೇಘಾಂಧಕಾರಂ ನಭೋ
ಹೃಷ್ಟೋ ಗರ್ಜತಿ ಚಾತಿದರ್ಪಿತಬಲೋ ದುರ್ಯೋಧನೋ ವಾ ಶಿಖೀ ।
ಅಕ್ಷದ್ಯೂತಜಿತೋ ಯುಧಿಷ್ಠಿರ ಇವಾಧ್ವಾನಂ ಗತಃ ಕೋಕಿಲೋ
ಹಂಸಾಃ ಸಂಪ್ರತಿ ಪಾಂಡವಾ ಇವ ವನಾದಜ್ಞಾತಚರ್ಯಾಂ ಗತಾಃ ॥೫—೬॥

ಮೇಘಾಂಧಕಾರಾವೃತವಾಗಿರುವ ಅಂತರಿಕ್ಷವು ಧೃತರಾಷ್ಟ್ರನ ಮುಖದಂತಿದೆ. ನವಿಲು ಮೇಘಾಡಂಬರವನ್ನು ನೋಡಿ ದುರ್ಯೋಧನನಂತೆ ಸೊಕ್ಕಿ ಕೇಕೆಹಾಕುತ್ತಿದೆ. ವರ್ಷಾಕಾಲವನ್ನು ನೋಡಿ ಕೋಕಿಲೆಯು ದ್ಯೂತದಲ್ಲಿ ಸೋತ ಯುಧಿಷ್ಠಿರನಂತೆ ಮೌನವ್ರತವನ್ನವಲಂಬಿಸಿದೆ. ಹಂಸಗಳು ಪಾಂಡವರಂತೆ ಅಜ್ಞಾತವಾಸವನ್ನು ಮಾಡುತ್ತಿವೆ.

ವಿಟನು ವಸಂತಸೇನೆಯನ್ನು ಕುರಿತು—

ತರುಣಜನಸಹಾಯಶ್ಚಿಂತ್ಯತಾಂ ವೇಶವಾಸೋ
ವಿಗಣಯ ಗಣಿಕಾ ತ್ವಂ ಮಾರ್ಗಜಾತಾ ಲತೇವ ।
ವಹಸಿ ಹಿ ಧನಹಾರ್ಯಂ ಪಣ್ಯಭೂತಂ ಶರೀರಂ
ಸಮಮುಪಚರ ಭದ್ರೇ! ಸುಪ್ರಿಯಂ ಚಾಪ್ರಿಯಂ ಚ ॥ ೧—೩೧ ॥

ಎಲೈ ವಸಂತಸೇನೆ! ನೀನು ವೇಶ್ಯೆಯಾಗಿದ್ದೂ ವೇಶ್ಯೆಯಂತೆ ಮಾತನಾಡುವುದಿಲ್ಲ. ಇದು ಸ್ವಭಾವವಿರುದ್ಧವಾಗಿರುವುದು. ಏಕೆಂದರೆ– ಸೂಳೆಯರಿಗೆ ಯುವಕರ ಸಹಾಯವು ಮುಖ್ಯವಾದುದು. ಮಾರ್ಗದಲ್ಲಿರುವ ಹೂಬಳ್ಳಿಯಂತೆ ವೇಶ್ಯೆಯಾದ ನೀನು ಕೇವಲ ದ್ರವ್ಯಕ್ಕಾಗಿ ದೇಹವನ್ನು ಮಾರಿಕೊಳ್ಳುವ ಜಾತಿಯಲ್ಲಿ ಹುಟ್ಟಿದವಳಾದುದರಿಂದ ಸುಪ್ರೀತರನ್ನೂ ಅಪ್ರೀತರನ್ನೂ ಒಂದೇ ಸಮವಾಗಿ ನೋಡತಕ್ಕದ್ದು.

ವಾಪ್ಯಾಂ ಸ್ನಾತಿ ವಿಚಕ್ಷಣೋ ದ್ವಿಜವರೋ ಮೂರ್ಖೋಽಪಿ ವರ್ಣಾಧಮಃ
ಫುಲ್ಲಾಂ ನಾಮ್ಯತಿ ವಾಯಸೋಽಪಿ ಹಿ ಲತಾಂ ಯಾ ನಾಮಿತಾ ಬರ್ಹಿಣಾ ।
ಬ್ರಹ್ಮಕ್ಷತ್ರವಿಶಸ್ತರಂತಿ ಚ ಯಯಾ ನಾವಾ ತಯೈವೇತರೇ
ತ್ವಂ ವಾಪೀವ ಲತೇವ ನೌರಿವ ಜನಂ ವೇಶ್ಯಾಸಿ ಸರ್ವಂ ಭಜ ॥ ೧—೩೨ ॥

ಇದಲ್ಲದೆ ಒಂದೇ ಭಾವಿಯಲ್ಲಿ ಪಂಡಿತೋತ್ತಮನಾದ ಬ್ರಾಹ್ಮಣನೂ ಮೂರ್ಖನೂ ಶೂದ್ರನೂ ಎಲ್ಲರೂ ಸ್ನಾನಮಾಡುತ್ತಾರೆ. ನವಿಲು ಕೂತು ಬಗ್ಗಿಸಿದ ಹೂವಿನ ಬಳ್ಳಿಯನ್ನು ಕಾಗೆಯೂ ಕೂತು ಬಗ್ಗಿಸುತ್ತದೆ. ಬ್ರಾಹ್ಮಣಕ್ಷತ್ರಿಯವೈಶ್ಯರು ಕುಳಿತು ದಾಟುವ ನಾವೆಯಿಂದಲೇ ಅಂತ್ಯಜರು ಕೂಡ ದಾಟುತ್ತಾರೆ. ಆದುದರಿಂದ ಸೂಳೆಯಾದ ನೀನು ಭಾವಿಯಂತೆಯೂ ಲತೆಯಂತೆಯೂ ನಾವೆಯಂತೆಯೂ ಉಚ್ಚನೀಚವೆನ್ನದೆ ಸರ್ವರನ್ನೂ ಭಜಿಸು.

ಚಾರುದತ್ತನು ಮೈತ್ರೇಯನನ್ನು ನೋಡಿ—

ದಾರಿದ್ರ್ಯಾದ್ಧ್ರಿಯಮೇತಿ ಹ್ರೀಪರಿಗತಃ ಪ್ರಭ್ರಶ್ಯತೇ ತೇಜಸೋ
ನಿಸ್ತೇಜಾಃ ಪರಿಭೂಯತೇ ಪರಿಭವಾನ್ನಿರ್ವೇದಮಾಪದ್ಯತೇ ।

**ನಿರ್ವಿಣ್ಣಃ ಶುಚಮೇತಿ ಶೋಕಪಿಹಿತೋ ಬುಧ್ಯಾ ಪರಿತ್ಯಜ್ಯತೇ**
**ನಿರ್ಬುದ್ಧಿಃ ಕ್ಷಯಮೇತ್ಯಹೋ! ನಿಧನತಾ ಸರ್ವಾಪದಾಮಾಸ್ಪದಂ ॥ ೧—೧೪ ॥**

ಎಲೆ ಮೈತ್ರೇಯ! ನನಗೆ ಐಶ್ವರ್ಯವು ಕ್ಷಯವಾಯಿತೆಂಬ ಚಿಂತೆಯು ಕೊಂಚವೂ ಇಲ್ಲ. ಏಕೆಂದರೆ ಅವುಗಳನ್ನು ಹೊಂದುವುದೂ ಹೊಂದದೇ ಇರುವುದೂ ದೈವಾಯತ್ತವು. ಆದರೆ ಲೋಕವು ದ್ರವ್ಯಹೀನನೊಡನೆ ಮೊದಲಿನ ಮೈತ್ರಿಯನ್ನು ಬಿಟ್ಟುಹೋಗುವುದೆಂಬುದೇ ನನಗೆ ಸಂತಾಪವನ್ನುಂಟುಮಾಡುತ್ತಿದೆ. ಹೆಚ್ಚೇಕೆ! ಮನುಷ್ಯನಿಗೆ ದಾರಿದ್ರ್ಯದಿಂದ ಲಜ್ಜೆಯೂ ಲಜ್ಜೆಯಿಂದ ತೇಜೋಹೀನತೆಯೂ ತೇಜೋಹೀನತೆಯಿಂದ ತಿರಸ್ಕಾರವೂ ತಿರಸ್ಕಾರದಿಂದ ಖೇದವೂ ಖೇದದಿಂದ ಶೋಕವೂ ಶೋಕದಿಂದ ಬುದ್ಧಿಹೀನತೆಯೂ ಉಂಟಾಗುವುದಾದುದರಿಂದ ಈ ದಾರಿದ್ರ್ಯವೆಂಬುದು ಸಮಸ್ತವಾದ ಆಪತ್ತುಗಳಿಗೂ ಮೂಲವಾಗಿರುವುದು.

'ಪದ್ಮಪ್ರಾಭೃತಕಭಾಣ'ದ ಮಾದರಿಶ್ಲೋಕ:—

**ಪ್ರೇಂಖೋಲತ್ಕುಂಡಲಾಯಾ ಬಲವದನಿಭೃತಂ ಕಂದುಕೋನ್ಮಾದಿತಾಯಾ**
**ಶ್ಲಿಂಚದ್ಬಾಹುದ್ವಯಾಯಾಃ ಪ್ರವಿಕಚವಿಸ್ಪತೋದ್ಗೀರ್ಣಪುಷ್ಪಾಲಕಾಯಾಃ ।**
**ಆವರ್ತೋದ್ಭ್ರಾಂತವೇಶಪ್ರಣಯವಿಲಸಿತಕ್ಷ್ಟಕಾಂಚೀಗುಣಾಯಾ**
**ಮಧ್ಯಸ್ಯಾವಲ್ಗಮಾನಸ್ತನಭರನಮಿತಸ್ಯಾಸ್ಯ ತೇ ಕ್ಷೇಮಮಸ್ತು ॥**

---

## ಚಂದ್ರಕವಿ

ಇವನು ಕಾಶ್ಮೀರವಾಸಿಯೆಂತಲೂ, ಪ್ರಾಚೀನಕವಿಯೆಂತಲೂ ದುಂಜೀನರಾಜನ ಕಾಲದಲ್ಲಿದ್ದನೆಂತಲೂ 'ರಾಜತರಂಗಿಣಿ'ಯ ಎರಡನೆಯ ತರಂಗದ—

**ನಾಟ್ಯಂ ಸರ್ವಜನಪ್ರೇಕ್ಷ್ಯಂ ಯಶ್ಚಕ್ರೇ ಸ ಮಹಾಕವಿಃ ।**
**ದ್ವೈಪಾಯನಮುನೇರಂಶಸ್ತತ್ಕಾಲೇ ಚಂದ್ರಕೋ ಭವೇತ್ ॥**

ಎಂಬ ಶ್ಲೋಕದಿಂದ ತಿಳಿಯಬರುವುದು. ದುಂಜೀನರಾಜನು ಕ್ರಿ. ಶ. ೩೧೮ ರಲ್ಲಿ ರಾಜ್ಯಕ್ಕೆ ಬಂದನೆಂದು ಎಂ. ಕನಿಂಗ್‌ಹ್ಯಾಮ್‌ರವರು ಒಬ್ಬರೇ ಹೇಳುವರು. ಮಿಕ್ಕವರೆಲ್ಲರೂ ದುಂಜೀನರಾಜನು ಕಾಶ್ಮೀರಸಿಂಹಾಸನವನ್ನು ಕ್ರಿ. ಶ. ೧೦೩ರಲ್ಲಿ ಏರಿದನೆಂದೂ **ಚಂದ್ರಕವಿ**ಯು ಇವನ ಸಮಕಾಲೀಕನೆಂದೂ ಹೇಳುವರು.

ಇವನು **ನಾಟ್ಯಪ್ರಬಂಧ**ವೆಂಬ ಗ್ರಂಥವನ್ನು ಬರೆದಿರುವುದಾಗಿ **ತಿಳಿಯ**ಬರುವುದು. ಈ ಗ್ರಂಥವು ನಮಗೆ ದೊರೆತಿರುವುದಿಲ್ಲ. ಈತನ ಕವಿತಾಸರಣಿಯನ್ನು

ತೋರಿಸುವುದಕ್ಕಾಗಿ ಕ್ಷೇಮೇಂದ್ರನ 'ಔಚಿತ್ಯವಿಚಾರಚರ್ಚಾ' ಎಂಬ ಗ್ರಂಥ ದಲ್ಲಿ ಉದಹರಿಸಿರುವ ಒಂದು ಶ್ಲೋಕವನ್ನು ಇಲ್ಲಿ ಕೊಟ್ಟಿದೆ—

> ಯುದ್ಧೇಷು ಭಾಗ್ಯಚಪಲೇಷು ನ ಮೇ ಪ್ರತಿಜ್ಞಾ ।
> ದೈವಂ ನಿಯಚ್ಛತಿ ಜಯಂ ಚ ಪರಾಜಯಂ ಚ ॥
> ಏಷೈವ ಮೇ ರಣಗತಸ್ಯ ಸದಾ ಪ್ರತಿಜ್ಞಾ ।
> ಪಶ್ಯಂತಿ ಯನ್ನ ರಿಪವೋ ಜಘನಂ ಹಯಾನಾಂ ॥

"ಈ ಚಪಲಭಾಗ್ಯಕ್ಕಾಗಿ ಯುದ್ಧಮಾಡುವೆನೆಂಬುದಲ್ಲ; ಏಕೆಂದರೆ ಜಯಾ ಪಜಯಗಳು ದೈವಾಧೀನವು; ಆದರೆ ನಾನು ಹತ್ತಿರುವ ಕುದುರೆಯ ಬೆನ್ನನ್ನು ಶತ್ರುಗಳಿಗೆ ತೋರಿಸುವುದಿಲ್ಲ ಎಂಬುದೇ ನನ್ನ ಪ್ರತಿಜ್ಞೆ" ಅಂದರೆ ಶತ್ರುಗಳಿಗೆ ಬೆನ್ನು ತೋರಿಸಿ ಯುದ್ಧಕ್ಷೇತ್ರದಿಂದ ಓಡಿಹೋಗುವುದಿಲ್ಲ.



# ಮೂರನೆಯ ಶತಮಾನ

## ಧೀರನಾಗ

ಇವನನ್ನು **ಭದಂತಧೀರನಾಗ**ನೆಂದೂ ಕರೆಯುವರು. ಇವನು ಬೌದ್ಧ ಶ್ರಮಣನು. ಇವನು ಮಹಾಕವಿಯೆಂದೂ ಕ್ರಿ. ಶ. ಮೂರನೆಯ ಶತ ಮಾನದವನಾಗಿರಬೇಕೆಂದೂ ತಿಳಿಯುಬರುವುದು. ಇವನು ಯಾರು? ಯಾವ ಸ್ಥಳದವನು? ಇವನು ಬರೆದಿರುವ ಗ್ರಂಥಗಳಾವುವು? ಎಂಬುವು ತಿಳಿಯದು. ಆದರೆ ಇವನದೆಂದು ಹೇಳುವ ಕೆಲವು ಶ್ಲೋಕಗಳು ವಲ್ಲಭದೇವನ *'ಸುಭಾಷಿ ತಾವಳಿ'ಯಲ್ಲಿ ಕಂಡುಬರುವುವು.

ಇವುಗಳಲ್ಲಿ ಒಂದನ್ನು ಮಾದರಿಗಾಗಿ ಇಲ್ಲಿ ಕೊಟ್ಟಿದೆ—

> ಸುಧೌತಂ ಕೌಶೇಯಂ ಸುರಭಿಕುಸುಮಂ ಕೌಂಕುಮಮಪಿ
> ಕ್ಷಣಾತತ್ರ ದೃಸ್ಮಿನ್ಪತಿತಮಶುಚಿತ್ವೇ ನಿಪತತಿ ।
> ವಿಗಂಧಾನ್ನಿಷ್ಯಂದಾನ್ಸಮತಿ ನವಭಿರ್ಯೋ ವ್ರಣಮುಖೈಃ
> ಕಥಂ? ತಸ್ಮಿನ್ ಕಾಯೇ ಸುಭಗ! ಬಹುಮಾನೋಽತ್ರ ಭವತಾಂ ॥

ಎಲೈ ಜನರೇ? ಅತ್ಯಂತಸ್ವಚ್ಛವಾದ ಕೌಶೇಯವಸನ, ಪರಿಮಳವನ್ನು ಬೀರುತ್ತಿರುವ ಹೂವು, ಕುಂಕುಮಗಂಧವೇ ಮೊದಲಾದ ಸುಗಂಧದ್ರವ್ಯಗಳು

* Subhashitavali No's 1064, 1142, 3387, 3388, 3389.

ಯಾವ ಶರೀರದಲ್ಲಿ ಧರಿಸಿದ ಮಾತ್ರದಿಂದಲೇ ಮಲಿನವಾಗಿಹೋಗಿಬಿಡುವುವೋ ಯಾವ ಶರೀರದ ಒಂಭತ್ತು ರಂಧ್ರಗಳಿಂದ ದುರ್ಗಂಧವು ಹೊರಡುತ್ತಿರುವುದೋ; ಅಂತಹ ಶರೀರವನ್ನು (ಹೇಯವೆಂದು ತಿರಸ್ಕರಿಸುವುದಕ್ಕೆ ಬದಲು) ಉತ್ತಮವೆಂದು ಸಲ್ಲದ ಬಹುಮಾನದಿಂದ ಹೇಗೆ ಪುರಸ್ಕರಿಸುವಿರಿ?



## ಇಂದ್ರಸಿಂಹ

ಇವನಿಗೆ **ಭದಂತತಥಾಗತೇಂದ್ರಸಿಂಹ**ನೆಂದೂ* ಹೆಸರಿದ್ದುದಾಗಿ ತಿಳಿಯ ಬರುತ್ತದೆ. ವಲ್ಲಭದೇವನ 'ಸುಭಾಷಿತಾವಳಿ'ಯಲ್ಲಿ ಇವನದೆಂದು ಹೇಳುವ ಮೂರು ಶ್ಲೋಕಗಳು‡ ಕಾಣಬರುವುವು. ಇವನು ಯಾವ ಗ್ರಂಥಗಳನ್ನು ಬರೆದಿರುವನೆಂಬುದು ತಿಳಿಯದು. ಇವನು ಕ್ರಿ. ಶ. ಮೂರನೆಯ ಶತಮಾನದವನಾಗಿರಬೇಕಾಗಿ ತೋರುತ್ತದೆ. ಇವನು ಬೌದ್ಧನಾಗಿರಬೇಕೆಂದು ಇವನ ಹೆಸರಿನಿಂದಲೇ ಬೋಧೆಯಾಗುವುದು.

ಇವನ ಶ್ಲೋಕಗಳಲ್ಲಿ ಎರಡನ್ನು ಇಲ್ಲಿ ಮಾದರಿಗಾಗಿ ಕೊಟ್ಟಿದೆ—

ಹೃದಯಾನಿ ಸತಾಮೇವ ಕಠಿನಾನೀತಿ ಮೇ ಮತಿಃ ।
ಖಲವಾಗ್ವಿಶಿಖೈಸ್ತೀಕ್ಷ್ಣೈರ್ಭಿದ್ಯಂತೇ ನ ಮನಾಗ್ಯತಃ ॥

ದುಷ್ಟರ ಮಾತುಗಳೆಂಬ ಅತ್ಯಂತತೀಕ್ಷ್ಣವಾದ ಬಾಣಗಳಿಂದ ಸತ್ಪುರುಷರ ಮನಸ್ಸು ಕೊಂಚವೂ ಭೇದಿಸಲ್ಪಡದಿರುವುದರಿಂದ ಸತ್ಪುರುಷರ ಮನಸ್ಸೇ ಕಠಿನತರವಾದುದೆಂದು ನನ್ನ ತಿಳಿವಳಿಕೆಯಾಗಿರುವುದು.

ರವಿಮಣಿರಪಿ ನಿಶ್ಚೇಷ್ಟಃ ಪಾದೈಸ್ತಿಗ್ಮದ್ಯುತೇರ್ಮನಾಕ್ಸ್ಪೃಷ್ಟಃ ।
ಜ್ವಲಿತಿ ಕಿರಾಮಿತಿ ಕೋವಾ ಮನ್ಯುಂ ಸೋಢುಂ ಕ್ಷಮೋ ಮಾನೀ ॥

ಸೂರ್ಯನ ಕಿರಣಗಳಿಂದ ಎಲ್ಲಿಯೋ ಕೊಂಚ ಸ್ಪರ್ಶಮಾಡಲ್ಪಟ್ಟ ಅಚೇತನವಾದ ಸೂರ್ಯಕಾಂತಮಣಿಯು ಕೂಡಾ ಅತ್ಯಂತತಾಪದಾಯಕವಾಗಿರುವಲ್ಲಿ ಮಾನವಂತನಾದ ಯಾವನು ತಾನೇ ಮತ್ತೊಬ್ಬರಿಂದಾದ ತಿರಸ್ಕಾರ ಜನಿತಕೋಪವನ್ನು ಸಹಿಸುವುದಕ್ಕೆ ಶಕ್ತನಾದಾನು! (ಎಂದರೆ ಸಹಿಸಲಾರನೆಂದು ಭಾವವು.)

* Subhashitavali Intro. P. 12.
‡ Ibid Nos. 212, 1601, 2273.

# ನಾಲ್ಕನೆಯ ಶತಮಾನ

## ಅಮರಸಿಂಹ

ಇವನು ಬೌದ್ಧನು. ಇವನು ಎಲ್ಲಿಯವನು? ಇವನ ಮಾತಾಪಿತೃಗಳಾರು? ಎಂಬುದು ತಿಳಿಯದು. ಇವನು **ನಾಮಲಿಂಗಾನುಶಾಸನ**ವೆಂಬ ಕೋಶವನ್ನು ರಚಿಸಿ ಗೀರ್ವಾಣಭಾಷಾಸುದತಿಗೆ ಶಬ್ದಾರ್ಥಲಿಂಗವಿವೇಚನೆಯೆಂಬ ಮಾಲೆಯನ್ನು ತೊಡಿಸಿ ವಾಣೀಲೋಲುಪರನ್ನು ಋಣಿಯನ್ನಾಗಿ ಮಾಡಿರುವನು. ಬುದ್ಧಮತಾವಲಂಬಿಯಾದ ಸುಭೂತಿಚಂದ್ರ, ಜೈನಮತಾವಲಂಬಿಗಳಾದ ಆಶಾಧರಪಂಡಿತ ಮತ್ತು ನಾಚಿರಾಜ, ಬ್ರಾಹ್ಮಣಮತದವರಾದ ಕ್ಷೀರಸ್ವಾಮಿ ಮತ್ತು ಮಲ್ಲಿನಾಥನೇ ಮೊದಲಾದವರು ಇದಕ್ಕೆ ಟೀಕೆಯನ್ನು ಬರೆದಿರುವರು. ಕ್ಷೀರಸ್ವಾಮಿಯು ಬರೆದಿರುವ ಟೀಕೆಗೆ 'ಅಮರಕೋಶೋದ್ಘಾಟನ'ವೆಂದೂ ಮಲ್ಲಿನಾಥನು ಬರೆದಿರುವ ಟೀಕೆಗೆ 'ಅಮರಪದಪಾರಿಜಾತ'ವೆಂದೂ ಭಾನೂಜೀ ದೀಕ್ಷಿತನು ಬರೆದಿರುವ ಟೀಕೆಗೆ 'ವ್ಯಾಖ್ಯಾನಸುಧಾ' ಎಂದೂ ಹೆಸರು. ಈ ಟೀಕೆಗಳಲ್ಲೆಲ್ಲಾ ಕ್ಷೀರಸ್ವಾಮಿಯದೇ ಮುಖ್ಯವಾದುದು. ಕೇಶವನು ತಾನು ಬರೆದಿರುವ 'ಕಲ್ಪದ್ರುಮ'ದಲ್ಲಿ—

ಕಾತ್ಯವಾಚಸ್ಪತಿವ್ಯಾಡಿಭಾಗುರ್ಯಮರಮಂಗ(ಕ)ಲಾಃ |
ಸಾಹಸಾಂಕಮಹೇಶಾದ್ಯಾಃ ವಿಜಯಂತೇ ಜನಾಂತಿಮಾಃ ||

ಎಂದು ಕೋಶಗಾರರನ್ನು ಕ್ರಮವಾಗಿ ಹೇಳಿರುವನು. ಇವರಲ್ಲಿ **ಅಮರಸಿಂಹ**ನು ಐದನೆಯವನಾಗಿರುವನು. ಮೊದಲಿನ ನಾಲ್ಕು ಜನರು ಇವನಿಗೆ ಪ್ರಾಚೀನರೂ ಕಡೆಯ ಮೂವರು ಅರ್ವಾಚೀನರೂ ಆಗಿರುವರು. ಇವರ ವಿಚಾರವಾಗಿ ಹೆಚ್ಚು ತಿಳಿಯದು. ಅಮರಕೋಶಕ್ಕೆ ಮೇಲೆ ಹೇಳಿ[illegible]ವರಲ್ಲದೆ ಉಪಾಧ್ಯಾಯ, ಗೌಡ ಮತ್ತು ಭೋಜ ಇವರೂ ಟೀಕೆಗಳನ್ನು ಬ[illegible]ರುವರು. ಇವರು ಕ್ಷೀರಸ್ವಾಮಿಗೆ ಪ್ರಾಚೀನರು.

**ಕಾಲವಿಚಾರ**— ಅಮರಸಿಂಹನು 'ಸಭಾ ರಾಜಾ ಮನುಷ್ಯಪೂರ್ವಾ' ಎಂಬ ಪಾಣಿನಿಯ ಸೂತ್ರವನ್ನನುಸರಿಸಿಯೇ—

ಶಾಲಾರ್ಥಾತಿಪರಾ ರಾಜಾ ಮನುಷ್ಯಾರ್ಥಾತರಾಜಕಾತ್ |

ಎಂಬುದನ್ನು ಬರೆದಿರುವನೇ ಹೊರತು 'ಈಶ್ವರಾರ್ಥಾದರಾಜ್ಞಃ ಸಭಾ' ಎಂಬ ಚಂದ್ರ(ಚಂದ್ರಗೋಮಿ)ವ್ಯಾಕರಣವನ್ನನುಸರಿಸಿ ಬರೆದಿರುವುದಿಲ್ಲ. ಇದರಿಂದಲೂ

ಮತ್ತು ಇತರ ಸೂತ್ರಗಳಿಂದಲೂ ಅಮರನ ಕೋಶಕ್ಕೆ ಮುಂಚೆ ಚಂದ್ರ ವ್ಯಾಕರಣವಿರಲಿಲ್ಲವಾಗಿ ತೋರುತ್ತೆ; ಅಂದರೆ ಚಂದ್ರಗೋಮಿಗಿಂತಲೂ ಅಮರನು ಹಿಂದಿನವನೆಂದು ತಿಳಿಯಬಹುದು.

ಕ್ಷೀರಸ್ವಾಮಿಯು 'ಆಪ್ಯ' ಎಂಬ ಶಬ್ದಕ್ಕೆ 'ಆಪ್ಯಂ ತು ಲಕ್ಷ್ಯಾತ್' ಅತ ಏವ- ಆಪ್ಯಂ ವೇತಿ ಚಾಂದ್ರಂ ಸೂತ್ರಂ ಎಂದೂ 'ಮುಂದ' ಎಂಬ ಶಬ್ದಕ್ಕೆ ಮಂದತೇ ಸ್ವಪತೀವ ಮುಂದಃ- ಅತ ಏವ ಮದಿಜಾಡ್ಯೇ ಇತಿ। ಚಾಂದ್ರೋ ಧಾತುಃ ಎಂದೂ ವ್ಯಾಖ್ಯಾನವನ್ನು ಬರೆದು ಚಂದ್ರವ್ಯಾಕರಣವನ್ನು ಉದಹರಿಸಿರುವನು. 'ಶಶೋರ್ಣಂ' ಎಂಬುದಕ್ಕೆ- 'ಶಶಸ್ಯೋರ್ಣಾ ಶಶೋರ್ಣಂ'ಗೃಹಸ್ಥೋಣವತ್ಕ್ಲೀಬೇ ಎಂದು ವ್ಯಾಖ್ಯಾನವನ್ನು ಬರೆಯುವಾಗ- 'ಶಶೋರ್ಣಂ ಕರಣಂ ಕರಂ' ಎಂದು ಚಂದ್ರನ ವ್ಯಾಕರಣದಲ್ಲಿದ್ದರೂ ಇದನ್ನು ಉದಹರಿಸದಿರುವುದರಿಂದ ಅಮರಸಿಂಹನು ಚಂದ್ರಗೋಮಿಗಿಂತಲೂ ಪ್ರಾಚೀನನೆಂದಾಯಿತು.

ವೈಯ್ಯಾಕರಣನಾದ ವಸುರಾತನು ಕ್ರಿ. ಶ. ೪೮೦ರಲ್ಲಿ ಚಂದ್ರಗೋಮಿಯ ಶಿಷ್ಯನಾಗಿದ್ದು ವ್ಯಾಕರಣವನ್ನು ಕಲಿತುದಾಗಿ ತಿಳಿಯಬರುವುದು. ಇದರಿಂದ ಅಮರನು ಐದನೆಯ ಶತಮಾನದಲ್ಲಿದ್ದ ಚಂದ್ರಗೋಮಿಗಿಂತಲೂ ಹಿಂದಿನವನೆಂದಾಯಿತು; ಅಂದರೆ ನಾಲ್ಕನೆಯ ಶತಮಾನದವನೆಂದು ಹೇಳಬಹುದು.

ಅಮರಸಿಂಹನು ತಾನು ಬೌದ್ಧನಾಗಿದ್ದರೂ 'ಸಾಂಖ್ಯತತ್ತ್ವ'ವಿಚಾರದಲ್ಲಿ ಅಭಿರುಚಿಯುಳ್ಳವನಾಗಿದ್ದನೆಂದು-

**ಕ್ಷೇತ್ರಜ್ಞ ಆತ್ಮಾ ಪುರುಷಃ ಪ್ರಧಾನಂ ಪ್ರಕೃತಿಃ ಸ್ತ್ರಿಯಾಂ ।**

ಎಂಬ ಶ್ಲೋಕದಿಂದ ತಿಳಿದು ಬರುತ್ತದೆ.

ನಾಮಲಿಂಗಾನುಶಾಸನವು ಟಿಬೇಟಿಯ ಭಾಷೆಗೂ* ಕ್ರಿ. ಶ. ಆರನೆಯ ಶತಮಾನದಲ್ಲಿ ಉಜ್ಜಯಿನಿಯಲ್ಲಿದ್ದ ಗುಣರಾತನಿಂದ ಚೀನಾಭಾಷೆಗೂ ಪರಿವರ್ತಿಸಲ್ಪಟ್ಟಿರುವುದಾಗಿ ತಿಳಿಯಬರುತ್ತದೆ.†

ಪ್ರಪಂಚದಲ್ಲಿ ಗೀರ್ವಾಣಭಾಷಾಭಿಮಾನಿಗಳಾದ ಪ್ರತಿಯೊಬ್ಬರೂ ಅಮೂಲ್ಯಕೋಶವನ್ನು ಬರೆದಿರುವ **ಅಮರಸಿಂಹನನ್ನು** ಪೂಜ್ಯಭಾವದಿಂದ ಗೌರವಿಸದಿರಲಾರರು.



* Introduction. to 'Amarakoshodghatana' by Mr. K. G. Oka. P. 7.

† Prof. Maxmuller's India what can it teach us? I. Ed. P. 328.

# ಐದನೆಯ ಶತಮಾನ



## ಭಾಮಹ

ಇವನು ಸಂಸ್ಕೃತವಾಙ್ಮಯದಲ್ಲಿ ಬಹುಪ್ರಸಿದ್ಧನಾದ ಅಲಂಕಾರಿಕನು. ಇವನು ತನ್ನ ಕಾವ್ಯದ ಕೊನೆಯಲ್ಲಿ ತಾನು 'ರಾಕ್ರಿಲಗೋಮಿ'ಯ ಮಗನೆಂದು ಹೇಳಿಕೊಂಡಿರುವನು. 'ಭಟ್ಟಿಕಾವ್ಯ'ವ್ಯಾಖ್ಯಾನಕಾರನಾದ 'ಜಯಮಂಗಳ'ನೂ ಕಾವ್ಯಾಲಂಕಾರಸೂತ್ರವೃತ್ತಿಕಾರನಾದ ವಾಮನನೂ 'ಸರಸ್ವತೀಕಂಠಾಭರಣ' ಪ್ರಣೇತೃವಾದಭೋಜ'ನೂ 'ಕಾವ್ಯಪ್ರಕಾಶ'ಕಾರನಾದ 'ಮಮ್ಮಟ'ನೂ ಇವನ ಶ್ಲೋಕಗಳನ್ನುಬಹಳವಾಗಿ ಉದಹರಿಸಿರುವರು. ಇವನು ತನ್ನ ಕಾವ್ಯವನ್ನು **'ಕಾವ್ಯಾಲಂಕಾರ'** ಎಂದು ಕರೆದಿರುವನು. ತನಗಿಂತಲೂ ಪುರಾತನರಾದ ಅಲಂಕಾರಶಾಸ್ತ್ರವೇತ್ತರಿಂದ ಬರೆಯಲ್ಪಟ್ಟ ಗ್ರಂಥಗಳನ್ನು ಪರಿಶೀಲಿಸಿ ಈ ಗ್ರಂಥ ವನ್ನು ರಚಿಸಿರುವುದಾಗಿಯೂ ಇದೇ ಪ್ರಥಮಪ್ರಯತ್ನವೆಂದೂ ಹೇಳಿಕೊಂಡಿರು ವನು. ಇದರಿಂದ ಅಲಂಕಾರಶಾಸ್ತ್ರವು ಇವನಿಗಿಂತಲೂ ಹಿಂದೆ ಇದ್ದು ಕಾಲಕ್ಕೆ ತಕ್ಕಂತೆ ಇವನಿಂದ ಕ್ರಮಪಡಿಸಲ್ಪಟ್ಟುದಾಗಿ ತಿಳಿಯುತ್ತದೆ.

ಇವನ ಮತವಿಚಾರದಲ್ಲಿ ಪಂಡಿತೋತ್ತಮರು ಭಿನ್ನಾಭಿಪ್ರಾಯಪಡು ವರು. ಬೌದ್ಧನೆಂದು ಕೆಲವರು, ಬ್ರಾಹ್ಮಣನೆಂದು ಕೆಲವರು ವಾದಿಸುವರು.

ಇವನು ತನ್ನ ಕಾವ್ಯದ ಆದಿಯಲ್ಲಿ—

> **ಪ್ರಣಮ್ಯ ಸಾರ್ವಂ ಸರ್ವಜ್ಞಂ* ಮನೋವಾಕ್ಕಾಯಕರ್ಮಭಿಃ ।**
> **'ಕಾವ್ಯಾಲಂಕಾರ' ಇತ್ಯೇಷ ಯಥಾಬುದ್ಧಿ ವಿಧಾಸ್ಯತೇ ॥**
> **ಹಿತಪ್ರಕರಣೇಣಂ ಚ ಸರ್ವಶಬ್ದಾತ್ಪ್ರಯುಂಜತೇ ।**
> **ತತಶ್ಚ ಮಿಷ್ಟ್ಯಾ ಚ ಯಥಾ ಸಾರ್ವಃ §ಸಾರ್ವೀಯ ಇತ್ಯಪಿ ।**

ಎಂದು ಮಂಗಳಾಚರಣವನ್ನು ಮಾಡಿರುವುದರಿಂದ 'ಸರ್ವಜ್ಞ' ಶಬ್ದವೂ 'ಸಾರ್ವ' ಶಬ್ದವೂ ಬುದ್ಧನ ಹೆಸರುಗಳೆಂದೂ ತಾನು ಬುದ್ಧಮತದವನಾದುದ ರಿಂದಲೇ ಈರೀತಿಯಾಗಿ ಪ್ರಯೋಗಿಸಿರುವನೆಂದೂ ಹೇಳುವರು.

---

* ಸರ್ವಜ್ಞಸ್ಸುಗತೋ ಬುದ್ಧೋ ಧರ್ಮರಾಜಸ್ತಥಾಗತಃ । (ನಾಮಲಿಂಗಾನುಶಾಸನ.)

§ ಪಾಣಿನಿಯ ಸೂತ್ರಪ್ರಕಾರ ಇಲ್ಲಿ 'ಸರ್ವೀಯ' ಎಂದಿರಬೇಕು. ಹೇಗೆಂದರೆ— 'ಛ' ಪ್ರತ್ಯಯ ಬರುವುದರಿಂದ ಈ ಶಬ್ದದ ಮೊದಲನೆಯ ಸ್ವರಾಕ್ಷರವಾದ 'ಸ' ಎಂಬುದು ವೃದ್ಧಿಯನ್ನು ಹೊಂದುವುದಿಲ್ಲ. 'ತದ್ಧಿತಪ್ರಕರಣೇ ಸರ್ವಪುರುಷಾಭ್ಯಾಂ ಣಢಞೌ' (ಪಾ. ೫—೧—೧೦) ಸರ್ವಾಣ್ಣೋವೇತಿ ವಕ್ತವ್ಯಂ । (ವಾ) ಸರ್ವಸ್ಮೈ ಹಿತಂ ಸಾರ್ವಂ—ಸರ್ವೀಯಂ । (ಸಿದ್ಧಾಂತ ಕೌಮುದೀ ಪುಟ ೧೫೦).

ಪ್ರೊ. ಪತಕ್‌ರವರು 'ಭಾಮುಹನ ತಂದೆಯ ಹೆಸರು ರಾಕ್ರಿಲಗೋಮಿ, ಇವನು ಬೌದ್ಧನು. ಆದುದರಿಂದ ಇವನ ಮಗ **ಭಾಮಹನೂ** ಬುದ್ಧಮತಾವಲಂಬಿಯಾಗಿರಬೇಕು' ಎಂದು ಹೇಳುವರು.

ವರ್ಧಮಾನನು ತಾನು ಬರೆದಿರುವ 'ಗಣರತ್ನಮಹೋದಧಿ' ಎಂಬ ಗ್ರಂಥದಲ್ಲಿ—

"ಶಾಲಾತುರೀಯ ಶಕಟಾಂಗಜ ಚಂದ್ರಗೋಮಿ"।

ಪೂಜ್ಯಶ್ಚಂದ್ರಃ ಚಂದ್ರಗೋಮೀ "ಗೋಮಿನ್ ಪೂಜ್ಯ" ಇತಿ।

ಎಂದು ಹೇಳಿರುವುದಲ್ಲದೆ—

"ಗೋಮಿನ್ ಪೂಜ್ಯೇ ಗೋಮಿನ್ನಿತಿ ಪೂಜ್ಯೇ ನಿಪಾತ್ಯತೇ ।
ಗೋಮಾನ್ ಅನ್ಯಃ।"

ಎಂದು ಚಂದ್ರವ್ಯಾಕರಣಸೂತ್ರವನ್ನು ಉದಹರಿಸಿರುವನು.‡

ಮಿ. ಎಮ್. ಟಿ. ನರಸಿಂಹಯ್ಯಂಗಾರ್ಯರವರು 'ಸಾರ್ವ'ಶಬ್ದವು ಜಿನನನ್ನು ಹೇಳುವ ಶಬ್ದದಲ್ಲೊಂದಾಗಿದೆಯೆಂದು 'ಹೇಮಚಂದ್ರ'ನು ತನ್ನ 'ಅಭಿಧಾನಚಿಂತಾಮಣಿ'ಯಲ್ಲಿ ಹೇಳಿರುವನೆಂದೂ 'ಸರ್ವೀಯ' ಶಬ್ದವು ಜಿನನ ಹೆಸರನ್ನು ಹೇಳುವುದೆಂದು ಜಿನದೇವಮುನೀಶ್ವರನು ತಾನು ಬರೆದಿರುವ "ಅಭಿಧಾನಚಿಂತಾಮಣಿಶೀಲೋಂಛ"ದಲ್ಲಿ ನಿಷ್ಕರ್ಷಿಸಿ ಬರೆದಿರುವನೆಂದೂ 'ಗೋಮಿನ್'ಶಬ್ದವು ಬುದ್ಧಮತದ ಗೌರವಾರ್ಥಶಬ್ದವೆಂದೂ ಪುರುಷೋತ್ತಮನು ತನ್ನ ತ್ರಿಕಾಂಡಶೇಷದಲ್ಲಿ§ ಗೋಮಿನ್ ಶಬ್ದವು ಬುದ್ಧನ ಶಿಷ್ಯರ ಹೆಸರೆಂದು ಹೇಳಿರುವನೆಂದೂ ಬೌದ್ಧರಲ್ಲಿ ಪ್ರಖ್ಯಾತರಾದ ರಾಹುಲ, ರಾಮಿಲ, ಸೋಮಿಲ, ಪೋತಲ, ಜಂಭಲ ಎಂಬುವರಂತೆ ಭಾಮಹನ ತಂದೆಯ ಹೆಸರು 'ರಾಕ್ರಿಲ'ನೆಂದಿರುವುದೆಂದೂ ಆಗಿನ ಕಾದಲ್ಲಿ ಪ್ರಸಿದ್ಧರಾಗಿದ್ದ ಬೌದ್ಧಮತದವರ ಅನೇಕಹೆಸರುಗಳು ಜೈನರ ಕೋಶಗಳಲ್ಲಿ ಸೇರಿಹೋಗಿರಬೇಕೆಂದೂ ಪ್ರತಿಪಾದಿಸಿರುವರು.¶

'ಗೋಮಿ' ಶಬ್ದವು ಗೋಸ್ವಾಮಿಶಬ್ದದ ಸಂಕ್ಷಿಪ್ತರೂಪವೆಂದು ನೈಘಂಟುಕರು ಹೇಳಿರುವರು. ಪ್ರೊ. ತ್ರಿವೇದಿಯವರೂ ಮತ್ತು ಪಂಡಿತ ಅನಂತಾ

‡ Indian Antiquary. Oct. 1912, P. 235—237.

§ ಶ್ರಾಮಣೇರಃ ಪ್ರವ್ರಜಿತೋ ಮಹಾಪಾಸಕಗೋಮಿನಾ ॥ ೧—೫ ॥

¶ The Journal of the Royal Asiatic Socitey. July 1905.

ಚಾರ್ಯರವರೂ "ಚಂದ್ರಗೋಮಿಯೇ ಮೊದಲಾದ ಅನೇಕಬ್ರಾಹ್ಮಣಕವಿಗಳು ಸಂಸ್ಕೃತವಾಙ್ಮಯದಲ್ಲಿ ದೊರಕುವರು" ಎಂದು ಹೇಳಿರುವರು.

ಮತ್ತು ಇವನ ಮಂಗಳಾಚರಣಶ್ಲೋಕದಲ್ಲಿ ಕಾಣಬರುವ 'ಸರ್ವಜ್ಞ' ಶಬ್ದವು ಬುದ್ಧನಿಗೆ ಹೇಗೆ ಅನ್ವಯಿಸುವುದೋ; ಹಾಗೆಯೇ ಶಿವನಿಗೂ ಅನ್ವಯಿಸುವುದು. 'ಸರ್ವಜ್ಞ'ಶಬ್ದಕ್ಕೆ 'ಶಿವ'ನೆಂದೂ ಮಂಗಳವೆಂದೂ ಅರ್ಥಮಾಡಿ ಮಂಗಳಾಚರಣೆಯನ್ನು ಏಕೆ ಮಾಡಿರಬಾರದೆಂದು ತೋರುತ್ತದೆ. ಈ ಶ್ಲೋಕವು ಶಿವನಿಗಲ್ಲದೆ ವಿಷ್ಣುವಿಗೂ ಅನ್ವಯಿಸುವುದು. ಇವರೀರ್ವರಿಗೂ ಇವನು ಭೇದವನ್ನು ಕಲ್ಪಿಸಿರುವಂತೆ ತೋರುವುದಿಲ್ಲ. ಐದನೆಯ ಅಧ್ಯಾಯದಲ್ಲಿ 'ಪ್ರತ್ಯಕ್ಷಪ್ರಮಾಣ'ವಿಷಯವನ್ನು ಸಮರ್ಥಿಸುವಾಗ 'ಸಾರಮಾರ್ಥಿಕವಿಚಾರ'ದಲ್ಲಿ ಹೆಚ್ಚು ಗೌರವವುಳ್ಳವನೆಂದು ತೋರ್ಪಡಿಸಿಕೊಂಡಿರುವನು. ಇವನು 'ವಸ್ತುನಿಶ್ಚಯತತ್ತ್ವವೃತ್ತಿ'ಯಲ್ಲಿ ನಂಬಿಕೆಯುಳ್ಳವನೂ ಮತ್ತು ಅದರಲ್ಲಿ ಕಂಡುಬರುವ ಸದ್ಗ್ರಾಹ್ಯವಿಚಾರಪ್ರಶಂಸಕನೂ ಆಗಿರಬೇಕೆಂದು ಬೋಧೆಯಾಗುವುದು. 'ಕಾವ್ಯಾಲಂಕಾರ'ದ ನಾಲ್ಕನೆಯ ಅಧ್ಯಾಯದ ೪೭ನೆಯ "ಭೂಭೃತಾಂ ಪಿತ ಸೋಮಾನಾಂ" ಎಂಬ ಶ್ಲೋಕದಲ್ಲಿ ಸೋಮಯಜ್ಞವಿಚಾರವನ್ನು ಬಹಳವಾಗಿ ಕೊಂಡಾಡಿರುವನು. ಬ್ರಾಹ್ಮಣನೂ ಬ್ರಹ್ಮಚಾರಿಯೂ ಆದವನು ವಿವಾಹಸಂಸ್ಕಾರವಿಲ್ಲದೆ ಯಾವ ಹೆಂಗಸಿನೊಡನೆಯೂ ಯಾವವಿಧವಾದ ಸಂಪರ್ಕವ್ಯವಹಾರಗಳನ್ನೂ ಮಾಡಕೂಡದೆಂದು ಇನ್ನೊಂದು ಕಡೆಯಲ್ಲಿ ಹೇಳಿರುವನು. ಇವಲ್ಲದೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳನ್ನು ಹೇಳಿ ಇವುಗಳಿಗೆ ತಕ್ಕ ಉದಾಹರಣೆಗಳನ್ನು ರಾಮಾಯಣ ಮತ್ತು ಭಾರತೇತಿಹಾಸಪುರಾಣಗಳಿಂದಲೇ ಆರಿಸಿಕೊಂಡು ಹೇಳಿರುವುದರಿಂದ ಇವನು ಹಿಂದೂಮತಾವಲಂಬಿಯೂ ವೈದಿಕನೂ ಆಗಿದ್ದಂತೆ ಕಾಣಬರುವುದು. ಭಾಮಹನು ಬೌದ್ಧನು, ಬುದ್ಧಮತಪ್ರಾಬಲ್ಯಕಾಲದಲ್ಲಿದ್ದವನು ಎಂದು ಹೇಳುವುದಕ್ಕೆ ಪ್ರತಿಯಾಗಿ ಬ್ರಾಹ್ಮಣನೂ ವೈದಿಕಪಕ್ಷಪಾತಿಯೂ ಎಂದು ಹೇಳಬಹುದಾಗಿದೆ.

**ಕಾಲವಿಚಾರ**— ಪ್ರೊ. ಪತಕ್‌ರವರು, ಪ್ರೊ. ಕೇನ್‌ರವರು ಮತ್ತು ಎಂ. ಎಮ್. ಟಿ. ನರಸಿಂಹಯ್ಯಂಗಾರ್ಯರವರು ಆಚಾರ್ಯದಂಡಿಯ ನಂತರ ಅಂದರೆ ಸುಮಾರು ಕ್ರಿ. ಶ. ೮ನೆಯ ಶತಮಾನದಲ್ಲಿ ಭಾಮಹನು ಇದ್ದಿರಬೇಕೆಂದು ಹೇಳುವರು. ಪ್ರೊ. ತ್ರಿವೇದಿಯವರು, ಪಂಡಿತ ಅನಂತಾಚಾರ್ಯರವರು ಮತ್ತು ಎಂ. ಆರ್. ನರಸಿಂಹಾಚಾರ್ಯರವರು, ಪ್ರೊ. ರಂಗಾಚಾರ್ಯರವರು ಭಾಮಹನು ದಂಡಿಗಿಂತಲೂ ಪ್ರಾಚೀನನೆನ್ನುವರು.

ಭಾಮಹನು ಹೇಳಿರುವ ನ್ಯಾಸಕಾರನು 'ಕಾಶಿಕಾವಿವರಣಪಂಚಿಕಾ'ಎಂಬ ಗ್ರಂಥಕರ್ತನಾದ ಜಿನೇಂದ್ರಬುದ್ಧಿಯೆಂದೂ ಇವನ (ಕಾಲ ಕ್ರಿ. ಶ. ೮ನೆಯ ಶತಮಾನ)ಅನಂತರ ಭಾಮಹನಿದ್ದಿರಬೇಕೆಂದೂ ಪ್ರೊ. ಪತಕ್‌ರವರು ಹೇಳುವರು. ಜಿನೇಂದ್ರಬುದ್ಧಿಗಿಂತಲೂ ಪೂರ್ವದಲ್ಲಿ ಶಾಕಟಾಯನ, ಪ್ರಭಾಚಂದ್ರನೇ ಮೊದಲಾದ ನ್ಯಾಸಕಾರರಿದ್ದರೆಂದು ಹೇಳಲು ಆಧಾರಗಳು ಇರುವುವು. ಅಲ್ಲದೆ ಪ್ರೊ. ತ್ರಿವೇದಿಯವರು ಭಾಮಹನು ದಂಡಿಗಿಂತಲೂ ಪ್ರಾಚೀನನೆಂದು ಹೇಳಲು ಪಾಣಿನಿಯ ಸೂತ್ರಗಳನ್ನು ಬೇಕಾದಷ್ಟು ವಿವರಿಸಿ, ನ್ಯಾಸಕಾರರ ವಿಚಾರಗಳನ್ನು ವಿಶದೀಕರಿಸಿ, ಭಾಮಹನು ಹೇಳುವ ನ್ಯಾಸಕಾರನು ಜಿನೇಂದ್ರಬುದ್ಧಿಯಲ್ಲವೆಂದು ಮುಕ್ತಕಂಠರಾಗಿ ಹೇಳಿರುವರು.*

ಮೈಸೂರು ಶಾಸನದ ೭೧ನೆಯ ಪುಟದಲ್ಲಿ ಪಾಣಿನಿಗೆ ಪೂಜ್ಯಪಾದನೊಬ್ಬನು ನ್ಯಾಸವನ್ನು ಬರೆದಿರುವುದಾಗಿ ಮಿ. ಆರ್. ನರಸಿಂಹಾಚಾರ್ಯರವರು ಹೇಳಿರುವರು. ಮಿ. ರೈಸ್‌ರವರು ಪೂಜ್ಯಪಾದನ ಕಾಲವನ್ನು ಐದನೆಯ ಶತಮಾನವೆಂದು ನಿರ್ಣಯಿಸಿರುವರು. ಭಾಮಹನು ಹೇಳುವ ನ್ಯಾಸಕಾರನು ಇವನೇ ಆಗಿದ್ದರೂ ಇರಬಹುದಾಗಿ ತೋರುತ್ತದೆ.

ದಂಡಿಯ ಕಾವ್ಯಾದರ್ಶಕ್ಕೆ ಈರ್ವರು ವ್ಯಾಖ್ಯಾನಕಾರರು ಇರುವರು. ಇವರಲ್ಲಿ ಒಬ್ಬನು ಗೊತ್ತಿಲ್ಲದವನು; ಮತ್ತೊಬ್ಬನು 'ತರುಣವಾಚಸ್ಪತಿ' ಯೆಂಬುವನು ಎಂದು ಪ್ರೊ. ರಂಗಾಚಾರ್ಯರು 'ಕಾವ್ಯಾದರ್ಶ'ದ ಭೂಮಿಕೆಯಲ್ಲಿ ಬರೆದಿರುವರು.

ತರುಣವಾಚಸ್ಪತಿಯು ತನ್ನ ವ್ಯಾಖ್ಯಾನದಲ್ಲಿ—

(೧)　**ಕನ್ಯಾಹರಣಸಂಗ್ರಾಮವಿಪ್ರಲಂಭೋದಯಾದಯಃ |**
**ಸರ್ಗಬಂಧಸಮಾ ಏವ ನೈತೇ ವೈಶೇಷಿಕಾ ಗುಣಾಃ || ೧—೨೯ ||**

ಭಾಮಹೇನ— 'ಕನ್ಯಾಹರಣಸಂಗ್ರಾಮವಿಪ್ರಲಂಭೋದಯಾನ್ವಿತಾ' ಇತಿ ಆಖ್ಯಾಯಿಕಾವಿಶೇಷಣತಯಾ ಉಕ್ತಂ। ಆಖ್ಯಾಯಿಕಾಭೇದ ಏವ ಅತ್ರ ನಿರಾಕೃತಃ । ಏತಾನ್ಯಂಗಾನಿ ಗದ್ಯಪ್ರಬಂಧಸ್ಯ ಅಸಾಧಾರಣಾನಿ ನ, ಕಿಂತು; ಸರ್ಗಬಂಧಸ್ಯಾಪಿ ಸಾಧಾರಣಾನಿ ಇತ್ಯಾಹ— ಕನ್ಯೇತಿ ||

**ಹೇತುಶ್ಚ ಸೂಕ್ಷ್ಮಲೇಶೌ ಚ ವಾಚಾಮುತ್ತಮಭೂಷಣಂ |**
**ಕಾರಕಜ್ಞಾಪಕೌ ಹೇತೂ ತೌ ಚಾನೇಕವಿಧೌ ಯಥಾ || ೨—೨೩೫ ||**

* The Indian Antequary Oct. 1912.

ಹೇತುಂ ಲಕ್ಷಯಿಷ್ಯನ್ ಭಾಮಹೇನೋಕ್ತಂ— 'ಹೇತುಶ್ಚ ಸೂಕ್ಷ್ಮಲೇಶೌ ಚ ನಾಲಂಕಾರತಯಾ ಮತಾಃ।' ಇತ್ಯೇತತ್ ಪ್ರತಿಕ್ಷಿಪತಿ- ಹೇತುಶ್ಚೇತಿ ।

ಪ್ರತಿಜ್ಞಾಹೇತುದೃಷ್ಟಾಂತಹಾನಿರ್ದೋಷೋ ನವೇತ್ಯಸೌ ।
ವಿಚಾರಃ ಕರ್ಕಶಪ್ರಾಯಸ್ತೇನಾಲೀಢೇನ ಕಿಂ ಫಲಂ ॥ ೪—೪ ॥

ದಶೈವೇತ್ಯವಧಾರಣಂ ನ ಯುಕ್ತಂ, ಭಾಮಹೇನೋಕ್ತಾನಾಂ ಪ್ರತಿಜ್ಞಾಹಾನ್ಯಾದೀನಾಮಪಿ ವಿದ್ಯಮಾನತ್ವಾತ್; ಇತಿ ಚೇತ್, ಆಹ— ಪ್ರತಿಜ್ಞೇತಿ ।

ಎಂದು ಭಾಮಹನನ್ನುದಹರಿಸಿರುವನು.

(೨) ಪ್ರಾಚೀನಾಲಂಕಾರಿಕರೆಲ್ಲರೂ 'ಭಾಮಹಾದಯಃ' ಎಂದು ಹೇಳಿರುವರೇ ಹೊರತು 'ದಂಡ್ಯಾದ್ಯನುಮತೇನ' ಅಥವ 'ದಂಡ್ಯಾದಯಃ' ಎಂದು ಹೇಳಿರುವುದಿಲ್ಲ.

(೩) ಪೂರ್ವೇಭ್ಯೋ ಭಾಮಹಾದಿಭ್ಯಃ ಸಾದರಂ ವಿಹಿತಾಂಜಲಿಃ ।
ವಕ್ಷ್ಯೇ ಸಮ್ಯಗಲಂಕಾರಶಾಸ್ತ್ರಸರ್ವಸ್ವಸಂಗ್ರಹಂ ॥ —ಪ್ರತಾಪರುದ್ರೀಯ ೧—೨ ॥

ಭಾಮಹೋದ್ಭಟಪ್ರಭೃತಯಶ್ಚಿರಂತನಾಲಂಕಾರಕಾರಾಃ ।
—ಅಲಂಕಾರಸರ್ವಸ್ವ. ಪುಟ ೩.

ಭಾಮಹಾದಿಮತೇನ ತು ಅರ್ಥಾಂತರನ್ಯಾಸ ಏವ।
—ರುದ್ರಟನ ಕಾವ್ಯಾನುಶಾಸನ. ಪುಟ ೧೧೬.

ಎಂದು ಗ್ರಂಥಾಂತರಗಳಿಂದ ತಿಳಿಯಬರುವುದಲ್ಲದೆ—

(೪) ಮಮ್ಮಟ, ಅಭಿನವಗುಪ್ತ ಮತ್ತು ರಾಘವಭಟ್ಟ- ಇವರೇ ಮೊದಲಾದವರು ಭಾಮಹನ ಅಲಂಕಾರಶಾಸ್ತ್ರವನ್ನು ಗೌರವಿಸಿ ಇದನ್ನು **'ಆಕರ'**ವೆಂದು ಕರೆದಿರುವರು.

(೫) ರಾಮಶರ್ಮ, ಶಾಖವರ್ಧನನೇ ಮೊದಲಾದ ಗ್ರಂಥಕರ್ತರೂ ಅಚ್ಯುತೋತ್ತರ, ರತ್ನಾಹರಣ, ರಾಜಮಿತ್ರ ಮತ್ತು ಅಸ್ಮಾಕವಂಶ ಇವೇ ಮೊದಲಾದ ಗ್ರಂಥಗಳೂ ಭಾಮಹನನ್ನು ಬಹು ಪ್ರಾಚೀನಾಲಂಕಾರಿಕನೆಂದು ಹೇಳಿರುವುದಾಗಿತಿಳಿಯಬರುತ್ತದೆ.‡

ಭಾಮಹನು 'ಕಥೆಯೇ ಬೇರೆ; ಆಖ್ಯಾಯಿಕೆಯೇ ಬೇರೆ.' ಎಂದು ಹೇಳಿರುವನು. ದಂಡಿಯು ಇವೆರಡೂ ಸಮಾನಾರ್ಥವೆಂದೂ ಹೆಸರು ಮಾತ್ರ ಬೇರೆ ಬೇರೆ ಎಂದೂ ಹೇಳಿರುವನು.

‡ Bhamaha by Pandit A. Ananthacharya.

ಭಾಮುಹನು ಇವೆರಡರ ವ್ಯತ್ಯಾಸವನ್ನು ಹೀಗೆ ತೋರಿಸಿರುವನು—

ಆಖ್ಯಾಯಿಕಾ ಸೋಚ್ಛ್ವಾಸಾ ಕಥಾ ನೋಚ್ಛ್ವಾಸವತೀ ।
ಆಖ್ಯಾಯಿಕಾಯಾಂ ವಕ್ತ್ರಂ ಚಾಪರವಕ್ತ್ರಂ ಚ ಕಥಾಯಾಂ
ನ ವಕ್ತ್ರಂ ನಾಪ್ಯಪರವಕ್ತ್ರಂ ।
ಆಖ್ಯಾಯಿಕಾಯಾಂ ನಾಯಕೇನ ಸ್ವವೃತ್ತಮಾಖ್ಯಾಯತೇ ।
ಕಥಾಯಾಮನ್ಯೈರ್ನಾಯಕವೃತ್ತಮಾಖ್ಯಾಯತೇ ।

ಮೇಲಣ ಭಾಮುಹನ ಅಭಿಪ್ರಾಯವನ್ನು ದಂಡಿಯು ಮನ್ನಿಸದೆ ಇರುವುದರಿಂದ ಭಾಮುಹನು ದಂಡಿಗಿಂತಲೂ ಪ್ರಾಚೀನನೆನ್ನಬಹುದು. 'ಗತೋಽಸ್ತಮರ್ಕಃ' ಮೊದಲಾದ ಶಬ್ದಪ್ರಯೋಗಗಳು ಸರಿಯಲ್ಲವೆಂದು ಭಾಮುಹನು ತಿರಸ್ಕರಿಸಿರುವುದನ್ನು ದಂಡಿಯು ಪುರಸ್ಕರಿಸಿರುವನು. ಭಾಮುಹನು ಹೇಳಿರುವ ದೋಷಗಳಲ್ಲಿ ಹತ್ತು ದೋಷಗಳನ್ನು ದಂಡಿಯೂ ಹೇಳಿ ಹನ್ನೊಂದನೆಯದನ್ನು ಮಾತ್ರ ಖಂಡಿಸಿರುವನು.

**ಅದ್ಯ ಯಾ ಮಮ ಗೋವಿಂದ! ಜಾತಾ ತ್ವಯಿ ಗೃಹಾಗತೇ ।**
**ಕಾಲೇ ನೈಷಾ ಭವೇತ್ಪ್ರೀತಿಸ್ತವೈವಾಗಮನಾತ್ಪುನಃ ॥ ೩–೫ ॥**

ಎಂಬ ಶ್ಲೋಕವನ್ನು ಭಾಮುಹನೂ (೩—೫) ದಂಡಿಯೂ (೨—೨೭೬) ಹೇಳಿರುವರು.

ಭಾಮುಹನು ತನ್ನ ಉದಾಹರಣೆಗಳು ಸ್ವಕಪೋಲಕಲ್ಪಿತಗಳೆಂದು—

**ಸ್ವಯಂಕೃತೈರೇವ ನಿದರ್ಶನೈಶ್ಚ**
**ಇಯಂ ಪ್ರಕ್ಲೃಪ್ತಾ ಖಲು ವಾಗಲಂಕೃತಿಃ ॥ ೩–೯೬ ॥**

ಎಂಬ ಶ್ಲೋಕದಲ್ಲಿ ಹೇಳಿಕೊಂಡಿರುವನು. ದಂಡಿಯಾದರೊ ರಾಜಮಿತ್ರ, ಅಚ್ಯುತೋತ್ತರ ಮೊದಲಾದ ಗ್ರಂಥಗಳಿಂದ ತಾನು ಕೆಲವು ಶ್ಲೋಕಗಳನ್ನು ತೆಗೆದುಕೊಂಡಿರುವುದಾಗಿ ಹೇಳಿರುವನು.

**ಯದುಕ್ತಂ ತ್ರಿಪ್ರಕಾರತ್ವಂ ತಸ್ಯಾಃ ಕೈಶ್ಚಿನ್ಮಹಾತ್ಮಭಿಃ ।**

ಎಂಬ ದಂಡಿಯ ವಚನಕ್ಕೆ ಭಾಮುಹನು ವಿರೋಧವಾಗಿ ಹೇಳಿರುವನೆಂದೂ ದಂಡಿಯ ಗ್ರಂಥದಲ್ಲಿ ಕಾಣಬರುವ ಉಪಮಾ ಮೂರು ಭೇದಗಳು ಭಾಮುಹನ ಗ್ರಂಥದಲ್ಲಿಯೂ ಕಾಣಬರುವುದರಿಂದ ಭಾಮುಹನು ದಂಡಿಗಿಂತ ಈಚಿನವನೆಂದು ಪ್ರೊ. ಪತಕ್‌ರವರು ಹೇಳುವರು. ಇದು ಸರಿಯೆಂದು ಹೇಳಲಾಗುವುದಿಲ್ಲ. ಹೇಗೆಂದರೆ– ದಂಡಿಯು ಉಪಮಾಲಂಕಾರವೇ ಮೊದಲಾದ ಮೂರು ಭೇದಗಳನ್ನು ಮಾತ್ರ ಹೇಳಿರುವುದಿಲ್ಲ; ಸುಮಾರು ಮೂವತ್ತೆರಡು ಭೇದಗಳನ್ನು ಹೇಳಿರುವನು.

**ನಾಲೋಪಮಾದಿಸರ್ವೋಽಪಿ ನ ಜ್ಯಾಯಾನ್ ವಿಸ್ತರೋ ಮುಧಾ ||**

ಎಂದು ಭಾಮಹನು ಹೇಳಿರುವನು. ಒಂದು ವೇಳೆ ಇವನು ದಂಡಿಗಿಂತ ಈಚಿನವನಾಗಿದ್ದಪಕ್ಷದಲ್ಲಿ ಹೀಗೆ ಹೇಳುವದಕ್ಕೆ ಬದಲು ದಂಡಿಯು ಹೇಳುವಂತೆ 'ಧರ್ಮೋಪಮಾದಿ'ಎಂದು ಹೇಳಬಹುದಾಗಿತ್ತು. ಲೋಕದ ತಿಳಿವಳಿಕೆಗೆ ಸಾಧಕವಾದ ಕಥೆಗಳನ್ನು ಬರೆಯಲು ಪ್ರಾಕೃತ ಮತ್ತು ಅಪಭ್ರಂಶಭಾಷೆಗಳ ಪ್ರಯೋಜನವನ್ನು ಕರಿತು ಭಾಮಹನು—

**ನ ವಕ್ತ್ರಾಪರವಕ್ತ್ರಾಭ್ಯಾಂ ಯುಕ್ತಾ ನೋಚ್ಛ್ವಾಸವತ್ಯಪಿ |**
**ಸಂಸ್ಕೃತಂ ಸಂಸ್ಕೃತಾ ಚೇಷ್ಟಾ ಕಥಾಪಭ್ರಂಶಭಾಕ್ತಥಾ || ೧—೨೮ ||**

ಎಂದು ಹೇಳಿರುವನು. ದಂಡಿಯು ಇದನ್ನು ಹೇಳಿರುವುದಿಲ್ಲ. ಪ್ರೊ. ರಂಗಾಚಾರ್ಯರೇ ಮೊದಲಾದವರು ಭಾಮಹನ ಪ್ರಾಚೀನತೆಯನ್ನು ವ್ಯಕ್ತಪಡಿಸಿರುವುದರಿಂದಲೂ ಪ್ರಾಚೀನಾಲಂಕಾರಿಕರೆಲ್ಲರೂ ಇವನ ಕಾವ್ಯವನ್ನು 'ಆಕರ'ವೆಂದು ಹೇಳಿರುವುದರಿಂದಲೂ ತರುಣವಾಚಸ್ಪತಿಯು ಉದಾಹರಣೆಗಳ ಮೂಲಕ ಸ್ಪಷ್ಟಗೊಳಿಸಿರುವುದರಿಂದಲೂ ಭಾಮಹನು ದಂಡಿಗಿಂತ ಪ್ರಾಚೀನನಾಗಿರಬೇಕು.

ಪ್ರೊ. ಎಮ್. ಕೃಷ್ಣಮಾಚಾರ್ಯರು– ಆಗ ಶೈಶವದಲ್ಲಿದ್ದ ಅಲಂಕಾರಶಾಸ್ತ್ರವು ಭಾಮಹನಿಂದ ಮೊದಲು ಬರೆಯಲ್ಪಟ್ಟು ಬಲಗೊಂಡಿತೆಂದೂ ತಮ್ಮ ಅಭಿಪ್ರಾಯದಲ್ಲಿ ಭಾಮಹನು ಐದನೆಯ ಶತಮಾನಕ್ಕೆ ಸೇರಿದವನೆಂದೂ ಹೇಳಿರುವರು.* ಈ ಕಾರಣಗಳಿಂದ ಭಾಮಹನು ಕ್ರಿ. ಶ. ಐದನೆಯ ಶತಮಾನದವನಾಗಿರಬೇಕು.

ಈತನ ಶೈಲಿಯು ಹೃದಯಂಗಮವಾಗಿಯೂ ವಾಕ್ಸರಣಿಯು ಸರಳವಾದುದಾಗಿಯೂ ಅರ್ಥಸೂಚನೆಯು ಗಂಭೀರವಾದುದಾಗಿಯೂ ಇರುವುದು.

ಈ ವಿಚಾರದಲ್ಲಿ ಪಾಶ್ಚಾತ್ಯಪಂಡಿತರೊಬ್ಬರು—

"His diction is lucid, his expressions are happy, his logic is perfect."

ಎಂದು ಹೇಳಿ ಈತನನ್ನು ಗೌರವಿಸಿರುವರು.

ಈತನ ಕಾವ್ಯದ ಕೆಲವು ಶ್ಲೋಕಗಳು—

**ಪರಾನೀಕಾನಿ ಭೀಮಾನಿ ವಿವಕ್ಷೋರ್ನ ತವ ವ್ಯಥಾ |**
**ಸಾಧುವಾಸಾಧುವಾಗಾಮಿ ಪುಂಸಾಮಾತ್ಮೈವ ಶಂಸತಿ || ೨—೩೭ ||**

---

* History of Classical Sanskrit Literature P. 161.

ಪ್ರಾಣಿತಪ್ರಣಿಯಿ(?)ಸ್ವಾದು ಕಾಲೇ ಪರಿಣತಂ ಬಹು ।
ವಿನಾ ಪುರುಷಕಾರೇಣ ಫಲಂ ಪಶ್ಯತ ಶಾಖಿನಾಂ ॥ ೩—೩೦ ॥

ಪ್ರದಾಯ ವಿತ್ತಮರ್ಥಿಭ್ಯಃ ಸ ಯಶೋಧನಮಾದಿತ ।
ಸತಾಂ ವಿಶ್ವಜನೀನಾನಾಂ ಇದಮಸ್ಖಲಿತಂ ವ್ರತಂ ॥ ೩—೪೨ ॥

ಕೋರಿದವರಿಗೆ ಕೋರಿದುದನ್ನು ಕೊಟ್ಟು ಯಶೋಲಾಭವನ್ನು ಹೊಂದುವುದೇ ಲೋಕೋಪಕಾರಿಗಳಾದ ಮಹಾತ್ಮರ ಏಕನಿಷ್ಠೆಯಾಗಿರುವುದು.



# ಭರ್ತೃಹರಿ

ಈ ಕವಿಯು ಈ ಪ್ರಪಂಚಧಾಮದಿಂದ ಮರೆಯಾಗಿ ಎಷ್ಟೋ ಶತಮಾನಗಳು ಆಗಿ ಹೋಗಿರುವುವು. ಇವನ ವಿಚಾರವಾಗಿ ಎಷ್ಟೋ ದಂತ ಕಥೆಗಳು ಪ್ರಚುರಗೊಂಡಿವೆ.

ಅರ್ವಾಚೀನಕೋಶದಲ್ಲಿ "ಭರ್ತೃಹರಿಯ ತಂದೆಯ ಹೆಸರು ವೀರಸೇನ. ಇವನು ಗಂಧರ್ವನು. ಇವನಿಗೆ ಭರ್ತೃಹರಿ, ವಿಕ್ರಮಾದಿತ್ಯ, ಸುಭಟವೀರ್ಯ, ಮೈನಾವತಿ ಎಂಬ ನಾಲ್ಕು ಜನ ಮಕ್ಕಳು. ಜಂಬೂದ್ವೀಪದ ಒಡೆಯನ ಒಬ್ಬಳೇ ಮಗಳಾದ ಸುಶೀಲೆಯೇ ಭರ್ತೃಹರಿಯ ತಾಯಿ. ರಾಜನು ತನಗೆ ಗಂಡುಸಂತಾನವಿಲ್ಲದುದರಿಂದ ದೌಹಿತ್ರನಾದ ಭರ್ತೃಹರಿಗೆ ರಾಜ್ಯಭಾರವನ್ನೊಪ್ಪಿಸಿದನು. ಇವನು ಉಜ್ಜಯಿನಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೆಲಕಾಲ ರಾಜ್ಯವಾಳಿ ಅನಂತರ ವಿಕ್ರಮಾದಿತ್ಯನಿಗೆ ರಾಜ್ಯಭಾರವನ್ನೊಪ್ಪಿಸಿ ಸುಭಟವೀರ್ಯನನ್ನು ಸೇನಾಧಿಕಾರಿಯಾಗಿ ನೇಮಿಸಿದನು" ಎಂದು ಹೇಳಲ್ಪಟ್ಟಿದೆ. ಒಂದೆರಡು ಮರಾಠೀಗ್ರಂಥಗಳಲ್ಲಿ 'ಭರ್ತೃಹರಿಯ ತಂದೆಯ ಹೆಸರು ಗಂಧರ್ವಸೇನ, ಇವನಿಗೆ ನಾಲ್ಕು ಜನ ಹೆಂಡತಿಯರು ಇದ್ದರು. ಇವರಲ್ಲಿ ಹುಟ್ಟಿದವರಲ್ಲಿ ದೊಡ್ಡವನೇ ಭರ್ತೃಹರಿ, ಚಿಕ್ಕವನೇ ವಿಕ್ರಮಾದಿತ್ಯ' ಎಂದು ಹೇಳಿರುವುದೇ ಹೊರತು ಇತರ ಮಕ್ಕಳ ಹೆಸರನ್ನು ಹೇಳಿರುವುದಿಲ್ಲ. ಮ॥ ಶೇಷಗಿರಿಶಾಸ್ತ್ರಿಗಳು "ಚಂದ್ರಗುಪ್ತನೆಂಬ ಬ್ರಾಹ್ಮಣನು ಚಾತುರ್ವರ್ಣ್ಯದಲ್ಲಿಯೂ ಒಬ್ಬೊಬ್ಬಳನ್ನು (ಕ್ರಮವಾಗಿ ಬ್ರಾಹ್ಮಣಿ, ಭಾನುಮತಿ, ಭಾಗ್ಯವತಿ, ಸಿಂಧುಮತಿ) ಮದುವೆ ಮಾಡಿಕೊಂಡನು. ಅವರಲ್ಲಿ ಮೊದಲನೆಯವಳ ಮಗನೇ ವರರುಚಿ, ಎರಡನೆಯವಳ ಮಗನೇ ವಿಕ್ರಮಾರ್ಕ, ಮೂರನೆಯವಳ ಮಗನೇ ಭಟ್ಟಿ, ನಾಲ್ಕನೆಯವಳ ಮಗನೇ ಭರ್ತೃಹರಿ. ವಿಕ್ರಮಾರ್ಕನು

ರಾಜನಾಗಿ ಭಟ್ಟಿಯು ಮಂತ್ರಿಪದವನ್ನಲಂಕರಿಸಿದನು" ಎಂದು ಹೇಳುವರು. ಇದೊಂದು ಮನೋರಂಜಕ ಕಥೆಯಾಗಿರಬೇಕೆಂದು ತೋರುವುದು. ಮಗಧ ದೇಶದ ದೊರೆಯಾದ ಸಿಂಹಸೇನನ ಮಗಳು ಪದ್ಮಾಕ್ಷಿಯೆಂಬುವಳು ಭರ್ತೃಹರಿಯ ಹೆಂಡತಿ. ಇವಳಿಗೆ ಪಿಂಗಳಾ ಎಂಬ ನಾಮಾಂತರವಿದ್ದುದಾಗಿಯೂ ತಿಳಿಯುಬರುತ್ತದೆ. ಕೆಲವು ದಂತಕಥೆಗಳಲ್ಲಿ ಇವಳ ಹೆಸರು ಅನಂಗಸೇನಾ ಎಂದಿದೆ. ಪ್ರೊ. ಹರಿಹರೋಪಾಧ್ಯಾಯರು ಭರ್ತೃಹರಿಯ ಹೆಂಡತಿಯ ಹೆಸರು ಭಾನುಮತಿ ಎಂದು ಹೇಳಿರುವರು. ವಿ. ಬೊಹಲೆನ್‌ಸಾಹೇಬರು ಭರ್ತೃಹರಿಗೆ ಮುನ್ನೂರು ಜನ ಹೆಂಡತಿಯರಿದ್ದರೆಂದು ಹೇಳಿರುವರು.

(೧). ಇವನು ಶಕಸ್ಥಾಪಕನೂ ಉಜ್ಜಯಿನಿಯ ಅರಸನೂ ಆದ ವಿಕ್ರಮಾರ್ಕನ ಅಣ್ಣನೆಂದೂ (೨) ವಿಕ್ರಮಾರ್ಕನ ಸಭೆಯ ನವಮಣಿಗಳಲ್ಲಿ ಒಬ್ಬನೆಂದೂ (೩) ಹೆಂಡತಿಯ ದುರಾಚಾರವಿಚಾರದಲ್ಲಿ ಮನನೊಂದು ರಾಜ್ಯಭಾರವನ್ನು ತನ್ನ ತಮ್ಮ(ವಿಕ್ರಮಾರ್ಕ)ನಿಗೆ ಕೊಟ್ಟು ಸನ್ಯಾಸಿಯಾಗಿ ಅಡವಿಯ ಪಾಲಾದನೆಂದೂ (೪) ಪತಂಜಲಿಯ ಮಹಾಭಾಷ್ಯಕ್ಕೆ ಒಂದು ಲಕ್ಷ ಕಾರಿಕೆಗಳನ್ನೂ ಭಟ್ಟಿಕಾವ್ಯವನ್ನೂ ರಾಹಟಕಾವ್ಯವನ್ನೂ ಶತಕತ್ರಯಗಳನ್ನೂ ವಿಜ್ಞಾನ ಶತಕವೆಂಬ ಗ್ರಂಥವನ್ನೂ ಬರೆದವನೆಂದೂ (೫) ಕಾಳಿದಾಸ, ಮತ್ಸ್ಯೇಂದ್ರನಾಥ ಮತ್ತು ಗೋರಕ್ಷನಾಥ ಇವರ ಸಮಕಾಲಿಕನೆಂದೂ (೬) ಪ್ರಸಿದ್ಧನಾದ ಹಠಯೋಗಿಯೆಂದೂ ವಿಧವಿಧವಾಗಿ ಹೇಳುವರು. ಇವುಗಳನ್ನೆಲ್ಲಾ ವಿಮರ್ಶಿಸಿ ನೋಡಿದರೆ ಈ ಕೆಳಗೆ ಹೇಳುವಂತೆ ತೋರಿಬರುವುದು.

'ವಿಕ್ರಮಾರ್ಕಮಹಾರಾಜಚರಿತ'ದಲ್ಲಿ—

> ಅಸ್ತಿ ಕಿಲ ಮಾಳವೇ ಸಮಸ್ತವಸ್ತುಸಂಪೂರ್ಣಾ ಸ್ವಗುಣಪರಾಭೂತಪುರಂದರಪುರವಿಭೂತಿರುಜ್ಜಯಿನೀ ನಾಮ ನಗರೀ । ತತ್ರ ಸಮಸ್ತಸಾಮಂತಸೀಮಂತಿನೀಸೀಮಂತಸಿಂದೂರಾರುಣಚರಣಕಮಲಯುಗಳೋ **ಭರ್ತೃಹರಿ**ರ್ನಾಮ ರಾಜಾಸೀತ್ । ಸ ಚ ಸಕಲಕಲಾಪ್ರವೀಣಃ ಸಮಸ್ತಶಾಸ್ತ್ರಾಭಿಜ್ಞಶ್ಚ । ತಸ್ಯ ಚ ರಾಜ್ಞಃ ಸ್ವವಿಕ್ರಮಾಪಹೃತವೈರಿವಿಕ್ರಮೋ ನಾಮಾನುಜೋಭೂತ್ ।

'ಮಾಳವರಾಜಧಾನಿಯಾದ ಉಜ್ಜಯಿನಿಯಲ್ಲಿ ಪ್ರತಾಪಿಯೂ ಸಕಲಕಲಾಪ್ರವೀಣನೂ ಆಗಿದ್ದ **ಭರ್ತೃಹರಿ** ಎಂಬ ಅರಸು ರಾಜ್ಯವನ್ನಾಳುತ್ತಿದ್ದನು. ಇವನಿಗೆ ಹೆಸರಿಗೆ ತಕ್ಕಂತೆ ಪರಮವಿಕ್ರಮನಾದ 'ವಿಕ್ರಮ'ನೆಂಬ ತಮ್ಮನಿದ್ದನು' ಎಂದು ಹೇಳಲ್ಪಟ್ಟಿದೆ. ಈ ವಿಕ್ರಮನು ಯಾರು? ಶಕಸ್ಥಾಪಕನಾದ ವಿಕ್ರ

ವುನೆ? ಅಲ್ಲ. ಏಕೆಂದರೆ– ವಿಕ್ರಮಾರ್ಕ ಶಕೆಯು **ಕ್ರಿ. ಪೂ.** ೫೬ರಲ್ಲಿ ಪ್ರಾರಂಭ ವಾದುದಾಗಿ ಚರಿತ್ರೆಯು ಹೇಳುತ್ತದೆ. ಇದರಿಂದ ಉಜ್ಜಯಿನಿಯನ್ನು ಆಳಿದ ರಾಜರಲ್ಲಿ 'ಭರ್ತೃಹರಿ'ರಾಜನಿಗೆ ವಿಕ್ರಮನೆಂಬ ತಮ್ಮನಿದ್ದಿರಬಹುದೆಂದು ಹೇಳ ಬಹುದೇ ಹೊರತು ಶಕಸ್ಥಾಪಕನಾದ ವಿಕ್ರಮಾದಿತ್ಯನು ಇವನ ಅಣ್ಣನೆಂದು ಹೇಳಲಾಗುವುದಿಲ್ಲ. ಕೆಲವರು ಭರ್ತೃಹರಿಯು ಜಂಬೂನಗರದಲ್ಲಿ ಆಳುತ್ತಿದ್ದ ನೆಂದೂ ಕೆಲವು ಕಾಲಾನಂತರ ಅದನ್ನು ಬಿಟ್ಟು ಉಜ್ಜಯಿನಿಯನ್ನು ರಾಜಧಾನಿ ಯನ್ನಾಗಿ ಮಾಡಿಕೊಂಡನೆಂದೂ ಹೇಳುವರು. ಈ ವಿಚಾರವಾಗಿ ಚಾರಿತ್ರಿಕ ದೃಷ್ಟಿಯಿಂದ ನಂಬಬಹುದಾದ ಯಾವ ಆಧಾರಗಳೂ ದೊರೆತಿರುವುದಿಲ್ಲ.

(೨) ಭರ್ತೃಹರಿರಾಜನು ರಾಜ್ಯಭಾರವನ್ನು ತಮ್ಮನಿಗೆ ಒಪ್ಪಿಸಿ ವೀತರಾಗ ನಾಗಿ ಹೊರಟುಹೋದವನು ತಮ್ಮನ ಆಶ್ರಯದಲ್ಲಿ ಸಭಾಪಂಡಿತನಾಗಿದ್ದನೆಂದು ಹೇಳುವುದು ಅಸಂಬದ್ಧಪ್ರಲಾಪವಾಗಿರುವುದು.

(೩) ಭರ್ತೃಹರಿಯು ವೈರಾಗ್ಯವನ್ನು ಹೊಂದಿದ ವಿಚಾರದಲ್ಲಿ ವಿಕ್ರ ಮಾರ್ಕಚರಿತದಲ್ಲಿ ಹೀಗೆ ಹೇಳಲ್ಪಟ್ಟಿರುವುದು—

ಬ್ರಾಹ್ಮಣನೋರ್ವನು ಉಜ್ಜಯಿನೀನಾಥನಾದ ಭರ್ತೃಹರಿಯ ಬಳಿಗೆ ಬಂದು ರಾಜನನ್ನು ನೋಡಿ ಆಶೀರ್ವದಿಸಿ ದೇವತಾವರಪ್ರಸಾದಲಬ್ಧವಾದ ಒಂದು ಫಲವನ್ನು ರಾಜನಿಗೆ ಕೊಟ್ಟು "ಎಲೆ ರಾಜ! ಈ ಫಲವನ್ನು ತಿಂದವರು ಜರಾಮರಣವರ್ಜಿತರಾಗಿ ಧರೆಯನ್ನು ಪಾಲಿಸುವರು, ಆದುದರಿಂದ ನೀನು ಈ ಹಣ್ಣನ್ನು ತಿಂದು ಜರಾಮರಣವರ್ಜಿತನಾಗಿ ಚಿರಕಾಲ ಧರೆಯನ್ನು ಸಲಹು" ಎಂದು ಹೇಳಿ ಹೊರಟುಹೋದನು. ಭರ್ತೃಹರಿಯು ಆ ಹಣ್ಣನ್ನು ತೆಗೆದು ಕೊಂಡು ಹೀಗೆಂದು ಯೋಚಿಸಿದನು. ನಾನು ಈ ಫಲವನ್ನು ತಿಂದು ಜರಾ ಮರಣವರ್ಜಿತನಾಗಿದ್ದು ಒಂದು ವೇಳೆ ದೈವಯೋಗದಿಂದ ನನ್ನ ಪ್ರಿಯತಮ ಳಾದ ಅನಂಗಸೇನೆಯು ಕಾಲಗತಿಯನ್ನು ಹೊಂದುವುದಾದರೆ ದುಸ್ಸಹವಾದ ಆ ವಿಯೋಗದುಃಖವನ್ನು ಅನುಭವಿಸಲಾಗದು ಎಂದು ಆ ಫಲವನ್ನು ಅವಳಿಗೆ ಕೊಟ್ಟನು. ಅವಳು ತನ್ನ ಪ್ರೀತಿಪಾತ್ರನಾದ ಮಂದುರಿಕನೆಂಬ ಕುದುರೆ ಯುವನಿಗೆ ಕೊಟ್ಟಳು. ಅವನು ತನ್ನ ಪ್ರೀತಿಪಾತ್ರಳಾದ ದಾಸಿಯೊಬ್ಬಳಿಗೆ ಕೊಟ್ಟನು. ಅವಳು ತನ್ನ ಮನೋವಲ್ಲಭನಾದ ಗೋಪಾಲಕನಿಗೆ ಕೊಟ್ಟಳು. ಅವನು ಅದನ್ನು ಸಗಣಿ ಹೊರುವವಳೊಬ್ಬಳಿಗೆ ಕೊಟ್ಟನು. ಅವಳು ಎಂದಿ ನಂತೆ ಊರುಹೊರಗಣ ಸಗಣಿಯೆಲ್ಲವನ್ನು ಗುಡ್ಡೆಹಾಕಿ ಗೂಡೆಯಲ್ಲಿ ತುಂಬಿ ಕೊಂಡು ಉಪಲಬ್ಧವಾದ ಫಲವನ್ನು ಅದರ ಮೇಲೆ ಇಟ್ಟುಕೊಂಡು ರಾಜ

ಮಾರ್ಗದಲ್ಲಿ ಬರುತ್ತಿರುವಾಗ ಭರ್ತೃಹರಿಯು ನೋಡಿ, ಸಂಭ್ರಾಂತನಾಗಿ ತನಗೆ ಮೊದಲು ಫಲವನ್ನು ಕೊಟ್ಟ ಬ್ರಾಹ್ಮಣನನ್ನು ಕರೆಯಿಸಿ ಭೂಸುರೋತ್ತಮ! ನೀನು ನನಗೆ ಕೊಟ್ಟಂತಹ ಹಣ್ಣು ಮತ್ತೆಲ್ಲಿಯಾದರೂ ದೊರೆಯುವುದೆ? ಎಂದು ಕೇಳಿದನು.

ಬ್ರಾಹ್ಮಣ— ರಾಜನೆ! ಅಂತಹ ಹಣ್ಣು ಎಲ್ಲಿಯೂ ದೊರೆಯುವದಿಲ್ಲ. ಅದು ದೇವತಾವರಪ್ರಸಾದಲಬ್ಧವಾದುದು. ಆದರಂತಹ ಫಲವು ಭೂಲೋಕದಲ್ಲಿ ಎಲ್ಲಿಯೂ ದೊರೆಯದು.

ರಾಜ— ನಾನು ಅಂತಹ ಫಲವನ್ನು ರಾಜಬೀದಿಯಲ್ಲಿ ನೋಡಿದೆನು!

ಬ್ರಾಹ್ಮಣ— ನಾನು ಕೊಟ್ಟ ಹಣ್ಣನ್ನು ನೀನು ತಿಂದೆಯಾ?

ರಾಜ— ಇಲ್ಲ; ನಾನು ತಿನ್ನದೆ ನನ್ನ ಪ್ರಾಣಪ್ರಿಯೆಯಾದ ಅನಂಗಸೇನೆಗೆ ಕೊಟ್ಟೆನು!

ಬ್ರಾಹ್ಮಣ— ಹಾಗಾದರೆ ಅವಳನ್ನು ಕೇಳು. (ಕೂಡಲೆ ರಾಜನು ಅನಂಗಸೇನೆಯನ್ನು ಬರಮಾಡಿಕೊಂಡು ವಿಚಾರಿಸುವಲ್ಲಿ ವಿಷಯಗಳೆಲ್ಲಾ ಸವಿಸ್ತಾರವಾಗಿ ತಿಳಿದುವು.) ಅನಂತರ–

ರಾಜನು (ಕೇವಲವಿಷಾದಾಭಿಭೂತನಾಗಿ ನಿಟ್ಟುಸುರನ್ನು ಬಿಟ್ಟು),—

ಏತಾ ಹಸಂತಿ ಚ ರುದಂತಿ ಚ ವಿತ್ತಹೇತೋಃ
ವಿಶ್ವಾಸಯಂತಿ ಚ ನರಂ ನ ತು ವಿಶ್ವಸಂತಿ ।
ತಸ್ಮಾನ್ನರೇಣ ಕುಲಶೀಲವತಾ ಸದೈವ
ನಾರ್ಯಃ ಶ್ಮಶಾನಸುಮನಾ ಇವ ವರ್ಜನೀಯಾಃ ॥

—ವಿಕ್ರಮಾರ್ಕಚರಿತೆ

ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ
ಸಾಪ್ಯನ್ಯಮಿಚ್ಛತಿ ಜನಂ ಸಜನೋಽನ್ಯಸಕ್ತಃ ।
ಅಸ್ಮತ್ಕೃತೇ ಚ ಪರಿತುಷ್ಯತಿ ಕಾಚಿದನ್ಯಾ
ಧಿಕ್ ತಾಂ ಚ ತಂ ಚ ಮದನಂ ಚ ಇಮಾಂ ಚ ಮಾಂ ಚ ॥

—ನೀತಿಶತಕ ೨

ಎಂಬ ಇವೇ ಮೊದಲಾದ ಶ್ಲೋಕಗಳಿಂದ ಸ್ತ್ರೀನಿಂದೆಯನ್ನು ಮಾಡಿ ರಾಜ್ಯಭಾರದಲ್ಲಿ ಆಸೆ ಇಲ್ಲದೆ ವೈರಾಗ್ಯಭಾಗ್ಯಕ್ಕಿಂತ ಮಿಗಿಲಾದ ಭಾಗ್ಯವಿಲ್ಲವೆಂದು ತಿಳಿದು ತಮ್ಮನಾದ ವಿಕ್ರಮನಿಗೆ ರಾಜ್ಯಭಾರವನ್ನು ವಹಿಸಿ ಆ ಫಲವನ್ನು ಅವನಿಗೆ ಕೊಟ್ಟು ಅರಣ್ಯಪ್ರವೇಶವನ್ನು ಮಾಡಿದನು.

ಮತ್ತೊಂದು ಹಸ್ತಲಿಖಿತಪ್ರತಿಯಲ್ಲಿ—

> ಯೋಗೀಂದ್ರೇಣ ಫಲಂ ಪ್ರದತ್ತಮಜರಾಮರ್ತ್ಯಂ ಯದಸ್ಮೈ ಪುನಃ
> ರಾಜ್ಞ್ಯೈ ಭರ್ತೃಹರೇಣ ದತ್ತಮನಯಾ ಮಂಠಾಯ ತಸ್ಮೈ ದದೇ ।
> ಮಂಠೇನಾಪಿ ತದೇವ ಪಣ್ಯಯುವತೌ ವಿಪ್ರಾಯ ವಾರಸ್ತ್ರಿಯಾ
> ವಿಪ್ರೇಣಾಪಿ ತದೇವ ದೈವವಶತೋ ರಾಜ್ಞೇ ಪ್ರದತ್ತಂ ಪುನಃ ॥

ಎಂದು ಹೇಳಲ್ಪಟ್ಟಿರುವುದು. ಇದನ್ನು ಬರೆದವರಾರೆಂಬುದು ತಿಳಿಯದು. ಭರ್ತೃಹರಿಯು ತನ್ನ ಪ್ರಿಯಳಾದ ಅನಂಗಸೇನೆಯ ಸೌಶೀಲ್ಯಕುಂದಕದ ವಿಚಾರವಾಗಿ ಬೇಜಾರುಗೊಂಡು ರಾಜ್ಯವನ್ನು ತನ್ನ ತಮ್ಮನಿಗೆ ಕೊಟ್ಟು ಅರಣ್ಯಪ್ರವೇಶವನ್ನು ಮಾಡಿದನೆಂದು ಹೇಳುವ ವಿಚಾರದಲ್ಲಿ ಅನುಮಾನ ತೋರುವುದು. ಏಕೆಂದರೆ ತನ್ನ ಪ್ರಾಣಪ್ರೇಯಸಿಯ ಮನೋರಾಜ್ಯಭಾರಕ್ಕಿಂತಲೂ ಪ್ರಜಾರಾಜ್ಯಭಾರವು ಮಹತ್ತಾದುದಾಗಿರುವುದು. ಮನೋರಾಜ್ಯವು ಸ್ವಾರ್ಥಸಹಿತವಾದುದು. ಪ್ರಜಾರಾಜ್ಯವು ಪರಾರ್ಥಸಹಿತವಾದುದು. ಮನೋರಾಜ್ಯವು ಪ್ರಣಯಮೂಲವಾಗಿರುವುದು. ಪ್ರಜಾರಾಜ್ಯವು ಧರ್ಮಮೂಲವಾಗಿರುವುದು. ಧರ್ಮಮೂಲವಾದ ರಾಜ್ಯಪಾಲನದ ಮುಂದೆ ಕ್ಷಣಿಕವಾದ ಮೋಹರಾಜ್ಯವು ಸರಿಗಟ್ಟದು. ವಿದ್ಯುಲ್ಲತೆಯಂತೆ ಮಾಯವಾಗಿಯೇ ಹೋಗಿಬಿಡುವುದು. ಇಂತಹುದರಲ್ಲಿ ಯಾವಳೋ ಕ್ಷುಲ್ಲಕಸ್ತ್ರೀಯೋರ್ವಳ ಧರ್ಮವಿರುದ್ಧತೆಗಾಗಿ ಮಹಾರಾಜನಾದವನು ಧರ್ಮಪಾಲನವನ್ನು ಬಿಟ್ಟು ಸಂಸಾರವಿರಕ್ತನಾಗಿ ಅಡವಿಗೆ ಹೋದನೆಂದು ಹೇಳುವುದು ಹೇಗೆ? ಭರ್ತೃಹರಿಯು ಏಕಪತ್ನೀವ್ರತಸ್ಥನಾಗಿದ್ದನೆ? ಹಾಗೆ ಹೇಳುವ ಆಧಾರಪುಸ್ತಕಗಳಾದರೂ ಯಾವುವು? 'ರಾಜಾನೋ ಬಹುವಲ್ಲಭಾಃ' ಎಂಬಂತೆ ಭರ್ತೃಹರಿಗೆ ಅನೇಕ ಮಂದಿ ಹೆಂಡತಿಯರು ಏಕೆ ಇದ್ದಿರಕೂಡದು? ಧರ್ಮವಿರುದ್ಧವಾಗಿ ನಡೆಯುವವರನ್ನು ದಂಡಿಸಿ ಧರ್ಮಪ್ರವರ್ತಕರನ್ನಾಗಿ ಮಾಡುವುದು ರಾಜನ ಕರ್ತವ್ಯವಾಗಿರುವುದು. ಸ್ತ್ರೀಯರು ಕೋಮಲೆಯರು, ಶಿಕ್ಷಾರ್ಹರಲ್ಲವೆಂದು ಹೇಳುವುದಾದರೆ ತ್ಯಾಗಾರ್ಹರೆಂದೇಕೆ ಹೇಳಕೂಡದು? ಅನಂಗಸೇನೆಯು ದುರಾಚಾರಿಣಿಯಾಗಿದ್ದ ಪಕ್ಷದಲ್ಲಿ ಶಿಕ್ಷಾರ್ಹಳೂ ಹೌದು; ತ್ಯಾಗಾರ್ಹಳೂ ಹೌದು. ಹಾಗೆ ಒಂದು ವೇಳೆ ರಾಜನಾದವನು ಆವಳ ಪ್ರಣಯಾಪಾರವ್ಯಾಪಾರತರಂಗಗಳಿಗೆ ಸಿಲುಕಿ ಭ್ರಾಂತಿಯಿಂದ ಯಾವುದೂ ತೋಚದೆ ರಾಜ್ಯವನ್ನು ಬಿಟ್ಟು ಅಡವಿಯ ಪಾಲಾದನೆಂದು ಹೇಳುವ ಪಕ್ಷದಲ್ಲಿ ಇದರಿಂದ ಅವಳ ವಿರುದ್ಧಕರ್ಮಾಚರಣೆಯನ್ನು ನೇರ್ಪಡಿಸಿದಂತಾಯಿತೆ? ಹಾಗಲ್ಲದೆ ಲೋಕಾಪವಾದಕ್ಕಂಜಿ ವಿರಾಗಿಯಾದನೆಂದು ಹೇಳುವುದಾದರೆ ಪುಣ್ಯಪುರುಷನಾದ ಶ್ರೀರಾಮಚಂದ್ರನಿಗಿಂತಲೂ ಭರ್ತೃ

ಹರಿಯು ಮಿಗಿಲಾದವನಲ್ಲ. ಚಿರಸ್ಮರಣೀಯಳಾದ ಜಾನಕಿಯ ಗುಣಕಥನ ವಿಚಾರದಲ್ಲಿ ದುರ್ಮುಖನ ಮಾತನ್ನು ಕೇಳಿ ಪರಮಾತ್ಮನಾದ ಶ್ರೀರಾಮನು ಲೋಕಾಪವಾದಕ್ಕಂಜಿ ಲೋಕಾರಾಧನೆಯೇ ಸರ್ವಸ್ವವೆಂದೆಣಿಸಿ—

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿ ವಾ ಜಾನಕೀಮಪಿ ।
ಆರಾಧನಾಯ ಲೋಕಸ್ಯ ಮುಂಚತೋ ನಾಸ್ತಿ ಮೇ ವ್ಯಥಾ ॥
—ಉತ್ತರರಾಮಚರಿತೆ. ೧—೧೨

ಎಂದು ಹೇಳಿ ಪೂಜ್ಯಳಾದ ಸೀತೆಯನ್ನು ತ್ಯಾಗಾರ್ಹಳೆಂದು ಭಾವಿಸಿ ಹೊರಹೊರಡಿಸಿದನೇ ಹೊರತು ಕರ್ಮಬಾಹಿರನಾಗಿ ಲಕ್ಷ್ಮಣನಿಗೆ ರಾಜ್ಯಭಾರವನ್ನು ವಹಿಸಿ ತಾನು ಅಡವಿಯಪಾಲಾಗಲಿಲ್ಲ, ರಾಜಕಾರ್ಯನ್ಯೂನತೆಗೊಳಿಸಲಿಲ್ಲ, ಅಪವಾದಕ್ಕೆಡೆಗೊಡಲಿಲ್ಲ. ಹಾಗೆಯೇ ಅನಂಗಸೇನೆಯು ತ್ಯಾಗಾರ್ಹಳೆಂದು ತಿಳಿದು ಭರ್ತೃಹರಿಯು ಅವಳನ್ನು ಬಿಟ್ಟು ರಾಣಿವಾಸದ ಮತ್ತಾವಳಾದರೂ ಪುಣ್ಯವತಿಯ ಪ್ರಣಯಾತುರನಾಗಬಹುದಾಗಿದ್ದಿತು. ಹೀಗೆ ಇರುವಲ್ಲಿ ಕ್ಷುಲ್ಲಕ, ಹೇಯ, ನಶ್ವರವಾದ ಇಂತಹ ವಿಷಯಸುಖಭಾರಕ್ಕೆ ಎದೆಗೊಟ್ಟವನು ಮಹಾಭಾರವಾದ ರಾಜ್ಯಭಾರವನ್ನು ವಹಿಸುವುದೆಂತು? ರಾಜ್ಯಭಾರವು ಸಾಮಾನ್ಯವಾದುದಲ್ಲ. ಬಹುಕಠಿನತರವೆಂದರೆ ಅತ್ಯುಕ್ತಿಯಾಗದು. ಅದನ್ನು ನಿಸ್ಪೃಹತೆಯಿಂದಲೂ ನಿರ್ಭರತ್ವದಿಂದಲೂ ಧರಿಸುವುದಕ್ಕೆ ಮನೋದಾರ್ಢ್ಯವಿಲ್ಲದವನಿಂದ ಸಾಗದು. ಅಂತಹವನು ರಾಜನೆನಿಸಿಕೊಳ್ಳಲೂ ಆರನು. ಪ್ರಜಾಪಾಲನವೂ ಅವನಿಂದಾಗದು. ಇಂತಹುದರಲ್ಲಿ ಜ್ಞಾನಿಯೂ ವಿವೇಕಿಯೂ ಆದ ರಾಜನು ಯಾವಳೋ ಒಬ್ಬಳ ಪಾತಿವ್ರತ್ಯ ಧರ್ಮನೈರಾಶ್ಯಕ್ಕಾಗಿ ರಾಜ್ಯವನ್ನೂ ಪ್ರಾಣಾಧಿಕರಾದ ಪ್ರಜೆಗಳನ್ನೂ ಬಿಟ್ಟು ಅರಣ್ಯಗತನಾದನೆಂದು ಹೇಳುವುದಾದರೆ ಅದು ಎಂತಹ ಅಪಹಾಸ್ಯಾಸ್ಪದವಿಷಯವಾಗಿರುವುದು! ಹೀಗೆ ಹೇಳುವ ಬದಲು—

ಶೈಶವೇಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥
—ರಘುವಂಶ ೧—೮

ಎಂಬಂತೆ ಶೈಶವದಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಯೌವನದಲ್ಲಿ ವಿಷಯಸುಖಲಬ್ಧವಾದ ಪ್ರಪಂಚಜ್ಞಾನವನ್ನು ಹೊಂದಿ ವಯೋವೃದ್ಧನೂ ಜ್ಞಾನವೃದ್ಧನೂ ಆಗಿ ವಾನಪ್ರಸ್ಥಾಶ್ರಮದೀಕ್ಷೆಯನ್ನು ಕೈಗೊಂಡು ರಾಜ್ಯಭಾರವನ್ನು ವಿವೇಕಿಯಾದ ವಿಕ್ರಮನಿಗೆ ಒಪ್ಪಿಸಿ ಸಂಸಾರವಿರಕ್ತನಾಗಿ ಯೋಗದಲ್ಲಿ ಶರೀರವನ್ನು ಬಿಡಲು ಅರಣ್ಯವನ್ನು ಪ್ರವೇಶಿಸಿದನೆಂದೇಕೆ ಹೇಳಕೂಡದು? ಇದು ನಮ್ಮ ಭಾರತದ ವೃತ್ತಿ, ಸನಾತನಧರ್ಮ, ವಂಶಪಾರಂಪರ್ಯವಾದ, ಆಶ್ರಮಕ್ರಮ

ಪ್ರತಿಯೊಬ್ಬರೂ ಆಚರಿಸಲೇಬೇಕೆಂಬ ನಿಯಮ. ಇಂತಹುದನ್ನು ಬಿಟ್ಟು ಭರ್ತೃಹರಿಯು ಅನಂಗಸೇನೆಯ ದುಷ್ಕಾರ್ಯಕ್ಕಾಗಿ ಮನನೊಂದು ರಾಜ್ಯವನ್ನು ಬಿಟ್ಟು ಅರಣ್ಯಪಾಲಾದನೆಂದು ಹೇಳುವದೆಂತಹ ಸೋಜಿಗವಾಗಿ ತೋರುವುದು! ಪೂರ್ವದಿಂದಲೂ ಮನೋರಂಜಿತವಾದ ಕಥೆಗಳನ್ನು ಕಲ್ಪಿಸಿಕೊಂಡು ಹೇಳಿ ಜನರನ್ನು ಸಂತೋಷಗೊಳಿಸುವುದರಲ್ಲಿ ಭಾರತೀಯರು ಅಪ್ರತಿಮರು. ಇಂತಹ ಕಥೆಗಳ ಗೋಷ್ಠಿಯಲ್ಲಿ ವೈರಾಗ್ಯಚಕ್ರವರ್ತಿಯಾದ ನಮ್ಮ ಭರ್ತೃಹರಿಯ ಅದೃಷ್ಟವು ದುರಪವಾದಕ್ಕೆ ಸಿಲುಕಿ ಇತಿಹಾಸಶೋಧಕರ ದೃಷ್ಟಿಗೂ ಬೀಳದೆ ಅಡಗಿ ಹೋಗಿರುವುದು ವಿಷಾದಕರವಾಗಿದೆ. ಇಂತಹ ದಂತಕಥೆಗಳು ವಿದೇಶೀಯರಿಂದ ಸತ್ಕಾರವನ್ನು ಹೊಂದಿ ಅವರವರ ಭಾಷೆಗಳಲ್ಲಿ ಮೊಗದೋರಿ ಭಾರತದ ಇತಿಹಾಸವನ್ನರಿಯದ ನಮಗೆ ಮಾದರಿಯ ಶಾಶ್ವತಶಿಲಾಲೇಖನದಂತೆ ಕಾಲಮಂದಿರದಲ್ಲಿ ನಿಂತಿರುವುವು. ಪುನಃ ಅವುಗಳನ್ನು ಅಳಿಸಿ ಸರಿಯಾಗಿ ಬರೆಯುವರಾರು? ವೈರಾಗ್ಯವು ಉಂಟಾಗಬೇಕಾದರೆ ಪ್ರಾಪಂಚಿಕವಾಸನಾಜಿಹಾಸೆ, ದಾರಿದ್ರ್ಯ, ಇಷ್ಟಾರ್ಥವು ಕೈಗೂಡದಿರುವಿಕೆ ಇವು ಮೂರು ಸಾಧಾರಣ ಕಾರಣಗಳಾಗಿರುವುವು. ಅಂತಹ ವಿಚಾರವು ನಮ್ಮ ಭರ್ತೃಹರಿಗೆ ಸಂಬಂಧಿಸಿದ್ದಂತೆ ತೋರುವುದಿಲ್ಲ. ಏಕೆಂದರೆ– ದಾರಿದ್ರ್ಯವೆಂದು ಹೇಳುವುದಕ್ಕೆ ಭರ್ತೃಹರಿಯು ಮಹಾರಾಜಾಧಿರಾಜನು; ಧನಾಢ್ಯ; ಇಷ್ಟಾರ್ಥವು ಕೈಗೂಡದೆಂದರೆ ಅತುಲಪ್ರತಾಪಿಯಾದ ರಾಜನಿಗೆ ಕೈಗೂಡದ ಕಾರ್ಯವಿಲ್ಲ; ಹೀಗೆ ಇರುವಲ್ಲಿ ಪ್ರಾಪಂಚಿಕವಾಸನಾಜಿಹಾಸೆಯು ಸಂಪರ್ಕದೋಷಿಯಾದ ಅನಂಗಸೇನೆಯಿಂದಲೇ ಏಕಾಗಬೇಕು? ಸಕಲಶಾಸ್ತ್ರಾರ್ಥತತ್ತ್ವಜ್ಞನಾದ ಭರ್ತೃಹರಿಯು ಪುರುಷಾರ್ಥತ್ರಯಸಾಧನಗಳಿಂದುಂಟಾಗುವ ಮುಮುಕ್ಷುತ್ವಕ್ಕಾಶಿಸಿ ವೈರಾಗ್ಯವನ್ನು ಏಕೆ ಕೈಗೊಂಡಿರಕೂಡದು? ರಾಜನಿಗೆ ಮಂದುರಿಕನ ಸಮಾಚಾರವು ತಿಳಿದಾಗ ಅನಂಗಸೇನೆಯ ಮೇಲೆ ಕೋಪಕ್ಕೆ ಬದಲು ಶಾಂತಚಿತ್ತತೆಯುಂಟಾದ ಬಗೆ ಹೇಗೆ? ಅನಂಗಸೇನೆಯೇ ಆಗಲಿ ಅಥವಾ ಮಂದುರಿಕನೇ ಆಗಲಿ ರಾಜನ ಎದುರಿನಲ್ಲಿ ತಮ್ಮ ಅಕ್ರಮಗಳನ್ನು ಹೇಳಿಕೊಳ್ಳುವಷ್ಟು ಧೈರ್ಯವಿದ್ದಿತೇ? ಹಾಗೆ ಇದ್ದಿದ್ದರೆ ರಾಜನು ಕ್ಷಮಾವಂತನಾಗಿ ಇದ್ದ ಬಗೆ ಹೇಗೆ? ಇಂತಹ ವಿಚಾರಗಳು ಗೋಪ್ಯವಾಗಿರದೆಂಬುವುದು ಪ್ರಪಂಚಾನುಭವವು. ಒಂದೆರಡು ದಿವಸಗಳಲ್ಲಿಯೇ ಜನಜನಿತವಾಗಿಬಿಡುವುದು. ಈ ವಿಚಾರವು ರಾಣಿವಾಸದ ಜನರಿಗಾಗಲಿ ಊಳಿಗದವರಿಗಾಗಲಿ ತಿಳಿದಿರಬೇಕಲ್ಲವೆ? ಒಬ್ಬರಿಗಾದರೂ ತಿಳಿದಿದ್ದರೆ ಮಹಾರಾಜನ ಕಿವಿಗೆ ಬೀಳದೆ ಹೋಗುತ್ತಿರಲಿಲ್ಲ. ಯಾವಾಗಲೂ ಇಲ್ಲದೆ ಬ್ರಾಹ್ಮಣನು ಫಲವನ್ನು ತಂದುಕೊಟ್ಟಾಗಲೇ ರಾಜನಾದ ಭರ್ತೃಹರಿಗೆ ಅನಂಗಸೇನೆಯ ದುರಾಚಾರವು ತಿಳಿಯಬೇಕೇ?

ಅಲ್ಲದೆ ಅನಂಗಸೇನೆಗೆ ಯಾವ ವಿಚಾರದಲ್ಲಿಯೂ ಕೊರತೆ ಇರಲಿಲ್ಲ ವೆಂದು ಹೇಳಬೇಕಾಗಿದೆ. ಹಾಗೆ ಅವಳು "ಪ್ರಾಣಪ್ರಿಯಾ"ಶಬ್ದಪಾಲನವನ್ನು ಮಾಡಿಕೊಳ್ಳದಷ್ಟು ನಿರ್ಭಾಗ್ಯಳಾಗಿದ್ದರೆ ಅವಳಿಗೆ ಆ ಹೆಸರು ಬರುತ್ತಿರಲಿಲ್ಲ. ಮಹಾರಾಜನ ಪ್ರೀತಿಯಿಂದ ಯಾವಾಗಲೋ ದೂರವಾಗಿ ಪಾಪಪಂಕದಲ್ಲಿ ಮುಳುಗಿಯೇ ಹೋಗಿಬಿಡಬೇಕಾಗಿದ್ದಿತು. ಇವುಗಳೆಲ್ಲವನ್ನೂ ಸಮದೃಷ್ಟಿ ಯಿಂದ ನೋಡಿದರೆ ಭರ್ತೃಹರಿಯು ವಿರಾಗಿಯಾಗುವುದಕ್ಕೆ ಯಾವುದೋ ಬೇರೆ ಕಾರಣವಿರಬೇಕೇ ಹೊರತು ಕೇವಲ ಕಾಮಾರ್ತಸ್ತ್ರೀಯೊಬ್ಬಳ ದುಶ್ಚರಿತೆಗಾಗಿ ಸನ್ಯಾಸವನ್ನು ಕೈಗೊಂಡನೆಂಬುದು ಬಹುಲಾಘವವಾಗಿ ತೋರುವುದು. ಇದಲ್ಲದೆ ಈತನ ವೈರಾಗ್ಯವೂ ಸನ್ಯಾಸವೂ ಬಹಳ ಉಚ್ಚತರದವುಗಳಂತೆ ತೋರುತ್ತವೆ. ಹೀಗಾಗಿ ರಾಜ್ಯಕರ್ತೃತ್ವ, ವಿದ್ಯಾಪ್ರೌಢತ್ವ ಮತ್ತು ಉಚ್ಚತರ ಭಿಕ್ಷುತ್ವ ಇವು ಮೂರೂ ಓರ್ವನಲ್ಲಿಯೇ ಸಮ್ಮಿಳಿತವಾಗಿದ್ದುವು. ಇವುಗಳ ಜತೆಗೆ ಶಾರೀರಸೌಂದರ್ಯ, ಶಾಂತತ್ವ, ದಯಾಳುತ್ವ ಮತ್ತು ನ್ಯಾಯಮಾರ್ಗತ್ವ ಗಳೆಲ್ಲವೂ ಜೋಡಣೆಯಾಗಿದ್ದುವು. ಅದಕ್ಕೆ ಈ ಕೆಳಗಣ ಆರ್ಯಾಶ್ಲೋಕಪ್ರಮಾ ಣವೇ ಸಾಕಾದುದಾಗಿದೆ.

> **ವಿಕ್ರಮವಿರಾಗವಿಭವದ್ಯುತಿಭಿಃ ಸ್ತುತಿಪಾತ್ರಮೇವ ಭರ್ತೃಹರಿಃ ।**
> **ಏಕೋಽಪಿ ಚ ಯಶ್ಚತುರಶ್ಚತುರೋಽಪಿ ಹರಿಂ ಸ್ವಯಂ ಸಮತಿಶೇತೆ ॥**

ಭರ್ತೃಹರಿಯು ನಾಲ್ಕುಜನ ಹರಿಗಳನ್ನೂ ಮಿಾರಿಸಿರುವನು. ಎಂದರೆ ಪರಾಕ್ರಮದಲ್ಲಿ ವಿಷ್ಣುವನ್ನೂ ಸನ್ಯಾಸದಲ್ಲಿ ಋಷಭಕುಮಾರನನ್ನೂ ಐಶ್ವ ರ್ಯದಲ್ಲಿ ಇಂದ್ರನನ್ನೂ ತೇಜಸ್ಸಿನಲ್ಲಿ ಸೂರ್ಯನನ್ನೂ ಮಿಾರಿಸಿರುವನು. ಎಂದು ಹೇಳಲ್ಪಟ್ಟಿರುವುದು. ಇದಕ್ಕಿಂತಲೂ ಇನ್ನೇನು ಬೇಕು?

ಇವನು **ನೀತಿಶತಕ, ಶೃಂಗಾರಶತಕ, ವೈರಾಗ್ಯಶತಕ**ಗಳೆಂಬ ಮೂರು ಶತಕಗಳನ್ನು ಬರೆದಿರುವನು. ಪತಂಜಲಿಯ ಭಾಷ್ಯಕ್ಕೆ ಕಾರಿಕೆಗಳನ್ನು ಇವನೇ ಬರೆದಿರುವನೇ ಅಥವ ಬೇರೊಬ್ಬ ಭರ್ತೃಹರಿಯು ಬರೆದಿರುವನೇ ಎಂಬುದು ತಿಳಿಯಬೇಕಾಗಿದೆ. ಈ ಕಾರಿಕೆಗಳನ್ನು ಭರ್ತೃಹರಿಯೇ ಬರೆದಿರುವುದಾಗಿ ವೈಯ್ಯಾಕರಣರು ಹೇಳುವರು. ಇದರ ಪ್ರಾಮುಖ್ಯದ ವಿಚಾರವಾಗಿ ಮಹಾಭಾಷ್ಯದ ವ್ಯಾಖ್ಯಾನಕಾರನಾದ ಕಯ್ಯಟನು ತಾನು ಬರೆದಿರುವ ಭಾಷ್ಯಪ್ರದೀಪದಲ್ಲಿ—

> **ಭಾಷ್ಯಾಬ್ಧಿಃ ಕ್ವಾತಿಗಂಭೀರಃ ಕ್ವಾಹಂ ಮಂದಮತಿಸ್ತತಃ ।**
> **ಛಾತ್ರಾಣಾಮುಪಹಾಸತ್ವಂ ಯಾಸ್ಯಾಮಿ ಪಿಶುನಾತ್ಮನಾಂ ॥**
> **ತಥಾಪಿ ಹರಿಬದ್ಧೇನ ಸಾರೇಣ ಗ್ರಂಥಸೇತುನಾ ।**
> **ಕ್ರಮಮಾಣಃ ಶನೈಃ ಪಾರಂ ತಸ್ಯ ಪ್ರಾಪ್ತಾಸ್ಮಿ ಪಂಗುವತ್ ॥**

ಎಂದು ಹೇಳಿರುವನು. ಈ ಲಕ್ಷ್ಯಕಾರಿಕೆಗಳನ್ನು ಕೆಲವರು ವಾಕ್ಯಪದೀಯವೆಂತಲೂ ಮತ್ತೆ ಕೆಲವರು ಹರಿಕಾರಿಕೆಯೆಂತಲೂ ವ್ಯವಹರಿಸುವರು. ಕಯ್ಯಟನು ಕಾರಿಕೆಗಳ ಗ್ರಂಥಕರ್ತನನ್ನು "ಹರಿ" ಎಂದು ಕರೆದಿರುವನು. ಈ ಹರಿಯು ಯಾರು? ಭರ್ತೃಹರಿ ಎಂಬುದಕ್ಕೆ ಬದಲಾಗಿ 'ಹರಿ'ಶಬ್ದವನ್ನು ಉಪಯೋಗಿಸಿರಬಹುದೆ? ಕೆಲವುಕಡೆ 'ಸತ್ಯಭಾಮಾ' ಎಂಬುದಕ್ಕೆ ಬದಲು 'ಭಾಮಾ' ಎಂದು ಕರೆದಿರುವಂತೆ 'ಭರ್ತೃಹರಿ' ಎಂದು ಹೇಳುವುದಕ್ಕೆ ಬದಲು 'ಹರಿ' ಎಂದಿರಬಹುದೆ? ಒಂದುವೇಳೆ ಹಾಗಿದ್ದರೂ ಶತಕತ್ರಯಕಾರನಾದ ಭರ್ತೃಹರಿಯೂ ವಾಕ್ಯಪದೀಯಕಾರನಾದ ಭರ್ತೃಹರಿಯೂ ಬೇರೆಬೇರೆಯೇ ಹೊರತು ಒಬ್ಬನೇ ಅಲ್ಲ; ಹೇಗೆಂದರೆ— ಚೈನಾಪ್ರವಾಸಿಯಾದ ಇತ್ಸಿಂಗ(I-tsing)ನು ಕ್ರಿ. ಶ. ೭ನೆಯ ಶತಮಾನಾಂತ್ಯದಲ್ಲಿ ಹಿಂದೂದೇಶಕ್ಕೆ ಬಂದಿದ್ದಾಗ "ವೈಯ್ಯಾಕರಣಭರ್ತೃಹರಿಯು ತಾನು ಬರುವುದಕ್ಕೆ ನಲವತ್ತು ವರ್ಷಗಳ ಹಿಂದೆ ಮೃತನಾದನೆಂದೂ ಇವನು ಬೌದ್ಧಮತಾವಲಂಬಿಯೆಂದೂ, ತ್ರಿಪಿಟಿಕಧರ್ಮಗಳಲ್ಲಿ ಆಸಕ್ತನಾಗಿದ್ದ"ನೆಂದೂ ಹೇಳಿರುವನು. ಕ್ರಿ. ಶ. ೧೧ನೆಯ ಶತಮಾನದಲ್ಲಿದ್ದ ವಾಚಸ್ಪತಿಮಿಶ್ರನೆಂಬುವನು ವಾಕ್ಯಪದೀಯಗ್ರಂಥಕಾರನನ್ನು 'ಬಾಹ್ಯ' (ವೇದಬಾಹ್ಯ)ನೆಂದು ಕರೆದಿರುವನು. ಬೌದ್ಧರಿಗೆ ವೇದದಲ್ಲಿ ನಂಬಿಕೆಯಿಲ್ಲದುದರಿಂದ 'ವೇದಬಾಹಿರ'ನೆಂದು ಹೇಳಿರಬಹುದು. ಇದರಿಂದ ವಾಕ್ಯಪದೀಯಗ್ರಂಥಕಾರನು ಬೌದ್ಧನೆಂದು 'ಇತ್ಸಿಂಗ'ನು ಹೇಳಿರುವುದನ್ನು ಒಪ್ಪಿಕೊಳ್ಳಬಹುದು. ವರ್ಧಮಾನನು ತಾನು ಬರೆದಿರುವ 'ಗಣರತ್ನಮಹೋದಧಿ'ಯಲ್ಲಿ ವೈಯ್ಯಾಕರಣಭರ್ತೃಹರಿಯನ್ನು—

"ಭರ್ತೃಹರಿರ್ಮಹಾಭಾಷ್ಯತ್ರಿಪಾದ್ಯಾವ್ಯಾಖ್ಯಾತಾ ವಾಕ್ಯಪದೀಯ ಪ್ರಕೀರ್ಣಯೋಶ್ಚಕರ್ತಾ"

ಎಂದು ಹೇಳಿರುವನು. ಶತಕತ್ರಯದ ಶ್ಲೋಕಪರಿಪಾಟಿ, ವ್ಯಾಕರಣಮರ್ಯಾದೆ ಇವುಗಳನ್ನು ವಾಕ್ಯಪದೀಯಕಾರಿಕೆಗಳ ಜತೆಗೆ ಹೋಲಿಸಿನೋಡಿದರೆ ವಾಕ್ಯಪದೀಯವನ್ನು ಬರೆದ ಭರ್ತೃಹರಿಯು 'ಶತಕತ್ರಯ'ವನ್ನು ರಚಿಸಿದವನಾಗಿ ತೋರುವುದಿಲ್ಲ.

ಶತಕತ್ರಯದಭರ್ತೃಹರಿಯು ಭಟ್ಟಿಕಾವ್ಯವನ್ನೂ ರಾಹಟಕಾವ್ಯವನ್ನೂ ವಿಜ್ಞಾನಶತಕವನ್ನೂ ಬರೆದಿರಬಹುದೆ? ಭಟ್ಟಿಕಾವ್ಯವು ೨೨ ಸರ್ಗಗಳಿಂದ ಕೂಡಿ ಶ್ರೀರಾಮನ ವರ್ಣನೆಯಿಂದ ಶೋಭಾಯಮಾನವಾಗಿರುವುದು. ಅಲ್ಲಲ್ಲಿ ವ್ಯಾಕರಣಸಂಬಂಧವಾದ ಉದಾಹರಣೆಗಳು ಅನೇಕವಾಗಿರುವುವಲ್ಲದೆ ಕೆಲವು ಸರ್ಗಗಳು ಅಲಂಕಾರ(Figures of Speech)ಗಳಿಂದ ತುಂಬಿರುವುವು. ಇದು ಸುಮಾರು ಕ್ರಿ. ಶ. ಏಳನೆಯ ಶತಮಾನದ ಮಧ್ಯದಲ್ಲಿ ಆಳುತ್ತಿದ್ದ ಶ್ರೀಧರ

ಸೇನನ ಕಾಲದಲ್ಲಿ ವಲ್ಲಭಿಭಾಷೆಯಲ್ಲಿ ಬರೆಯಲ್ಪಟ್ಟಿತು. ಸಿದ್ಧಾಂತಕೌಮುದೀಕಾರನಾದ ಭಟ್ಟೋಜಿದೀಕ್ಷಿತನು ಭಟ್ಟಿಕಾವ್ಯದಿಂದ ಉದಾಹರಣೆಗಳನ್ನಾರಿಸಿಕೊಂಡಿರುವನು. ಭಟ್ಟಿಕಾವ್ಯವ್ಯಾಖ್ಯಾನಕಾರರು ಒಂಭತ್ತುಮಂದಿ. ಇವರಲ್ಲಿ ಭರತ(ಭರತಸೇನ)ನೂ, ಜಯಮಂಗಳನೂ ಈಗಿನ ವರೆಗೂ ಪ್ರಸಿದ್ಧರು. ಭರತನು ತನ್ನ ವ್ಯಾಖ್ಯಾಮುಖದಲ್ಲಿ—

'ಭರ್ತೃಹರಿರ್ನಾಮಕವಿಃ ಶ್ರೀರಾಮಕಥಾಶ್ರಯಂ ಮಹಾಕಾವ್ಯಂ ಚಕಾರ' ಎಂದೂ ವ್ಯಾಖ್ಯಾಂತದಲ್ಲಿ—
'ಮುಗ್ಧಬೋಧಿನ್ಯಾಂ ಭಟ್ಟಿಟೀಕಾಯಾಂ' ಎಂದೂ ಹೇಳಿರುವನು.

ಇಷ್ಟರಿಂದಲೇ ಶತಕತ್ರಯದ ಭರ್ತೃಹರಿಯೂ ಭಟ್ಟಿಕಾವ್ಯದ ಭರ್ತೃಹರಿಯೂ ಒಬ್ಬನೆಂದು ಹೇಳಲಾಗುವುದಿಲ್ಲ. ಮತ್ತು ವಾಕ್ಯಪದೀಯಕಾರನು ಮಹಾವೈಯ್ಯಾಕರಣನಾಗಿದ್ದ ಹಾಗೆಯೇ ಭಟ್ಟಿಕಾವ್ಯಕಾರನೂ ವ್ಯಾಕರಣಪಂಡಿತನಾಗಿದ್ದನು. ವಾಕ್ಯಪದೀಯಕಾರನು ಬೌದ್ಧಮತಾವಲಂಬಿ; ಭಟ್ಟಿಕಾವ್ಯಕಾರನು ಬ್ರಾಹ್ಮಣಮತಾವಲಂಬಿ. ಜಯಮಂಗಳನು ತನ್ನ ವ್ಯಾಖ್ಯಾಮುಖದಲ್ಲಿ-

ಲಕ್ಷ್ಯಂ ಲಕ್ಷಣಂ ಚೋಭಯಮೇಕತ್ರ ವಿದುಷಃ ಪ್ರದರ್ಶಯಿತುಂ ಶ್ರೀಸ್ವಾಮಿಸೂನುಃ ಕವಿರ್ಭಟ್ಟಿನಾಮಾ ರಾಮಕಥಾಶ್ರಯಂ ಮಹಾಕಾವ್ಯಂ ಚಕಾರ। ಎಂದೂ ವ್ಯಾಖ್ಯಾಂತಗದ್ಯದಲ್ಲಿ—
"ಇತಿ ವಲ್ಲಭೀವಾಸ್ತವ್ಯಸ್ಯ ಶ್ರೀಸ್ವಾಮಿಸೂನೋರ್ಭಟ್ಟಿಮಹಾಬ್ರಾಹ್ಮಣಸ್ಯ ಮಹಾವೈಯ್ಯಾಕರಣಸ್ಯ ಕೃತೌ ರಾವಣವಧೇ"

ಎಂದೂ ಹೇಳಿರುವನು. ಭಟ್ಟಿಕಾವ್ಯದ ಭರ್ತೃಹರಿಯನ್ನು ಕ್ಷೀರಸ್ವಾಮಿಯ ಮಗನೆಂದು ಪ್ರೊ. ಕೋಲ್‌ಬ್ರೂಕ್‌ರವರು ಹೇಳುವರು. ಕ್ಷೀರಸ್ವಾಮಿಯೆಂಬ ಹೆಸರಿನವರಿಬ್ಬರಿರುವರು; ಒಬ್ಬನು ಜಯಾಪೀಡರಾಜನ ಗುರುವಾದ ಕ್ಷೀರಸ್ವಾಮಿ; ಮತ್ತೊಬ್ಬನು ಪ್ರತಾಪರುದ್ರನ ಆಸ್ಥಾನದಲ್ಲಿದ್ದ ಕ್ಷೀರಸ್ವಾಮಿ. ಇವರಲ್ಲಿ ಭರ್ತೃಹರಿಯ ತಂದೆಯಾರೆಂಬುದು ತಿಳಿಯದು. ಶತಕತ್ರಯಕಾರನು ಅದ್ವೈತಿ; ಮತ್ತು ಶಿವಪೂಜಾಧುರಂಧರನು, ಭಟ್ಟಿಕಾವ್ಯಕಾರನು ವಿಷ್ಣುಪೂಜಾಧುರಂಧರನು. ಮೊದಲನೆಯವನು ಕಥೆಯಲ್ಲಿ ಹೇಳಿರುವಂತೆ ಕ್ಷತ್ರಿಯನು ಮತ್ತು ಉಜ್ಜಯಿನಿಯವನು; ಎರಡನೆಯವನು ಬ್ರಾಹ್ಮಣನು ಮತ್ತು ವಲ್ಲಭಿಯವನು; ಇವನು ತನ್ನ ಕಾವ್ಯದ ಕೊನೆಯ ಶ್ಲೋಕದಲ್ಲಿ—

**ಕಾವ್ಯಮಿದಂ ವಿಹಿತಂ ಮಯಾ 'ವಲಭ್ಯಾಂ'**
**ಶ್ರೀಧರಸೇನನರೇಂದ್ರಪಾಲಿತಾಯಾಂ ।**

**ಕೀರ್ತಿರತೋ ಭವತಾನ್ನೃಪಸ್ಯ ತಸ್ಯ**
**ಪ್ರೇಮಕರಃ ಕ್ಷಿತಿಪೋ ಯತಃ ಪ್ರಜಾನಾಂ ॥ ೯—೩೫ ॥**

ಎಂದು ಹೇಳಿಕೊಂಡಿರುವನು. ವಲ್ಲಭಿಯು ಸೌರಾಷ್ಟ್ರದೇಶಕ್ಕೆ ರಾಜಧಾನಿಯಾಗಿದ್ದಿತೆಂದು ತಿಳಿಯುಬರುತ್ತದೆ. ಶ್ರೀಧರಸೇನನು ವಲ್ಲಭಿರಾಜ್ಯವನ್ನು ಕ್ರಿ. ಶ. ೫೪೦–೫೪೫ರ ಮಧ್ಯದಲ್ಲಿ ಆಳಿದುದಾಗಿ ಮಿ. ಲ್ಯಾಸನ್‌ಸಾಹೇಬರು ಹೇಳುವರು. ಆದರೆ ನಮ್ಮ ಕವಿಯು ಇವನಿಗಿಂತಲೂ ಹಿಂದಿನವನು. ಪ್ರಾಚೀನಲೇಖಕರಲ್ಲಿ ಕೆಲವರು, ಭಟ್ಟಿಯನ್ನು ಭರ್ತೃಹರಿಯ ಮಗನೆಂದೂ, ಸೋದರನೆಂದೂ, ವಿಕ್ರಮನ ಮಂತ್ರಿಯೆಂದೂ ಬಗೆಬಗೆಯಾಗಿ ಹೇಳುವರು. ಇವುಗಳಲ್ಲಿ ಸರಿಯೆಂದು ಯಾವುದನ್ನು ಹೇಳುವುದಕ್ಕೂ ಸಾಕಾದಷ್ಟು ಚರಿತ್ರಾಧಾರಗಳು ದೊರೆತಿರುವುದಿಲ್ಲ.

ರಾಹಟಕಾವ್ಯವನ್ನು ಭರ್ತೃಹರಿಯೇ ಬರೆದುದೆಂದೂ, ವ್ಯಾಕರಣ ಮತ್ತು ಅಲಂಕಾರಶಾಸ್ತ್ರಗಳಿಗೆ ಸರಿಯಾಗಿ ರಾಮಾಯಣವನ್ನೆಲ್ಲ ೨೨ ಶ್ಲೋಕಗಳಲ್ಲಿಯೇ ಅಡಕಮಾಡಿರುವನೆಂದೂ ಹೇಳುವರು. ವ್ಯಾಕರಣವಿದ್ಯಾಧೌರೇಯನಾದ ಪಾಣಿನಿಯು ತನ್ನ ಅಷ್ಟಾಧ್ಯಾಯಿಯನ್ನು ನಾಲ್ಕುಸಾವಿರ ಸೂತ್ರಗಳಿಗಿಂತಲೂ ಕಡಿಮೆಯಾಗಿ ಬರೆಯಲಾರದೆ ಹೋಗಿರುವಾಗ ವ್ಯಾಕರಣಾಲಂಕಾರ ಸಹಿತವಾಗಿ ರಾಮಾಯಣವೆಲ್ಲವನ್ನೂ ೨೨ ಶ್ಲೋಕಗಳಲ್ಲಿ ಮುಗಿಸುವುದೆಂದರೆ ಆಶ್ಚರ್ಯವೇ ಸರಿ. ಈ ಕಾವ್ಯವು ಉಪಲಬ್ಧವಿಲ್ಲ.

ನಾಗಪುರದ ಮಿ. ಕೃಷ್ಣಶಾಸ್ತ್ರಿಘಾಳೆಯವರು ವಿಜ್ಞಾನಶತಕಕ್ಕೆ ಭೂಮಿಕೆಯನ್ನು ಬರೆದಿರುವುದರಲ್ಲಿ ಇದು ಭರ್ತೃಹರಿರಚಿತವೆಂದು ಹೇಳಿರುವರು. ಶತಕತ್ರಯದ ಶಬ್ದಸಂಯೋಜನ ಅಭಿಪ್ರಾಯಗಳು ಇದರಲ್ಲಿಯೂ ಕಂಡುಬರುವುದರಿಂದ ಇವರು ಹಾಗೆ ಹೇಳಿರಬಹುದಾಗಿ ತೋರುತ್ತದೆ.

ಇವೆರಡರ ಪರಸ್ಪರಭೇದಗಳು—

| ವಿಜ್ಞಾನಶತಕದಲ್ಲಿ— | ಶತಕತ್ರಯದಲ್ಲಿ— |
|---|---|
| **ಸಾಯುವವರಿಗೆ 'ಉತ್ಕ್ರಾಂತಿಭಾಜಃ' ಎಂದೂ ಹಿಮಾಲಯಪರ್ವತಕ್ಕೆ 'ಪ್ರಾಲೇಯಾಚಲ'ವೆಂದೂ ಗಂಗಾನದಿಗೆ 'ಉಪಜಾರಕ'ವೆಂದೂ ಮುಕ್ತಿಕೊಡುವುದಕ್ಕೆ 'ಉಪರೀಹಾ' ಎಂದೂ ಇರುವುದಲ್ಲದೆ; 'ಪ್ರಬಲದುರಿತಾನೀಕವಿಧುರಂ' 'ಶ್ರುತಿಜನವಿಶ್ವಾಸಮುಷಿತಃ' ಎಂಬಿವೇಮೊದಲಾದ ಕ್ಲಿಷ್ಟಪದಪ್ರಯೋಗಗಳು ದೊರೆಯುತ್ತವೆ.** | **ಅಂಥಾ ಕ್ಲಿಷ್ಟಪದಪ್ರಯೋಗಗಳಿರುವುದಿಲ್ಲ.** |

ಎಲ್ಲವೂ ಅದ್ವೈತವೇದಾಂತವಿಚಾರ. 'ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ, ಮಾಯಾಪ್ರಪಂಚ, ರಜ್ಜುಸರ್ಪನ್ಯಾಯ, ತತ್ತ್ವಮಸಿ, ಪ್ರತ್ಯಗಾತ್ಮ, ಗಗನನಗರ' ಇವೇ ಮೊದಲಾದ ಶಬ್ದಪ್ರಯೋಗಗಳು ಇವೆ.

ಪ್ರಾರಂಭದಲ್ಲಿ ಗಣಪತಿಯ ಸ್ತೋತ್ರವಿರುವುದು.

ದೊಡ್ಡ ದೊಡ್ಡ ವೃತ್ತಗಳಿರುವುವು.

ಚಕ್ರಪಾಣಿ, ಶ್ರೀಕೃಷ್ಣ, ಶ್ರೀರಂಗ, ಗೋಪಾಲ, ಮುಕುಂದ ಇವೇ ಮೊದಲಾದ ಹೆಸರುಗಳು ಅಲ್ಲಲ್ಲಿ ಕಾಣಬರುವುವು.

ಇಂತಹ ಶಬ್ದಗಳು ಎಲ್ಲಿಯೂ ಕಂಡು ಬರುವುದಿಲ್ಲ.

ಯಾವ ದೇವತೆಯನ್ನೂ ನಿರ್ದೇಶಿಸಿ ಹೇಳಿರುವುದಿಲ್ಲ.

ಸುಲಭವಾಗಿಯೂ ಸಾಧಾರಣವಾಗಿಯೂ ಇರುವ ಅನುಷ್ಟುಪ್, ಆರ್ಯಾ, ಇಂದ್ರವಜ್ರ, ಉಪಜಾತಿ, ವಂಶಸ್ಥ, ದ್ರುತವಿಲಂಬಿತ, ಶಾಲಿನೀ ಮೊದಲಾದುವುಗಳಿರುವುವು.

ಮೊದಲನೆಯ ಶತಕಪ್ರಾರಂಭದಲ್ಲಿ ಬ್ರಹ್ಮನನ್ನೂ ಎರಡನೆಯ ಶತಕದಲ್ಲಿ ವಿಷ್ಣುವನ್ನೂ ಮೂರನೆಯ ಶತಕದಲ್ಲಿ ಶಿವನನ್ನೂ ಸ್ತೋತ್ರ ಮಾಡಿರುವನು.

ಶತಕತ್ರಯದ ಶಬ್ದಸೌಷ್ಟವವೂ ರಸಸೌಂದರ್ಯವೂ ಮೃದುಶೈಲಿಯೂ ಅರ್ಥಪರಿಪಾಟವವೂ ವಿಜ್ಞಾನಶತಕದಲ್ಲಿ ಎಲ್ಲೋ ಕೆಲವು ಕಡೆ ಕಂಡು ಬರುವುವಾದರೂ ಇವುಗಳೆರಡರ ಕರ್ತರೂ ಬೇರೆಬೇರೆ ಎಂದು ಹೇಳಬೇಕಾಗಿದೆ.

ಸಮಾನಾಭಿಪ್ರಾಯಗಳುಳ್ಳ ಶ್ಲೋಕಗಳು ಇವೆರಡರಲ್ಲಿಯೂ ದೊರಕುತ್ತವೆ. ಕೆಲವು ಶ್ಲೋಕಗಳು ಸುಲಭವೂ ಮನೋಹರವೂ ಆಗಿ ಕೆಲವು ಕಠಿನವೂ ಅಪ್ರಯೋಜಕವೂ ಆಗಿರುವುವು. ಇದಕ್ಕೆ ಉದಾಹರಣೆ—

ಶತಕತ್ರಯ—

> ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ
> ಸ ಪಂಡಿತಸ್ಸಶ್ರುತಿವಾನ್ ಗುಣಜ್ಞಃ ।
> ಸ ಏವ ವಕ್ತಾ ಸ ಚ ದರ್ಶನೀಯಃ
> ಸರ್ವೇ ಗುಣಾಃ ಕಾಂಚನಮಾಶ್ರಯಂತಿ ॥

ವಿಜ್ಞಾನಶತಕ—

> ಆಢ್ಯಃ ಕಶ್ಚಿದಪಂಡಿತೋಽಪಿ ವಿದುಷಾಂ ಸೇವ್ಯಸ್ಸದಾ ಧಾರ್ಮಿಕೋ
> ವಿಶ್ವೇಷಾಮುಪಚಾರಕೋ ಮೃಗದೃಶಾಮಾಸಂಪಸಂದಾಯಕಃ ।
> ಕರ್ಪೂರದ್ಯುತಿಕೀರ್ತಿಭೂಷಿತಹರಿದ್ಭೂಮಂಡಲೇ ಗೀಯತೇ
> ಶಶ್ವದ್ಬಂದಿಜನೈರ್ಮಹೀತನುಭೃತಃ ಪುಣ್ಯೈರ್ನ ಕಸ್ಯೋದಯಃ ॥ ೮೨ ॥

ಶತಕತ್ರಯ—

ಪುರಾ ವಿದ್ವತ್ತಾಸೀದುಪಶಮವತಾಂ ಕ್ಲೇಶಹತಯೇ
ಗತಾಕಾಲೇನಾಸೌ ವಿಷಯಸುಖಸಿದ್ಧ್ಯೈವಿಷಯಿಣಾಂ |
ಇದಾನೀಂ ತು ಪ್ರೇಕ್ಷ್ಯಕ್ಷಿತಿತಲಭುಜಃ ಶಾಸ್ತ್ರವಿಮುಖಾ
ನಹೋಟ ಕಷ್ಟಂಸಾಪಿ ಪ್ರತಿದಿನಮಧೋಽಧಃ ಪ್ರವಿಶತಿ ||

ವಿಜ್ಞಾನಶತಕ—

ನಿಸ್ಸಾರಾ ವಸುಧಾಧುನಾ ಸಮಜನಿ ಪ್ರೌಢಪ್ರತಾಪಾನಲ
ಜ್ವಾಲಾಜ್ವಾಲಸಮಾಕುಲಾದ್ವಿಷಘಟಾಸಂಘಟ್ಟವಿಕ್ಷೋಭಿತಾ |
ಮ್ಲೇಚ್ಛಾನಾಂ ರಥವಾಜಿಪತ್ತಿನಿವಹೈರುನ್ಮೀಲಿತಾ ಕೀದೃಶೀ
ಯಾ ವಿದ್ಯಾ ಭವಿತೇತಿ ಹಂತ! ನ ಸಖೇ! ಜಾನೀಮಹೇ ಮೋಹಿತಾಃ ||೬೬||

(೫) ಭರ್ತೃಹರಿಯು ಕಾಳಿದಾಸನ ಸಮಕಾಲಿಕನೆ? ಭರ್ತೃಹರಿಯು ವಿಕ್ರಮಾದಿತ್ಯನ ಅಣ್ಣನೆಂತಲೂ ಕಾಳಿದಾಸನು (?) ವಿಕ್ರಮಾದಿತ್ಯನ ಸಭೆಯಲ್ಲಿದ್ದುದಾಗಿ—

ಧನ್ವಂತರಿ-ಕ್ಷಪಣಕಾ-ಮರಸಿಂಹ-ಶಂಕು
ವೇತಾಲಭಟ್ಟ-ಘಟಕರ್ಪರ-ಕಾಲಿದಾಸಾಃ |
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ||

ಎಂಬ ಶ್ಲೋಕವು ಹೇಳುವುದರಿಂದ ಭರ್ತೃಹರಿಯು ಕಾಳಿದಾಸನ ಸಮಕಾಲಿಕನೆಂದೂ ಹೇಳುವರು. ಬಲ್ಲಾಳಮಿಶ್ರನ 'ಭೋಜಪ್ರಬಂಧ'ದಂತೆ ಈ ಶ್ಲೋಕವೂ ಕೂಡ ಮನೋರಂಜನೆಗಾಗಿ ಬೇಕುಬೇಕಾದವರನ್ನೆಲ್ಲಾ ಒಟ್ಟುಗೂಡಿಸಿ ಬರೆದಿರುವ ಚಾಟೂಕ್ತಿಯೇ ವಿನಾ ಮತ್ತೆ ಬೇರೆ ಇಲ್ಲ. ಮತ್ತು ಕಾಳಿದಾಸನ ಆಶ್ರಯದಾತನಾದ ವಿಕ್ರಮನು ಇವರು ಹೇಳುವ ವಿಕ್ರಮನಲ್ಲ. ಇದನ್ನು ಕಾಳಿದಾಸನ ಜೀವನಚರಿತೆಯಲ್ಲಿ ಹೇಳಿದೆ. ಭರ್ತೃಹರಿಯು ಗೋರಕ್ಷನಾಥ, ಮತ್ಸ್ಯೇಂದ್ರನಾಥರ ಸಮಕಾಲಿಕನೆಂದು ಹೇಳುವರು. ಇವರು ಯಾರು? ಯಾವಾಗ ಇದ್ದರು? ಎಂಬುದೊಂದೂ ತಿಳಿಯದು. ಇವನು ಹಠಯೋಗಿಯಾಗಿದ್ದನೆಂಬ ಹೇಳಿಕೆಯು ಇದ್ದರೂ ಇರಬಹುದು.

**ಕಾಲವಿಚಾರ:**— ಇವನ ಕಾಲವನ್ನು ನಿಷ್ಕರ್ಷಿಸಲು ಇವನ ಪುಸ್ತಕದಲ್ಲಿ ಯಾವ ಆಧಾರಗಳೂ ದೊರೆಯುವುದಿಲ್ಲ. ಪ್ರೊ. ಮ್ಯಾಕ್‌ಡೊನೆಲ್‌ರವರು ೭ನೆಯ ಶತಮಾನದ ಪೂರ್ವಾರ್ಧದಲ್ಲಿ ಇವನು ಇದ್ದುದಾಗಿ ಹೇಳುವರು; ಆದರೆ ಕ್ರಿ. ಶ. ೬೫೧ರಲ್ಲಿ ಮೃತನಾದ ವಾಕ್ಯಪದೀಯಕಾರಭರ್ತೃಹರಿಯನ್ನು ಶತಕತ್ರಯಕಾರಭರ್ತೃಹರಿಯೆಂದು ಇವರು ತಿಳಿದು ನಮ್ಮ ಕವಿಯ

ಕಾಲವನ್ನು ೭ನೆಯ ಶತಮಾನದ ಪೂರ್ವಾರ್ಧವೆಂದು ಪ್ರಮಾದವಶದಿಂದ ಹೇಳಿರುವುದಾಗಿ ಭಾಸವಾಗುತ್ತದೆ. ಆಚಾರ್ಯದಂಡಿಯು ಕ್ರಿ. ಶ. ೭ನೆಯ ಶತಮಾನದವನು. ಅಲಂಕಾರಶಾಸ್ತ್ರಕಾರನಾದ ಭಾಮಹನು ದಂಡಿಗಿಂತ ಪ್ರಾಚೀನನು. ಭಾಮಹನಿಗಿಂತ ಭರ್ತೃಹರಿಯು ಪ್ರಾಚೀನನಾಗಿದ್ದ ಪಕ್ಷ ದಲ್ಲಿ ಭಾಮಹನು ತನ್ನ ಅಲಂಕಾರಶಾಸ್ತ್ರಕ್ಕೆ ಉದಾಹರಣೆಗಾಗಿಯಾದರೂ ಭರ್ತೃಹರಿಯ ಒಂದೆರಡು ಶ್ಲೋಕಗಳನ್ನು ಹೇಳದೇ ಬಿಡುತ್ತಿರಲಿಲ್ಲ. ವಿಷ್ಣು ಶರ್ಮಕೃತಪಂಚತಂತ್ರದಲ್ಲಿ ಭರ್ತೃಹರಿಯ ಶ್ಲೋಕಗಳು ಉದಾಹೃತವಾಗಿರು ವುವು. ಪರ್ಷಿಯಾದೇಶದಲ್ಲಿ ಆಳುತ್ತಿದ್ದ (ಕ್ರಿ. ಶ. ೫೩೧–೭೯) ರಾಜಾ ಖುಸ್ರು ಅನುಶರಿವಾನ್ ಎಂಬುವನ ಅಪ್ಪಣೆಯಂತೆ ಆಗ ಅಲ್ಲಿ ಪ್ರಚುರವಾಗಿದ್ದ ಪೆಹಲ್ವಿ ಭಾಷೆಯಲ್ಲಿ ಪಂಚತಂತ್ರವು ಪರಿವರ್ತಿಸಲ್ಪಟ್ಟಿರುವುದು. ಇದರಿಂದ ಪಂಚತಂತ್ರಕಾಲವು ಕ್ರಿ. ಶ. ೫೩೧ಕ್ಕಿಂತಲೂ ಎಷ್ಟೋ ವರ್ಷಗಳು ಹಿಂದಿರ ಬೇಕು. ಈ ಆಧಾರಗಳಿಂದ ಭರ್ತೃಹರಿಯು ೫ನೆಯ ಶತಮಾನದ ಮಧ್ಯ ಅಥವಾ ಉತ್ತರಭಾಗದಲ್ಲಿದ್ದನೆಂದು ಹೇಳಬಹುದಾಗಿದೆ.

ಶತಕತ್ರಯಗಳನ್ನು ಭರ್ತೃಹರಿಯೇ ಬರೆದುದೆ? ಮತ್ತಾರಾದರೂ ಇವನ ಹೆಸರಿನಲ್ಲಿ ಬರೆದಿರುವರೆ? ಎಂಬ ವಿಚಾರದಲ್ಲಿ ಪ್ರೊ. ಕೋಲ್‌ಬ್ರೂಕರು "ಪ್ರಪಂ ಚದಲ್ಲಿ ಐಶ್ವರ್ಯವೂ ವಿದ್ಯೆಯೂ ಒಬ್ಬನಲ್ಲಿಯೇ ಇರದೆಂದೂ ಐಶ್ವರ್ಯಯುಕ್ತ ನಾದ ಭರ್ತೃಹರಿಯು ಬೇರೊಬ್ಬ ಯಾವನೋ ಪಂಡಿತನಿಂದ ಈ ಶತಕತ್ರಯ ವನ್ನು ಬರೆಯಿಸಿ ತನ್ನ ಹೆಸರಿನಲ್ಲಿ ಅಂಕಿತಮಾಡಿಸಿಕೊಂಡಿರಬೇಕು" ಎಂದೂ ಹೇಳಿರುವರು. ಆದರೆ ಐಶ್ವರ್ಯವೂ ವಿದ್ಯೆಯೂ ಸಮತ್ವವನ್ನು ವಹಿಸಿ ಒಂದೇ ಕಡೆಯಲ್ಲಿದ್ದುದಕ್ಕೆ 'ದಶಕುಮಾರಚರಿತೆ' 'ಕುಮಾರಸಂಭವ'ವೇ ಮೊದಲಾದ ಗ್ರಂಥಗಳೂ; ಭೋಜ, ಶೂದ್ರಕ, ರಾಜಶೇಖರ, ಹರ್ಷವರ್ಧನನೇ ಮೊದಲಾದ ರಾಜಕವಿಗಳೂ ಹೇರಳವಾಗಿ ದೊರಕುವರು. ಇದರಿಂದ ಭರ್ತೃಹರಿಯನ್ನು 'ರಾಜಕವಿ'ಯೆಂದು ಹೇಳುವುದರಲ್ಲಿ ಯಾವ ಅಭ್ಯಂತರವೂ ಇರದು. ಹಾಗೂ ಸಂಶಯಪಡುವವರಿಗೆ ಭರ್ತೃಹರಿಯ ವಿದ್ವತ್ತಿನ ವಿಚಾರದ ಕೆಲವು ಉದಾಹರಣೆ ಗಳನ್ನು ಇಲ್ಲಿ ಕೊಟ್ಟಿದೆ—

(೧) ಶ್ರೀಮದ್ಭರ್ತೃಹರಿಕೃತಂ ನೀತಿಶತಕಂ ಪ್ರಾರಭ್ಯತೇ।

(೨) ಇಹ ಖಲು ರಾಜರ್ಷಿಪ್ರವರಃ ಭರ್ತೃಹರಿಃ............ಶತಕ ತ್ರಯಾತ್ಮಕಂ ಗ್ರಂಥಂ ಚಿಕೀರ್ಷತಿ।

(೩) ಅಥ ಭರ್ತೃಹರಿಭೂಪತಿಕೃತವೈರಾಗ್ಯಶತಕಪ್ರಾರಂಭಃ।

(೪) ಇತಿ ಶ್ರೀಮಹಾಮುನೀಂದ್ರಭರ್ತೃಹರಿಕೃತೌ...............।

(೫) ಇತಿ ಶ್ರೀಮಹಾಕವಿಚಕ್ರಚೂಡಾಮಣಿನಾ ಭರ್ತೃಹರಿಣಾ ವಿರಚಿತಂ...........।

(೬) ಇತಿ ಶ್ರೀಭರ್ತೃಹರಿಯೋಗೀಂದ್ರೇಣ ವಿರಚಿತೇ ...........।

(೭) ಇತಿ ಶ್ರೀಮಹಾರಾಜಾಧಿರಾಜ-ಸಾಮಂತಸೀಮಂತಚೂಡಾಮಣಿ-ಕವಿಶೇಖರಯೋಗೀಂದ್ರಮುಕುಟಮಣಿ-ರಾಜರ್ಷಿ ಭರ್ತೃಹರಿವಿರಚಿತಂ ...........।

(೮) ಇತಿ ಶ್ರೀಭರ್ತೃಹರಿಯೋಗೀಂದ್ರವಿರಚಿತಾಯಾಂ ಸುಭಾಷಿತಾವಳ್ಯಾಂ...........।

ಮಿ. ಭೂಲೆನ್‌ಸಾಹೇಬರೂ ಮತ್ತು ಅವರ ಅನುಯಾಯಿಗಳೂ ಈ ಶತಕತ್ರಯಸಂವಿಧಾನವು ಸರಿಯಾಗಿಲ್ಲವೆಂದೂ ಇದರಲ್ಲಿನ ಶ್ಲೋಕಗಳು ಶಾಕುಂತಲ, ಮೃಚ್ಛಕಟಿಕ, ಮುದ್ರಾರಾಕ್ಷಸ, ದಶರೂಪಕ, ಪಂಚತಂತ್ರ, ಶಾರ್ಙ್ಗಧರಪದ್ಧತಿಯೇ ಮೊದಲಾದ ಗ್ರಂಥಗಳಲ್ಲಿ ದೊರೆಯುವುದರಿಂದ ಭರ್ತೃಹರಿಯು ಇವೆಲ್ಲವನ್ನೂ ಸಂಕಲನಮಾಡಿ ತನ್ನ ಗ್ರಂಥವನ್ನು ರಚಿಸಿರುವುದಾಗಿ ಅಭಿಪ್ರಾಯಪಡುವರು. ಆದರೆ ಪಾಶ್ಚಾತ್ಯಮಹಾಕವಿಗಳಾದ ವರ್ಡ್ಸ್‌ವರ್ತ್ (Words-Worth) ಮಿಲ್ಟನ್, (Milton) ಷೇಕ್ಸ್‌ಪಿಯರ್ (Shakespeare) ಮೊದಲಾದವರ ಗೀತಗಳೂ (Sonnets) ಚಿಕ್ಕ ಚಿಕ್ಕ ಕವಿತೆಗಳೂ ಇದರಿಂದ ದೂರವಾಗಿರುವುವೇ? ಇವುಗಳನ್ನು ಓದುವವರಿಗೆ ಕವಿತಾಸರಣಿಯು ಕ್ರಮವಾಗಿಲ್ಲವೆಂದು ಬೋಧೆಯಾಗುವುದಿಲ್ಲವೇ? ಇವರು ತಮ್ಮ ಮನಸ್ಸಿಗೆ ಯಾವಯಾವ ವಿಚಾರವು ಎಷ್ಟೆಷ್ಟು ತಲೆದೋರಿತೋ ಅಷ್ಟಷ್ಟನ್ನೇ ಬರೆದು ಮುಗಿಸಿರುವುದಿಲ್ಲವೇ? ಪಂಡಿತ ಜಗನ್ನಾಥನ 'ಭಾಮಿನೀವಿಲಾಸ'ದ ಕಥಾಸರಣಿಯೂ ಸಂವಿಧಾನವೂ ಮೊದಲಿನಿಂದ ಕೊನೆಯವರೆಗೂ ಒಂದೇ ರೀತಿಯಾಗಿರುವುದೇ? ಇಲ್ಲ. ಹಾಗೆಯೇ ಭರ್ತೃಹರಿಯು ತನ್ನ ಮನಸ್ಸಿಗೆ ಬಂದ ಪ್ರತಿಯೊಂದು ವಿಚಾರವನ್ನೂ ಬೇರೆಬೇರೆಯಾಗಿ ಬರೆದಿರುವನೆಂದೇ ತಿಳಿಯಬಹುದು.

ಭರ್ತೃಹರಿಯು ಮಹಾವೈಯ್ಯಾಕರಣನೂ ವೇದಾಂತಿಯೂ ಮತ್ತು ಮಹಾಕವಿಯೂ ಆಗಿದ್ದನೆಂದೂ ಈ ಮೂರು ಗುಣಗಳೂ ಓರ್ವನಲ್ಲಿ ಸೇರುವುದತಿವಿರಳವೆಂದೂ ಪ್ರೊ. ಮ್ಯಾಕ್‌ಡೊನೆಲ್‌ರವರು ಹೇಳಿರುವರು. ಭರ್ತೃಹರಿಯು ವಿರಾಗಿಯಾಗಿ ಚೈತ್ಯಾಲಯವನ್ನು ಸೇರಿದರೂ ಹಾಗಿರಲು ಸಾಧ್ಯವಿಲ್ಲದೆ ಏಳುಸಲ ವಿರಾಗಿಯೂ, ಏಳುಸಲ ಅನುರಾಗಿಯೂ ಆಗಿ ತನ್ನನ್ನು ತಾನೇ ದೂಷಿಸಿಕೊಂಡು .ಶತಕತ್ರಯಗಳನ್ನು ಬರೆದುದಾಗಿ ಚೀನಾಪ್ರವಾಸಿಯಾದ

ಇತ್ಸಿಂಗನು ಹೇಳಿರುವನು. ಆದರೆ ಇವುಗಳೆಲ್ಲಾ ಶತಕತ್ರಯಕಾರನಿಗೆ ಸಲ್ಲತಕ್ಕದಾಗಿ ತೋರುವುದಿಲ್ಲ.

ವಿ. ಕೆ. ಎಂ. ಜೋಗ್ಲೆಕರ್ ಎಂ. ಎ.ರವರು—

'ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ . . . ಮಾಂ ಚ ।'

ಎಂಬುದು ನೀತಿಶತಕದ ಎರಡನೆಯ ಶ್ಲೋಕವೆಂದು ಹೇಳುವರು. ಕನ್ನಡ, ಮಹಾರಾಷ್ಟ್ರ, ಆಂಧ್ರ, ದ್ರಾವಿಡ, ಹಿಂದಿಭಾಷೆಗಳಲ್ಲಿ ಪ್ರಚುರವಾಗಿರುವ ಶತಕತ್ರಯಗಳಲ್ಲಿ ಮೇಲಿನ ಶ್ಲೋಕವು ಇರದೆ—

'ಅಜ್ಞಸ್ಸುಖಮಾರಾಧ್ಯಃ . . . ನ ರಂಜಯಂತಿ ।'

ಎಂದಿರುವದು. ವಿ. ಜೋಗ್ಲೆಕರ್‌ರವರು ಹೇಳುವ ಶ್ಲೋಕವು ಯಾವ ನೀತಿಯನ್ನೂ ಬೋಧಿಸುವುದಿಲ್ಲ. ಒಂದು ವೇಳೆ ಇದು ಭರ್ತೃಹರಿಕೃತವಾಗಿದ್ದರೂ, ಕಾಮಿನೀಗರ್ಹಣಭಾಗದಲ್ಲಾಗಲಿ ಅಥವಾ ವೈರಾಗ್ಯಶತಕದಲ್ಲಾಗಲಿ ಇದ್ದಿರಬೇಕೇ ಹೊರತು ನೀತಿಶತಕದಲ್ಲಲ್ಲ.

'ಯೋಗೀಂದ್ರೇಣ ಫಲಂ ಪ್ರದತ್ತ . . . ಪುನಃ ।'

ಎಂಬ ಶ್ಲೋಕವು ಕೊಂಚ ಹೆಚ್ಚುಕಡಿಮೆಯಾಗಿ ಹಿಂದೆ ಹೇಳಿರುವ ಕಥೆಯನ್ನು ಹೋಲುವುದಾದರೂ ಮೊದಲನೆಯ ಪಾದವು ಅಷ್ಟು ಚೆಲುವಾಗಿಯೂ ವ್ಯಾಕರಣಮರ್ಯಾದೆಗೆ ಸರಿಯಾಗಿಯೂ ಇರುವಂತೆ ತೋರುವುದಿಲ್ಲ. ಅಲ್ಲದೆ ದೈವಯೋಗದಿಂದ ಆ ಫಲವು ಪುನಃ ರಾಜನಿಗೆ ದೊರೆಯಿತೆಂಬ ವಿಚಾರದಲ್ಲಿ ಕಥೆಗೂ ಶ್ಲೋಕಕ್ಕೂ ವ್ಯತ್ಯಾಸವು ಕಂಡು ಬರುವುದು. ಈ ಶ್ಲೋಕಗಳನ್ನು ಯಾರೋ ಸೇರಿಸಿರಬೇಕೇ ಹೊರತು ಭರ್ತೃಹರಿಯದೆಂದು ಹೇಳಲಾಗುವುದಿಲ್ಲ; ಮತ್ತು ಇಂತಹ ಶತಕಗಳನ್ನು ಬರೆದಿರುವವನು ಭರ್ತೃಹರಿಯೊಬ್ಬನೇ ಅಲ್ಲ. ಗೋಸ್ವಾಮಿ ಜನಾರ್ಧನಭಟ್ಟನು ಶೃಂಗಾರಶತಕ, ವೈರಾಗ್ಯಶತಕಗಳನ್ನು ಬರೆದಿರುವನು. ಸೋಮಪ್ರಭಾಚಾರ್ಯನು ಶೃಂಗಾರ ಮತ್ತು ವೈರಾಗ್ಯತರಂಗಿಣಿಯನ್ನು ಬರೆದಿರುವನು. ಧನರಾಜಕವಿಯು ನೀತಿಧನದ, ಶೃಂಗಾರಧನದ, ವೈರಾಗ್ಯಧನದ ಎಂಬ ಶತಕತ್ರಯಗಳನ್ನು ಬರೆದಿರುವನು. ಅಪ್ಪಯ್ಯದೀಕ್ಷಿತನು ವೈರಾಗ್ಯಶತಕವನ್ನು ಬರೆದಿರುವನು. ಕಾಶ್ಮೀರದವನಾದ ಶಿಲ್ಹಣನು ಶಾಂತಿಶತಕವೆಂಬ ಗ್ರಂಥವನ್ನು ಬರೆದಿರುವನು.

ಭರ್ತೃಹರಿಯ ಮೊದಲನೆಯದಾದ ಶೃಂಗಾರಶತಕದಲ್ಲಿ ಸ್ತ್ರೀಸೌಂದರ್ಯ, ಪ್ರಣಯಲೀಲೆ, ಅವುಗಳ ಸ್ವಭಾವ, ಪುರುಷಹೃದಯವಶೀಕರಣ, ಅನುಭವ, ಹಾವಭಾವವಿಲಾಸವೇ ಮೊದಲಾದವುಗಳನ್ನು ಹೇಳಿರುವುದು. ಇದನ್ನು

ಇವನು ತನ್ನ ಯೌವನದಲ್ಲಿ ಬರೆದಿರಬಹುದು. ಎರಡನೆಯದಾದ ನೀತಿಶತಕ ದಲ್ಲಿ ವಿವೇಕ, ಹಿತಚಿಂತನೆ, ಜ್ಞಾನಸಾಧನೆ, ಶೌರ್ಯಧೈರ್ಯವಿವರಣೆ, ಸಿಜತ್ವ, ಶಾಂತತ್ವ, ಸೌಶೀಲ್ಯವೇ ಮೊದಲಾದುವುಗಳನ್ನು ಹೇಳಿರುವುದರಿಂದ ಯೌವನಭರ ದಲ್ಲಿ ಮುಂದುಗಾಣದ ಯುವಕನಿಗೆ ಇದು ಕನ್ನಡಿಯಂತಿರುವುದು. ಇದನ್ನು ಇವನು ವಾನಪ್ರಸ್ಥದಶೆಯಲ್ಲಿ ಬರೆದಿರಬಹುದು. ಮೂರನೆಯದಾದ ವೈರಾಗ್ಯ ಶತಕದಲ್ಲಿ ಪ್ರಾಪಂಚಿಕವಾಸನೆಗೆ ಸಂಬಂಧಿಸಿದ ಆಶಾಪಾಶವಿಮುಕ್ತತೆ, ಊಚು ನೀಚುತಾರತಮ್ಯನಿರಸನ, ಲಾಭಾಲಾಭಗಳನಿವೃತ್ತಿ, ಮನೋಸ್ಥೈರ್ಯ, ಈಶ್ವರ ಸೇವೆ, ಅವಧೂತಚರ್ಯವೇ ಮೊದಲಾದುವುಗಳನ್ನು ಬೋಧಿಸಿ ಮನಸ್ಸಂಯ ಮನದಕ್ಷತೆಯನ್ನು ಹೊಂದಿಸಿ ಪುನರಾವೃತ್ತಿರಹಿತವಾದ ಮೋಕ್ಷಮಾರ್ಗದ ಸಾಧನೋಪಾಯವನ್ನು ಸೂಚಿಸುವಂತಿರುವುದು. ಇದನ್ನು ಇವನು ವೃದ್ಧಾಪ್ಯ ದಲ್ಲಿ ಬರೆದಿರಬಹುದು.

ಈ ಶತಕತ್ರಯಗಳನ್ನು ಕಾವ್ಯದೃಷ್ಟಿಯಿಂದ ಪರಿಶೀಲಿಸುವುದಾದರೆ ಜಯ ದೇವ ಮತ್ತು ಜಗನ್ನಾಥರ ಶೈಲಿಗೆ ಕೊಂಚ ಕಿರಿದಾಗಿ ತೋರಿದರೂ ಸುಲಭ ಧಾಟಿ, ಮಂಜುಳಶೈಲಿ, ಅರ್ಥಗೌರವ, ಸವಿನಾಚೀನವಾದ ಪದಗಳಿಂದ ಕೂಡಿರು ವಿಕೆ ಇವು ಓದುವವರ ಮನಸ್ಸನ್ನು ಆಕರ್ಷಿಸುವಂತಿದೆ. ಸಂಸ್ಕೃತಭಾಷೆಯನ್ನು ಹೆಚ್ಚಾಗಿ ತಿಳಿಯದವರೂ ಕೂಡ ಸಾಧಾರಣವಾಗಿ ಓದಿ ತಿಳಿದುಕೊಳ್ಳಬಹುದು. ಇದರಲ್ಲಿ ಉಪಯೋಗಿಸಿರುವ ವೃತ್ತಗಳು ಸುಲಭವೂ ಚಿಕ್ಕವೂ ಆಗಿ, ಅಲಂಕಾರ, ಲಕ್ಷಣಗಳೂ ಉಪಮಾನೋಪಮೇಯಗಳೂ ಸ್ವಾಭಾವಿಕಗಳಾಗಿರುವುದರಿಂದ ಓದುತ್ತಹೋದಹಾಗೆಲ್ಲಾ ನೂತನಭಾವೋತ್ಪನ್ನವಾಗುತ್ತಿರುವುದು. 'ಮಾಘ' ಕವಿಯು 'ಶಿಶುಪಾಲವಧೆ'–೪ನೆಯ ಸರ್ಗ ೧೭ನೆಯ ಶ್ಲೋಕದಲ್ಲ ಹೇಳಿರುವ—

**ಕ್ಷಣೇ ಕ್ಷಣೇ ಯನ್ನವತಾಮುಪೈತಿ**
**ತದೇವ ರೂಪಂ ರಮಣೀಯತಾಯಾಃ ।**

ಎಂಬುದು ನಮ್ಮ ಕವಿಗೆ ಸಲ್ಲುವುದೆಂದರೆ ಅತ್ಯುಕ್ತಿಯಾಗದು. ಇವನ ಶತಕತ್ರಯಗಳಲ್ಲಿ ಒಂದು ಪುಸ್ತಕದಲ್ಲಿನ ಶ್ಲೋಕವು ಮತ್ತೊಂದರಲ್ಲಿಲ್ಲದೆ ಭಿನ್ನ ಭಿನ್ನಶ್ಲೋಕಗಳು ಸಂಕಲಿತಗಳಾಗಿ ಕಾಲದೇಶಕ್ಕೆ ತಕ್ಕಹಾಗೆ ಪಾಠಾಂತರಗಳಾ ಗಿರುವುವು. ಶತಕತ್ರಯದ ಒಂದೊಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದೆ–

**ಸತಿ ಪ್ರದೀಪೇ ಸತ್ಯಗ್ನೌ ಸತ್ಸು ತಾರಾಮಣೀಂದುಷು ।**
**ವಿನಾ ಮೇ ಮೃಗಶಾಬಾಕ್ಷ್ಯಾ ತಮೋಭೂತಮಿದಂ ಜಗತ್ ॥**

**—ಶೃಂಗಾರಶತಕ ೧೪.**

ತನ್ನ ತೇಜೋರಾಶಿಯಿಂದ ಲೋಕವನ್ನು ಕಾಂತಿವಿಶಿಷ್ಟವನ್ನಾಗಿ ಮಾಡು ತ್ತಿರುವ ಸೂರ್ಯ, ಸರ್ವಭಕ್ಷಕನಾದ ಅಗ್ನಿ, ಮಿಣುಗುಟ್ಟುವ ನಕ್ಷತ್ರಗಳು ಥಳಥಳನೆ ಹೊಳೆಯುತ್ತಿರುವ ರತ್ನಗಳು, ಆನಂದದಾಯಕನಾದ ಚಂದ್ರ ಇವೇ ಮೊದಲಾದವು ನಿರಂತರದಲ್ಲಿಯೂ ಪ್ರಕಾಶಿಸುತ್ತಿದ್ದರೂ ಹರಿಣಾಕ್ಷಿಯೋರ್ವಳಿ ಲ್ಲದ ನನಗೆ ಪ್ರಪಂಚವೇ ಘೋರಾಂಧಕಾರವಾಗಿರುವಂತೆ ತೋರುವುದು.

ಗುಣವದಗುಣವದ್ವಾ ಕುರ್ವತಾ ಕಾರ್ಯಜಾತಂ
ಪರಿಣತಿರವಧಾರ್ಯಾ ಯತ್ನತಃ ಪಂಡಿತೇನ ।
ಅತಿರಭಸಕೃತಾನಾಂ ಕರ್ಮಣಾಮಾವಿಪತ್ತೇ
ರ್ಭವತಿ ಹೃದಯದಾಹೀ ಶಲ್ಯತುಲ್ಯೋ ವಿಪಾಕಃ ॥

—ನೀತಿಶತಕ ೬೯.

ವಿವೇಕಿಯಾದವನು ತಾನು ಮಾಡಬೇಕೆನ್ನುವ ಕಾರ್ಯದ ಪರಿಣಾಮವು ಹೇಗಾಗುವುದೆಂಬುದನ್ನು ಸಾವಧಾನವಾಗಿ ಯೋಚಿಸಿ ಆರಂಭಿಸಬೇಕು. ಹಾಗೆ ವಿವೇಕಶೂನ್ಯನಾಗಿ ಆರಂಭಿಸಿದ ಕಾರ್ಯದ ಪರಿಣಾಮವು ಹೃದಯ ವನ್ನೇ ಸುಟ್ಟು ಸಂಕಟಗೊಳಿಸುವಂತಹ ಶೂಲದಂತಾಗುವುದು.

ಉತ್ಖಾತಂ ನಿಧಿಶಂಕಯಾ ಕ್ಷಿತಿತಲಂ ಧ್ಮಾತಾ ಗಿರೇರ್ಧಾತವೋ
ನಿಸ್ತೀರ್ಣಃ ಸರಿತಾಂ ಪತಿರ್ನೃಪತಯೋ ಯತ್ನೇನ ಸಂತೋಷಿತಾಃ ।
ಮಂತ್ರಾರಾಧನತತ್ಪರೇಣ ಮನಸಾ ನೀತಾಃ ಶ್ಮಶಾನೇ ನಿಶಾಃ
ಪ್ರಾಪ್ತಃ ಕಾಣವರಾಟಕೋಽಪಿ ನ ಮಯಾ ತೃಷ್ಣೇ! ಸಕಾಮಾ ಭವ ॥

—ವೈರಾಗ್ಯಶತಕ ೪.

ನಿಧಿಯನ್ನು ಹೊಂದಿ ಅಪರಿಮಿತಸುಖಿಯಾಗುವೆನೆಂಬ ಭ್ರಾಂತಿಯಿಂದ ಹೇಳಿದವರ ಮಾತುಗಳನ್ನೆಲ್ಲ ಕೇಳಿ ಭೂಮಿಯನ್ನೆಲ್ಲ ಅಗೆದೆನು. ಭಂಗಾರವಾಗುವ ದೆಂಬಾಸೆಯಿಂದ ಬೆಟ್ಟಗುಡ್ಡಗಳನ್ನೆಲ್ಲ ಅಲೆದು ಮನಃಶಿಲೆ, ಗಂಧಕಾದಿವಿಷಮಯ ವಾದ ಧಾತುಗಳನ್ನೆಲ್ಲವನ್ನು ಲೋಹದೊಡನೆ ಬೆಂಕಿಯಲ್ಲಿ ಹಾಕಿ ಊದಿ ಊದಿ ದಣಿದೆನು. ವಾಣಿಜ್ಯವೃತ್ತಿಯಿಂದ ಧನಲಾಭವಾಗುವುದೆಂದು ದ್ವೀಪಾಂತರ ಗಳೆಲ್ಲವನ್ನು ಸುತ್ತಿ ಸುತ್ತಿ ಬೇಸತ್ತೆನು. ರಾಜರಿಂದ ದ್ರವ್ಯವನ್ನು ಹೊಂದಬೇ ಕೆಂದು ಅವರ ಸೇವೆಯನ್ನೆಲ್ಲವನ್ನೂ ಮಾಡಿದೆನು. 'ಇವುಗಳಾವುದರಲ್ಲಿಯೂ ಪ್ರಯೋಜನವಿಲ್ಲವೆಂದರಿತು ಶ್ಮಶಾನವಾಸಿಯಾಗಿ ಅನೇಕಕ್ಷುದ್ರದೇವತೆಗಳನ್ನು ಆರಾಧಿಸಿ ಭಯಂಕರವಾದ ಎಷ್ಟೋ ರಾತ್ರಿಗಳನ್ನು ಕಳೆದೆನು. ಈ ರೀತಿ ಎಷ್ಟು

ಕಷ್ಟಪಟ್ಟಾಗ್ಯೂ ಒಂದು ಮುರುಕು ಕವಡೆಯೂ ಕೂಡ ದೊರೆಯಲಿಲ್ಲ. ಎಲೈ ಹತಭಾಗ್ಯಳಾದ ತೃಷ್ಣಾದೇವಿಯೇ! ನೀನಾದರೂ ಸಕಾಮಳಾಗಿ ಬದುಕುವ ಳಾಗು.

> ಇಹ ಹಿ ಮಧುರಗೀತಂ ನೃತ್ಯಮೇತದ್ರಸೋಽಯಂ
> ಸ್ಫುರತಿ ಪರಿಮಳೋಽಯಂ ಸ್ಪರ್ಶ ಏಷಃ ಸ್ತನಾನಾಂ ।
> ಇತಿ ಹತಪರಮಾರ್ಥೈರಿಂದ್ರಿಯೈರ್ಭ್ರಾಮ್ಯಮಾಣಃ
> ಸ್ವಹಿತಕರಣಧೂರ್ತೈಃ ಪಂಚಭಿರ್ವಂಚಿತೋಽಸ್ಮಿ ॥

ಹಾಯ್! ಈ ಶಬ್ದ, ರೂಪ, ರಸ, ಗಂಧ, ಸ್ಪರ್ಶವೆಂಬ ಪಂಚೇಂದ್ರಿಯ ಗಳಿಂದ ತದ್ವಿಷಯಾಸಕ್ತನಾಗುವಂತೆ ವಂಚಿಸಲ್ಪಟ್ಟಿರುವೆನು.



## ಬುದ್ಧಘೋಷ

ಮಹಾಪುರುಷನಾದ ಸಾಯಣಾಚಾರ್ಯನು ವೈದಿಕಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದು ಹೇಗೆ ಕೀರ್ತಿಶೇಷನಾಗಿರುವನೋ ಹಾಗೆಯೇ **ಬುದ್ಧಘೋಷ**ನು ಪಾಲಿಭಾಷೆಯಲ್ಲಿರುವ ಬೌದ್ಧಮತಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದು ಕೀರ್ತಿಶೇಷನಾಗಿರುವನು.

ಬೌದ್ಧಮತದವರಿಗೆ ಬುದ್ಧಘೋಷನ ಹೆಸರು ಚಿರಪರಿಚಿತವಾಗಿರುವುದಾದರೂ ಅವನ ಜೀವನಚರಿತೆಯನ್ನು ತಿಳಿದವರು ಅತಿವಿರಳರಾಗಿರುವರು.

ಕ್ರಿ. ಶ. ೫ನೆಯ ಶತಮಾನದಲ್ಲಿ ಮಗಧರಾಜ್ಯವನ್ನು 'ಸಂಗ್ರಾಮ'ನೆಂಬ ರಾಜನು ಆಳುತ್ತಿದ್ದನು.* ಇವನ ಬಳಿ 'ಕೇಶಿ' ಎಂಬ ಬ್ರಾಹ್ಮಣಪುರೋಹಿತನಿದ್ದನು. ಇವನಿಗೆ 'ಕೇಶಿನೀ' ಎಂಬ ಹೆಂಡತಿಯು ಇದ್ದಳು. ಈ ಬ್ರಾಹ್ಮಣ ದಂಪತಿಗಳೇ ಘೋಷ(ಬುದ್ಧಘೋಷ)ನ ಮಾತಾಪಿತೃಗಳು.‡ ಬ್ರಾಹ್ಮಣನಾದ 'ಘೋಷ'ನು ಬೌದ್ಧಮತವನ್ನವಲಂಬಿಸಿ **ಬುದ್ಧಘೋಷ**ನೆಂದು ಹೆಸರುಹೊಂದಿದುದು ಹೇಗೆಂಬ ವಿಚಾರದಲ್ಲಿ ಒಂದು ಕಥೆಯು ಹೀಗೆ ಇರುವುದು—

ಅಶೋಕನ ಮಗನಾದ 'ಮಹಿಂದ'ನಿಂದ 'ಬುದ್ಧಬೋಧೆಯು' ಸಿಂಹಳ ಭಾಷೆಯಲ್ಲಿ ಕ್ರಮವಾಗಿ ಬರೆಯಲ್ಪಟ್ಟಿದ್ದಿತು. ಅದನ್ನು ಇತರರು ತಿಳಿದು

---

* The life and work of Bubdaghosha—B. C. Law P. 85.
‡ Jagajjyotiasvar 1315 B. S. Part. II.

ಕೊಳ್ಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಹೀಗೆ ಇರುವಾಗ ಕಾಲಜ್ಞಾನಿಯಾದ ತೀರ (Thera)ನೊಬ್ಬನು ಸಿಂಹಳಭಾಷೆಯಲ್ಲಿರುವ ಬುದ್ಧನ ಬೋಧೆಯನ್ನು ಮಗಧ(ಮಾಗಧಿ)ಭಾಷೆಗೆ ಪರಿವರ್ತನಮಾಡುವನಾರೆಂದು ಜ್ಞಾನದೃಷ್ಟಿಯಿಂದ ನೋಡಿ ಇಂತಹ ಗುರುತರಕಾರ್ಯವನ್ನು ನಿರ್ವಹಿಸುವ ಮಹಾಪುರುಷನೊಬ್ಬನು 'ತಾವತಿಂಸ'ಸ್ವರ್ಗದಲ್ಲಿರುವನೆಂದು ತಿಳಿದು ಆ ಸ್ವರ್ಗದ ಮುಖ್ಯನಾದ ಸಕ್ಕನ ಬಳಿಗೆ ಬಂದನು. ತೀರನು ಬಂದ ವಿಚಾರವನ್ನು ಸಕ್ಕನು ಕೇಳಿ ಕೊಂಚ ಅವಕಾಶ ವನ್ನು ಕೊಡೆಂದು ಹೇಳಿ ಘೋಷನ ಸಮೀಪಕ್ಕೆ ಬಂದು 'ಮಾನುಷಪ್ರಪಂಚದಲ್ಲಿ ಜನ್ಮವನ್ನೆತ್ತುವೆಯಾ?' ಎಂದು ಕೇಳಲು ಘೋಷನು– 'ಪ್ರಭೋ! ನಾನು ಇದ ಕ್ಕಿಂತಲೂ ಉತ್ತಮಲೋಕವನ್ನು ಹೊಂದಲಾಶಿಸುವೆನು, ದುಃಖಮಯವಾದ ಮಾನುಷಜನ್ಮವನ್ನೊಲ್ಲೆನು, ಆದರೆ ಬುದ್ಧನ ಬೋಧೆಯನ್ನು ಜನಗಳು ತಿಳಿದು ಕೊಳ್ಳಲಾರದಿದ್ದರೆ ಲೋಕಕಲ್ಯಾಣವಾಗದು. ಅದಕ್ಕಾಗಿ ಜನ್ಮವನ್ನೆತ್ತುವೆನು' ಎಂದನು. ಈ ವಿಚಾರವನ್ನು ಸಕ್ಕನು ತೀರನಿಗೆ ತಿಳಿಸಲು ತೀರನು ತನ್ನ ಮಿತ್ರ ನಾದ ಕೇಶಿಗೆ ತಿಳಿಸಿದನು. ಹಾಗೆಯೇ ಆ ಸ್ವರ್ಗವಾಸಿಯು ಕೇಶಿನಿಯ ಉದರದಲ್ಲಿ ಜನ್ಮಗ್ರಹಣಮಾಡಿದನು. ಇವನಿಗೆ **ಘೋಷ**ನೆಂದು ನಾಮಕರಣವಾಯಿತು. ಹುಟ್ಟಿದ ಏಳುವರ್ಷಗಳಲ್ಲಿ ಮೂರುವೇದಗಳನ್ನೂ ಇತರ ವಿದ್ಯೆಗಳನ್ನೂ ಕಂಠ ಪಾಠಮಾಡಿದನು. ಇವನು ದಿನ ಒಂದಕ್ಕೆ ಆರುಸಾವಿರ ಪದಗಳನ್ನು ಕಲಿ ಯುತ್ತಿದ್ದನು. ಹೀಗೆ ಕೆಲವು ದಿವಸಗಳು ಕಳೆದನಂತರ ಕೇಶಿಯ ಮಿತ್ರನಾದ ಮಹಾತೀರನೊಬ್ಬನು ಕೇಶಿಯ ಮನೆಗೆ ಊಟಕ್ಕೆ ಬಂದಾಗ ಕೇಶಿಯು ಬಂದ ಅತಿಥಿಯನ್ನು ಸತ್ಕರಿಸಿ ಘೋಷನು ಉಪಯೋಗಿಸುತ್ತಿದ್ದ ಪೀಠವನ್ನು ಕೊಟ್ಟನು. ಇದನ್ನು ನೋಡಿ ಘೋಷನು ಮಹಾತೀರನ ಮೇಲೆ ಕೋಪಿಸಿ ಕೊಂಡು (ಮನಸ್ಸಿನಲ್ಲಿ) ಛೀ! ಈ ಬೋಳುತಲೆಯ ಶ್ರಮಣನು ನಾಚಿಕೆಯಿಲ್ಲದವ ನಂತೆ ತೋರುತ್ತಾನೆ. ಇವನಿಗೆ ತನ್ನ ಯೋಗ್ಯತೆಯೇನೆಂಬುದು ತಿಳಿಯದು. ತಂದೆಯು ವೇದವನ್ನರಿಯದ ಇಂತಹನನ್ನು ಕರೆದು ಏಕೆ ಉಪಚರಿಸಬೇಕು? ಒಳ್ಳೆಯದು, ಇರಲಿ; ಊಟವಾದನಂತರ ಇವನಿಗೆ ವೇದದಲ್ಲಿ ಪ್ರಶ್ನೆಹಾಕಿ ಇವನ ಪೂರ್ವೋತ್ತರವನ್ನು ತಿಳಿಯುವೆನೆಂದುಕೊಂಡು ಭೋಜನಾನಂತರ ತೀರ ನನ್ನು ಕುರಿತು 'ಎಲೈ ಅತಿಥಿಯೆ! ನಿನಗೆ ವೇದ ಮತ್ತು ಇತರ ವಿದ್ಯೆಗಳಾವು ವಾದರೂ ಗೊತ್ತಿರುವುದೆ?' ಎಂದು ಕೇಳಿದುದುಕ್ಕೆ ತೀರನು ಬಹು ಸಂತೋಷ ದಿಂದ 'ಎಲೈ ಬಾಲಕನೆ! ನನಗೆ ಸಕಲವೇದವೇದಾಂಗಗಳೂ ಗೊತ್ತಿರುವುವು' ಎಂದನು. ಘೋಷನು– ಹಾಗಾದರೆ ಹೇಳು, ಕೇಳೋಣ; ಎಂದನು. ತೀರನು ಹೇಳುವುದಕ್ಕೆ ಪ್ರಾರಂಭಿಸಿ ಅತಿಗಹನವಾದ ವಿಷಯಗಳನ್ನು ಸ್ಪಷ್ಟಪಡಿಸಿ ಹೇಳಿ

ದುದಲ್ಲದೆ, ಕುಶಲಧರ್ಮ–ಅಕುಶಲಧರ್ಮ–ಅಭ್ಯಾಗತಧರ್ಮವೆಂಬ ವಿಚಾರಗಳ ನ್ನೊಳಗೊಂಡಿರುವ ಅಭಿಧಮ್ಮಸೂತ್ರಗಳನ್ನು ವಿಶದವಾಗಿ ತಿಳಿಯಹೇಳಿದನು. ಘೋಷನು ಇವೆಲ್ಲವನ್ನು ಕೇಳಿ ತಲೆದೂಗಿ ಆನಂದಿಸಿ ತಾಯಿತಂದೆಗಳ ಅಪ್ಪಣೆ ಯನ್ನು ಪಡೆದು ಬುದ್ಧದೀಕ್ಷೆಯನ್ನು ವಹಿಸಿದನು. ಅಂದಿನಿಂದ ಇವನಿಗೆ **ಬುದ್ಧಘೋಷ**ನೆಂಬ ಹೆಸರುಂಟಾಯಿತು.

ರಾಜನು ಕೇಶಿಯೊಡನೆ ಆಗಿಂದಾಗ್ಯೆ ವೇದವಾದವನ್ನು ಮಾಡುವಾಗ ಅನೇಕತೊಡಕಿನ ವಿಷಯಗಳನ್ನು ವಿಶದೀಕರಿಸಿ ಸಮರ್ಥಿಸಿ ರಾಜನಿಗೆ ತಿಳಿಯಹೇಳ ಬೇಕಾಗಿದ್ದಿತು. ಒಂದಾನೊಂದು ದಿವಸ ವೇದವಾದವನ್ನು ಮಾಡುತ್ತ ಯಾವುದೋ ತೊಡಕಿನ ವಿಚಾರವನ್ನು ತಿಳಿಯಹೇಳಲು ಕೇಶಿಯು ಸಮರ್ಥ ನಾಗದೆ ವಿಷಣ್ಣಮನಸ್ಕನಾಗಿ ಮನೆಗೆ ಬಂದನು. ಬುದ್ಧಘೋಷನು ತಂದೆ ಯಿಂದ ಸಕಲವಿಚಾರಗಳನ್ನೂ ತಿಳಿದು ಅದಕ್ಕೆ ಸರಿಯಾದ ಪ್ರತ್ಯುತ್ತರವನ್ನು ಬರೆದು ತಂದೆಯೊಡನೆ ರಾಜಸಭೆಗೆ ಕಳುಹಿಸಿಕೊಟ್ಟನು. ರಾಜನು ಇದನ್ನು ಓದಿ ಸಂತೋಷಗೊಂಡು ಘೋಷನಿಗೆ ಒಂದು ಗ್ರಾಮವನ್ನು ಬಳುವಳಿ ಯಾಗಿ ಕೊಟ್ಟನು.†

ಸಂಗ್ರಾಮನೆಂಬುವನು ಮಗಧರಾಜ್ಯವನ್ನು ಕ್ರಿ. ಶ. ಐದನೆಯ ಶತಮಾನ ದಲ್ಲಿ ಆಳುತ್ತಿದ್ದುದಾಗಿಯೂ ಬುದ್ಧಘೋಷನು ಅವನ ಪುರೋಹಿತನಾದ ಕೇಶಿಯ ಮಗನೆಂದೂ ಹಿಂದೆ ಹೇಳಿರುವುದರಿಂದಲೂ ಸಿಂಹಳದ್ವೀಪವನ್ನು ಇದೇ ಕಾಲದಲ್ಲಿ 'ಮಹಾನಾಮ'ನೆಂಬುವನು ಆಳುತ್ತಿದ್ದಾಗ ಬುದ್ಧಘೋಷನು ಗ್ರಂಥಸಂಗ್ರಹಕ್ಕಾಗಿ ಸಿಂಹಳದ್ವೀಪಕ್ಕೆ ಬಂದಿದ್ದನೆಂದು ಅಲ್ಲಿನ ಕಥೆಗಳಿಂದ ತಿಳಿಯಬರುವುದರಿಂದಲೂ ಕ್ರಿ. ಶ. ಹದಿಮೂರನೆಯ ಶತಮಾನದ ಮಧ್ಯಕಾಲ ದಲ್ಲಿದ್ದ ಸಿಂಹಳದ್ವೀಪದ ಶ್ರಮಣ ಧರ್ಮಕೀರ್ತಿಯೆಂಬುವನು ತಾನು ಬರೆದಿ ರುವ ಮಹಾವಂಶದಲ್ಲಿ ಬುದ್ಧಘೋಷನು ಕ್ರಿ. ಶ. ೫ನೆಯ ಶತಮಾನದವನೆಂದು ನಿರ್ಧರಪಡಿಸಿ ಹೇಳಿರುವುದರಿಂದಲೂ ಮೆ. ಇ. ಡಬ್ಲ್ಯ್ಯೂ. ಬರ್ಲಿನ್‌ಗೇಂ ಸಾಹೇ ಬರು 'ವಿಶುದ್ಧಿಮಾರ್ಗವು' ಕ್ರಿ. ಶ. ೪೧೦ರಲ್ಲಿ ಬರೆಯಲ್ಪಟ್ಟುದಾಗಿ ಹೇಳಿರುವುದ ರಿಂದಲೂ ಇವನು ಕ್ರಿ. ಶ. ೫ನೆಯ ಶತಮಾನದವನಾಗಿರಬೇಕೆಂಬುದು ವ್ಯಕ್ತವು.

† ಮಹಾತ್ಮನಾದ ಗೌತಮನು ಯಾವ ಮರದ ಕೆಳಗೆ ಬುದ್ಧನೆನಿಸಿಕೊಂಡನೊ ಆ ವಟ ವೃಕ್ಷಕ್ಕೆ ಕೊಂಚ ದೂರದಲ್ಲಿ 'ಘೋಷ'ವೆಂಬ ಹಳ್ಳಿಯು ಇದ್ದಿತು. ಅದನ್ನು ಘೋಷಗಾಮ(ಗ್ರಾಮ) ವೆಂದು ಕರೆಯುತ್ತಿದ್ದರು. ಈ ಗ್ರಾಮವೇ ಮೇಲೆ ಹೇಳಿರುವ ಘೋಷಗ್ರಾಮವಿರಬೇಕಾಗಿ ತೋರುತ್ತದೆ. ಈ ಗ್ರಾಮವು ಈಗ ಯಾವುದೆಂಬುದು ತಿಳಿಯದು.

ಬುದ್ಧಘೋಷನ ಗೀರ್ವಾಣಭಾಷಾಪಾಂಡಿತ್ಯದ ವಿಚಾರದಲ್ಲಿ ಹೀಗೆಂದಿರುವುದು– "ಸಿಂಹಳದ್ವೀಪದಲ್ಲಿ ಬುದ್ಧಘೋಷನ ಭಾಷಾಂತರಕಾರ್ಯವು ಮೂರು ತಿಂಗಳಲ್ಲಿ ಮುಗಿಯಿತು. ಸಂಘಾಧ್ಯಕ್ಷನು ಇದನ್ನು ಕೇಳಿ ಸಂತೋಷಿಸಿ ಮುಹಿಂದನು ಸಿಂಹಳಭಾಷೆಯಲ್ಲಿ ಬರೆದಿದ್ದ ಗ್ರಂಥಗಳಿಗೆ ಅಗ್ನಿಸಂಸ್ಕಾರವನ್ನು ಮಾಡಿಸಿದನು. ಅನಂತರ ಬುದ್ಧಘೋಷನು ತಾಯಿತಂದೆಗಳನ್ನು ನೋಡಲಾಶಿಸಿ ಸಂಘದವರ ಅನುಮತಿಯನ್ನು ಬೇಡಿ ಯಾನವನ್ನು ಹತ್ತುವಾಗ ಸಿಂಹಳ ದ್ವೀಪದ ಶ್ರಮಣರು ಇವನನ್ನು ನೋಡಿ ಈ ತೀರನಿಗೆ ತ್ರಿಪಿಟಿಕಗಳು ಮಾತ್ರ ಗೊತ್ತಿರುವುದೇ ಹೊರತು ಗೀರ್ವಾಣಭಾಷಾಗಂಧವರಿಯನೆಂದರು. ಬುದ್ಧಘೋಷನು ಇದನ್ನು ಕೇಳಿ ನ್ನಾಳೆಯು ಆದಿತ್ಯವಾರ ನಾನು ಸಂಸ್ಕೃತಭಾಷೆಯಲ್ಲಿಯೇ ಮಾತನಾಡುವೆನು, ಆ ದೇವಾಲಯದ ಅಂಗಳದಲ್ಲಿ ಎಲ್ಲರೂ ಸೇರತಕ್ಕುದೆಂದು ಅವರನ್ನು ಕುರಿತು ಪ್ರಾರ್ಥಿಸಿ ಹಾಗೆಯೆ ಸಂಸ್ಕೃತದಲ್ಲಿ ಬಹು ಸೊಗಸಾದ ಭಾಷಣವನ್ನು ಮಾಡಿ ಅವರ ಅಪ್ಪಣೆಯನ್ನು ಹೊಂದಿ ಸ್ವಗ್ರಾಮಕ್ಕೆ ತೆರಳಿದನು."

ಬುದ್ಧಘೋಷನು ಬರೆದಿರುವ ಬೌದ್ಧಗ್ರಂಥಗಳೂ, ವ್ಯಾಖ್ಯಾನಗಳೂ, ಕಥೆಗಳೂ ಪಾಲಿ ಮತ್ತು ಮಾಗಧಿಭಾಷೆಗಳಲ್ಲಿ ಹೇರಳವಾಗಿ ದೊರಕುವುವಾದರೂ ಗೀರ್ವಾಣಭಾಷೆಯಲ್ಲಿ ಬರೆದಿರುವುದಾಗಿ **ಪದ್ಯಚೂಡಾಮಣಿ**ಯೆಂಬ ಒಂದು ಕಾವ್ಯವು ಮಾತ್ರವೇ ಪ್ರಕೃತ ದೊರೆತಿರುವುದು. ಇದರಲ್ಲಿ ಬುದ್ಧನ ಜೀವನಚರಿತ್ರವು ವರ್ಣಿತವಾಗಿ ಹತ್ತು ಸರ್ಗಗಳಿರುವುವು. ವಿವಿಧವೃತ್ತಗಳಿಂದ ಕೂಡಿದ ೬೪೧ಶ್ಲೋಕಗಳಿರುವುವು. ಪ್ರತಿಸರ್ಗಾಂತ್ಯದಲ್ಲಿಯೂ—

"ಇತಿ ಬುದ್ಧಘೋಷಾಚಾರ್ಯವಿರಚಿತೇ 'ಪದ್ಯಚೂಡಾಮಣಿ'
ನಾಮ್ನಿ ಮಹಾಕಾವ್ಯೇ ಸಿದ್ಧಾರ್ಥಚರಿತೇ......" ಎಂದೂ
"ಇತಿ ಶ್ರೀಬುದ್ಧಘೋಷವಿರಚಿತೇ ಪದ್ಯಚೂಡಾಮಣೌ ...."

ಎಂದೂ ಬರೆಯಲ್ಪಟ್ಟಿರುವುದು. ಮಹಾಕಾವ್ಯಲಕ್ಷಣಯುಕ್ತವಾಗಿರುವುದರಿಂದ ಇದನ್ನು 'ಮಹಾಕಾವ್ಯ'ವೆನ್ನುವರು. ಆದರೆ ದಂಡಿಯು—

**ನಗರಾರ್ಣವಶೈಲರ್ತುಚಂದ್ರಾರ್ಕೋದಯವರ್ಣನೈಃ ।**
**ಉದ್ಯಾನಸಲಿಲಕ್ರೀಡಾಮಧುಪಾನರತೋತ್ಸವೈಃ ॥**

**ವಿಪ್ರಲಂಭವಿವಾಹೈಶ್ಚ ಕುಮಾರೋದಯವರ್ಣನೈಃ ।**
**ಮಂತ್ರದೂತಪ್ರಯಾಣಾಜಿನಾಯಕಾಭ್ಯುದಯೈರಪಿ ॥**

ಎಂಬ ಹದಿನೆಂಟು ವಿಧಗಳು ಮಹಾಕಾವ್ಯಲಕ್ಷಣವೆಂದು ಹೇಳಿರುವನು. ಇವುಗಳ ಪೈಕಿ ಅರ್ಣವವರ್ಣನ, ಮಧುಪಾನವರ್ಣನ, ಮಧುಪಾನರತೋತ್ಸವ

ವರ್ಣನ, ಮಂತ್ರವರ್ಣನ, ದೂತವರ್ಣನ ಇವು ಈ ಕಾವ್ಯದಲ್ಲಿರುವುದಿಲ್ಲ. ಅಲ್ಲದೆ, ಬೌದ್ಧಗ್ರಂಥಗಳಲ್ಲಿ ಮಧುಪಾನವರ್ಣನ, ಮಧುಪಾನರತೋತ್ಸವವರ್ಣನ ಗಳು ಇಲ್ಲವೇ ಇಲ್ಲವೆಂದರೂ ಸಲ್ಲುವುದು. ಇವನು ಪದ್ಯಚೂಡಾಮಣಿ ಯನ್ನು 'ಲಲಿತವಿಸ್ತರ' ಮತ್ತು ಅಶ್ವಘೋಷನ ಬುದ್ಧಚರಿತೆಯ ಆಧಾರಗಳಿಂದ ಬರೆದಿರಬಹುದಾಗಿ ತೋರುತ್ತದೆ. ಆದರೆ ಪದ್ಯಚೂಡಾಮಣಿಯ ಕಥೆಯು ಮೇಲೆ ಹೇಳಿದ ಎರಡು ಗ್ರಂಥಗಳಲ್ಲಿನ ಕಥೆಗಳಿಗಿಂತಲೂ ಕೆಲವು ಸಂದರ್ಭಗಳಲ್ಲಿ ಭಿನ್ನವಿಸಿ ಬರೆಯಲ್ಪಟ್ಟಿದೆ. ಕಥಾಜೋಡಣೆಗೆ ಅಲ್ಲಲ್ಲಿ ಬೇಕಾದ ಸಂದರ್ಭಗಳೂ ಬಿಟ್ಟು ಹೋಗಿವೆ. ಪದ್ಯಚೂಡಾಮಣಿಯ ಎರಡನೆಯ ಸರ್ಗದಲ್ಲಿ ದೇವತೆಗಳು ತುಷಿತಸ್ವರ್ಗಕ್ಕೆ ಹೋಗಿ ಬೋಧಿಸತ್ವನನ್ನು ಮರ್ತ್ಯಲೋಕದಲ್ಲಿ ಅವತರಿಸುವ ಹಾಗೆ ಪ್ರಾರ್ಥಿಸಿಕೊಂಡರೆಂದು ಹೇಳುವ ವಿಚಾರವು 'ಧರ್ಮಪದ''ಅಥ್ಥಗಾಥಾ' ಮತ್ತು ಜಾತಕವ್ಯಾಖ್ಯಾನಗಳಲ್ಲಿಯೂ ಹೇಳಲ್ಪಟ್ಟಿರುವುದಾದರೂ ಈ ವಿಷಯವು ಲಲಿತವಿಸ್ತರಕಾವ್ಯದಲ್ಲಾಗಲಿ ಅಥವಾ ಬುದ್ಧಚರಿತೆಯಲ್ಲಾಗಲಿ ಹೇಳಲ್ಪಟ್ಟಿರು ವುದಿಲ್ಲ. ಈ ಕಾವ್ಯಗಳಲ್ಲಿ ಹೇಳಿರುವ ಕಥೆಗೂ ಪದ್ಯಚೂಡಾಮಣಿಯಲ್ಲಿ ಹೇಳಿ ರುವ ಕಥೆಗೂ ತೋರಿಬರುವ ವ್ಯತ್ಯಾಸವು ಈ ರೀತಿಯಾಗಿರುವುದು—

| ಲಲಿತವಿಸ್ತರ, ಬುದ್ಧಚರಿತೆ | ಪದ್ಯಚೂಡಾಮಣಿ, |
| --- | --- |
| ತುಷಿತಸ್ವರ್ಗಾಧಿಪನಾದ ಬೋಧಿಸತ್ವನು ಲೋಕಕಲ್ಯಾಣಕ್ಕಾಗಿ ತಾನಾಗಿಯೇ ಮಾಯಾ ದೇವಿಯ ಗರ್ಭದಲ್ಲಿ ಅವತರಿಸಿದುದಾಗಿ ಹೇಳ ಲ್ಪಟ್ಟಿದೆ. | ದೇವತೆಗಳ ಪ್ರಾರ್ಥನೆಯಂತೆ ಮಾಯಾ ದೇವಿಯಗರ್ಭದಲ್ಲಿ ಅವತರಿಸಿದುದಾಗಿ ಹೇಳಿದೆ |
| 'ಲೂಮಿನಿ'ಎಂಬ ತೋಟದಲ್ಲಿ ಬುದ್ಧನು ಹುಟ್ಟಿದುದಾಗಿ ಬುದ್ಧಚರಿತ್ರೆಯು ಹೇಳುವುದ ಲ್ಲದೆ ಸಕಲಬೌದ್ಧಗ್ರಂಥಗಳಲ್ಲಿಯೂ ಕಂಡು ಬರುವುದು. ಆ ಸ್ಥಳದಲ್ಲಿ ಈಗಲೂ ಇರುವ ಅಶೋಕನ ಸ್ತೂಪದಿಂದಲೂ ಗೊತ್ತಾಗುವುದು. | ಈ ವಿಚಾರವಾಗಲಿ, ತೋಟದ ಹೆಸರಾ ಗಲಿ ಇರುವುದಿಲ್ಲ. |
| ಬುದ್ಧನು ಜನಿಸಿದ ಕೂಡಲೇ ಮಾಯಾ ದೇವಿಯು ಗತಾಸುವಾದಳೆಂದಿದೆ. | ಈ ವಿಚಾರವಿಲ್ಲ. |
| ಬುದ್ಧನು ಹುಟ್ಟಿದ ಅನಂತರ ಅಸಿತ ನೆಂಬ ಮುನಿಯು ಬಂದು ಮಗುವನ್ನು ನೋಡಿ ಇವನು ಗೃಹಸ್ಥಾಶ್ರಮಿಯಾಗಿ ಕೆಲವು ಕಾಲ | ಈ ವಿಚಾರವಿಲ್ಲ. |

| | |
|---|---|
| ದಲ್ಲಿಯೇ ರಾಜ್ಯಭೋಗಭಾಗ್ಯಗಳನ್ನು ಬಿಟ್ಟು ಹೊರಟುಹೋಗುವನೆಂದು ಹೇಳಿದುದಾಗಿರುವುದು. | |
| ವನವಿಹಾರೋತ್ಸುಕತೆಯಿಂದ ಹೊರಟ ರಾಜಕುಮಾರನು ಮಾರ್ಗಮಧ್ಯದಲ್ಲಿ ವೃದ್ಧ, ರೋಗಿ ಮತ್ತು ಮೃತನನ್ನು ನೋಡಿದಾಗ ಇವರ ವಿಚಾರವಾಗಿ ಸಾರಥಿಯನ್ನು ಕೇಳಿದುದಾಗಿಯೂ ಮತ್ತು ಒಬ್ಬನೇ ಸಾರಥಿಯಿಂದೂ ಹೇಳಲ್ಪಟ್ಟಿದೆ. | ಒಬ್ಬನಿಗಿಂತ ಹೆಚ್ಚಾಗಿ ಸಾರಥಿಗಳಿದ್ದುದಾಗಿಯೂ ಅವರನ್ನು ಕೇಳಿದುದಾಗಿಯೂ ಹೇಳಲ್ಪಟ್ಟಿದೆ. |
| ವೀತರಾಗನಾಗಿ ಹೊರಟುಹೋಗುವ ಮೊದಲು ರಾಹುಲನೆಂಬವನು ಜನಿಸಿದ್ದುದಾಗಿ ಹೇಳಿದೆ. | ಈ ವಿಚಾರನೇ ಬಿಟ್ಟುಹೋಗಿದೆ. |
| ಬುದ್ಧನು ಹೊರಟುಹೋಗುವಾಗ 'ಕಂಥಕ'ವೆಂಬ ತನ್ನ ಕುದುರೆಯನ್ನೇರಿ ಛಂದಕ, (ಚನ್ನ?) ನೊಡನೆ ಹೊರಟುಹೋದನೆಂದಿದೆ. | ಸಿದ್ಧಾರ್ಥನು ವಿರಾಗಿಯಾಗಿ ಇದ್ದಕ್ಕಿದ್ದ ಹಾಗೆ ಸುಮ್ಮನೆ ಹೊರಟುಹೋದನೆಂದಿದೆ. |
| ಪಾಯಸವನ್ನು ಕೊಟ್ಟವಳು 'ಸುಜಾತೆ' ಎಂದಿದೆ. | ಆ ಹೆಸರು ಲೋಪವಾಗಿ ಯಾವಳೋ ಕೊಟ್ಟಳೆಂದಿದೆ. |
| "ನೈರಾಂಜರಾನದಿ"ಯನ್ನು ದಾಟಿದ ಅನಂತರ ಪಾಯಸವು ಕೊಟ್ಟುದಾಗಿ ತಿಳಿಯ ಬರುತ್ತದೆ. | 'ನೈರಾಂಜರಾ'ನದಿಯ ಬಳಿಗೆ ಬರುವ ಪೂರ್ವವೇ ಪಾಯಸವು ಕೊಡಲ್ಪಟ್ಟುದಾಗಿ ಹೇಳಿದೆ. |

ಇವುಗಳಲ್ಲದೆ ವನವಿಹಾರಾರ್ಥವಾಗಿ ಹೋಗುವ ರಾಜಕುಮಾರನಿಗೆ ಮಾರ್ಗಮಧ್ಯದಲ್ಲಿ ಕಂಡ ವೃದ್ಧ, ರೋಗಿ ಮತ್ತು ಮೃತನ ವಿಚಾರವಾಗಿ ಸಾರಥಿಗಳನ್ನು ಕೇಳಿದನೆಂಬುದು 'ಮಹಾವದಾನಸೂತ್ರ' ಮತ್ತು 'ಜಾತಕಕಥೆ'ಗಳಲ್ಲಿ ಹೇಳಿರುವುದಕ್ಕಿಂತಲೂ ಪದ್ಯಚೂಡಾಮಣಿಯ ಆರನೆಯ ಸರ್ಗದಲ್ಲಿ ಭಿನ್ನವಿಸಿ ಹೇಳಲ್ಪಟ್ಟಿದೆ.

ಬುದ್ಧನು ಹೊರಟುಹೋಗುವಾಗ ಪ್ರಿಯಪುತ್ರನಾದ ರಾಹುಲನ ಮತ್ತು ಪ್ರೇಮಸರ್ವಸ್ವಳಾದ ಹೆಂಡತಿಯ ಕಡೆಯ ದರ್ಶನವನ್ನು ತೆಗೆದುಕೊಂಡು ಅನಂತರ ಹೊರಟುಹೋದನೆಂದು ಪಾಲಿಭಾಷೆಯ ಬೌದ್ಧಮತಗ್ರಂಥಗಳಲ್ಲಿದೆ. ಪದ್ಯಚೂಡಾಮಣಿಯಲ್ಲಿ ಇದು ಇರುವುದಿಲ್ಲ. ಇದಲ್ಲದೆ ಬುದ್ಧನಿಗೆ ಆಸನಕ್ಕಾಗಿ ದರ್ಭೆಗಳನ್ನು ಹುಲ್ಲುಕೊಯ್ಯುವವನು ಕೊಟ್ಟನೆಂಬುದು ಬ್ರಹ್ಮನು ಕೊಟ್ಟುದಾಗಿ ಪದ್ಯಚೂಡಾಮಣಿಯಲ್ಲಿ ಹೇಳಲ್ಪಟ್ಟಿದೆ.

ಪದ್ಯಚೂಡಾಮಣಿಯ ೯ ನೆಯ ಸರ್ಗದಲ್ಲಿ ಬುದ್ಧನು ಬಿಂಬಸಾರನ ರಾಜಧಾನಿಗೆ ಹೋದುದಾಗಿ ಹೇಳಿದೆಯೇ ಹೊರತು ಬಿಂಬಸಾರನನ್ನು ನೋಡಿದ ವಿಚಾರದಲ್ಲಿ ತಟಸ್ಥವಾಗಿದೆ. ೫೪ ನೆಯ ಶ್ಲೋಕವು ತಪಶ್ಚರಣೆಯನ್ನು ಮಾಡಿದ ನೆಂದು ಹೇಳುವುದೇ ಹೊರತು 'ಆಲಾರ ಕಾಲಾಮ' ಮತ್ತು 'ಉದ್ದಕರಾಮ ಪುತ್ರ'ರೊಡನೆ ಇದ್ದುದನ್ನು ಹೇಳಿರುವುದಿಲ್ಲ. ಹೀಗಾಗಿ ಪದ್ಯಚೂಡಾಮ ಣಿಯ ಕಥಾಭಾಗವು ಮಾರ್ಪಟ್ಟುಹೋಗಿದೆ. ಈ ಕಾರಣಗಳಿಂದ ಮಹಾ ವ್ಯಾಖ್ಯಾತೃವಾದ ಬುದ್ಧಘೋಷನು ಮಹಾತ್ಮನಾದ ಬುದ್ಧನ ಚರಿತೆಯನ್ನು ಇಷ್ಟು ಅಸಮಂಜಸವಾಗಿ ಬರೆದಿರಲಾರನೆಂದೂ ಬುದ್ಧಘೋಷನು ಸಂಸ್ಕೃತ ದಲ್ಲಿಯೂ ಮಹಾವಿದ್ವಾಂಸನಾಗಿದ್ದರೂ 'ಮಹಾವಂಶ' 'ಶಾಸನವಂಶ'ಗಳಲ್ಲಾ ಗಲಿ ಅಥವಾ ಬುದ್ಧಘೋಷನ ಮತ್ತಾವ ಇತರ ಗ್ರಂಥಗಳಲ್ಲಾಗಲಿ ಇವನು ಸಂಸ್ಕೃತದಲ್ಲಿ ಕಾವ್ಯವನ್ನು ಬರೆದಿರುವ ವಿಚಾರವು ಹೇಳದೆ ಇರುವುದರಿಂದ ಈ ಪದ್ಯಚೂಡಾಮಣಿಯನ್ನು ಮತ್ತಾವನೋ ಸಾಧಾರಣಕವಿಯು ಬರೆದಿರ ಬೇಕೆಂದು ಕೆಲವರು ಅನುಮಾನಪಡುವರು.*

ಆದರೆ ಈ ವಿಚಾರದಲ್ಲಿ ಬಾಹ್ಯಪ್ರಮಾಣಗಳು ದೊರಕುವವರೆಗೂ ಇದು ಹೀಗೆಯೇ ಸರಿಯೆಂದು ನಿರ್ಧರಿಸಲಾಗುವುದಿಲ್ಲ. ಮೂಲಕಾವ್ಯವನ್ನು ಬದಲಾ ಯಿಸಿ ಬರೆಯಲು ಕವಿಗಳಿಗೆ ಅಧಿಕಾರವಿರುವುದು. ಮತ್ತು ಇವರ ಹೃದಯವು ನಿರ್ಬಂಧವನ್ನರಿಯದು. ವ್ಯಾಖ್ಯಾನಕಾರರಾದರೋ ಮೂಲಗ್ರಂಥವನ್ನು ನೋಡಿಯೇ ತಮ್ಮ ಬುದ್ಧಿಕುಶಲತೆಗೆ ಅನುಸಾರವಾಗಿ ವ್ಯಾಖ್ಯಾನವನ್ನು ರಚಿಸ ಬಲ್ಲರು. ಹಾಗೂ ಮಹಾವ್ಯಾಖ್ಯಾನಕಾರನಾದವನು ಮಹಾಕವಿಯಾಗಿಯೂ ಇರಕೂಡದೇಕೆ? ಬುದ್ಧಘೋಷನು ಬೌದ್ಧಮತಗ್ರಂಥಗಳಿಗೆಲ್ಲಾ ವ್ಯಾಖ್ಯಾನ ವನ್ನು ಬರೆದನಂತರ ಸಿಂಹಳದ್ವೀಪದ ಶ್ರಮಣರಿಂದ ತನಗೆ ಸಂಸ್ಕೃತಭಾಷೆಯು ಬಾರದೆಂದು ತಿರಸ್ಕೃತನಾದಾಗ "ಪದ್ಯಚೂಡಾಮಣಿ" ಎಂಬ ಈ ಸಂಸ್ಕೃತ ಗ್ರಂಥವನ್ನು ಇವನು ಏಕೆ ರಚಿಸಿರಕೂಡದು? ಬಹಳ ಕಾಲದ ಹಿಂದೆ ಬರೆದಿದ್ದ ಬುದ್ಧಚರಿತೆಯು ನಾಶವಾಗಿ ಹೋಯಿತೆಂದು ತಿಳಿದು ಇದನ್ನು ನವೀನರೂಪ ದಲ್ಲಿ ಮುಖ್ಯವಿಷಯಗಳನ್ನು ಮಾತ್ರವೇ ತೆಗೆದುಕೊಂಡು ಬರೆಯಬೇಕೆಂದೆಣಿಸಿ ಇವನು ಈ ಗ್ರಂಥವನ್ನು ಏಕೆ ರಚಿಸಿರಕೂಡದು? ಮತ್ತು ಹಿಂದೆ ಹೇಳಿರು ವಂತೆ ಪ್ರತಿಸರ್ಗಾಂತ್ಯದಲ್ಲೂ "ಬುದ್ಧಘೋಷವಿರಚಿತೇ" ಎಂದಿರುವುದು. ಈ ಕಾರಣಗಳಿಂದ ಪದ್ಯಚೂಡಾಮಣಿಯು ಬುದ್ಧಘೋಷಕೃತವೆಂದೇ ಹೇಳ ಬಹುದಾಗಿದೆ.

---

* The life and work of Buddhaghosha- B. C. Law P. 38

ಇವರಲ್ಲಿನ ವಿಷಯಗಳು ನೀರಸವೆಂತಾಗಲಿ, ಚಾತುರ್ಯಪೂರ್ಣವಾದು ದಲ್ಲವೆಂತಾಗಲಿ ಯಾರೂ ಭಾವಿಸಬಾರದು. ಇದನ್ನು ಕಾಳಿದಾಸನ ರಘು ವಂಶದೊಡನೆಯೂ ಅಶ್ವಘೋಷನ ಬುದ್ಧಚರಿತದೊಡನೆಯೂ ಹೋಲಿಸಿ ನೋಡಿ ದರೆ ಸಂದೇಹವು ದೂರವಾಗುವುದಲ್ಲದೆ ತಾನು ಹೇಳಬೇಕೆಂಬುದನ್ನು ಬುದ್ಧ ಘೋಷನು ಸಾಕಾದಷ್ಟು ಉದಾಹರಣೆಗಳ ಮೂಲಕ ಹೇಗೆ ಸಮರ್ಥಿಸಿರುವ ನೆಂಬುದು ವ್ಯಕ್ತವಾಗುವುದು.*

ರಾಜವೀಧಿಯಲ್ಲಿ ಮೆರವಣಿಗೆ ಬರುತ್ತಿರುವ ಯುವರಾಜದಂಪತಿಗಳ ವರ್ಣ ನೆಯು ರಘುವಂಶದಲ್ಲಿ ೭ ನೆಯ ಸರ್ಗ ೪ ರಿಂದ ೧೫ ನೆಯ ಶ್ಲೋಕಗಳ ವರೆಗೂ ಬುದ್ಧಚರಿತದಲ್ಲಿ ಮೂರನೆಯ ಸರ್ಗ ೩ ರಿಂದ ೨೪ ನೆಯ ಶ್ಲೋಕಗಳ ವರೆಗೂ ಪದ್ಯಚೂಡಾಮಣಿಯಲ್ಲಿ ೪ ನೆಯ ಸರ್ಗ ೫೫ ರಿಂದ ೮೩ ನೆಯ ಶ್ಲೋಕಗಳ ವರೆಗೂ ಹೇಳಲ್ಪಟ್ಟಿರುವುದು.

ರಘುವಂಶದ ೭ ನೆಯ ಸರ್ಗದ ೫ ನೆಯ ಶ್ಲೋಕದಲ್ಲಿ ಹೆಂಗಳೆಯರು ತಮ್ಮ ಕೆಲಸಕಾರ್ಯಗಳನ್ನು ಹಾಗೆಯೇ ಬಿಟ್ಟು ಹೊರಟರೆಂದೂ ೬ ರಿಂದ ೧೦ ರ ವರೆಗಿನ ಶ್ಲೋಕಗಳಲ್ಲಿ ರಾಜದಂಪತಿಗಳನ್ನು ನೋಡಲು ಕುತೂಹಲಿಗಳಾಗಿ ಹೆಂಗಸರು ಮನೆಯ ಮಹಡಿಗಳಲ್ಲಿ ನೆರೆದರೆಂದೂ ಹೇಳಲ್ಪಟ್ಟಿದೆ. ಬುದ್ಧ ಚರಿತದ ೩ ನೆಯ ಸರ್ಗದ ೧೩ ನೆಯ ಶ್ಲೋಕದಲ್ಲಿ ಹೆಂಗಸರು ರಾಜದಂಪತಿ ಗಳನ್ನು ನೋಡಲು ಮಹಡಿಗೆ ಹೋದರೆಂಬುದೂ ೧೪—೧೭ ನೆಯ ಶ್ಲೋಕ ಗಳಲ್ಲಿ ಅವರ ಕುತೂಹಲ ಮತ್ತು ಸ್ಥಳದೊರಕದೆಂಬಾತುರತೆಯೂ ೧೮—೨೨ ನೆಯ ಶ್ಲೋಕಗಳಲ್ಲಿ ಅಲ್ಲಿ ನೆರದಿದ್ದ ಗುಂಪಿನ ವಿಚಾರವೂ ೨೩—೨೪ ನೆಯ ಶ್ಲೋಕಗಳಲ್ಲಿ ರಾಜಕುಮಾರನ ಸೌಂದರ್ಯವಿಚಾರವೂ ವರ್ಣಿತವಾಗಿರುವುವು. ಪದ್ಯಚೂಡಾಮಣಿಯ ೪ ನೆಯ ಸರ್ಗದ ೫೫ ರಿಂದ ೬೨ ರ ವರೆಗಿನ ಶ್ಲೋಕ ಗಳು ರಘುವಂಶದ ಏಳನೆಯ ಸರ್ಗದ ೫ ರಿಂದ ೧೦ ರ ವರೆಗಿನ ಶ್ಲೋಕಗ ಳನ್ನು ಹಾಗೆಯೇ ಹೋಲುತ್ತವೆ. ರಘುವಂಶದ ೭ ನೆಯ ಸರ್ಗದ ೧೧ ನೆಯ ಶ್ಲೋಕವೂ ಪದ್ಯಚೂಡಾಮಣಿಯ ೪ ನೆಯ ಸರ್ಗದ ೬೩ನೆಯ ಶ್ಲೋಕವೂ ಮೆರವಣಿಗೆಯನ್ನು ನೋಡಲು ಬಂದಿದ್ದ ಜನರ ಗುಂಪಿನ ವರ್ಣನವಾಗಿರುವುದು. ಹೀಗೆಯೇ ಎಷ್ಟೋ ದೊರಕುವುವು. ಮಹಾಕಾವ್ಯಗಳಲ್ಲಿನ ಕೊನೆಯ ಶ್ಲೋಕ ಗಳು ವಿಧವಿಧವಾದ ವೃತ್ತಗಳಲ್ಲಿರುವಂತೆ ಇದರಲ್ಲಿಯೂ ಇಂದ್ರವಜ್ರಾ— ಮಾಲಿನೀ—ವಸಂತತಿಲಕ—ವಿಯೋಗಿನಿ—ಉಪಜಾತಿ—ಶಾಲಿನಿ—ಮಂದಾಕ್ರಾಂತಾ—

* ಪ್ರಥಮಸರ್ಗದ ೫೧ ರಿಂದ ೬೩ ಮತ್ತು ಮೂರನೆಯ ಸರ್ಗದ ೪೭ ನೆಯ ಶ್ಲೋಕಗ ನೋಡಿ.

ಶಾರ್ದೂಲವಿಕ್ರೀಡಿತವೇ ಮೊದಲಾದ ವೃತ್ತಗಳಿರುವುವು. ಇದರ ೯ನೆಯ ಸರ್ಗವು ಮಾಘಕೃತಶಿಶುಪಾಲವಧೆಯ ೨ನೆಯ ಸರ್ಗದಂತೆ ಅನುಷ್ಟುಪ್‌ಛಂದಸ್ಸಿನಲ್ಲಿ ಬರೆಯಲ್ಪಟ್ಟಿರುವುದು. ಪದ್ಯಚೂಡಾಮಣಿಯ ಕಾವ್ಯಶೈಲಿಯು ಬಹು ಸರಳವೂ ಮನೋಹರವೂ ಆಗಿರುವುದು. ಮಾದರಿಗಾಗಿ ಕೆಲವು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ. ಮೆರವಣಿಗೆ ಬರುತ್ತಿರುವ ರಾಜಕುಮಾರನ ಸೌಂದರ್ಯ ವಿಚಾರವಾಗಿ ಹೆಂಗಳೆಯರ ಅಭಿಪ್ರಾಯವು—

**ಸುಧಾನಿಧಾನಂ ತುಹಿನಾಂಶುಬಿಂಬಂ**
**ಲಕ್ಷ್ಮೀವಿಮಾನಾನಿ ಚ ಪಂಕಜಾನಿ ।**
**ಆತನ್ವತಾ ಪೂರ್ವಮಮುಷ್ಯ ವಕ್ತ್ರ**
**ನಿರ್ಮಾಣಯೋಗ್ಯೇವ* ಕೃತಾ ವಿಧಾತ್ರಾ ॥ ೪—೭೯ ॥**

ಬ್ರಹ್ಮನು ಈ ಯುವರಾಜನನ್ನು ಸೃಷ್ಟಿಸುವುದಕ್ಕೆ ಪೂರ್ವಭಾವಿಯಾಗಿ ಅಮೃತನಿಧಿಯಾದ ಮತ್ತು ಹಿಮಾಂಶುವಾದ ಚಂದ್ರನನ್ನೂ ಲಕ್ಷ್ಮೀನಿವಾಸ ಸ್ಥಾನವಾದ ಕಮಲಗಳನ್ನೂ ಸೃಷ್ಟಿಸಿ ಚೆನ್ನಾಗಿ ಕೈಕುದುರಿದ ಅನಂತರ ಈ ಯುವರಾಜನ ಮುಖವನ್ನು ನಿರ್ಮಿಸುವುದಕ್ಕೆ ಅಭ್ಯಾಸಮಾಡಲ್ಪಟ್ಟಿತೋ ಏನೋ! (ಎಂದರೆ ಯುವರಾಜನ ಮುಖವು ಕಮಲದಂತೆ ಸುಂದರವೂ ಚಂದ್ರನಂತೆ ಆನಂದಮಯವೂ ಆಗಿದ್ದಿತೆಂದು ಭಾವವು).

**ನಿರ್ಮಾಣಕಾಲೇ ಭುವನತ್ರಯಸ್ಯ**
**ಸಂಭೃತ್ಯ ಸಂಭೃತ್ಯ ಸಮರ್ಪಿತೇನ ।**
**ಸೌಂದರ್ಯಸಾರೇಣ ಸರೋಜಜನ್ಮಾ**
**ಪ್ರಾಯೇಣ ಚಕ್ರೇ ಯುವರಾಜಮೇನಂ ॥ ೪—೮೦ ॥**

ಬ್ರಹ್ಮನು ಮೂರು ಲೋಕಗಳನ್ನು ಸೃಷ್ಟಿಸುವ ಸಮಯದಲ್ಲಿ ಸೌಂದರ್ಯ ಸಾರವನ್ನು ಕೊಂಚಕೊಂಚವಾಗಿ ಉಳಿಸಿ ಶೇಖರಿಸಿಕೊಂಡು ಅನಂತರ ಆ ಸೌಂದರ್ಯಸಾರವೆಲ್ಲವನ್ನೂ ಒಟ್ಟುಗೂಡಿಸಿ ಈ ಯುವರಾಜನನ್ನು ನಿರ್ಮಿಸಿದನೋ ಏನೋ! (ಎಂದರೆ ಯುವರಾಜನು ತ್ರಿಲೋಕಸುಂದರನಾಗಿದ್ದನೆಂದು ಭಾವವು).

ಚಂದ್ರೋದಯ ವರ್ಣನೆ—

**ಪತಿಃ ಪಶೂನಾಮಿವ ಕಾಲಕೂಟಂ**
**ಪತಿಂ ನದೀನಾಮಿವ ಕುಂಭಯೋನಿಃ ।**
**ಆದಾಯ ಚಂದ್ರಃ ಕರಪಲ್ಲವೇನ**
**ಗಾಢಾಂಧಕಾರಂ ಕಬಳೀಚಕಾರ ॥ ೮—೪೦ ॥**

* ಇಲ್ಲಿ 'ಯೋಗ್ಯಾ' ಎಂಬಶಬ್ದಕ್ಕೆ 'ಅಭ್ಯಾಸ' ಅಥವಾ 'ಪರಿಚಯ' ಎಂಬರ್ಥ.

ರುದ್ರನು ಹಾಲಾಹಲವನ್ನು ಭಕ್ಷಿಸಿದ ಹಾಗೆ; ಅಗಸ್ತ್ಯನು ಸಮುದ್ರವನ್ನು ಒಂದೇ ಸಲಕ್ಕೆ ಆಪೋಶನವನ್ನು ತೆಗೆದುಕೊಂಡ ಹಾಗೆ; ಚಂದ್ರನು ಕತ್ತಲೆಯನ್ನು ಕೈಯಲ್ಲಿ ತೆಗೆದುಕೊಂಡು ಭಕ್ಷಿಸಿಬಿಟ್ಟನು. (ಎಂದರೆ ಕತ್ತಲೆಯು ಹೋಗಿ ಚಂದ್ರೋದಯವಾಯಿತೆಂದು ಭಾವವು).



## ವಿಷ್ಣುಶರ್ಮ

ಇವನು ಬ್ರಾಹ್ಮಣನು; ಶ್ರುತಿಸ್ಮೃತಿಪುರಾಣಾದಿ ಇತಿಹಾಸಗಳನ್ನು ಇವನು ಅರಿತವನೆಂಬುದು—

> ಮನವೇ ವಾಚಸ್ಪತಯೇ ಶುಕ್ರಾಯ ಪರಾಶರಾಯ ಸಸುತಾಯ ।
> ಚಾಣಕ್ಯಾಯ ಚ ವಿದುಷೇ ನಮೋಽಸ್ತು ನಯಶಾಸ್ತ್ರಕರ್ತೃಭ್ಯಃ ॥
> ಸಕಲಾರ್ಥಶಾಸ್ತ್ರಸಾರಂ ಜಗತಿ ಸಮಾಲೋಕ್ಯ ವಿಷ್ಣುಶರ್ಮೇದಂ ।
> ತಂತ್ರೈಃ ಪಂಚಭಿರೇತಚ್ಚಕಾರ ಸುಮನೋಹರಂ ಶಾಸ್ತ್ರಂ ॥

ಎಂಬಶ್ಲೋಕಗಳಿಂದ ವ್ಯಕ್ತವಾಗುವುದು. ಅರ್ಥಶಾಸ್ತ್ರಪರಿಜ್ಞಾತನಾದ ಇವನು **ಪಂಚತಂತ್ರ**ವೆಂಬ ಉಪದೇಶಾತ್ಮಕ (Didactic) ಗ್ರಂಥವನ್ನು ಬರೆದು ತನ್ನ ಕಾವ್ಯಕಥಾಮುಖದಲ್ಲಿ "ದಾಕ್ಷಿಣಾತ್ಯದಲ್ಲಿ ಮಹಿಳಾಪುರ*ವನ್ನಾಳುತ್ತಿದ್ದ ಅಮರಶಕ್ತಿಭೂಪಾಲನು ಒಂದಾನೊಂದು ದಿವಸ ನೆರೆದ ರಾಜಸಭೆಯಲ್ಲಿ 'ದುರ್ವಿನೀತರಾದ ತನ್ನ ಪುತ್ರರಿಗೆ ನೀತಿಶಾಸ್ತ್ರವನ್ನು ಕಲಿಸಿ ಯೋಗ್ಯರನ್ನಾಗಿ ಮಾಡುವರಾರಾದರೂ ಈ ಸಭೆಯಲ್ಲಿರುವರೇ?' ಎಂದು ಕೇಳಿದುದಕ್ಕೆ ತಾನು ಕಲಿಸುವುದಾಗಿ ಒಪ್ಪಿ ರಾಜನ ಪ್ರೋತ್ಸಾಹದಿಂದ ಈ ಗ್ರಂಥವನ್ನು ಬರೆದುದಾಗಿ" ಹೇಳಿಕೊಂಡಿರುವನು. **ವಿಷ್ಣುಶರ್ಮ**ನು ಬಹುಶಕ್ತಿ–ರುದ್ರಶಕ್ತಿ ಮತ್ತು ಅನಂತಶಕ್ತಿ ಎಂಬ ಮೂವರು ರಾಜಕುಮಾರರಿಗೆ ಮಿತ್ರಭೇದ, ಮಿತ್ರಪ್ರಾಪ್ತಿ– ಕಾಕೋಲೂಕೀಯ– ಲಬ್ಧಪ್ರಣಾಶ ಮತ್ತು ಅಪರೀಕ್ಷಕಾರಿಕ

* ದಾಕ್ಷಿಣಾತ್ಯದಲ್ಲಿರುವುದಾಗಿ ಹೇಳಿರುವ 'ಮಹಿಳಾಪುರ'ವನ್ನು ಅಮರಶಕ್ತಿಭೂಪಾಲನು ಆಳಿದ ವಿಚಾರವಾಗಿ ಚರಿತ್ರಾಧಾರಗಳು ದೊರೆತಿಲ್ಲ.

ಮಹಿಳಾಪುರಕ್ಕೆ ಬದಲು 'ಪಾಟಲೀಪುತ್ರ'ವೆಂದೂ ಅಮರಶಕ್ತಿಭೂಪಾಲನ ಬದಲು 'ಸುದರ್ಶನ'ರಾಜನೆಂದೂ ಕನ್ನಡ ಪಂಚತಂತ್ರದಲ್ಲಿ ಹೇಳಿದೆ.

ಗಳೆಂಬ ಕಥೆಗಳನ್ನು ಹೇಳಿ ಅವರನ್ನು ಅರ್ಥಶಾಸ್ತ್ರಕೋವಿದರನ್ನಾಗಿ ಮಾಡಿ ಈ ಐದು ಕಥಾಭಾಗಗಳನ್ನು ಪಂಚತಂತ್ರವೆಂದು ಕರೆದು—

**ಅಧೀತೇ ಯ ಇದಂ ನಿತ್ಯಂ ನೀತಿಶಾಸ್ತ್ರಂ ಶೃಣೋತಿ ಚ |**
**ನ ಪರಾಭವಮಾಪ್ನೋತಿ ಶಕ್ರಾದಪಿ ಕದಾಚನ ||**

ಎಂಬ ಫಲಶ್ರುತಿಯೊಡನೆ ಮುಗಿಸಿರುವನು.

ಡಾ|| ಎ. ಬಿ. ಕೀತರವರು 'ಮಹಿಳಾರೋಪ್ಯ'(ಮಹಿಳಾಪುರ)ದ ಅರಸನಾದ ಅಮರಶಕ್ತಿಯ ಕುಮಾರರಿಗೋಸ್ಕರ ವಿಷ್ಣುಶರ್ಮನಿಂದ ಪಂಚತಂತ್ರವು ಬರೆಯಲ್ಪಟ್ಟಿತೆಂದೂ ಇದಕ್ಕೆ 'ತಂತ್ರಾಖ್ಯಾಯಿಕಾ' ಎಂಬ ಹೆಸರಿದ್ದಿತೆಂದೂ ತಂತ್ರಶಬ್ದವು ರಾಜನೀತಿ, ದಂಡನೀತಿಗಳನ್ನು ತಿಳಿಯಹೇಳುವುದೆಂದೂ ಪಂಚತಂತ್ರವೆಂಬುದು ಈಗಣ ಹೆಸರೆಂದೂ ಕಾಶ್ಮೀರಲಿಪಿಯಲ್ಲಿ ಬರೆದಿರುವ ಪಂಚತಂತ್ರದ ಪುರಾತನಪ್ರತಿಯಲ್ಲಿ 'ತಂತ್ರಾಖ್ಯಾಯಿಕಾ' ಎಂಬ ಹೆಸರಿರುವುದೆಂದೂ ಇದು ಗುಪ್ತರ ಆಳಿಕೆಯಲ್ಲಿ ಬರೆಯಲ್ಪಟ್ಟಿರಬೇಕೆಂದೂ ಹೇಳಿರುವರು. ‡

**ಕಾಲವಿಚಾರ:**— (೧) ಕ್ರಿ. ಶ. ೫ ನೆಯ ಶತಮಾನದಲ್ಲಿದ್ದ ಭರ್ತೃಹರಿಯ ಸುಭಾಷಿತ(ಶತಕತ್ರಯ)ದಲ್ಲಿನ ಅನೇಕಶ್ಲೋಕಗಳು ಒಂದೆರಡು ಪದಭೇದದಿಂದ ಪಂಚತಂತ್ರದಲ್ಲಿ ಕಂಡುಬರುವುದರಿಂದಲೂ (೨) ಪರ್ಷಿಯಾದೇಶದ ರಾಜನಾಗಿದ್ದ (ಕ್ರಿ. ಶ. ೫೩೧-೭೯) ಖುಸ್ರು ಅನುಶರಿವಾನ್ ಎಂಬವನ ಅಪ್ಪಣೆಪ್ರಕಾರ ಪಂಚತಂತ್ರವು ಆಗ್ಯೆ ಪೆಹಲ್ವಿಭಾಷೆಗೆ ಪರಿವರ್ತಿಸಲ್ಪಟ್ಟಿರುವುದಾಗಿ ತಿಳಿಯಬರುವುದರಿಂದಲೂ ಇದರ ಗ್ರಂಥಕರ್ತನಾದ ವಿಷ್ಣುಶರ್ಮನು ೫ನೆಯ ಶತಮಾನದಲ್ಲಿ ಎಂದರೆ ಭರ್ತೃಹರಿಯ ಅನಂತರ ಇದ್ದವನೆಂದು ಹೇಳಬಹುದು.

ಪ್ರೊ. ಮ್ಯಾಕ್‌ಡೋನೆಲ್‌ರವರು "ಪಂಚತಂತ್ರವನ್ನು ಕೇವಲ ಬೌದ್ಧಗ್ರಂಥವೆಂದು ಹೇಳಲಾಗದಿದ್ದರೂ ಅದರ ಕಥೆಗಳು ಬುದ್ಧನ ಜಾತಕಕಥೆಗಳನ್ನು ಹೋಲುವುವು. ಕಲ್ಪನಾಕಥೆಗಳನ್ನು ಹೇಳುವುದು ಬೌದ್ಧರಿಗೆ ಬಹುಪ್ರಾಚೀನಕಾಲದಿಂದ ತಿಳಿದಿತ್ತು. ಈ ಪಂಚತಂತ್ರದ ಹಾಗೆಯೇ ಪಾಲಿಭಾಷೆಯಲ್ಲಿ 'ಸುತ್ತಪಿಟಿಕಾ' ಎಂಬ ಗ್ರಂಥವು ಕ್ರಿ. ಶ. ೫ ನೆಯ ಶತಮಾನದಲ್ಲಿ ಬರೆಯಲ್ಪಟ್ಟಿದೆ. ಚೀನಾಭಾಷೆಯಲ್ಲಿ ಹೀಗೆಯೇ ಎರಡು ನಿಘಂಟುಗಳು ಬರೆಯಲ್ಪಟ್ಟು, ಒಂದು ಕ್ರಿ. ಶ. ೬೬೮ ರಲ್ಲಿ ಮುಗಿಸಲ್ಪಟ್ಟಿರುವುದು. ಅದರಲ್ಲಿ ಕಲ್ಪನಾಕಥೆಗಳೇ ಬಹಳವಾಗಿರುವುವು. ಇವುಗಳೆಲ್ಲಾ ಸಾಧಾರಣವಾಗಿ ೨೦೨ ಬುದ್ಧಗ್ರಂಥಗಳಿಂದ ಸಂಗ್ರಹಿಸಲ್ಪಟ್ಟಿರುವುವು. ಈಗಣ ಪಂಚತಂತ್ರವು

‡ Classical Sanskrit Literature P. 104–105.

ಬ್ರಾಹ್ಮಣಮೂಲವು. ಇದರಲ್ಲಿ ಬ್ರಾಹ್ಮಣರು ತಮಗೆ ವಿರುದ್ಧವಾದ ಕಥೆಗಳನ್ನು ತೆಗೆದು ಹಾಕಿ ಬೌದ್ಧಕಥಾಮೂಲವನ್ನು ಹಾಗೆಯೇ ಉಳಿಸಿರುವರು.'' ಎಂದು ಹೇಳಿರುವರು. ‡

ಈಗಿರುವ ಪಂಚತಂತ್ರವನ್ನು ನೋಡಿದರೆ ಬ್ರಾಹ್ಮಣಮೂಲವೆಂದೇ ತಿಳಿಯುವದು. ಬೌದ್ಧಮತಕ್ಕಿಂತಲೂ ಹಿಂದೂಮತವು ಪ್ರಾಚೀನವಾದುದು. ಪ್ರಾಚೀನಹಿಂದೂಗ್ರಂಥಗಳಲ್ಲಿ ಈ ಪಂಚತಂತ್ರದ ಕಥೆಗಳ ಹಾಗೆ ಎಷ್ಟೋ ಕಥೆಗಳು (Vernacular Folk-lore) ಹೇರಳವಾಗಿ ದೊರೆಯುವುವು. ಇದಕ್ಕೆ ಮಹಾಭಾರತವೇ ಉದಾಹರಣೆಯಾಗಿದೆ. ಅಲ್ಲದೆ ಇದು ಬ್ರಾಹ್ಮಣಮೂಲವಾಗಬೇಕೆಂದು ಇವರಿಗೆ ಅಭಿಪ್ರಾಯವಿದ್ದಪಕ್ಷದಲ್ಲಿ ಬೌದ್ಧಕಥಾಮೂಲವನ್ನು ಉಳಿಸುತ್ತಲೇ ಇರಲಿಲ್ಲ. ಇಂತಹುದರಲ್ಲಿ ಪ್ರೊ. ಮ್ಯಾಕ್‌ಡೊನೆಲ್ ರವರು (If not actually a Buddhistic work the Panchatantra must be derived from the Buddhistic Sources'' ಎಂದು ಖಂಡಿತ ಹೇಳಿರುವುದು ಆಶ್ಚರ್ಯವೇಸರಿ! ಗುಣಾಢ್ಯನ ಪೈಶಾಚಭಾಷೆಯ ಬೃಹತ್ಕಥೆಯಲ್ಲಿನ ಕಥೆಗಳನ್ನೂ ಶ್ರುತಿಸ್ಮೃತಿಪುರಾಣೇತಿಹಾಸಗಳಲ್ಲಿನ ಮತ್ತು ನೀತಿಸಾರ–ನೀತಿಪ್ರದೀಪವೇ ಮೊದಲಾದ ಪುಸ್ತಕಗಳಲ್ಲಿನ ನೀತಿಶ್ಲೋಕಗಳನ್ನೂ ಸಂಗ್ರಹಿಸಿ ಪಂಚತಂತ್ರವನ್ನು ವಚನರೂಪದಲ್ಲಿ ಬರೆದಿರಬಹುದಾಗಿ ತೋರುತ್ತದೆ. ಈಗಣ ಪಂಚತಂತ್ರವು ಐದುಭಾಗವಾಗಿದ್ದರೂ ಮೂಲವನ್ನು ನೋಡಿದರೆ ಹನ್ನೆರಡು ಭಾಗಗಳಿರಬೇಕೆಂದು ಬೋಧೆಯಾಗುತ್ತದೆ. ಆಗ ಅದರ ಹೆಸರೇನಿದ್ದಿರಬಹುದೆಂಬುದು ತಿಳಿಯದು.

ಪಂಚತಂತ್ರವು ನಮ್ಮ ದೇಶದಲ್ಲಲ್ಲದೆ ಇತರ ಅನೇಕ ದೇಶಗಳಲ್ಲಿ ಆಯಾಯ ದೇಶಭಾಷೆಗೆ ಪರಿವರ್ತಿತವಾಗಿ ಬಹಳ ಪ್ರಸಿದ್ಧಿಯನ್ನು ಹೊಂದಿರುವುದು. ಮೊದಲನೆಯ ಭಾಗದ ಮುಖ್ಯಪಾತ್ರವಾದ 'ಕರಟಕದಮನಕ'ವೆಂಬ ನರಿಗಳ ಕಥೆಯು ಪ್ರಾಚೀನ ಸಿರಿಯಕ್‌ಭಾಷೆಯಲ್ಲಿ 'ಕಲಿಲಾಗ್' ಮತ್ತು 'ಡಮನಾಗ್' ಎಂದೂ ಅರೇಬಿಯಾಭಾಷೆಯಲ್ಲಿ 'ಕಲೀಲಹ' ಮತ್ತು 'ಡಿಮ್ನಹ' ಎಂದೂ ಪರಿವರ್ತಿತವಾಗಿರುವುದು. ಈ ಗ್ರಂಥವು ಹುಡುಗರನ್ನಲ್ಲದೆ ದೊಡ್ಡವರನ್ನು ಕೂಡ ಶಿಕ್ಷಿಸಿ ಹೇಳುವುದಾಗಿಯೂ, ಯುಕ್ತಿಯುಕ್ತವಾದುದಾಗಿಯೂ, ಚಮತ್ಕಾರ ಗರ್ಭಿತವಾದುದಾಗಿಯೂ ಲೋಕಾನುಭವವನ್ನುದಹರಿಸಿ ಅದರಂತೆ ನಡೆಯಲು ಪ್ರೇರೇಪಿಸುವುದಾಗಿಯೂ, ನವರಸಭರಿತವಾದುದಾಗಿಯೂ ಇರುವುದರಿಂದ ಕೃತವಿದ್ಯರಾದವರು ಇದನ್ನು—

‡ Macdonell's History of Sanskrit Literature P. 369.

ಭಾಷಾಸು ಮುಖ್ಯಾ ಮಧುರಾ ದಿವ್ಯಾ ಸಂಸ್ಕೃತಭಾರತೀ ।
ತಸ್ಯಾಂ ತು ಕಾವ್ಯಂ ಮಧುರಂ ತಸ್ಮಿನ್ನಪಿ ಸುಭಾಷಿತಂ ॥ ಎಂದೂ

ಸುಭಾಷಿತೇನ ಗೀತೇನ ಯುವತೀನಾಂ ಚ ಲೀಲಯಾ ।
ಮನೋ ನ ಭಿದ್ಯತೇ ಯಸ್ಯ ಸ ಯೋಗೀ ಹ್ಯಥವಾ ಪಶುಃ ॥ ಎಂದೂ

ಹೇಳಿ ಹೊಗಳಿರುವರು. ಪೂರ್ವದ ಪಂಚತಂತ್ರಕ್ಕೂ ಈಗ ಸಂಸ್ಕರಿಸಿರುವ ಪಂಚತಂತ್ರಕ್ಕೂ ಎಷ್ಟೋ ವ್ಯತ್ಯಾಸಗಳು ಕಾಣಬರುವುವಲ್ಲದೆ ಪಾಠಾಂತರಗಳೆಷ್ಟೋ ಆಗಿ ಹೋಗಿರುವುವು. ಇದರಲ್ಲಿ ಪ್ರತಿಯೊಂದಕ್ಕೂ ಮನುಷ್ಯರಿಗೆ ಬದಲಾಗಿ ಚತುಷ್ಪಾದಜಂತುಗಳನ್ನು ಹೇಳಿ ಆ ಪ್ರಾಣಿಗಳಿಂದಲೇ ಸಕಲ ಕಾರ್ಯಗಳನ್ನು ಮಾಡಿಸಿರುವಂತೆ ಹೇಳಿರುವನು. ಪಂಚತಂತ್ರದ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಟ್ಟಿದೆ—

ಕಾಕೇ ಶೌಚಂ ದ್ಯೂತಕಾರೇ ಚ ಸತ್ಯಂ
ಸರ್ಪೇ ಕ್ಷಾಂತಿಃ ಸ್ತ್ರೀಷು ಕಾಮೋಪಶಾಂತಿಃ ।
ಕ್ಲೀಬೇ ಧೈರ್ಯಂ ಮದ್ಯಪೇ ತತ್ತ್ವಚಿಂತಾ
ರಾಜಾ ಮಿತ್ರಂ ಕೇನ ದೃಷ್ಟಂ ಶ್ರುತಂ ವಾ ॥ —ಮಿತ್ರಭೇದ ೧೫೮.

ಲೋಕದಲ್ಲಿ ಕಾಗೆಗಳ ಪರಿಶುದ್ಧತೆಯನ್ನೂ ಜೂಜಾಡುವವನ ಪ್ರಾಮಾಣಿಕತೆಯನ್ನೂ ನಾಗರಹಾವಿನ ಕ್ಷಮೆಯನ್ನೂ ಸ್ತ್ರೀಯರ ನಿಷ್ಕಾಮುಕತ್ವವನ್ನೂ ಷಂಡನ ಧೈರ್ಯವನ್ನೂ ಕುಡುಕನ ತತ್ತ್ವಚಿಂತೆಯನ್ನೂ ರಾಜನ ಮೈತ್ರಿಯನ್ನೂ ಯಾರೂ ನೋಡಿಯೂ ಇಲ್ಲ; ಕೇಳಿಯೂ ಇಲ್ಲ.

ಶೂರಃ ಸುರೂಪಃ ಸುಭಗಶ್ಚ ವಾಗ್ಮೀ
ಶಸ್ತ್ರಾಣಿ ಶಾಸ್ತ್ರಾಣಿ ವಿದಾಂಕರೋತಿ ।
ಅರ್ಥಂ ವಿನಾ ನೈವ ಯಶಶ್ಚ ಮಾನಂ
ಪ್ರಾಪ್ನೋತಿ ಮರ್ತ್ಯೋಽತ್ರ ಮನುಷ್ಯಲೋಕೇ ॥

—ಅಪರೀಕ್ಷಿತಕಾರಕ ೨೫.

ಪ್ರಪಂಚದಲ್ಲಿ ಮನುಷ್ಯನು ಶೂರನೂ, ಸುರೂಪಿಯೂ, ಸುಭಗನೂ, ವಾಚಾಳಿಯೂ, ಧನುರ್ವಿದ್ಯಾಮಂಡಿತನೂ, ಸಕಲಶಾಸ್ತ್ರಾರ್ಥಕೋವಿದನೂ ಆಗಿದ್ದಾಗ್ಯೂ ಧನಹೀನನಾದರೆ ಜನಗಳಲ್ಲಿ ಮಾನವನ್ನೂ ಕೀರ್ತಿಯನ್ನೂ ಹೊಂದನು.

ಯತ್ರ ಸ್ತ್ರೀ ಯತ್ರ ಕಿತವೋ ಬಾಲೋ ಯತ್ರ ಪ್ರಶಾಸಿತಾ ।
ತದ್ಗೃಹಂ ಕ್ಷಯಮಾಯಾತಿ ಭಾರ್ಗವೋ ಹೀದಮಬ್ರವೀತ್ ॥

—ಅಪರೀಕ್ಷಿತಕಾರಕ ೬೧.

ಯಾವ ಮನೆಯಲ್ಲಿ ಸ್ತ್ರೀಪ್ರಾಬಲ್ಯವೂ ಧೂರ್ತರ ಮೇಳನವೂ ಬಾಲರ ಯಾಜಮಾನ್ಯವೂ ಇರುವುದೋ ಅಂತಹ ಮನೆಯು ನಾಶವಾಗಿ ಹೋಗಿಬಿಡು ವುದೆಂದು ಭಾರ್ಗವನು ಹೇಳಿರುವನು.

ಅಪೂಜ್ಯಾ ಯತ್ರ ಪೂಜ್ಯಂತೇ ಪೂಜ್ಯಾನಾಂ ತು ವಿಮಾನನಾ ।
ತ್ರೀಣಿ ತತ್ರ ಪ್ರವರ್ತಂತೇ ದುರ್ಭಿಕ್ಷಂ ಮರಣಂ ಭಯಂ ॥
— ಕಾಕೋಲೂಕೀಯ ೧೯೦.

ಎಲ್ಲಿ ಧೂರ್ತರಿಗೆ ಗೌರವವೂ ಪೂಜ್ಯರಿಗೆ ಮಾನಹಾನಿಯೂ ಆಗುವುದೋ ಅಲ್ಲಿ ದುರ್ಭಿಕ್ಷವೂ, ಮರಣವೂ, ಭಯವೂ ಇರುವುದು.

ಮಾತಾ ಯಸ್ಯ ಗೃಹೇ ನಾಸ್ತಿ ಭಾರ್ಯಾ ಚ ಪ್ರಿಯವಾದಿನೀ ।
ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾ ಗೃಹಂ ॥
—ಲಬ್ಧಪ್ರಣಾಶ ೫೦.

ಯಾವನ ಮನೆಯಲ್ಲಿ ಹೆತ್ತ ತಾಯಿಯೂ ಪ್ರಿಯವಾದಿನಿಯಾದ ಹೆಂಡ ತಿಯೂ ಇರುವುದಿಲ್ಲವೋ ಅಂತಹನು ಕಾಡಿಗೆ ಹೋಗುವದು ಲೇಸು. ಏಕೆಂದರೆ ಅವನಿಗೆ ಮನೆಯೂ ಕಾಡೂ ಎರಡೂ ಒಂದೇಯಾಗಿರುವುದು.

ಕೇನಾಮೃತಮಿದಂ ಸೃಷ್ಟಂ 'ಮಿತ್ರ'ಮಿತ್ಯಕ್ಷರದ್ವಯಂ ।
ಆಪದಾಂ ಚ ಪರಿತ್ರಾಣಂ ಶೋಕಸಂತಾಪ ಭೇಷಜಂ ॥
—ಮಿತ್ರಸಂಪ್ರಾಪ್ತಿ ೬೨.

ಕಷ್ಟದಿಂದ ರಕ್ಷಿಸುವುದಕ್ಕೂ ಶೋಕಸಂತಾಪವನ್ನು ನಿವಾರಿಸುವದಕ್ಕೂ 'ಮಿತ್ರ'ನೆಂಬ ಅಮೃತತುಲ್ಯವಾದ ಈ ಎರಡು ಅಕ್ಷರಗಳು ಯಾರಿಂದ ಸೃಜಿ ಸಲ್ಪಟ್ಟವು!

ದುರ್ಮಂತ್ರಾನ್ನೃಪತಿರ್ವಿನಶ್ಯತಿ ಯತಿಃ ಸಂಗಾತ್ಸುತೋ ಲಾಲನಾತ್
ವಿಪ್ರೋಽನಧ್ಯಯನಾತ್ಕುಲಂ ಕುತನಯಾಚ್ಛೀಲಂ ಖಲೋಪಾಸನಾತ್ ।
ಮೈತ್ರೀ ಚಾಪ್ರಣಯಾತ್ಸಮೃದ್ಧಿರನಯಾತ್ ಸ್ನೇಹಃ ಪ್ರವಾಸಾಶ್ರಯಾತ್
ಸ್ತ್ರೀ ಗರ್ವಾದನವೇಕ್ಷಣಾದಪಿ ಕೃಷಿಸ್ತ್ಯಾಗಾತ್ಪ್ರಮಾದಾದ್ಧನಂ ॥
—ಮಿತ್ರಭೇದ ೧೮೦.

ದುರ್ಮಂತ್ರದಿಂದ ರಾಜನೂ ಅನ್ಯಸಹವಾಸದಿಂದ ಯತಿಯೂ ಲಾಲನೆ ಯಿಂದ ಮಗನೂ ಅನಧ್ಯಯನದಿಂದ ವಿಪ್ರನೂ ದುಷ್ಪುತ್ರನಿಂದ ಕುಲವೂ ದುರ್ಜ ನರ ಸಹವಾಸದಿಂದ ಶೀಲವೂ ಉದಾಸೀನದಿಂದ ವಿಶ್ವಾಸವೂ ದುರ್ನೀತಿಯಿಂದ ಐಶ್ವರ್ಯವೂ ವಿದೇಶಗಮನದಿಂದ ಸ್ನೇಹವೂ ಗರ್ವದಿಂದ ಸ್ತ್ರೀಯೂ ನೋಡದೆ ಇರುವುದರಿಂದ ವ್ಯವಸಾಯವೂ ದಾನ ಮತ್ತು ಮತ್ತತೆಯಿಂದ ಧನವೂ ನಾಶ ವಾಗಿಹೋಗುವುವು.

# ಕಾಳಿದಾಸ

ಇವನು ಮೂಕಶಂಕರರ ಶಿಷ್ಯನು. ಇವನಿಗೆ '**ಕೋಟಿಜಿತ್**'ಎಂಬುದು ಮತ್ತೊಂದು ಹೆಸರು. ಮೂಕಶಂಕರರು ಕ್ರಿ. ಶ. ೩೯೭ ರಿಂದ ೪೩೬ ರ ವರೆವಿಗೆ ೩೯ ವರ್ಷಗಳು 'ಕಾಮಕೋಟಿಪೀಠ'ವನ್ನು ಅಲಂಕರಿಸಿದ್ದರು. ಇವರು ಆ ಪೀಠದ ಯತಿಗಳಲ್ಲಿ ಇಪ್ಪತ್ತೆರಡನೆಯ ತಲೆಯವರು.* ಅವರು ಶಿಷ್ಯನಾದ ಇವನ ಶುದ್ಧಶೃಂಗಾರರಸಕ್ಕೂ ಲಲಿತವಾದ ಪದಬಂಧಕ್ಕೂ ಸರಳವಾದ ಶೈಲಿಯ ಮಾಧುರ್ಯಕ್ಕೂ ಮೆಚ್ಚಿ ಇವನನ್ನು "**ಕಾಳಿದಾಸ**"ನೆಂದು ಹೇಳಿದಹಾಗೆ ತೋರುತ್ತದೆ. ಇವನ ಮಾತಾಪಿತೃಗಳಾರೆಂಬುದು ತಿಳಿಯದು.

ಮಹಾಕವಿರಾಜಶೇಖರನು ಬರೆದಿರುವ 'ಕವಿವಿಮರ್ಶೆ'ಯಲ್ಲಿ—

**ಏಕೋಽಪಿ ಜೀಯತೇ ಹಂತ! ಕಾಳಿದಾಸೋ ನ ಕೇನ ಚಿತ್ ।**
**ಶೃಂಗಾರೇ ಲಲಿತೋದ್ಗಾರೇ ಕಾಳಿದಾಸತ್ರಯೀ ಕಿಮು? ॥**

ಎಂದು ಶುದ್ಧಶೃಂಗಾರರಸೋಪಯೋಗಕ್ಕೂ ಲಾಲಿತ್ಯಕ್ಕೂ ಕಾಳಿದಾಸನೆಂಬ ಹೆಸರಿನವರು ಮೂವರು ಮಾತ್ರವೇ ದೊರೆಯುವರೆಂದು ಒಕ್ಕಣಿಸಿರುವನು. 'ಹೈಡಿಂಬವೈದಗ್ಧ್ಯ'ವೆಂಬ ಮಧ್ಯಮವ್ಯಾಯೋಗಕಾರರಾದ ಮ॥ ಟಿ. ಎಸ್. ನಾರಾಯಣಶಾಸ್ತ್ರಿಗಳು ತಮ್ಮ ಶೋಧನದ ಪ್ರಕಾರ ರಾಜಶೇಖರನು ಕ್ರಿ. ಶ. ಐದನೆಯ ಶತಮಾನದವನೆಂದೂ, ಪಾಶ್ಚಾತ್ಯಪಂಡಿತರು ಕ್ರಿ. ಶ. ಒಂಭತ್ತು ಹತ್ತನೆಯ ಶತಮಾನ ಎಂದರೆ ಕ್ರಿ. ಶ. ೮೮೭ ರಿಂದ ೯೫೯ ರ ಮಧ್ಯದಲ್ಲಿ ಇವನು ಇದ್ದಿರಬೇಕೆಂದು ಹೇಳುವರೆಂದೂ ಬರೆದುಕೊಂಡಿರುವರು. ಶಾಸ್ತ್ರಿಗಳ ಹೇಳಿಕೆಯನ್ನು ನೋಡಿದರೆ ಈ ಕಾಳಿದಾಸನು ಮೂರನೆಯವನಾಗಿರಬೇಕು. ಪಾಶ್ಚಾತ್ಯರ ಮತದಂತೆ ಕ್ರಿ. ಶ. ಆರಂಭದಿಂದ ತೆಗೆದುಕೊಂಡರೆ ಕಾವ್ಯನಾಟಕಕರ್ತೃವಾದ ಒಬ್ಬನೇ ಕಾಳಿದಾಸನು ದೊರೆಯುವನು. ಇದರಿಂದ ರಾಜಶೇಖರನು ಹೇಳಿರುವ ಮೂವರು ಕಾಳಿದಾಸರು ಯಾರೆಂಬ ಪ್ರಶ್ನೆಯು ಸ್ವಾಭಾವಿಕವಾಗಿ ಹುಟ್ಟುವುದು. ಆದರೆ ನಮಗೆ ದೊರೆತಿರುವ ಆಧಾರಗಳಿಂದ ಕ್ರಿಸ್ತಪೂರ್ವದಲ್ಲಿ ಇಬ್ಬರು ಕಾಳಿದಾಸರು ಇದ್ದರು.‡ ಈ ಇಬ್ಬರನ್ನೂ ಮೂಕಶಂಕರರ ಶಿಷ್ಯನಾದ ಕಾಳಿದಾಸನನ್ನೂ ಮಾತ್ರವೇ ರಾಜಶೇಖರನು ಹೊಗಳಿರಬೇಕಾಗಿ ನಮಗೆ ತೋರುವುದು.

* Haidimba Vaidagdhya P. 13.

‡ ಇವರ ವಿಚಾರವಾಗಿ ಕ್ರಿಸ್ತಪೂರ್ವದ ಕವಿಚರಿತೆಯನ್ನು ಪರಿಶೀಲಿಸತಕ್ಕದ್ದು.

ಇವನು **ಋತುಸಂಹಾರ, ಶೃಂಗಾರತಿಲಕ, ಶ್ರುತಬೋಧ, ರಥಾಂಗದೂತ, ಕವಿಕಂಠಪಾಶ, ರಾಕ್ಷಸಕಾವ್ಯ, ಪುಷ್ಪಬಾಣವಿಲಾಸ**ವೇ ಮೊದಲಾದ ಸಣ್ಣ ಸಣ್ಣ ಗ್ರಂಥಗಳನ್ನು ಬರೆದಿರುವುದಲ್ಲದೆ **ಶ್ಯಾಮಲಾದಂಡಕ, ಘಟಸ್ತವ, ಸಕಲಜನನೀಸ್ತೋತ್ರ, ಮಾತೃಕಾಪುಷ್ಪಮಾಲಾಸ್ತವ, ನವರತ್ನಮಾಲಾ, ಅಂಬಾಷ್ಟಕ**ವೇ ಮೊದಲಾದ ಸ್ತೋತ್ರಗಳನ್ನೂ ಬರೆದಿರುವನು. ಇವನು ಬರೆದಿರುವ ಪ್ರತಿಯೊಂದು ಗ್ರಂಥದಲ್ಲಿಯೂ ನಾಯಕನು ನಾಯಕಿಗೆ ಹೇಳಿರುವಂತೆ ಬರೆದಿರುವುದರಿಂದಲೂ ಒಂದು ಸ್ತೋತ್ರದಲ್ಲಿ ಹೇಳಿರುವ ಶಬ್ದ, ವಾಕ್ಯಗಳು ಮತ್ತೊಂದರಲ್ಲಿಯೂ ಕಂಡು ಬರುವುದರಿಂದಲೂ ಇವುಗಳೆಲ್ಲವೂ ಒಬ್ಬನಿಂದಲೇ ಬರೆಯಲ್ಪಟ್ಟುದಾಗಿ ತಿಳಿದು ಬರುತ್ತದೆ. ಇವನು ಬರೆದಿರುವ ಪ್ರತಿಯೊಂದು ಗ್ರಂಥವೂ ಶೃಂಗಾರರಸಪ್ರಧಾನವಾಗಿರುವುದೆಂದರೆ ಅತ್ಯುಕ್ತಿಯಾಗದು.

**೧. ಋತುಸಂಹಾರ**— ಇದು ಹೆಸರಿಗೆ ತಕ್ಕಂತೆ ಷಡೃತುಗಳ ವರ್ಣನದಿಂದ ಕೂಡಿ ನಾಯಕನು ನಾಯಕಿಗೆ ಹೇಳಿದಂತಿರುವುದು. ಮೊದಲು ಗ್ರೀಷ್ಮರ್ತುವನ್ನು ತೆಗೆದುಕೊಂಡು ಆ ಶ್ಲೋಕದಿಂದಲೇ ಮಂಗಳಾಚರಣವನ್ನಾಚರಿಸಿ ಕೊನೆಯಲ್ಲಿ ವಸಂತರ್ತುವರ್ಣನವನ್ನು ಮಾಡಿ ಆಶೀರ್ವಚನದೊಡನೆ ಗ್ರಂಥಪರಿಸಮಾಪ್ತಿಯನ್ನು ಮಾಡಿರುವನು.

ಮೊದಲು—

**ಪ್ರಚಂಡಸೂರ್ಯಃ ಸ್ಪೃಹಣೀಯಚಂದ್ರಮಾಃ**
**ಸದಾವಗಾಹಕ್ಷಮವಾರಿಸಂಚಯಃ ।**
**ದಿನಾಂತರಮ್ಯೋಽಭ್ಯುಪಶಾಂತಮನ್ಮಥೋ**
**ನಿದಾಘಕಾಲೋಽಯಮುಪಾಗತಃ ಪ್ರಿಯೇ! ॥** ಎಂದೂ

ಕೊನೆಯಲ್ಲಿ—

**ಆಮ್ರೀ ಮಂಜುಳಮಂಜರೀ ವರಶರಃ ಸತ್ಕಿಂಶುಕಂ ಯದ್ಧನುಃ**
**ಜ್ಯಾ ಯಸ್ಯಾಳಿಕುಲಂ ಕಳಂಕರಹಿತಂ ಛತ್ರಂ ಸಿತಾಂಶುಸ್ಸಿತಂ ।**
**ಮತ್ತೇಭೋ ಮಲಯಾನಿಲಃ ಪರಭೃತೋ ಯದ್ವಂದಿನೋ ಲೋಕಜಿತ್**
**ಸೋಽಯಂ ವೋ ವಿತರೀತರೀತು ವಿತನುರ್ಭದ್ರಂ ವಸಂತಾನ್ವಿತಃ ॥**

ಎಂದು ಹೇಳಲ್ಪಟ್ಟಿರುವುದು. ಇದರ ಶ್ಲೋಕಗಳು ಒಂದಾದರೂ ಕ್ಲಿಷ್ಟವಿಲ್ಲದೆ ಸರಸವಾಗಿಯೂ ಸುರಸವಾಗಿಯೂ ಇರುವುವು. ಇದರಲ್ಲಿ ಸ್ವಭಾವೋಕ್ತಿಯು ಪ್ರತಿಯೊಬ್ಬರ ಪ್ರತ್ಯಕ್ಷಾನುಭವದಂತೆ ವರ್ಣಿಸಲ್ಪಟ್ಟಿರುವುದು ಒಂದು ದೊಡ್ಡ ಚತುರತೆಯು ಆಗಿರುವುದು. ಇದಕ್ಕೆ ಭಾರದ್ವಾಜಗೋತ್ರೋತ್ಪನ್ನನಾದ

'ಮಣಿರಾಮ'ನೆಂಬುವನು 'ಚಂದ್ರಿಕಾ' ಎಂಬ ವ್ಯಾಖ್ಯಾನವನ್ನು ಬರೆದಿರುವನು ಭಾರತದ ಕವಿಗಳು ಅವರವರ ಕಾವ್ಯಪ್ರತಿಪತ್ತಿಗೆ ತಕ್ಕಂತೆ ಕಾಲವನ್ನು ಹೇಳು ವುದಕ್ಕಾಗಿ ಯಾವುದಾದರೊಂದು ಋತುವನ್ನುದ್ದೇಶಿಸಿ ವರ್ಣಿಸಿರುವ ವಿಚಾರವು ಅವರವರ ಕಾವ್ಯಗಳಲ್ಲಿ ಕಂಡುಬರುವುದು. ರಘುವಂಶಮಹಾಕಾವ್ಯದಲ್ಲಿ ವಂಸತ ಮತ್ತು ಗ್ರೀಷ್ಮರ್ತುಗಳನ್ನೂ ಕುಮಾರಸಂಭವದಲ್ಲಿ ವಸಂತರ್ತುವನ್ನೂ ಮೃಚ್ಛಕಟಿಕದಲ್ಲಿ ವರ್ಷರ್ತುವನ್ನೂ ಕಾದಂಬರಿಯಲ್ಲಿ ವಸಂತ ಮತ್ತು ವರ್ಷ ರ್ತುಗಳನ್ನೂ ಕಿರಾತಾರ್ಜುನೀಯದಲ್ಲಿ ಶರದೃತುವನ್ನೂ ವರ್ಣಿಸಿರುವರು. ವಸಂತರ್ತುವಿನಲ್ಲಿ ಸಹಕಾರಪಲ್ಲವ (ಮಾವಿನ ಚಿಗುರು) ಮತ್ತು ಕೋಕಿಲಾರವ ವನ್ನೂ ಗ್ರೀಷ್ಮರ್ತುವಿನಲ್ಲಿ ಬೆಳದಿಂಗಳು ಮತ್ತು ಶೀತಲೋಪಚಾರವನ್ನೂ ವರ್ಷರ್ತುವಿನಲ್ಲಿ ಮಯೂರಗಳ ಕೇಕಾವಿಲಾಸ ಮತ್ತು ಚಾತಕವಿರಹವನ್ನೂ ಶರದೃತುವಿನಲ್ಲಿ ಹಂಸಸ್ವಚ್ಛಚಂದ್ರಿಕೆಯನ್ನೂ ಹೇಮಂತ ಮತ್ತು ಶಿಶಿರ ಋತು ಗಳಲ್ಲಿ ಬಿರುಗಾಳಿ, ಕೆಂದೂಳು ಇವೇ ಮೊದಲಾದುವುಗಳನ್ನೂ ಅವರವರಿಗೆ ಬೇಕಾದಷ್ಟು ಮಾತ್ರವೇ ವರ್ಣಿಸಿರುವರು. ನಮ್ಮ ಕವಿಯಾದರೋ ಈ ಷಡೃತು ಗಳಿಗಾಗಿಯೇ ಒಂದು ಕಾವ್ಯವನ್ನು ಬರೆದು "ಋತುಸಂಹಾರ"ವೆಂದು ಕರೆದಿರುವನು. ಇದಲ್ಲದೆ ಇದರಲ್ಲಿ ಆಯಾಯ ಶ್ಲೋಕಗಳ ವೃತ್ತಗಳೂ ಅವುಗಳ ಲಕ್ಷಣಗಳೂ ವ್ಯಾಖ್ಯಾನದಿಂದ ಕಂಡುಬರುವುವು. ಮಧುರ ಮತ್ತು ಕೋಮಲ ಪದರಚನೆಯೂ ಕವಿಸಂಪ್ರದಾಯಕ್ಕೆ ಅನುಗುಣವಾದ ಅರ್ಥಪರಿಪಾಟಿಯೂ ಸ್ವಾಭಾವಿಕವಾದ ಗಂಭೀರತೆಯೂ ಈ ಕಾವ್ಯದ ಮುಖ್ಯಗುಣಗಳಾಗಿರುವುವು.*

೨. **ಶೃಂಗಾರತಿಲಕ**—ಇದರಲ್ಲಿ ಪಾಠಾಂತರಗಳು ಅನೇಕವಾಗಿರುವುವು. ತೆಲಗುಮುದ್ರಣಪ್ರತಿಯಲ್ಲಿ ೨೦ ಶ್ಲೋಕಗಳಿರುವುವು. ಮ॥ ಕಾಶೀನಾಥ ಪಾಂಡುರಂಗಪರಬರವರು ಶೋಧಿಸಿ ಬರೆದಿರುವ ನಿರ್ಣಯಸಾಗರದ ಮುದ್ರಣ ಪ್ರತಿಯಲ್ಲಿ ೩೧ ಶ್ಲೋಕಗಳಿರುವುವು. ಇದರ ಶೈಲಿಯು ಸರಳವಾದುದಾ ಗಿಯೂ ಭಾವಗರ್ಭಿತವಾದುದಾಗಿಯೂ ಇರುವುದು. ಹೆಸರಿಗೆ ತಕ್ಕಂತೆ ಇದರಲ್ಲಿ ಶೃಂಗಾರರಸವೇ ಪ್ರಧಾನವಾಗಿರುವುದು.

ಮೊದಲು—

**ಬಾಹೂ ದ್ವೌ ಚ ಮೃಣಾಳಮಾಸ್ಯಕಮಲಂ ಲಾವಣ್ಯಲೀಲಾಜಲಂ**
**ಶ್ರೋಣೀ ತೀರ್ಥಶಿಲಾ ಚ ನೇತ್ರಶಫರಂ ಧಮ್ಮಿಲ್ಲಶೈವಾಲಕಂ ।**

* ಕೆಲವರು ಇವನ ಇತರ ಗ್ರಂಥಗಳ ಶೈಲಿಗಳನ್ನು ಋತುಸಂಹಾರದೊಡನೆ ಹೋಲಿಸಿ ಋತುಸಂಹಾರ ಗ್ರಂಥಕರ್ತೃತ್ವವು ಇವನದಾಗಿರದೆಂದು ಸಂದೇಹಿಸುವರು.

ಕಾಂತಾಯಾಃ ಸ್ತನಚಕ್ರವಾಕಯುಗಳಂ ಕಂದರ್ಪಬಾಣಾನಲೈಃ
ದಗ್ಧಾನಾಮವಗಾಹನಾಯ ವಿಧಿನಾ ರಮ್ಯಂ ಸರೋ ನಿರ್ಮಿತಂ || ಎಂದೂ

ಕೊನೆಯಲ್ಲಿ—

ಸತ್ಯಂ ಬ್ರವೀಮಿ ಮಕರಧ್ವಜಬಾಣಪೀಡಾಂ
ನಾಽಹಂ ತ್ವದರ್ಪಿತದೃಶಾ ಪರಿಚಿಂತಯಾಮಿ |
ದಾಸೋಽದ್ಯ ಮೇ ವಿಘಟಿತಸ್ತವ ತುಲ್ಯರೂಪಃ
ಸೋಽಯಂ ಭವೇನ್ನ ಹಿ ಭವೇದಿತಿ ಮೇ ವಿತರ್ಕಃ ||

ಎಂದೂ ಹೇಳಲ್ಪಟ್ಟಿರುವುದು.

**೩. ಶ್ರುತಬೋಧ**– ಇದರಲ್ಲಿ ಸರ್ವವೃತ್ತಲಕ್ಷಣಗಳು ಆಯಾಯ ವೃತ್ತ ಲಕ್ಷಣಶ್ಲೋಕಗಳಿಂದಲೇ ಹೇಳಲ್ಪಟ್ಟಿವೆ. ಇದರಲ್ಲಿ ನಾಯಕನು ನಾಯಕಿಗೆ ಹೇಳಿದಂತೆ ವರ್ಣಿತವಾಗಿದೆ.

ಮಾದರಿಗಾಗಿ ಕೆಲವು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ—

ತನ್ವಿ! ಗುರುಸ್ಯಾದಾದ್ಯಚತುರ್ಥಂ
ಪಂಚಮಷಷ್ಠೇ ಚಾಂತ್ಯಮುಪಾಂತ್ಯಂ |
ಇಂದ್ರಿಯಬಾಣೈರ್ಯಾತಿ ವಿರಾಮಂ
ಸಾ ಕಥನೀಯಾ 'ಚಂಪಕಮಾಲಾ' ||

ಯಸ್ಯಾಂ ತ್ರಿಷಟ್ಸಪ್ತಮಮಕ್ಷರಂ ಸ್ಯಾತ್
ಹ್ರಸ್ವಂ ಸುಜಂಘೇ ನವಮಂ ಚ ತದ್ವತ್ |
ಗತ್ಯಾ ವಿಲಜ್ಜೀಕೃತರಾಜಹಂಸೇ
ತಾಂ 'ಇಂದ್ರವಜ್ರಾಂ' ಬ್ರುವತೇ ಕವೀಂದ್ರಾಃ ||

'ಉಪೇಂದ್ರವಜ್ರಾಃ' ಚರಣೇಷು ಸಂತಿ ಚೇತ್
ಉಪಾಂತ್ಯವರ್ಣಾಲಘವಃ ಪರೇಕೃತಾಃ |
ಮದೋಲ್ಲಸದ್ಭ್ರೂಜಿತಕಾಮಕಾರ್ಮುಕೇ!
ವದಂತಿ 'ವಂಶಸ್ಥ'ಮಿದಂ ಬುಧಾಸ್ತದಾ ||

ಅಯಿ! ಕೃಶೋದರಿ ಯತ್ರ ಚತುರ್ಥಕಂ
ಗುರು ಚ ಸಪ್ತಮಕಂ ದಶಮಂ ತಥಾ |
ವಿರತಿಕಂ ಚ ತಥೈವ ವಿಚಕ್ಷಣೈಃ
'ದ್ರುತವಿಲಂಬಿತ'ಮಿತ್ಯುಪದೃಶ್ಯತೇ ||

ಯದಾದ್ಯಂ ಚತುರ್ಥಂ ತತಸ್ಸಪ್ತಮಂ ಚೇ
ತ್ತಥೈವಾಕ್ಷರಂ ಹ್ರಸ್ವಮೇಕಾದಶಾದ್ಯಂ |
ಶರಚ್ಚಂದ್ರವಿದ್ವೇಷವಕ್ತ್ರಾರವಿಂದೇ!
ತದುಕ್ತಂ ಕವೀಂದ್ರೈಃ 'ಭುಜಂಗಪ್ರಯಾತಂ' ||

**೪. ರಥಾಂಗದೂತ**—'ರಥಾಂಗ'ವೆಂದರೆ *ಚಕ್ರವಾಕಪಕ್ಷಿಯ ಹೆಸರು. ಪ್ರಿಯಳ ವಿಯೋಗದಿಂದ ರಾತ್ರಿಯಲ್ಲಿ ಮೊರೆಯಿಡುತ್ತಿರುವುದಾದುದರಿಂದ ಇದನ್ನು 'ಕೋಕ'ವೆಂದೂ ಕರೆಯುವರು. ಕಾಳಿದಾಸನ ಕಲ್ಪನಾಕಾವ್ಯವಾದ 'ಮೇಘದೂತ'ವನ್ನು ನೋಡಿ 'ರಥಾಂಗದೂತ'ವೆಂಬುದನ್ನು ಬರೆದಿರಬೇಕೆಂದು ಬೋಧೆಯಾಗುತ್ತದೆ. ಕ್ರಿಸ್ತಶಕದಲ್ಲಿ ದೊರೆತಿರುವ ದೂತಕಾವ್ಯಗಳಲ್ಲಿ ಇದು ಮೊದಲನೆಯದು. ಇದರಲ್ಲಿ ೯೭ ಶ್ಲೋಕಗಳಿರುವುವು. ಇದರ ಮೊದಲನೆಯ ಶ್ಲೋಕದಿಂದ ಗ್ರಂಥವಿಚಾರವನ್ನು ಕೊಂಚಮಟ್ಟಿಗೆ ತಿಳಿಯಬಹುದಾಗಿದೆ.—

**ಕಶ್ಚಿದ್ಯುವಾ ವನವಿಹಾರಮಭೀಪ್ಸಮಾನಃ**
**ಕಾಂತಾಮುವಾಚ ಕಮನೀಯಮನೋರಥಾರ್ಥಂ ।**
**ರಾತ್ರಿನ್ದಿವಂ ಪ್ರಿಯವಚೋಽನುಗತೈಕವೃತ್ತಿಃ**
**ಸಾ ಚಾನ್ವಮನ್ಯತ ತಮಾತ್ಮಮನೋಽನುಕೂಲಂ ॥**

**ಅನಂತರಂ ಸಪ್ರಿಯಯಾ ಸ ನಾಥೋ**
**ಝುಟಿತ್ಯರಣ್ಯಾಭಿಮುಖಂ ಪ್ರಹೃಷ್ಟಃ ।**
**ನಿಷೇದಿವಾನ್ ಕೂಬರಿಣಿ ಪ್ರತಸ್ಥೇ**
**ಪ್ರಾಪ್ತಶ್ಚ ಸಂಕೇತಲತಾಗೃಹಾಂತಃ ॥**

ಇದರ ಕೊನೆಯ ಶ್ಲೋಕವು—

**ಸುತನು ಜಹಿ ಹಿ ಶೋಕಂ ಜೀವಿತಾಧಾರಭೂತೇ**
**ನ ಖಲು ವಪುರಲಂ ತೇ ಸೋಢುಮುಜ್ಜಪ್ರಹಾರಂ ।**
**ಅಭಿಗೃಹಮಚಿರಾಚ್ಚ ತ್ವಯ್ಯರ್ತಾಂ ಸ್ರಸ್ತಕೇಶಿ**
**ಕ್ಷಣಮಪಿ ವಿರಹಸ್ತೇ ಪ್ರಾಜ್ಞ ಸೋಢಸ್ಸಖೀಭಿಃ ॥**

''ಇತಿ ಶ್ರೀಕಾಳಿದಾಸಕೃತಂ 'ರಥಾಂಗದೂತಂ' ಸಮಾಪ್ತಂ ।''
ಎಂದು ಇರುವುದು.

**ಕವಿಕಂಠಪಾಶ**— ಇದು ಹೆಸರಿಗೆ ತಕ್ಕಂತೆ ಒಗಟುಗಳ ಹಾಗೆ ಬರೆಯಲ್ಪಟ್ಟು ೩೦ ಶ್ಲೋಕಗಳಿರುವುವು. ಇವುಗಳಲ್ಲಿ ಸ್ವರ ಮತ್ತು ಅನುನಾಸಿಕಾಕ್ಷರಗಳನ್ನು ಬಿಟ್ಟು ಕೊನೆಯ ಪಾದವನ್ನು ವ್ಯಂಜನಾಕ್ಷರದಿಂದ ಮೊದಲುಮಾಡಿ ಬರೆದಿರುವನು. ಪ್ರತಿಶ್ಲೋಕದಲ್ಲಿಯೂ ಮೂರನೆಯ ಪಾದದಲ್ಲಿ—

**'ವಕ್ಷೋಜದ್ವಿತಯಂ ವಿಭಾತಿ ಹರಿಣೀಲೋಲೇಕ್ಷಣೇ! ತಾವಕಂ'**

ಎಂಬುದು ಕಂಡುಬರುವುದು. ಕೊನೆಯ ಪಾದಕ್ಕೆ ಸರಿಹೋಗುವಂತೆ ಪ್ರತಿ ಶ್ಲೋಕದಲ್ಲಿಯೂ ವಿಶೇಷಣವಿಶೇಷ್ಯಗಳನ್ನು ಸಮರ್ಥಿಸಿಕೊಂಡು ಬರೆಯಲ್ಪಟ್ಟಿರುವುದು. ಮಾದರಿಗಾಗಿ ಎರಡು ಶ್ಲೋಕಗಳನ್ನು ಇಲ್ಲಿ ಹೇಳಿದೆ.

---

* **'ಕೋಕಶ್ಚಕ್ರಶ್ಚಕ್ರವಾಕೋ ರಥಾಂಗಾಹ್ವಯನಾಮಕಃ ।' ಅಮರಕೋಶ ೨—೩೪೮.**

ಮೊದಲನೆಯ ಶ್ಲೋಕವು—

ಲೀಲಾವಾಸಗೃಹಂ ಗಿರಿಕ್ಷಿತಿಕರಂ ಲಕ್ಷ್ಮೀನಿವಾಸಾಸ್ಪದಂ
ಕೋಕಾಹ್ಲಾದವಿಘಾತುಕಂ ಪರಶಿಶುಪ್ರಾಣಪ್ರವೃತ್ತ್ಯಾತುರಂ ।
ವಕ್ಷೋಜದ್ವಿತಯಂ ವಿಭಾತಿ ಹರಿಣೀಲೋಲೇಕ್ಷಣೇ! ತಾವಕಂ
ಕಾಂತಾವತ್ಕರಿದಂತವತ್ಕಮಲವತ್ಕಾಕುತ್ಸ್ಥವತ್ಕಾಕವತ್ ॥

ಕಡೆಯ ಶ್ಲೋಕವು—

ವಿಷ್ವಗ್ಹಾರಯುತಂ ಸದಾ ಘನಸುಧಾಪೂರ್ಣಂ ರಸಾಲಿಂಗಿತಂ
ನಾಳೀಕಾಂಗಸುಲಕ್ಷಿತಂ ನಖರಜಶ್ರೀಕಲ್ಪಿತಾಲೇಪನಂ ।
ವಕ್ಷೋಜದ್ವಿತಯಂ ವಿಭಾತಿ ಹರಿಣೀಲೋಲೇಕ್ಷಣೇ! ತಾವಕಂ
ಕ್ಷೋಣೀವತ್ಕ್ಷಣದೇಶವತ್ಕ್ಷತಜವತ್ಕ್ಷೀಣಾತ್ಮವತ್ಕ್ಷಾಂತವತ್॥ ೩೦ ॥

ಇದರಲ್ಲಿಯೂ —

"ಇತಿ ಶ್ರೀಕಾಳಿದಾಸಕವಿಕೃತಂ 'ಕವಿಕಂಠಪಾಶಾ'ಖ್ಯಪ್ರಬಂಧಂ ಸಮಾಪ್ತಂ ।" ಎಂದಿರುವುದು.

**೫. ರಾಕ್ಷಸಕಾವ್ಯ**—ಇದರಲ್ಲಿ ೨೦ ಶ್ಲೋಕಗಳಿರುವುವು. ಕೊನೆಯಲ್ಲಿ– "ಇತಿ ಶ್ರೀಕಾಳಿದಾಸಕೃತಂ 'ರಾಕ್ಷಸಕಾವ್ಯಂ' ಸಮಾಪ್ತಂ।" ಎಂದಿದೆ.

ಇದರ ಮೊದಲನೆಯ ಶ್ಲೋಕವು ಹೀಗಿರುವುದು—

ಕಶ್ಚಿದ್ಘನಂ ಬಹುವನಂ ವಿಚರನ್ನಯಸ್ಥೋ
ವಶ್ಯಾಂ ವನಾತ್ಮವದನಾಂ ವನಿತಾಂ ವನಾದ್ರಾಂ ।
ತರ್ವರ್ಯರಿಪ್ರದಮುದೀಕ್ಷ್ಯ ಸಮುತ್ಥಿತಂ ಖೇ
ನಾ ಗಾಮಿಮಾಂ ಮದಕಲಃ ಸಕಲಾಂ ಬಭಾಷೇ ॥

**೬. ಪುಷ್ಪಬಾಣವಿಲಾಸ**—ಇದೊಂದು ಶೃಂಗಾರ ಕಾವ್ಯವು. ಇದರಲ್ಲಿ ೨೬ ಶ್ಲೋಕಗಳಿರುವುವು. 'ಪುಷ್ಪಬಾಣವಿಲಾಸ'ದಲ್ಲಿ ಗೋಪಿಕಾಜನವಲ್ಲಭನ ಚರಿತೆಯನ್ನು ಹೇಳುವ ಸಮಾರಂಭದಲ್ಲಿ ರಸಪ್ರಕರಣ, ನಾಯಿಕಾನಾಯಕ ಪ್ರಕರಣ, ಬೇಕಾದ ಅಲಂಕಾರಪ್ರಕರಣವೆಲ್ಲವನ್ನೂ ಹೇಳಿ ಮುಗಿಸಿರುವನು. ಪಂಡಿತಶ್ರೀವೆಂಕಟಸಾರ್ವಭೌಮನು ಇದಕ್ಕೆ ವ್ಯಾಖ್ಯಾನವನ್ನು ಬರೆದಿರುವನು.

ಗ್ರಂಥಾಂತ್ಯದಲ್ಲಿ—

"ಇತಿ ಪಂಡಿತವರವೆಂಕಟಸಾರ್ವಭೌಮವಿರಚಿತಯಾ ವ್ಯಾಖ್ಯಯಾ ಸಮೇತಂ ಶ್ರೀಕಾಳಿದಾಸಕೃತಂ 'ಪುಷ್ಪಬಾಣವಿಲಾಸ'ಕಾವ್ಯಂ ಸಮಾಪ್ತಂ ।" ಎಂದಿರುವುದು.

ಇದರ ಒಂದು ಶ್ಲೋಕವನ್ನು ಇಲ್ಲಿ ಮಾದರಿಗಾಗಿ ಕೊಟ್ಟಿದೆ—

ಅಧಿವಸತಿ ವಸಂತೇ ಮರ್ತುಕಾಮಾ ದುರಂತೇ
ನವಕಿಸಲಯತಲ್ಪಂ ಪುಂಜಿತಾಂಗಾರಕಲ್ಪಂ ।
ವಿರಹಮಸಹಮಾನಾ ಚಕ್ರವಾಕೀ ಸಮಾನಾ
ಚಕಿತವನಕುರಂಗೀಲೋಚನಾ ಕೋಮಲಾಂಗೀ ॥ ೧೨ ॥

"ಋತುಸಂಹಾರ"—ಇದರ ಒಂದೆರಡು ಶ್ಲೋಕಗಳನ್ನು ಒರೆದು ಮುಗಿಸುವೆವು.

ವಸಂತರ್ತುವರ್ಣನೆ—

ದ್ರುಮಾಃ ಸಪುಷ್ಪಾಃ ಸಲಿಲಂ ಸಪದ್ಮಂ
ಸ್ತ್ರಿಯಃ ಸಕಾಮಾಃ ಪವನಸ್ಸುಗಂಧಿಃ ।
ಸುಖಾಃ ಪ್ರದೋಷಾ ದಿವಸಾಶ್ಚ ರಮ್ಯಾಃ
ಸರ್ವಂ ಪ್ರಿಯೇ! ಚಾರುತರಂ ವಸಂತೇ ॥ ೨ ॥

ಹೂವುಗಳಿಂದ ಕೂಡಿರುವ ವೃಕ್ಷಗಳಿಂದಲೂ ಕಮಲಗಳಿಂದ ಕೂಡಿರುವ ಕಾಸಾರಗಳಿಂದಲೂ ಕಾಮುಕರಾದ ಸ್ತ್ರೀಯರಿಂದಲೂ ಪರಿಮಳಯುಕ್ತವಾದ ಮಂದಾನಿಲದಿಂದಲೂ ಸುಖಕರವಾದ ಸಂಧ್ಯಾಕಾಲಗಳಿಂದಲೂ ರಮ್ಯವಾದ ಹಗಲಿರುಳುಗಳಿಂದಲೂ ಕೂಡಿರುವ ಈ ವಸಂತರ್ತುವಿನಲ್ಲಿ ಸರ್ವವೂ ಮನೋಹರವಾಗಿರುವುವು.

ಆಕಂಪಯನ್ ಕುಸುಮಿತಾಃ ಸಹಕಾರಶಾಖಾ
ವಿಸ್ತಾರಯನ್ ಪರಭೃತಸ್ಯ ವಚಾಂಸಿ ದಿಕ್ಷು ।
ವಾಯುರ್ವಿವಾತಿ ಹೃದಯಾನಿ ಹರನ್ನರಾಣಾಂ
ನೀಹಾರಪಾತವಿಗಮಾತ್ ಸುಭಗೋ ವಸಂತೇ ॥ ೨೨ ॥

ವಸಂತಕಾಲದಲ್ಲಿ ಮಂಜಿಲ್ಲದಿರುವುದರಿಂದ ಮನೋಹರವಾದ ಘಾಳಿಯು ಪುಷ್ಪಿಸಿರುವ ಸಿಹಿಮಾವಿನಮರದ ಕೊಂಬೆಯನ್ನಲುಗಿಸಿ ಕೋಕಿಲೆಯ ಕುಹೂಗಾನವನ್ನು ದಿಕ್ಕುದಿಕ್ಕುಗಳಲ್ಲಿ ಪ್ರಸರಿಸಿ ಮನುಷ್ಯರ ಮನವನ್ನಪಹರಿಸಿ ಹೃದಯಂಗಮವಾಗುವಂತೆ ಬೀಸುತ್ತದೆ.

ಶಿಶಿರರ್ತುವರ್ಣನೆ—

ಗೃಹೀತತಾಂಬೂಲವಿಲೇಪನಸ್ರಜಃ
ಸುಖಾಸವಾಮೋದಿತವಕ್ತ್ರಪಂಕಜಾಃ ।
ಪ್ರಕಾಮಕಾಲಾಗುರುಧೂಪವಾಸಿತಂ
ವಿಶಂತಿ ಶಯ್ಯಾಗೃಹಮುತ್ಸುಕಾಃ ಸ್ತ್ರಿಯಃ ॥ ೫ ॥

ಈ ಶಿಶಿರಋತುವಿನಲ್ಲಿ ಹೆಂಗಳೆಯರು ಪರಿಮಳಗಂಧತಾಂಬೂಲಯುಕ್ತರಾಗಿ ಸುಖಕರವಾದ ಪಾನೀಯಗಳಿಂದ ಸುವಾಸಿತವಾಗಿ ಮಾಡಲ್ಪಟ್ಟ ಮುಖಕಮಲಗಳುಳ್ಳವರಾಗಿ ಕೃಷ್ಣಾಗುರುಧೂಪದಿಂದ ಪರಿಮಳಯುಕ್ತವಾಗಿರುವ ಶಯ್ಯಾಗೃಹವನ್ನು ಬಹು ಉತ್ಸುಕತೆಯಿಂದ ಸೇರುತ್ತಾರೆ.



## ದಿಙ್ನಾಗ

ಇವನನ್ನು **ದಿನ್ನಾಗ**ನೆಂದೂ ಕರೆಯುವರು. ಇವನು 'ಆರಾಲಪುರ'ದವನೆಂದು ಇವನ ಗ್ರಂಥದ ಪೀಠಿಕೆಯಿಂದ ಗೊತ್ತಾಗುವುದು. ಇವನನ್ನು ಕೆಲವರು ಬೌದ್ಧನೆಂದು ಹೇಳುವರು. ಇವನು ರಾಮಾಯಣಕಥಾಭಾಗವನ್ನು ಆರಿಸಿಕೊಂಡು "**ಕುಂದಮಾಲಾ**"* ಎಂಬ ಆರು ಅಂಕಗಳುಳ್ಳ ನಾಟಕವನ್ನು ಒರೆದಿರುವನು. ಇವನು ಬೌದ್ಧನಾಗಿದ್ದಪಕ್ಷದಲ್ಲಿ ರಾಮಾಯಣಕಥಾಭಾಗವನ್ನು ಆರಿಸಿಕೊಳ್ಳುತ್ತಿರಲ್ಲಿಲ್ಲವೆಂದು ತೋರುವುದು. ಇವನ ನಾಟಕದ ಶ್ಲೋಕಗಳನ್ನು ವಾಮನ, ಭೋಜ, ಅಭಿನವಗುಪ್ತಾಚಾರ್ಯ, ಶಾರದಾತನಯ, ವಿಶ್ವನಾಥ ಮೊದಲಾದವರು ಉದಾಹರಣೆಗಾಗಿ ತೆಗೆದುಕೊಂಡಿರುವರು.

ಇವನು ಶಾಕುಂತಲಾದಿನಾಟಕ ಮತ್ತು ರಘುವಂಶಾದಿಕಾವ್ಯಪ್ರಣೇತೃವಾದ ಕಾಳಿದಾಸನ ಸಮಕಾಲಿಕನೆಂದು ಪ್ರೊ. ವೀಬರ್‌ರವರು ಅಭಿಪ್ರಾಯಪಟ್ಟಿರುವರು.‡ ಆದರೆ ಈಚಿನ ಚಾರಿತ್ರಶೋಧನದಿಂದ ಶಾಕುಂತಲಾದಿನಾಟಕಗಳನ್ನು ಬರೆದಿರುವ ಕಾಳಿದಾಸನೂ, ರಘುವಂಶಾದಿಕಾವ್ಯಗಳನ್ನು ಬರೆದಿರುವ ಕಾಳಿದಾಸನೂ ಬೇರೆ ಬೇರೆ ಎಂದೂ ಮತ್ತು ಕ್ರಿಸ್ತಪೂರ್ವಕ್ಕೆ ಸೇರಿದವರೆಂದೂ ಸ್ಪಷ್ಟಪಟ್ಟಿರುವುದರಿಂದ ದಿಙ್ನಾಗನು ಕ್ರಿ. ಶ. ಐದನೆಯ ಶತಮಾನದಲ್ಲಿದ್ದ ಮೂರನೆಯ ಕಾಳಿದಾಸನ ಕಾಲದವನೆಂದು ಹೇಳಬೇಕಾಗುವುದು.

"ಶ್ರೀರಾಮನಿಂದ ಪರಿತ್ಯಕ್ತಳಾದ ಜಾನಕಿಯು ಲಕ್ಷ್ಮಣನಿಂದ ಕಾಡಿನಲ್ಲಿ ಬಿಡಲ್ಪಟ್ಟು ವಾಲ್ಮೀಕಿಯ ಆಶ್ರಮಕ್ಕೆ ಹೋಗುವ ದಾರಿಯಲ್ಲಿ ಭಾಗೀರಥಿ

* ಮದ್ರಾಸ್ ಗೌರ್ನಮೆಂಟ್ ಸೀನಿಯರ್ ಟ್ರಾನ್ಸ್‌ಲೇಟರವರಾದ ಮ॥ ಬಿ. ರಾಮರಾವ್, ಎಂ. ಎ., ಎಲ್. ಎಲ್. ಬಿ. ಇವರು ಇದರ ಕರ್ಣಾಟಕಾನುವಾದವನ್ನು ಮಾಡಿರುವರು.

‡ Weber's History of Indian Literature P. 209.

ಪುನ್ನು ನೋಡಿ, ಎಲೆ ಜಾಹ್ನವಿ! ನಾನು ಸುಖಪ್ರಸೂತಳಾದರೆ **ಕುಂದ** ಪುಷ್ಪಗಳಿಂದ ಸುಂದರವಾದ **ಮಾಲೆ**ಯನ್ನು ಕಟ್ಟಿ ಪ್ರತಿದಿನಸವೂ ನಿನ್ನನ್ನು ಪೂಜಿಸುವೆನೆಂದು ಪ್ರಾರ್ಥಿಸಿ ವಾಲ್ಮೀಕಿಯ ಆಶ್ರಮವನ್ನು ಸೇರಿ ಸುಖಪ್ರಸೂತ ಳಾದನಂತರ ಹರಕೆಯಂತೆ ಪ್ರತ್ಯಹವೂ ಗಂಗೆಯನ್ನು ಕುಂದಮಾಲೆಯಿಂದರ್ಚಿ ಸುತ್ತಿರಲು ಅಶ್ವಮೇಧಯಾಗನಿಮಿತ್ತ ವಾಲ್ಮೀಕಿಮಹರ್ಷಿಗಳನ್ನು ನೋಡಲು ಸೀತಾವಿರಹದುಃಖಿಯಾದ ರಾಮನು ಲಕ್ಷ್ಮಣನೊಡನೆ ಬರುತ್ತ ಅನತಿ ದೂರದಲ್ಲಿ ಆಗತಾನೇ ಸೀತೆಯಿಂದ ಪೂಜಿಸಲ್ಪಟ್ಟ ಕುಂದಮಾಲೆಯನ್ನು ಆಂದೋಳನಮಾಡಿಸುತ್ತ ಹರಿಯುತ್ತಿರುವ ಗಂಗೆಯನ್ನು ಲಕ್ಷ್ಮಣನು ನೋಡಿ ಆ ಮಾಲೆಯನ್ನೆತ್ತಿ ರಾಮನ ಕೈಗೆ ಕೊಡಲು ಅವನು ಅದನ್ನು ನೋಡಿ ಇದು ಸೀತೆಯಿಂದಲೇ ಕಟ್ಟಲ್ಪಟ್ಟಿದೆಂದು ಯೋಚಿಸುತ್ತ ವಾಲ್ಮೀಕಿಯ ಆಶ್ರಮ ವನ್ನು ಸೇರಿ ಕುಶಲವರ ಗಾನದಿಂದ ಸಂತುಷ್ಟನಾಗಿ ತನ್ನ ಮಕ್ಕಳೆಂದು ಅರಿತು ಶೋಕಾಕುಲಿತಳಾದ ಸೀತೆಯನ್ನು ಸಂತೈಸಿ ಅವಳೊಡನೆ ಅಯೋಧ್ಯೆಗೆ ಬಂದು ಅಶ್ವಮೇಧಯಾಗವನ್ನು ಸಾಂಗಗೊಳಿಸಿ ಕುಶನಿಗೆ ರಾಜ್ಯಾಭಿಷೇಕವನ್ನು ಮಾಡಿ ಲವನನ್ನು ಯುವರಾಜಪದವಿಯಲ್ಲಿರಿಸಿ ಸುಖವಾಗಿದ್ದನು,'' ಎಂಬ ಶ್ರೀಮ ದ್ರಾಮಾಯಣದ ಉತ್ತರಕಾಂಡದ ಕಥಾಭಾಗವನ್ನು ನೂತನಸಂವಿಧಾನಚತು ರತೆಯಿಂದ ತನಗೆ ಬೇಕಾದಹಾಗೆ ಮಾರ್ಪಡಿಸಿ ರೂಪಕವನ್ನಾಗಿ ಬರೆದು ''**ಕುಂದಮಾಲಾ**'' ಎಂದು ಕರೆದಿರುವನು.

ವಿಪ್ರಲಂಭಶೃಂಗಾರ ಮತ್ತು ಕರುಣರಸಪ್ರಧಾನವಾದ ಇದರ ಶ್ಲೋಕ ಗಳು ಮೃದುತರವಾಗಿಯೂ ಭಾವಗರ್ಭಿತವಾಗಿಯೂ ಹೃದಯಂಗಮವಾಗಿಯೂ ಋಷ್ಯಾಶ್ರಮವರ್ಣನೆಯ ನೈಜವಾಗಿಯೂ ಬರೆಯಲ್ಪಟ್ಟಿರುವುದು. ಇದರಲ್ಲಿನ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಟ್ಟಿದೆ—

ರಾಜನ ಆಜ್ಞೆಯು ಹೇಗೋ ತಂದೆಯ ಆಜ್ಞೆಯೂ ಹಾಗೆಯೇ; ತಂದೆಯ ಆಜ್ಞೆಯು ಹೇಗೋ ಅಣ್ಣನ ಆಜ್ಞೆಯೂ ಹಾಗೆಯೇ ಎಂಬುದನ್ನು ಸೂಚಿಸು ವಂತೆ ಲಕ್ಷ್ಮಣನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟು—

**ಜ್ಯೇಷ್ಠಸ್ಯ ಭ್ರಾತುರಾದೇಶಾತ್ ಆದಾಯ ವಿಜನೇ ವನೇ |**
**ಪರಿತ್ಯಕ್ತಾಸಿ ದೇವಿ! ತ್ವಂ ದೋಷಮೇಕಂ ಕ್ಷಮಸ್ವ ಮೇ ||**

ತಾಯೆ! ಅಣ್ಣನ ಆಜ್ಞೆಯಂತೆ ಈ ನಿರ್ಜನವನಾಂತರಕ್ಕೆ ನೀನು ಕರ ತಂದು ಬಿಡಲ್ಪಟ್ಟಿರುವೆ. ನನ್ನ ಈ ದೋಷವೊಂದನ್ನು ಮಾತ್ರ ಕ್ಷಮಿಸುವ ಳಾಗು, (ಎಂದು ಬೇಡಿಕೊಂಡಿರುವನು.)

ವನಾಂತರದಲ್ಲಿ ಸೀತೆಯನ್ನು ಬಿಟ್ಟು ಹೊರಡುವಾಗ ಲಕ್ಷ್ಮಣನು ಅರಣ್ಯದಲ್ಲಿದ್ದ ಮುನಿಗಳನ್ನು ಸಂಬೋಧಿಸಿ—

**ಯೇ ಕೇಚಿದತ್ರ ಮುನಯೋ ನಿವಸಂತ್ಯರಣ್ಯೇ**
**ವಿಜ್ಞಾಪಯಾಮಿ ಶಿರಸಾ ಪ್ರಣಿಪತ್ಯ ತೇಭ್ಯಃ ।**
**ಸ್ತ್ರೀತ್ಯುಜ್ಝಿತೇತ್ಯಶರಣೇತಿ ಕುಲಾಗತೇತಿ**
**ದೇವೀ ಸದಾ ಭಗವತೀತ್ಯನುಕಂಪನೀಯಾ ॥**

ಎಲೈ ಅರಣ್ಯವಾಸಿಗಳಾದ ಮುನಿಗಳಿರಾ! ಈಕೆಯನ್ನು ಸ್ತ್ರೀಯೆಂದೂ ನಿರ್ನಿಮಿತ್ತಪರಿತ್ಯಕ್ತಳೆಂದೂ ಆಶ್ರಯಕ್ಕೆ ಬಂದಳೆಂದೂ ಸತ್ಕುಲಪ್ರಸೂತಳೆಂದೂ ಭಗವತಿಯೆಂದೂ ಪೂಜ್ಯಳೆಂದೂ ನೀವು ತಿಳಿದು ದಯಾಶೀಲರಾಗಿ ರಕ್ಷಿಸತಕ್ಕದೆಂದು ನಾನು ತಲೆಬಾಗಿ ಬೇಡಿಕೊಳ್ಳುವೆನು, (ಎಂದು ಪ್ರಾರ್ಥಿಸಿಕೊಳ್ಳುವನು.)

ಇದರಿಂದ ರಾಮನು ತನಗೆ ಅಣ್ಣನಾಗಿ ಸೀತೆಯು ಅತ್ತಿಗೆಯಾಗಿ ಮಾತೃವತ್ಪೂಜ್ಯಳಾದರೂ ಕೂಡಾ ಕಟುತರವಾದ ರಾಜಾಜ್ಞೆಗೆ ಕಟ್ಟುಬಿದ್ದು ಅರಣ್ಯಕ್ಕೆ ಕರತರಲೇಬೇಕಾಯಿತೆಂಬುದು ಸ್ಪಷ್ಟಪಡುವುದು. ಅರಣ್ಯವಾಸಿಗಳಾದ ಮುನಿಗಳನ್ನು ಕುರಿತು "ವಿಜ್ಞಾಪಯಾಮಿ ಶಿರಸಾ ಪ್ರಣಿಪತ್ಯ ತೇಭ್ಯಃ" ಎಂದು ಪ್ರಾರ್ಥಿಸಿಕೊಂಡಿರುವುದರಿಂದ ಜಾನಕಿಯಲ್ಲಿ ಅವನಿಗೆ ಎಷ್ಟರಮಟ್ಟಿನ ಭಕ್ತಿವಿಶ್ವಾಸವಿತ್ತೆಂಬುದು ಸೂಚಿತವಾಗುವುದು.

ಲಕ್ಷ್ಮಣನು ಅಯೋಧ್ಯೆಗೆ ಹೊರಟುಹೋದನಂತರ ಸಮಿತ್ಕುಶಾರ್ಥವಾಗಿ ವಾಲ್ಮೀಕಿಮಹರ್ಷಿಗಳು ಅರಣ್ಯದಲ್ಲಿ ಸಂಚರಿಸುತ್ತಾ ಏಕಾಕಿನಿಯಾಗಿರುವ ಸೀತೆಯನ್ನು ನೋಡಿ ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗುವಾಗ ಕಾಡುದಾರಿಯನ್ನೇ ಅರಿಯದ ಸೀತೆಗೆ ಪ್ರಮಾದ ಮತ್ತು ಭೀತಿಯನ್ನು ಸೂಚಿಸುತ್ತ—

**ಏತಸ್ಮಿನ್ ಕುಶಕಂಟಕೇ ಲಘುತರಂ ಪಾದೌ ನಿಧತ್ಸ್ವಾಗ್ರತಃ**
**ಶಾಖೇಯಂ ವಿನತಾ ನಮಸ್ವ ಶನಕೈಃ ಗರ್ತೋ ಮಹದ್ವಾಮತಃ ।**
**ಹಸ್ತೇನಾಮ್ರಶತೇನ ದಕ್ಷಿಣಗತಂ ಸ್ಥಾಣುಂ ಸಮುಂ ಸಾಂಪ್ರತಂ**
**ಪುಣ್ಯೇಽಸ್ಮಿನ್ ಕಮಲಾಕರೇ ಚರಣಯೋರ್ನಿರ್ವರ್ತ್ಯತಾಂ ಕ್ಷಾಳನಂ ॥**

ಎಲೌ ಸೀತೆ! ಕತ್ತರಿಸಲ್ಪಟ್ಟ ದರ್ಭೆಗಳ ಕೂಳೆಗಳು ಉಳಿದುಕೊಂಡಿರುವ ಈ ಪ್ರದೇಶದಲ್ಲಿ ಕಾಲುಗಳನ್ನು ಮೆಲ್ಲಗೆ ಇಟ್ಟು ನಡೆ. ಬಗ್ಗಿರುವ ಈ ರೆಂಬೆಯ ಕೆಳಗೆ ದೂರಿಕೊಂಡು ಹೋಗಬೇಕಾದುದರಿಂದ ತಲೆಯನ್ನು ಸ್ವಲ್ಪ ತಗ್ಗಿಸು. ಎಡಗಡೆ ದೊಡ್ಡಹಳ್ಳವಿರುವುದರಿಂದ ಬಲಗಡೆಯಿರುವ ಮೋಟುಮರವನ್ನು

ಸಹಾಯಕ್ಕಾಗಿ ಹಿಡಿದುಕೋ. ಪುಣ್ಯಪ್ರದವಾದ ಈ ಸರೋವರದಲ್ಲಿ ಕಾಲುಗಳನ್ನು ತೊಳೆದುಕೋ, (ಎಂದು ಹೇಳುವರು.)

ಮೂರನೆಯ ಅಂಕದಲ್ಲಿ ರಾಮನು ಲಕ್ಷ್ಮಣನೊಡನೆ ವಾಲ್ಮೀಕಿಯ ಆಶ್ರಮವನ್ನು ಕುರಿತು ಕಾಡಿನಲ್ಲಿ ಬರುತ್ತಿರುವಾಗ ಗೋಮತೀತೀರಪ್ರದೇಶವನ್ನು ನೋಡಿ—

ಮುಕ್ತಾಹಾರಾ ಮಲಯಮರುತಶ್ಚಂದನಂ ಚಂದ್ರಪಾದಾಃ
ಸೀತಾತ್ಯಾಗಾತ್ಪ್ರಭೃತಿನಿತರಾಂ ತಾಪಮೇವಾವಹಂತಿ ।
ಅದ್ಯಾಕಸ್ಮಾದ್ರಮಯತಿ ಮನೋ ಗೋಮತೀತೀರವಾಯುಃ
ನೂನಂ ತಸ್ಯಾಂ ದಿಶಿ ನಿವಸತಿ ಪ್ರೋಷಿತಾ ಸಾ ವರಾಕೀ ॥

ಎಲೆ ಲಕ್ಷ್ಮಣ! ಈ ಮುತ್ತಿನ ಹಾರ, ತಂಗಾಳಿ, ಚಂದನ, ಚಂದ್ರಕಿರಣಗಳು ಇವೆಲ್ಲವೂ ಸೀತಾತ್ಯಾಗದುಃಖಿಯಾದ ನನಗೆ ಅತ್ಯಂತತಾಪದಾಯಕವಾಗಿರುವಲ್ಲಿ ಈದಿವಸ ಇಲ್ಲಿ ಸಂಚರಿಸುತ್ತಿರುವಾಗ ನನಗೆ ಈ ಗೋಮತೀತೀರದ ವಾಯುವು ಅತ್ಯಾನಂದದಾಯಕವಾಗಿರಲು ಕಾರಣವೇನಿರಬಹುದು? (ನಿಟ್ಟುಸಿರುಬಿಡುತ್ತ ಮನಸ್ಸಿನಲ್ಲಿ) ಅಯ್ಯೋ! ನಿಷ್ಕಾರಣವಾಗಿ ನನ್ನಿಂದ ಪರಿತ್ಯಕ್ತಳಾದ ಜಾನಕಿಯು ಇಲ್ಲಿರುವಳೋ ಏನೋ! (ಎಂದು ಹಂಬಲಿಸುವನು.)

ಹಾಗೆಯೇ ದಾರಿಯನ್ನು ನಡೆದು ವಾಲ್ಮೀಕಿಯ ಆಶ್ರಮದ ಬಳಿಗೆ ಬಂದು ಅಲ್ಲಿ ಹರಡಿದ್ದ ಉತ್ತರೀಯವನ್ನು ನೋಡಿ ಕೈಯಲ್ಲಿ ತೆಗೆದುಕೊಂಡು—

ದ್ಯೂತೇ ಪಣಃ ಪ್ರಣಯಕೇಳಿಷು ಕಂಠಪಾಶಃ
ಕ್ರೀಡಾಪರಿಶ್ರಮನುದಂ ವ್ಯಜನಂ ರತಾಂತೇ ।
ಶಯ್ಯಾ ನಿಶೀಥಕಲಹೇ ಹರಿಣೇಕ್ಷಣಾಯಾಃ
ಪ್ರಾಪ್ತಂ ಮಯಾ ವಿಧಿವಶಾದಿದಮುತ್ತರೀಯಂ ॥

ಅಹಹ! ಯಾವಾಗಲಾದರೂ ಜಾನಕಿಯೊಡನೆ ಆಚರಿಸುತ್ತಿದ್ದ ದ್ಯೂತ (ಆಟ)ದಲ್ಲಿ ಪಣ(ಒತ್ತೆ)ವಾಗಿಯೂ ಪ್ರಣಯಕೇಳಿಗಳಲ್ಲಿ ಕಂಠಪಾಶವಾಗಿಯೂ ವಿಲಾಸಾನಂತರದಲ್ಲಿ ಶ್ರಮಪರಿಹಾರಕವಾದ ಬೀಸಣಿಗೆಯಾಗಿಯೂ ಪ್ರಣಯಕಲಹದಲ್ಲಿ ಬೇರೆ ಹಾಸಿಗೆಯಾಗಿಯೂ ಇರುತ್ತಿದ್ದ ಈ ನನ್ನ ಉತ್ತರೀಯವು ಪೂರ್ವಪುಣ್ಯವಶದಿಂದ ನನಗೆ ಬಹುಕಾಲಕ್ಕೆ ದೊರಕಿತು.



# ಆರನೆಯ ಶತಮಾನ



## ದಂಡಿ

ಇವನು ವಿದರ್ಭದೇಶ(Modern Berar)ದವನೆಂದು ತಿಳಿಯಬರುವುದು. ಇವನನ್ನು "**ಆಚಾರ್ಯದಂಡಿ**" ಎಂತಲೂ ಕರೆಯುವರು.

ಮಹಾಕವಿರಾಜಶೇಖರನು "ಸುಭಾಷಿತಹಾರಾವಳಿ"ಯಲ್ಲಿ—

ತ್ರಯೋಽಗ್ನಯಸ್ತ್ರಯೋ ವೇದಾಸ್ತ್ರಯೋ ದೇವಾಸ್ತ್ರಯೋಗುಣಾಃ ।
ತ್ರಯೋ ದಂಡಿಪ್ರಬಂಧಾಶ್ಚ ತ್ರಿಷು ಲೋಕೇಷು ವಿಶ್ರುತಾಃ ॥

ಎಂದು ಹೇಳಿರುವುದರಿಂದ ಇವನು ಮೂರು ಪ್ರಬಂಧಗಳನ್ನು ಬರೆದಿರುವುದಾಗಿ ಗೊತ್ತಾಗುವುದು. ಕಾವ್ಯಾದರ್ಶ, ದಶಕುಮಾರಚರಿತೆ, ಛಂದೋವಿಚಿತಿ ಎಂಬ ಮೂರು ಗ್ರಂಥಗಳನ್ನು ಬರೆದಿರುವುದಾಗಿ ಕೆಲವರು ಹೇಳುವರು. **ಕಾವ್ಯಾದರ್ಶ, ಛಂದೋವಿಚಿತಿ** ಮತ್ತು **ಕಲಾಪರಿಚ್ಛೇದ**ವೆಂಬವುಗಳನ್ನು ಬರೆದಿರುವುದಾಗಿ ಕೆಲವರು ಹೇಳುವರು. ದಶಕುಮಾರಚರಿತೆಯು ಹತ್ತುಜನ ರಾಜಪುತ್ರರ ಚರಿತೆಯನ್ನೊಳಗೊಂಡಿರುವ ಗದ್ಯಗ್ರಂಥವಾಗಿರುವುದು. ಉಳಿದ ಮೂರೂ ಲಕ್ಷಣಗ್ರಂಥಗಳಾಗಿರುವುವು. ಕಾವ್ಯಾದರ್ಶದ ಆರಂಭದಲ್ಲಿಯೂ ಮತ್ತು ಕೊನೆಯಲ್ಲಿಯೂ—

"ಶ್ರೀಮದಾಚಾರ್ಯದಂಡಿನಃ ಕೃತೌ 'ಕಾವ್ಯಾದರ್ಶೇ' .... ।"

ಎಂದಿರುವುದರಿಂದಲೂ 'ಛಂದೋವಿಚಿತಿ'ಎಂಬ ಗ್ರಂಥದ ವಿಚಾರವಾಗಿ—

'ಛಂದೋವಿಚಿತ್ಯಾಂ ಸಕಲಸ್ತತ್ಪ್ರಪಂಚೋ ನಿದರ್ಶಿತಃ ।
ಸಾ ವಿದ್ಯಾನೌಸ್ತಿತೀರ್ಷೂಣಾಂ ಗಂಭೀರಂ ಕಾವ್ಯಸಾಗರಂ ॥೧—೧೨॥ ಎಂದೂ

"ಕಲಾಪರಿಚ್ಛೇದ" ಎಂಬ ಗ್ರಂಥದ ವಿಚಾರವಾಗಿ—

ಇತ್ಥಂ ಕಲಾಚತುಷ್ಷಷ್ಟಿವಿರೋಧಸ್ಸಾಧುನೀಯತಾಂ ।
ತಸ್ಯಾಃ ಕಲಾಪರಿಚ್ಛೇದೇ ರೂಪಮಾವಿರ್ಭವಿಷ್ಯತಿ ॥ ೩—೧೭೧ ॥ ಎಂದೂ

ಕಾವ್ಯಾದರ್ಶದಲ್ಲಿ ಹೇಳಿರುವುದರಿಂದ ಈ ಮೂರುಗ್ರಂಥಗಳನ್ನು ದಂಡಿಯೇ ಬರೆದುದೆಂದೂ 'ದಶಕುಮಾರಚರಿತೆ'ಯ ವಿಚಾರವಾಗಿ ಎಲ್ಲಿಯೂ ಹೇಳದೆ ಇರುವುದರಿಂದ ಅದನ್ನು ಬರೆದವನು ಬೇರೆಯಾಗಿರಬೇಕೆಂದೂ ಸ್ಪಷ್ಟಪಡುವುದು.

**ಕಾಲವಿಚಾರ**— "ಕಾವ್ಯಾದರ್ಶ"ದಲ್ಲಿ—

**ನಾಸಿಕ್ಯಮಧ್ಯಾ ಪರಿತಶ್ಚತುರ್ವರ್ಣವಿಭೂಷಿತಾ ।**
**ಅಸ್ತಿ ಕಾಚಿತ್ಪುರೀ ಯಸ್ಯಾಮಷ್ಟವರ್ಣಾಹ್ವಯಾ ನೃಪಾಃ ॥ ೩—೧೧೪ ॥**

ಅನುನಾಸಿಕಾಕ್ಷರವನ್ನೊಳಗೊಂಡು ಸುತ್ತಲೂ ನಾಲ್ಕು ಅಕ್ಷರಗಳಿಂದ ಕೂಡಿರುವ "ಕಾಞ್ಚಿ" ಎಂಬ ಪಟ್ಟಣವಿರುವುದು. ಅದರಲ್ಲಿ ಅಷ್ಟವರ್ಣಯುಕ್ತವಾದ ಹೆಸರುಳ್ಳ "ಪೌಂಡ್ರಕ"ರೆಂಬ ಅರಸರು ಇರುವರು, ಎಂದು ಹೇಳಲ್ಪಟ್ಟಿರುವುದು. ಇದರಿಂದ ದಂಡಿಯ ಕಾಲದಲ್ಲಿ "ಪೌಂಡ್ರಕ"ರೆಂಬ ಅರಸರು ಕಾಂಚಿಯಲ್ಲಿ ಆಳುತ್ತಿದ್ದರೆಂದಾಯಿತು. ಇವರು ಕ್ರಿಸ್ತಶಕ ಏಳನೆಯ ಶತಮಾನದಲ್ಲಿ ಆಳುತ್ತಿದ್ದರೆಂದು ತಿಳಿಯಬರುವುದು.

ಇದಲ್ಲದೆ ಕ್ರಿ. ಶ. ೯ ನೆಯ ಶತಮಾನದಲ್ಲಿದ್ದ 'ನೃಪತುಂಗ'ನೆಂಬವನಿಂದ ಬರೆಯಲ್ಪಟ್ಟಿರುವ "ಕವಿರಾಜಮಾರ್ಗ"ವೆಂಬ ಕನ್ನಡ ಅಲಂಕಾರಗ್ರಂಥದಲ್ಲಿ ಕಾವ್ಯಾದರ್ಶಸೂತ್ರ ಮತ್ತು ಕಾವ್ಯಾದರ್ಶಸೂತ್ರಾರ್ಥಗಳನ್ನು ಸೂಚಿಸುವಂತಹ ಪದ್ಯಗಳು ದೊರೆಯುತ್ತವೆ. ಕ್ರಿ. ಶ. ಎಂಟನೆಯ ಶತಮಾನಮಧ್ಯಕಾಲಕ್ಕೆ ಪಲ್ಲವರಾಜರ ರಾಜ್ಯಭಾರವು ಮುಕ್ತಾಯವಾಯಿತು. ಇವರು ಕಾಂಚಿಯಲ್ಲಿ ಸುಮಾರು ಒಂದುವರೆ–ಎರಡು ಶತಮಾನಗಳವರೆಗೂ ಆಳಿದರು. ಆಕಾಲದಲ್ಲಿ ರಾಜಕುಮಾರರಲ್ಲೊಬ್ಬನಿಗೆ ಅಲಂಕಾರಶಾಸ್ತ್ರವನ್ನು ಹೇಳುವುದಕ್ಕಾಗಿ ದಂಡಿಯು ಕಾವ್ಯಾದರ್ಶವನ್ನು ರಚಿಸಿದುದಾಗಿ ಒಂದು ಕಡೆ ಹೇಳಲ್ಪಟ್ಟಿರುವುದು. 'ಕಾವ್ಯಾದರ್ಶ'ಕ್ಕೆ ಮೊದಲನೆಯ ವ್ಯಾಖ್ಯಾನಕಾರನಾದ ತರುಣವಾಚಸ್ಪತಿಯು ತನ್ನ ವ್ಯಾಖ್ಯಾನದಲ್ಲಿ ಅನೇಕಕಡೆ ದಂಡಿಯು ಭಾಮಹನ ಕೆಲವು ಅಭಿಪ್ರಾಯಗಳನ್ನು ಒಪ್ಪಿಕೊಳ್ಳದಹಾಗೆ ಹೇಳಿರುವನು. ಇದರಿಂದ ಭಾಮಹನು ದಂಡಿಗಿಂತ ಪ್ರಾಚೀನನೆಂದು ವ್ಯಕ್ತವಾಗುವುದು. ಭಾಮಹನು ಕ್ರಿ. ಶ. ೫ ನೆಯ ಶತಮಾನದವನು. ಆದುದರಿಂದ ದಂಡಿಯು ಭಾಮಹನಿಗಿಂತಲೂ ಈಚೀನವನೆಂದಾಯಿತು. ಕ್ರಿ. ಶ. ಏಳನೆಯ ಶತಮಾನದಲ್ಲಿದ್ದ ವಾಮನನು ತನ್ನ 'ಕಾವ್ಯಾಲಂಕಾರಸೂತ್ರವೃತ್ತಿ'ಯಲ್ಲಿ 'ಕಾವ್ಯಾದರ್ಶಸೂತ್ರ'ಗಳನ್ನುದಹರಿಸಿಕೊಂಡಿರುವುದರಿಂದ ದಂಡಿಯು ವಾಮನನಿಗಿಂತಲೂ ಹಿಂದಿನವನಾಗಿರಬೇಕು. ಎಂದರೆ ಕ್ರಿ. ಶ. ಆರನೆಯ ಶತಮಾನದಲ್ಲಿದ್ದನೆಂದಾಯಿತು.

ಆಚಾರ್ಯದಂಡಿಯ ಮೂರುಗ್ರಂಥಗಳೂ ಲಕ್ಷಣಗ್ರಂಥಗಳಾಗಿರುವುವು. "ಕಾವ್ಯಾದರ್ಶ"ವು ಸರ್ವಕಾವ್ಯಧರ್ಮಗಳನ್ನು ತಿಳಿಸುವುದಾಗಿಯೂ ಇದಕ್ಕಿಂತಲೂ ಮೊದಲಿದ್ದ ಲಕ್ಷಣಗ್ರಂಥಗಳನ್ನು ಪರಿಶೋಧಿಸಿ ವಿಮರ್ಶಿಸಲ್ಪಟ್ಟು ಬರೆದುದಾಗಿಯೂ—

ಪೂರ್ವಶಾಸ್ತ್ರಾಣಿ ಸಂಹೃತ್ಯ(ಸಂಗೃಹ್ಯ) ಪ್ರಯೋಗಾನುಪಲಭ್ಯ ಚ ।
ಯಥಾಸಾಮರ್ಥ್ಯಮಸ್ಮಾಭಿಃ ಕ್ರಿಯತೇ 'ಕಾವ್ಯಲಕ್ಷಣಂ' ॥ ೧—೨ ॥

ಎಂಬ ಪ್ರತಿಜ್ಞೆಯಿಂದಲೇ ತಿಳಿಯುಬರುತ್ತದೆ. ಭೋಜನು ತಾನು ಬರೆದಿರುವ 'ಸರಸ್ವತೀಕಂಠಾಭರಣ'ವೆಂಬ ಅಲಂಕಾರಗ್ರಂಥದಲ್ಲಿ 'ಕಾವ್ಯಾದರ್ಶ'ದ ಸೂತ್ರಗಳನ್ನು ಹೇಳಿಕೊಂಡಿರುವನು. ಅಲಂಕಾರಶಾಸ್ತ್ರವು ಯಾವಾಗ ಹೇಗೆ ಹುಟ್ಟಿತೆಂಬುದನ್ನು ಹೇಳುವುದಸಾಧ್ಯವಾಗಿರುವುದು. ಆದಿಕವಿಯಾದ ವಾಲ್ಮೀಕಿಯ "ರಾಮಾಯಣ"ಗ್ರಂಥವು ಸರ್ವಲಕ್ಷಣೋಪೇತವಾದುದಾಗಿರುವುದು. ಭರತಾಚಾರ್ಯನ ನಾಟ್ಯಶಾಸ್ತ್ರವು ಕ್ರಿಸ್ತಪೂರ್ವಕ್ಕೆ ಎಷ್ಟೋ ಶತಮಾನಗಳ ಹಿಂದಿನದೆಂಬುದು ನಿರ್ವಿವಾದವಾದುದು. ಅದರ ಒಂದು ಭಾಗದಲ್ಲಿ ಸಂಗೀತಕ್ಕೂ ನಾಟಕಪದ್ಯಪದಸಿಮಾರ್ಣಕ್ಕೂ ಅಲಂಕಾರವು ತೆಗೆದುಕೊಳ್ಳಲ್ಪಟ್ಟಿದೆ. ಈಗ ದೊರೆತಿರುವ ಅಲಂಕಾರಗ್ರಂಥಗಳಲ್ಲಿ ಭಾಮಹನು ಬರೆದಿರುವ "ಕಾವ್ಯಾಲಂಕಾರ"ವನ್ನು ಬಿಟ್ಟರೆ ದಂಡಿಯ "ಕಾವ್ಯಾದರ್ಶ"ವು ಬಹುಪ್ರಾಚೀನಗ್ರಂಥವಾಗಿರಬೇಕೆಂದು ತಿಳಿಯುಬರುತ್ತದೆ. ಕಾವ್ಯಾದರ್ಶವು— ಕಾವ್ಯಮಾರ್ಗವಿಭಾಗ, ಅರ್ಥಾಲಂಕಾರವಿಭಾಗ ಮತ್ತು ಶಬ್ದಾಲಂಕಾರದೋಷವಿಭಾಗಗಳೆಂದು ಮೂರು ಪರಿಚ್ಛೇದಗಳಾಗಿ ವಿಂಗಡಿಸಲ್ಪಟ್ಟು ಒಟ್ಟು ೬೬೦ ಶ್ಲೋಕಗಳಿಂದ ಪೂರ್ಣವಾಗಿರುವುದು.

"ದಶಕುಮಾರಚರಿತೆ"ಯನ್ನು ಬರೆದವನು ಬೇರೊಬ್ಬ ದಂಡಿಯೆಂದೂ ಅಭಿನವಕಾಳಿದಾಸ, ಅಭಿನವಭವಭೂತಿ, ಅಭಿನವಬಾಣ ಇವರಂತೆ ದಶಕುಮಾರ ಚರಿತದಲ್ಲಿಯ ಮಂಗಳಾಚರಣೆಯ ಶ್ಲೋಕದಲ್ಲಿ ಪ್ರತಿಪಾದದಲ್ಲಿಯೂ "ದಂಡಃ" ಎಂಬ ಶಬ್ದಪ್ರಯೋಗವಿರುವುದರಿಂದ ಇವನಿಗೆ "ದಂಡಿ" ಎಂಬ ಹೆಸರು ಬಂದಿರಬೇಕೆಂದೂ ಅವನು ಕ್ರಿಸ್ತಶಕ ಹತ್ತನೆಯ ಶತಮಾನದವನೆಂದೂ ಸರಳಕವಿಸೂರಿ, ವಿದ್ಯಾವಿಭೂಷಣ, ಮಹಾವಿದ್ವಾನ್, ಪಂಡಿತಚಕ್ರವರ್ತಿಯುವರು ಅಭಿಪ್ರಾಯಪಡುವರು.

* ಕಾವ್ಯಾದರ್ಶಸ್ಯ ಕರ್ತಾ ದ್ವಿಜಕುಲಮಹಿತಃ ಖ್ಯಾತಆಚಾರ್ಯದಂಡೀ
ಜಾತಃ ಕ್ರಿಸ್ತೀಯಷಷ್ಠೇ ಶತಕ ಇತಿ ಮತಂ ಯುಕ್ತಿಮಾನ್ವೈಶ್ಚ ಸಿದ್ಧಂ ।
"ದಂಡೀ"ತಿ ಖ್ಯಾತನಾಮಾ 'ದಶಸುತಚರಿತಂ' ಧೂರ್ತಚರ್ಯಾಪ್ರಧಾನಂ
ತೇನೇ ಮಾಹಮ್ಮದಾರ್ತೇ ದಶಮಶತಕ ಇತ್ಯೇವ ರಾದ್ಧಾಂತ ಏಷಃ ॥



* Sanskrit Research October, 1916 P. 180.

# ಸುಬಂಧು

ಕಾಲವು ಸರ್ವತ್ರ ಸಮವಾಗಿರದು. ವಿದ್ಯೆಯೂ, ಬುದ್ಧಿಯೂ ಹೆಚ್ಚಾದ ಹಾಗೆಲ್ಲ ತತ್ತತ್ಕಾಲಾನುಗುಣವಾಗಿ ನಡೆನುಡಿ, ಆಚಾರವಿಚಾರ, ಸಮಾಜಪರಿಷ್ಕರಣ, ಭಾಷೋಚ್ಚಾರಯಸ್ಥಿತಿ ಮೊದಲಾದುವು ತಿದ್ದಿಕೊಳ್ಳಲ್ಪಡುತ್ತಿರುವುವು. ಹಾಗೆಯೇ ಕಾಲಕ್ರಮದಲ್ಲಿ ಗೀರ್ವಾಣಭಾಷಾರಮಣಿಯು ಪದ್ಯರೂಪವೆಂಬ ತನ್ನ ಮಾಗುತಿಗೆ ಗದ್ಯರೂಪವೆಂಬ ಹೊಸಮುತ್ತನ್ನು ಜೋಡಿಸಿಕೊಳ್ಳುವ ಸಂದರ್ಭವು ಬಂದಿರುವಂತೆ ತೋರುತ್ತದೆ. ವಾಙ್ಮಯಪ್ರಪಂಚಾಧಿಷ್ಠಾತ್ರಿಗೆ ಪದ್ಯರೂಪಾಭರಣಗಳಿಂದ ಅಲಂಕರಿಸುವವರು ಕೆಲವರು; ಗದ್ಯರೂಪಾಭರಣಗಳಿಂದ ಅಲಂಕರಿಸುವವರು ಕೆಲವರು; ಗದ್ಯಪದ್ಯಗಳೆರಡರಿಂದಲೂ ಅಲಂಕರಿಸಬೇಕೆನ್ನುವವರು ಕೆಲವರು. ಈರೀತಿಯಾಗಿ ಭರತಖಂಡವು ತವಕಪಡುತ್ತಿರುವಾಗ ಭಾರತಮಾತೆಯು ಗದ್ಯರೂಪಾತ್ಮಕವಾದ ಕಾವ್ಯವನ್ನು ಬರೆಸಲೆಳಸಿ "**ಸುಬಂಧು**" ಎಂಬೋರ್ವ ಮಹಾತ್ಮನ ಜನ್ಮಗ್ರಹಣಮಾಡಿದಳು. 'ಗದ್' ಎಂದರೆ ಮಾತನಾಡುವುದೆಂದರ್ಥವಾಗುವುದು. ಪ್ರಾಸ, ಗಣ, ಪಾದ ಈ ನಿಯಮವಿಲ್ಲದೆ ಅರ್ಥಸಹಿತವಾದ ಶಬ್ದಗಳಿಂದ ಕೂಡಿದ ವಾಕ್ಯಗಳಿಂದ ಬರೆಯಲ್ಪಡುವ ಕಾವ್ಯಕ್ಕೆ 'ಗದ್ಯಕಾವ್ಯ'ವೆಂದು ಹೆಸರು. ಗದ್ಯಕಾವ್ಯಗಳಾದ ವಾಸವದತ್ತಾ, ಹರ್ಷಚರಿತೆ, ಕಾದಂಬರೀ, ದಶಕುಮಾರಚರಿತೆ, ತಿಲಕಮಂಜರೀ, ಗದ್ಯಚಿಂತಾಮಣಿ, ವೀರನಾರಾಯಣ ( ವೇಮಭೂಪಾಲ )ಚರಿತ,— ಇವು ಇದುವರೆಗೆ ಸಂಸ್ಕೃತ ವಾಙ್ಮಯದಲ್ಲಿ ದೊರೆತಿರುವುವು.

**ಭಟ್ಟಾರಹರಿಚಂದ್ರಸ್ಯ ಗದ್ಯಬಂಧೋ ನೃಪಾಯತೇ ।** ಎಂದೂ
**ಪುಣ್ಯಾ ಪುನಾತಿ ಗಂಗೇವ ಗಾಂ 'ತರಂಗವತೀ' ಕಥಾ ।**

ಎಂದೂ ಮಹಾಕವಿಯಾದ ಬಾಣನಿಂದ ಹೊಗಳಲ್ಪಟ್ಟಿರುವ ಭಟ್ಟಾರಹರಿಚಂದ್ರನ "ತರಂಗವತೀ ಕಥಾ" ಎಂಬ ಗದ್ಯಕಾವ್ಯವು ಉಪಲಬ್ಧವಿಲ್ಲ. ಇದಲ್ಲದೆ ಅಗಸ್ತ್ಯಕವಿಕೃತ "ಶ್ರೀಕೃಷ್ಣಚರಿತೆ" ಎಂಬ ಗದ್ಯಕಾವ್ಯವು ಅಲ್ಲಲ್ಲಿ ಕೊಂಚ ದೊರಕುವದೇ ಹೊರತು ಸಂಪೂರ್ಣಕಾವ್ಯವು ದೊರೆತಿರುವುದಿಲ್ಲ. ಪ್ರಕೃತ ಗದ್ಯಕಾವ್ಯವನ್ನು ಬರೆದು ಪ್ರಸಿದ್ಧರಾಗಿರುವವರಲ್ಲಿ ಸುಬಂಧುವು ಮೊದಲನೆಯವನು.

ಇವನ ಜೀವಿತದ ವಿಚಾರವಾಗಿ ಹೆಚ್ಚು ತಿಳಿಯದು. ಇವನು ಬರೆದಿರುವ ಕಾವ್ಯದಿಂದ ಇವನನ್ನು ಪ್ರಸಿದ್ಧನೆಂದು ಹೇಳಬಹುದು. ಇವನು ಉಜ್ಜಯಿನೀ ಪ್ರಾಂತದವನೆಂದು ಕೆಲವರು ಹೇಳುವರು.

ಇವನು "**ವಾಸವದತ್ತಾ**" ಎಂಬ ಗದ್ಯಕಾವ್ಯವನ್ನು ಬರೆದು—

> ಪ್ರತ್ಯಕ್ಷರಶ್ಲೇಷಮಯಪ್ರಪಂಚ
> ವಿನ್ಯಾಸವೈದಗ್ಧ್ಯನಿಧಿಂ ಪ್ರಬಂಧಂ ।
> ಸರಸ್ವತೀದತ್ತವರಪ್ರಸಾದಾತ್
> ಚಕ್ರೇ ಸುಬಂಧುಃ ಸುಜನೈಕಬಂಧುಃ ॥

ಎಂದು ಕಾವ್ಯಪ್ರತಿಜ್ಞೆಯನ್ನು ಹೇಳಿಕೊಂಡಿರುವನು. "ಅಭಿನವಬಾಣಭಟ್ಟ ತರ್ಕಾಲಂಕಾರಭೂಷಣ"ಎಂಬ ಬಿರುದನ್ನು ಕೇರಳಭೂಪಾಲನಿಂದ ಹೊಂದಿದ ಕೃಷ್ಣಸೂರಿಯು ಇದಕ್ಕೆ ವ್ಯಾಖ್ಯಾನವನ್ನು ಬರೆದಿರುವನು. ಕವಿಯ ಪ್ರತಿಜ್ಞೆ ಯಂತೆ ಅಕ್ಷರಶ್ಲೇಷವು ಕಠಿಣತರವಾಗಿರುವುದರಿಂದ 'ವಾಸವದತ್ತಾ'ಕಾವ್ಯವು 'ಕಾದಂಬರೀ', 'ದಶಕುಮಾರಚರಿತೆ'ಗಳ ಹಾಗೆ ವಿಶೇಷಪ್ರಚಾರಕ್ಕೆ ಬಂದಿಲ್ಲ.

'ವಾಸವದತ್ತಾ' ಎಂಬ ಹೆಸರು ಪ್ರಾಚೀನಕಾಲದ ಜನರಿಗೆ ಬಹುಪ್ರಿಯ ವಾಗಿದ್ದಂತೆ ತೋರುತ್ತದೆ. ಮಹಾಕವಿಗಳಾದ ಕಾಳಿದಾಸ, ಭವಭೂತಿ ಇವರ ನಾಟಕಗಳಲ್ಲಿಯೂ ಶ್ರೀಹರ್ಷನ ರತ್ನಾವಳೀ ಮತ್ತು ಪ್ರಿಯದರ್ಶಿಕಾ ನಾಟಿಕೆಗಳಲ್ಲಿಯೂ ಕಾತ್ಯಾಯನನ ಪಾಣಿನಿವ್ಯಾಕರಣಸೂತ್ರವಾರ್ತಿಕೆಯ ಲ್ಲಿಯೂ ಗುಣಾಢ್ಯನ ಬೃಹತ್ಕಥೆಯಲ್ಲಿಯೂ ಕ್ಷೇಮೇಂದ್ರನ ಬೃಹತ್ಕಥಾ ಮಂಜರಿಯಲ್ಲಿಯೂ ವಾಸವದತ್ತೆಯ ಹೆಸರು ಕಂಡುಬರುವುದು. ಸಂಸ್ಕೃತ ಗ್ರಂಥಗಳಲ್ಲಿಯೇ ಅಲ್ಲದೆ ಮುನಿಪುಂಗವ (Alwar) ತಿರುಮಂಗೈ ಎಂಬುವರು ಬರೆದಿರುವ ತಮಿಳುಪ್ರಬಂಧಗಳಲ್ಲಿಯೂ ಕೂಡ ವಾಸವದತ್ತೆಯ ಹೆಸರಿರು ವುದು. ಸುಬಂಧುವು 'ವಾಸವದತ್ತಾ'ಎಂಬ ಹೆಸರನ್ನು ಮಾತ್ರ ತೆಗೆದುಕೊಂಡು ತನ್ನ ಕಾವ್ಯವನ್ನು ಆ ಹೆಸರಿನಿಂದಲೇ ಕರೆದಿರುವನು. ಇದು ಸ್ವಕಪೋಲ ಕಲ್ಪಿತವಾಗಿರುವುದು.

ಇವನ ಕಾವ್ಯದಲ್ಲಿ ಮೀಮಾಂಸಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಉದಾ ಹರಣೆಗಳು ಅಲ್ಲಲ್ಲಿ ದೊರೆಯುವುದರಿಂದಲೂ ಬುದ್ಧರ ಮತ್ತು ಮೀಮಾಂಸಕರ ವಾದವಿವಾದಗಳು ಪ್ರತ್ಯಕ್ಷಾನುಭವದಂತೆ ವರ್ಣಿಸಲ್ಪಟ್ಟಿರುವುದರಿಂದಲೂ ನ್ಯಾಯ(Logic)ಮತ್ತು ವ್ಯಾಕರಣದ ಉದಾಹರಣೆಗಳು ಹೇರಳವಾಗಿ ದೊರಕು ವುದರಿಂದಲೂ ಇವನು ಮೀಮಾಂಸಶಾಸ್ತ್ರಪಾರಂಗತನೂ ವೇದವಿದ್ಯಾ(Vedic Literature)ರತನೂ ಆಗಿರಬೇಕೆಂದು ತೋರುವುದು. ಆದರೆ ಇವನ ಕಾವ್ಯ ದಲ್ಲಿ ಅದ್ವೈತಮತತತ್ತ್ವವಿಚಾರಗಳಾಗಲಿ ವೇದಾಂತವಿಚಾರಗಳಾಗಲಿ ಇರು ವಂತೆ ಎಲ್ಲಿಯೂ ಕಾಣುವುದಿಲ್ಲ. ಇವನು ತನ್ನ ಕಾವ್ಯವನ್ನು ಸಕಾರಣವಾಗಿಯೂ

ಸರಸವಾಗಿಯೂ ಬರೆಯದೆ ಹಿಂದಣ ಕವಿಗಳ ಮಾರ್ಗವನ್ನತಿಕ್ರಮಿಸಿ ಸ್ವೇಚ್ಛೆಯಾಗಿ ಹೇಳಿರುವುದನ್ನೂ ಅಲ್ಲಲ್ಲಿ ತೋರಿಬರುವ ಪ್ರಣಯವಾಂಛಾ ತುರತೆಯನ್ನೂ ಹೇಗೆ ಹೇಗೆ ಹುಡುಕಿನೋಡಿದರೂ ಬೋಧಪ್ರದವಾದ ವಿಚಾರ ವಾಗಲಿ ಹೃದಯಾಕರ್ಷಣವನ್ನು ಮಾಡುವ ನೀತಿಪ್ರಸಂಗವಾಗಲಿ ಇವನ ಕಾವ್ಯದಲ್ಲಿ ಇಲ್ಲದಿರುವುದನ್ನೂ ಪ್ರಣಯಿಜನರ ಪರಸ್ಪರ ವಿನೋದಕಥಾ ಲಾಪಗಳನ್ನು ವರ್ಣಿಸುವಾಗ– "ಮಹಿಷೀಸಂಭವೋಽಪಿ ವೃಷೋತ್ಸಾದೀ" ಎಂದೂ "ಆಸನ್ನಮರಣಾಸ್ಪಿವ ಜೀವಿತೇಶಪುರಾಭಿಮುಖೀಷು" ಎಂದೂ ವಿಂಧ್ಯ ಪರ್ವತವನ್ನು ವರ್ಣಿಸುವಾಗ-"ಪ್ರವೃದ್ಧಗುಲ್ಮತಯಾರೋಗೀವ ದೃಶ್ಯಮಾನಃ" ಎಂದೂ ತಾರಾಗಣಯುಕ್ತವಾದ ಆಕಾಶವನ್ನು "ತಾಭಿಃ(ತಾರಕಾಭಿಃ)ಶ್ವಿತ್ರೀ ವವಿಯದಶೋಭತ" ಎಂದು ಹೋಲಿಸಿರುವುದನ್ನೂ ಯೋಚಿಸಿನೋಡಿದರೆ ಕವಿಯು ಕೇವಲ ಅರಸಿಕನೂ ಕವಿತಾಚಾತುರ್ಯದೂರನೂ ಕಾವ್ಯಾಭಿರುಚಿ ಯಿಲ್ಲದವನೂ ಆಗಿರಬೇಕೆಂದು ತೋರುವುದು.

**ಕಾಲವಿಚಾರ**—ಶ್ರೀಹರ್ಷವರ್ಧನ(ಶಿಲಾದಿತ್ಯ)ನ ಅಜ್ಞಾನ ಹೆಸರು ಹರ್ಷ ವಿಕ್ರಮಾದಿತ್ಯನೆಂದು ರಾಜತರಂಗಿಣಿಯಿಂದ ತಿಳಿಯಬರುತ್ತದೆ. ಹರ್ಷವಿಕ್ರ ಮಾದಿತ್ಯನ ಕಾಲದಲ್ಲಿ ಶಕರ ಹಾವಳಿಯು ಇದ್ದಿತು. ಸುಬಂಧುವು ತನ್ನ ಕಾವ್ಯದಲ್ಲಿ— "ಶಾಕ್ಯ ಇವ ರಕ್ತಾಂಶುಕಧರಃ" ಎಂದು ಅವರ ಉಡು ಪನ್ನು ನೋಡಿ ವರ್ಣಿಸಿರುವುದರಿಂದ ಶಕರ ಹಾವಳಿಯು ಕವಿಗೆ ಗೊತ್ತಿರ ಬೇಕೆಂದು ತೋರುತ್ತದೆ. ಪ್ರಸಿದ್ಧಚಾರಿತ್ರಕಕಾರನಾದ ಅಲ್‌ಬುರನಿಯು ಕೊರೂರುಯುದ್ಧವೂ ವಿಕ್ರಮಾದಿತ್ಯನ ವಿಜಯವೂ ಕ್ರಿ. ಶ. ಆರನೆಯ ಶತಮಾನ (ಕಿ. ಶ. ೫೪೪)ದಲ್ಲಾದುವೆಂದು ಹೇಳಿರುವನು. ಇದರಂತೆ ಕೊರೂರುಯುದ್ಧವು ಕ್ರಿ. ಶ. ೫೪೪ ರಲ್ಲಿ ನಡೆದುದಾದರೆ ಈ ಯುದ್ಧವು ನಡೆದ ಅನಂತರ ಹರ್ಷವಿಕ್ರ ಮಾದಿತ್ಯನು ಮೃತನಾಗಿರಬೇಕು. ಇದರಿಂದ ತನಗೆ ರಾಜಾಶ್ರಯವು ತಪ್ಪಿ ಹೋದುದನ್ನು ಇವನು ತಿಳಿದು—

> **ಸಾ ರಸವತ್ತಾ ವಿಹತಾ ನವಕಾ ವಿಲಸಂತಿ ಚರತಿ ನೋ ಕಂಕಃ ।**
> **ಸರಸೀವ ಕೀರ್ತಿಶೇಷಂ ಗತವತಿ ಭುವಿ ವಿಕ್ರಮಾದಿತ್ಯೇ ॥**

ಎಂದು ಪ್ರಲಾಪಿಸಿರಬಹುದಾಗಿದೆ. ಈ ಕಾರಣಗಳಿಂದ ಸುಬಂಧುವಿನ ಕಾಲವು ಕ್ರಿ. ಶ. ೫೪೦—೫೭೦ ರ ಮಧ್ಯಕಾಲವಿರಬೇಕಾಗಿ ಊಹಿಸಬಹುದಾಗಿದೆ.

ಮೆ. ಟಿಲಾಂಗರವರು 'ಸುಬಂಧುವು ಕುಮಾರಿಲಭಟ್ಟನಿಗೂ ಮತ್ತು ಬೌದ್ಧರಿಗೂ ನಡೆದ ಜಗಳಕಾಲದಲ್ಲಿದ್ದಿರಬೇಕೆಂದೂ ಈ ಜಗಳದ ಆರಂಭಕಾಲವು ಕ್ರಿ. ಶ. ಏಳನೆಯ ಶತಮಾನದಲ್ಲಿ ಭಾರತಪ್ರವಾಸಕ್ಕಾಗಿ ಬಂದಿದ್ದ ಚೀನಾ

ದೇಶದ ಹುಯುನ್‌ತ್ಸಾಂಗನ ಕಾಲಕ್ಕೂ ಇವನಿಗಿಂತಲೂ ಹಿಂದೆ ಬಂದಿದ್ದ ಫಾಹಿಯಾನನ ಕಾಲಕ್ಕೂ ಮಧ್ಯದಲ್ಲಿರಬೇಕೆಂತಲೂ, ಕವಿಗಳೂ ಮತ್ತು ಬೌದ್ಧಮತೋದ್ದೀಪಕರೂ ಆದ ಧರ್ಮಕೀರ್ತಿ, ವಸುಬಂಧು, ದಿಙ್ನಾಗ, ಅಸಂಗ ಮೊದಲಾದವರು ಆ ಕಾಲದಲ್ಲಿದ್ದರೆಂದೂ' ಹೇಳಿರುವರು.

ಕವಿಯು—

''ಕೇಚಿಜ್ಜೈಮಿನಿಮತಾನುಸಾರಿಣ ಇವ ತಥಾಗತಮತಧ್ವಂಸಿನಃ
ಶ್ರುತಿವಚನಮಿವ ಪರಿಹಿತದಿಗಂಬರದರ್ಶನಂ ಮೀಮಾಂಸಕದರ್ಶ
ನೇನೇವ ತಿರಸ್ಕೃತದಿಗಂಬರದರ್ಶನೇನ ರಜಸಾ ಜಜೃಂಭೇ ।''

ಎಂದು ಹೇಳಿರುವುದರಿಂದ ಈ ವಾದವು ಕ್ರಿ. ಶ. ೬ನೆಯ ಶತಮಾನದ ಪೂರ್ವಾರ್ಧದಲ್ಲಿ ನಡೆದುದಾಗಿ ಹೇಳಬಹುದಾಗಿದೆ. ಸುಬಂಧುವು ಇದಕ್ಕಿಂತಲೂ ಪೂರ್ವಭಾವಿಯಾಗಿ ಇದ್ದಂತೆ ತೋರುವುದಿಲ್ಲ. ಏಕೆಂದರೆ– ಕುಮಾರಿಲಭಟ್ಟನ ಹೊರತು ಮೀಮಾಂಸಾಸೂತ್ರಕರ್ತನಾದ ಜೈಮಿನಿಯಾಗಲಿ ಅಥವಾ ಇದರ ವ್ಯಾಖ್ಯಾನಕಾರನಾದ ಶಬರಸ್ವಾಮಿಯಾಗಲಿ ಯಾರೂ ಬೌದ್ಧರೊಡನೆ ಜಗಳವಾಡಿದಂತೆ ಕಂಡುಬರುವುದಿಲ್ಲ.

ಮಹಾಕವಿಬಾಣನು ಹರ್ಷಚರಿತದಲ್ಲಿ—

**ಕವೀನಾಮಗಲದ್ದರ್ಪೋ ನೂನಂ 'ವಾಸವದತ್ತ'ಯಾ ।**

ಎಂದು ಹೊಗಳಿರುವನು.

ಕವಿರಾಜನೆಂಬುವನು—

**ಸುಬಂಧುರ್ಬಾಣಭಟ್ಟಶ್ಚ ಕವಿರಾಜ ಇತಿ ತ್ರಯಃ ।**

ಶ್ಲೇಷಾರ್ಥಚಮತ್ಕಾರದಲ್ಲಿ ಸುಬಂಧು, ಬಾಣಭಟ್ಟ, ತಾನು(ಕವಿರಾಜ) ಈ ಮೂವರೇ ಪ್ರಸಿದ್ಧರೆಂದು ಹೇಳಿರುವನು.

ಇವನು ರಾಮಾಯಣ ಭಾರತಗಳ ಕಥೆಗಳನ್ನು ತೆಗೆದುಕೊಂಡು ''ರಾಘವಪಾಂಡವೀಯ''ಎಂಬ ಗ್ರಂಥವನ್ನು ಶ್ಲೇಷಮಯವಾಗಿ ರಚಿಸಿ ತನ್ನ ನಿಜವಾದ ಹೆಸರನ್ನು ಮರೆಮಾಚಿ ಕವಿರಾಜನೆಂದು ಹೇಳಿಕೊಂಡಿರುವನಲ್ಲದೆ ''ಸುಬಂಧುವು ಬಾಣಭಟ್ಟನಿಗಿಂತಲೂ ಪ್ರಾಚೀನನು'' ಎಂದೂ ಹೇಳಿರುವನು.

ಮಹಾಕವಿ ಬಾಣನು ಶ್ರೀಹರ್ಷವರ್ಧನ(ಶಿಲಾದಿತ್ಯನ) ಸಮಕಾಲಿಕನು. ಕ್ರಿ. ಶ. ೭ ನೆಯ ಶತಮಾನದವನು. ಇವನಿಗಿಂತಲೂ ಪೂರ್ವದವನೆಂದರೆ ಆರನೆಯ ಶತಮಾನದಲ್ಲಿದ್ದವನಾಗಿರಬೇಕು.

**ಕಥಾಸಾರಾಂಶ**—ಚಿಂತಾಮಣಿಯೆಂಬ ರಾಜನಿಗೆ ಕಂದರ್ಪಕೇತುವೆಂಬ ಮಗನಿದ್ದನು. ಅವನು ಒಂದಾನೊಂದು ದಿನ ಬೆಳಗಣಝಾಮದಲ್ಲಿ ನವ ಯೌವನಶೋಭಿತೆಯಾದ ಸುಂದರಿಯೊಬ್ಬಳನ್ನು ಸ್ವಪ್ನದಲ್ಲಿ ಕಂಡನು. ಸ್ತ್ರೀ ವ್ಯಕ್ತಿಯು ನಿಜವಾಗಿಯೂ ಇರುವುದೆಂದು ಲಾವಣ್ಯಮತ್ತತೆಯಿಂದ ಭ್ರಾಂತ ನಾಗಿ ಎಚ್ಚೆತ್ತಕೂಡಲೇ ಸ್ವಪ್ನದಲ್ಲಿ ಕಂಡ ಮನೋಹರಮೂರ್ತಿಯು ಕಾಣ ದಂತಾಗಲು ಶೋಕಾಕುಲಿತನಾಗಿ ಪುನಃ ಮಲಗಿಕೊಂಡನು. ನಿದ್ರೆಯು ಹತ್ತ ಲಿಲ್ಲ. ಚಿಂತಾತರಂಗಗಳು ಒಂದರ ಹಿಂದೆ ಒಂದು ಬರಲು ಪ್ರಾರಂಭಿಸಿದುವು. ಕೊನೆಗೆ ಯಾವುದೂ ತೋಚದೆ ಬಾಗಿಲುಗಳನ್ನು ಹಾಕಿ ಯಾರೂ ಒಳಗೆ ಬರ ದಂತೆ ಕಟ್ಟುಮಾಡಿ ಆಹಾರಾದಿಗಳನ್ನು ತೊರೆದು ಮಲಗಿಕೊಂಡನು. ಇವನ ಮಿತ್ರನಾದ ಮಕರಂದನು ಉಪಾಯಾಂತರದಿಂದ ಒಳಹೊಕ್ಕು ಕಂದರ್ಪ ಕೇತುವನ್ನು ಎಷ್ಟುವಿಧವಾಗಿ ಸಮಾಧಾನಮಾಡಿದರೂ ಫಲಕಾರಿಯಾಗದೆ ಈ ವಿಚಾರವನ್ನು ರಾಜನಿಗೂ ತಿಳುಹಿಸದೆ ಇಬ್ಬರೂ ಊರನ್ನು ಬಿಟ್ಟು ಮಾರ್ಗ ಕ್ರಮಣಮಾಡಿ ವಿಂಧ್ಯಾಟವಿಯ ಬಳಿಗೆ ಬರುವ ವೇಳೆಗೆ ರಾತ್ರಿಯಾಯಿತು. ಆಗ ಆ ವನಪ್ರಾಂತರದಲ್ಲುಳಿದು ಕಂದಮೂಲಫಲಾದಿಗಳಿಂದ ಕ್ಷುಧೆಯನ್ನಡಗಿಸಿ ಕೊಂಡು ಉದುರಿದ್ದ ಎಲೆಗಳನ್ನು ಹಾಸುಗೆಯ ಮಾಡಿ ಇಬ್ಬರೂ ಒಂದು ಮರದಡಿಯಲ್ಲಿ ಮಲಗಿಕೊಂಡರು. ಆ ಮರದ ಮೇಲೆ ಎರಡು ಗಿಳಿಗಳು ಮಾತನಾಡಿಕೊಳ್ಳುತ್ತಿದ್ದುದನ್ನು ಕಂದರ್ಪಕೇತುವು ಕೇಳಿ, ಮಿತ್ರನಾದ ಮಕರಂದನನ್ನೆಬ್ಬಿಸಿ ಇಬ್ಬರೂ ಆ ಮಾತನ್ನು ಕೇಳಲುಪಕ್ರಮಿಸಿದರು.

ಹೆಣ್ಣುಗಿಳಿ ಗಂಡುಗಿಳಿಯನ್ನು ಕುರಿತು— ಎಲೆ ವಂಚಕ! ನೀನು ಇಷ್ಟು ಹೊತ್ತಾದರೂ ಬರದೆ ಎಲ್ಲಿಗೆ ಹೋಗಿದ್ದೆ? ಇನ್ನೊಂದು ಹೆಣ್ಣುಗಿಳಿಯು ಎಲ್ಲಿ ಯಾದರೂ ಸಿಕ್ಕಿರಬಹುದು! ಎಂದು ಹೇಳಲು ಅದಕ್ಕೆ ಗಂಡುಗಿಳಿಯು— ಮೋಹನೆ! ಈ ದಿನ ಒಂದು ಚಮತ್ಕಾರದ ಕಥೆಯನ್ನು ಕೇಳಿದೆನಾದುದರಿಂದ ಇಷ್ಟು ಸಾವಕಾಶಕ್ಕೆ ಕಾರಣವಾಯಿತು ಎಂದಿತು. ಹೆಣ್ಣುಗಿಳಿಯು ಅದು ಯಾವ ಕಥೆಯೆಂದು ಬೆಸಗೊಂಡುದಕ್ಕೆ ಗಂಡುಗಿಳಿಯು ಹೇಳತೊಡಗಿತು—

"ಭಾಗೀರಥೀತೀರದಲ್ಲ 'ಕುಸುಮಪುರ'ವೆಂಬ ಪಟ್ಟಣವಿರುವುದು. ಅದನ್ನು ಶೃಂಗಾರಶೇಖರನೆಂಬ ರಾಜನು ಅನಂಗವತೀಯೆಂಬ ಭಾರ್ಯೆಯಿಂದೊಡಗೂಡಿ ಪಾಲಿಸುತ್ತಿದ್ದನು. ಅವನಿಗೆ ವಾಸವದತ್ತೆಯೆಂಬ ಒಬ್ಬಳೇ ಮಗಳಿದ್ದಳು. ವಿವಾಹಯೋಗ್ಯಳಾದ ಮಗಳಿಗೆ ಸ್ವಯಂವರ ಪದ್ಧತಿಯಂತೆ ಪಾಣಿಗ್ರಹಣ ಮಾಡ ಲೆಳಸಿ ರಾಜನು ನಾನಾಕಡೆಯಿಂದ ರಾಜಪುತ್ರರನ್ನು ಕರೆಯಿಸಿದನು. ಆ ರಾಜ ಪುತ್ರರೆಲ್ಲಾರೂ ವಾಸವದತ್ತೆಗೆ ಇಷ್ಟವಾಗದೆ ಅವಳು ಸ್ವಯಂವರಮಂಟಪ

ವನ್ನು ಬಿಟ್ಟು ಹೊರಟುಹೋಗಿ ತನ್ನ ಕೊಠಡಿಯಲ್ಲಿ ಮಲಗಿಕೊಂಡಳು. ಆಗ ರಾಜಪುತ್ರನೊಬ್ಬನು ಎದುರಿಗೆ ಬಂದು ನಿಂತಹಾಗೆ ಸ್ವಪ್ನವನ್ನು ಕಂಡಳು. ಇವನೇ ಆ "ಕಂದರ್ಪಕೇತು". ಇವನ ಸೌಂದರ್ಯಕ್ಕೆ ಮುಗ್ಧಳಾದಾರಮಣಿಯು ವಿರಹದುಃಖಾತಿರೇಕದಿಂದ ಪರಿತಪಿಸುತ್ತಿರುವುದನ್ನು ನೋಡಿ ಸಖಿಯಾದ ತಮಾಲಿಕೆಯು ಎಷ್ಟು ಉಪಚರಿಸಿದರೂ ಪ್ರಯೋಜನವಿಲ್ಲದಂತಾಗಲು ತಾನು ಕಂದರ್ಪಕೇತುವಿನ ಬಳಿಗೆ ಹೋಗಿಬರುವೆನೆಂದು ಹೇಳಿ ಹೊರಟಳು. ಆಕೆಯೊಡನೆ ನಾನೂ ಬಂದುದರಿಂದ ಇಷ್ಟು ತಡವಾಯಿತು" ಎಂದು ಹೇಳುತ್ತಿರುವುದನ್ನು ಮಕರಂದನು ಕೇಳಿ ತಮಾಲಿಕೆಯ ಬಳಿಗೆ ಹೋಗಿ ವಿಚಾರಿಸಲಾಗಿ ಅವಳು ಅತ್ಯಂತ ಸಂತೋಷದಿಂದ ವಾಸವದತ್ತೆಯು ಬರೆದುಕಳುಹಿಸಿದ್ದ ಲೇಖನವನ್ನು ಮಕರಂದನ ಕೈಯ್ಯಲ್ಲಿ ಕೊಟ್ಟಳು. ಮಕರಂದನು ತಂದುಕೊಟ್ಟ ಲೇಖನವನ್ನು ಕಂದರ್ಪಕೇತುವು ಓದಿ ಸಂತೋಷಪಟ್ಟು ತಮಾಲಿಕೆಯೊಡನೆ ವಾಸವದತ್ತೆಯ ವಿಚಾರವಾಗಿ ಪ್ರಸ್ತಾಪಿಸಿದನು. ಎರಡನೆಯ ದಿವಸ ಕಂದರ್ಪಕೇತುವು ತಮಾಲಿಕೆಯೊಡನೆ ಹೊರಟು ರಾತ್ರಿವೇಳೆಗೆ ಕುಸುಮಪುರವನ್ನು ಸೇರಿದನು. ಆನೆಯ ದಂತದಿಂದ ನಿರ್ಮಿಸಲ್ಪಟ್ಟಿರುವ ಮಹಲಿನಲ್ಲಿ ಕಂದರ್ಪಕೇತುವಿಗೂ ವಾಸವದತ್ತೆಗೂ ಪ್ರಥಮಸಂದರ್ಶನವಾಯಿತು. ತಮಾಲಿಕೆಯು ವಾಸವದತ್ತೆಯ ವಿರಹದುಃಖವನ್ನು ಕಂದರ್ಪಕೇತುವಿಗೆ ಹೇಳಿದುದಲ್ಲದೆ "ವಾಸವದತ್ತೆಯು ಋತುಮತಿಯಾಗಿ ಇದುವರಿವಿಗೂ ವಿವಾಹವಿಲ್ಲದೆ ಇರುವುದರಿಂದ ಇವಳ ತಂದೆಯು ಲೋಕಾಪವಾದಕ್ಕಂಜಿ ವಿದ್ಯಾಧರರಾಜನಾದ ವೀರಕೇತುವಿನ ಕುಮಾರ ಪುಷ್ಪಕೇತುವಿನೊಡನೆ ಇವಳಿಗೆ ನಾಳೆಯೇ ವಿವಾಹ ಜರಗಿಸಲು ನಿಶ್ಚಯಿಸಿಕೊಂಡಿರುವನು. ಇದನ್ನು ಕೇಳಿ ವಾಸವದತ್ತೆಯು ಅಗ್ನಿಪ್ರವೇಶವನ್ನು ಮಾಡಿಬಿಡುವುದಾಗಿ ಸಂಕಲ್ಪಿಸಿಕೊಂಡಿರುವಳು. ಇಂತಹ ಅನಾಹುತಕ್ಕೆ ಮುಂಚೆ ತಾವು ಬಂದುದರಿಂದ ಅಪಾಯವು ದೂರವಾಯಿತು" ಎಂದೂ ಹೇಳಿದಳು. ಅನಂತರ ಕಂದರ್ಪಕೇತುವು ಮಿತ್ರನಾದ ಮಕರಂದನನ್ನು ಒಂಟಿಯಾಗಿ ಕಾಡಿನಲ್ಲಿ ಬಿಟ್ಟುಬಂದಿರುವೆನೆಂದು ಹೇಳಿ ತಮಾಲಿಕೆಯನ್ನು ಅಲ್ಲಿಯೇ ಬಿಟ್ಟು ವಾಸವದತ್ತೆಯೊಡನೆ ಮನೋಜವವೆಂಬ ದಿವ್ಯಾಶ್ವವನ್ನೇರಿ ವಿಂಧ್ಯಪರ್ವತದ ಬಳಿಯಲ್ಲಿರುವ ಅರಣ್ಯದಲ್ಲಿಳಿದನು. ಆ ರಾತ್ರಿ ಒಂದು ಲತಾಗೃಹದಲ್ಲಿ ಇಬ್ಬರೂ ಜಾಗೃತರಾಗಿಯೇ ಕಾಲಹರಣವನ್ನು ಮಾಡಿದರು. ಕೊನೆಗೆ ಈರ್ವರಿಗೂ ಒಂದೇಸಲ ನಿದ್ರೆಯುಹತ್ತಿತು. ಹಾಗೆಯೇ ಆದಿವಸವೂ ಕಳೆಯಿತು. ಎರಡನೆಯ ದಿವಸದ ಮಧ್ಯಾಹ್ನ ಕಂದರ್ಪಕೇತುವು ಎಚ್ಚೆತ್ತು ನೋಡುವಾಗ ವಾಸವದತ್ತೆಯು ಇರಲಿಲ್ಲ. ಅದನ್ನು ನೋಡಿ ಕಂದರ್ಪಕೇತುವು ದುಃಖಿಸಿ ದಕ್ಷಿಣದಿಕ್ಕಿನಲ್ಲಿರುವ ಒಂದಾನೊಂದು ಸಮುದ್ರದ ತಟದಲ್ಲಿ ನಿಂತು

"ಹಾಯ್! ಸುಂದರಾಂಗಿಯಾದ ವಾಸವದತ್ತೆಯನ್ನಗಲಿ ನಾನೊಬ್ಬನೇ ಬದುಕಿ ಪ್ರಯೋಜನವೇನು? ಇದಕ್ಕಿಂತಲೂ ಮರಣವೇ ಶ್ರೇಯಸ್ಕರವು" ಎಂದು ನಿಶ್ಚಯಿಸಿ ಸಮುದ್ರದಲ್ಲಿ ಬೀಳುವಷ್ಟರಲ್ಲಿಯೇ "ಎಲೈ ಕಂದರ್ಪಕೇತು! ನೀನು ಸಮುದ್ರದಲ್ಲಿ ಬಿದ್ದು ಸಾಯದಿರು; ನಿನ್ನ ಪ್ರಣಯಿನಿಯಾದ ವಾಸವ ದತ್ತೆಯು ನಿನಗೆ ಪುನಃ ದೊರಕುವಳು" ಎಂದು ಆಕಾಶವಾಣಿಯಾದುದನ್ನು ಕೇಳಿ ವಾಸವದತ್ತೆಯು ದೊರಕುವಳೆಂಬಾಶೆಯಿಂದ ಎಷ್ಟೋ ತಿಂಗಳು ಗಳವರೆಗೂ ಅರಣ್ಯವೆಲ್ಲವನ್ನೂ ತಿರುಗಿದನು. ವಸಂತರ್ತುವು ಹೋಗಿ ವರ್ಷಾ ಕಾಲವು ಒದಗಿತಾದರೂ ಆಕಾಶವಾಣಿಯ ಮಾತು ಫಲಿಸಲಿಲ್ಲ. ಹೀಗೆಯೇ ಒಂದಾನೊಂದು ದಿವಸ ಶರದೃತುವಿನಲ್ಲಿ ಆ ಅರಣ್ಯಮಧ್ಯದಲ್ಲಿ ತಿರುಗುತ್ತಿದ್ದಾಗ ಅಲ್ಲಿದ್ದ ಒಂದಾನೊಂದು ಶಿಲಾಪ್ರತಿಮೆಯಮೇಲೆ ಕೈಯಿಟ್ಟನು. ಕೂಡಲೇ ಪ್ರತಿಮೆಯ ಶಿಲಾರೂಪವು ಮಾಯವಾಗಿ ನಿಜವಾದ ವಾಸವದತ್ತೆಯು ಎದುರಿಗೆ ನಿಂತಳು. ಕಂದರ್ಪಕೇತುವು ಇದನ್ನು ನೋಡಿ ಚಕಿತನಾಗಿ ವಾಸವದತ್ತೆಯನ್ನು ಕುರಿತು "ರಮಣಿ! ನಿನ್ನ ಶಿಲಾರೂಪವೃತ್ತಾಂತವೇನು? ಎಂದು ಕೇಳಿದುದಕ್ಕೆ ವಾಸವದತ್ತೆಯು–"ಪ್ರಾಣಾಧಿಕ! ನಾವಿಬ್ಬರೂ ಏಕಕಾಲದಲ್ಲಿ ಮಲಗಿಕೊಂಡೆ ವಷ್ಟೆ; ಮೊದಲು ನನಗೆ ಎಚ್ಚರವಾಯಿತು. ಬಳಲಿರುವ ತಮಗೆ ಎಲ್ಲಿಯಾದರೂ ಕೊಂಚ ಕಂದಮೂಲಫಲಗಳನ್ನು ತರಬೇಕೆಂದು ಗಿಡಗಳ ಮಧ್ಯದಲ್ಲಿ ಹೋದೆನು. ಎದುರಿಗೆ ಒಂದು ಜನಸೈನ್ಯವು ಬರುತ್ತಿತ್ತು. ಅದನ್ನು ನೋಡಿ ಆ ಸೈನ್ಯವು ನಿಮ್ಮ ತಂದೆಯಿಂದ ಕಳುಹಿಸಲ್ಪಟ್ಟುದೋ ಅಥವಾ ನನ್ನ ತಂದೆಯದೋ ಯಾವುದೆಂದು ಯೋಚಿಸುತ್ತಿರುವಷ್ಟರಲ್ಲಿ ಕಿರಾತನಾಯಕನೊಬ್ಬನು ನನ್ನನ್ನು ನೋಡಿ ಓಡಿ ಬಂದನು. ಸೈನ್ಯಾಧಿಕಾರಿಯೂ ನನ್ನನ್ನು ನೋಡಿ ಓಡಿಬಂದನು. ನನಗಾಗಿ ಇಬ್ಬರೂ ಜಗಳವಾಡಿದರು. ಇಂತಹ ಸಮಯವನ್ನೇ ನೋಡಿಕೊಂಡಿದ್ದ ನಾನು ಅಲ್ಲಿರುವ ಮುನಿಯೊಬ್ಬನ ಪರ್ಣಕುಟೀರದಲ್ಲ ಅವಿತುಕೊಂಡೆನು. ಆದರೂ ಗ್ರಹಚಾರವು ನನ್ನನ್ನು ಬಿಡಲಿಲ್ಲ. ಸೈನಿಕರು ನನ್ನನ್ನು ಹುಡುಕುತ್ತ ಬಂದು ಆ ಪರ್ಣಕುಟೀರವನ್ನು ಧ್ವಂಸಮಾಡಿದರು. ಮುನಿಯು ಇದನ್ನು ತಿಳಿದು ಕಡುಕೋಪದಿಂದ ನನ್ನನ್ನು ಶಿಲೆಯಾಗೆಂದು ಶಪಿಸಿದನು. ಅನಂತರ ನಾನು ದುಃಖಿಸಿ ಆ ಮುನಿಯನ್ನು ಕುರಿತು ನನಗೆ ಶಾಪವಿಮೋಚನವು ಯಾವಾಗ? ನಾನು ಭಯಗ್ರಸ್ತಳಾಗಿ ಆಶ್ರಮವನ್ನು ಹೊಕ್ಕೆನು. ನಿರಪ ರಾಧಿಯಾದ ನನ್ನಲ್ಲಿ ದಯಾಶೀಲರಾಗಬೇಕು ಎಂದು ಅಂಗಲಾಚಿ ಪ್ರಾರ್ಥಿಸಿ ಕೊಂಡೆನು. ಮುನಿಯು ದಯದಿಂದ "ಎಲೆ ಭದ್ರೆ! ನಿನ್ನ ವಲ್ಲಭನ ಹಸ್ತವು ನಿನ್ನ ತಲೆಯ ಮೇಲೆ ಇಡಲ್ಪಟ್ಟಾಗ ಶಾಪವಿಮೋಚನವಾಗುವುದು" ಎಂದು ತನ್ನ ವೃತ್ತಾಂತವನ್ನು ಹೇಳಿದಳು. ಆ ಸಮಯಕ್ಕೆ ಸರಿಯಾಗಿ ಕಂದರ್ಪಕೇತು

ವನ್ನು ಹುಡುಕುತ್ತ ಮಿತ್ರನಾದ ಮಕರಂದನೂ ಅಲ್ಲಿಗೆ ಬಂದು ಸೇರಿದನು. ಅನಂತರ ಎಲ್ಲರೂ ಸೇರಿ ಕಂದರ್ಪಕೇತುವಿನ ರಾಜಧಾನಿಗೆ ಹೋಗಿ ಸುಖ ವಾಗಿದ್ದರು.

ಇಷ್ಟಾದರೂ, ಕಥಾನಾಯಕನ ರಾಜಧಾನಿಯು ಯಾವುದೆಂಬ ವಿಚಾ ರವೇ ಇಲ್ಲ. ಕಂದರ್ಪಕೇತುವು ಕುಸುಮಪುರಕ್ಕೆ ಹೋಗಿ ಪುನಃ ಬಂದನೆಂದು ಹೇಳಿರುವನೇ ಹೊರತು ಯಾವ ಮಾರ್ಗ? ಯಾವ ದೇಶಕ್ಕೆ ಸೇರಿದುದೆಂಬುದನ್ನು ಹೇಳಿರುವುದಿಲ್ಲ. ಆದರೆ ವಿಂಧ್ಯಪರ್ವತದ ನಡುವೆ ಹೋದನೆಂಬುದನ್ನು ಮಾತ್ರ ಹೇಳಿರುವನು. ಕುಸುಮಪುರಕ್ಕೂ ವಿಂಧ್ಯಾದ್ರಿಗೂ ಇರುವ ದೂರವು ವರ್ಣಿಸಲ್ಪಟ್ಟಿರುವದಾದರೂ ಸಮಂಜಸವಾಗಿ ಬರೆದಿರುವಂತೆ ತೋರುವುದಿಲ್ಲ. ಕಂದರ್ಪಕೇತುವು ವಾಸವದತ್ತೆಯನ್ನು ಕಾಣದೆ ಸಮುದ್ರದ ಬಳಿಗೆ ಹೋದ ನೆಂದು ಬರೆದಿರುವನೇ ವಿನಾ ಆ ಸಮುದ್ರದ ಹೆಸರೇನು? ಎಲ್ಲಿರುವುದೆಂಬ ವಿಷಯವನ್ನು ಸೂಚಿಸಿರುವುದಿಲ್ಲ. ಸುಬಂಧುವು ಹೇಳುವ ಸಮುದ್ರಕ್ಕೆ ನರ್ಮ ದಾ, ಚಂದನ, ಕರತೋಯವೆಂಬ ನದಿಗಳು ಸೇರುವುದಾಗಿ ಹೇಳಿರುವನು. ಈ ನದಿಗಳು ಈಗ ಯಾವುವೆಂಬುದು ತಿಳಿಯದು. ಇದರಲ್ಲಿ ಕೇವಲ ಕವಿತಾವಿಚಾರ ವಿರುವದೇ ಹೊರತು ಹೆಚ್ಚು ಭಾಷಣಗಳಿರುವಂತೆ ತೋರುವುದಿಲ್ಲ. ಕಂದರ್ಪ ಕೇತು ಮತ್ತು ವಾಸವದತ್ತೆಯರಿಬ್ಬರೂ ಲತಾಕುಂಜದಲ್ಲಿದ್ದು ಒಬ್ಬರೊಡನೊ ಬ್ಬರು ಮಾತನಾಡದೆ ರಾತ್ರಿಯೆಲ್ಲಾ ಕಳೆದು ಬೆಳಗಿನ ಝಾಮದಲ್ಲಿ ಈರ್ವರೂ ಒಂದೇ ಸಲ ನಿದ್ರೆಹೋದರೆಂದು ವರ್ಣಿಸಿರುವುದು ಹಾಸ್ಯಾಸ್ಪದವಾಗಿರುವುದು! ಗಾಂಧರ್ವವಿವಾಹಾನಂತರ ಈರ್ವರೂ ವಿಂಧ್ಯಾರಣ್ಯದ ಮನೋಹರವಾದ ಲತಾಕುಂಜದಲ್ಲಿ, ಬೆಳದಿಂಗಳ ರಾತ್ರಿಯಲ್ಲಿ, ಏಕಾಂತದಲ್ಲಿ, ಕೇವಲ ಸಮೀಪದಲ್ಲಿ ಕುಳಿತುಕೊಂಡು ರಾತ್ರಿಯನ್ನು ಮೂಕರ ಹಾಗೆ ಕಳೆದರೆಂಬುದು ಎಂತಹ ಸೋಜಿಗ! ಒಂದು ವೇಳೆ ವಾಸವದತ್ತೆಯು ಸ್ತ್ರೀಸಹಜವಾದ ಲಜ್ಜೆಯಿಂದ ಮಾತನಾಡಲಿಲ್ಲವೆಂದರೂ ಸಲ್ಲುವುದು. ಸ್ವಪ್ನಾಂಗನೆಯನ್ನು ನೋಡಿ ಮೋಹಿಸಿ ವಿರಹಾತುರನಾಗಿದ್ದ ಕಂದರ್ಪಕೇತುವು ಅದೇ ರಮಣಿಯು ಮೂರ್ತಿವತ್ತಾಗಿ ಎದುರಿನಲ್ಲಿರುವಾಗ ಈ ರೀತಿ ಮೌನವಾಗಿದ್ದನೆಂಬ ವರ್ಣನೆಯು ಎಷ್ಟು ಅಸಂಭ ವವಾಗಿರುವುದು! ಮಾಲತೀಮಾಧವದ ೮ನೆಯ ಅಂಕದಲ್ಲಿ ಹೇಳಿರುವ ಒಂದು ವಾಕ್ಯವು ಕೊಂಚಮಟ್ಟಿಗೆ ಇದರಂತೆಯೇ ಹೋಲುವುದಾದರೂ ಇದರಷ್ಟು ನೀರಸವಾಗಿರುವುದಿಲ್ಲ. (ಮಾಲತಿಯು ಮಾತನಾಡಿದಳು ಮಾಧವನು ಬಹಳ ವಾಗಿ ಮಾತನಾಡಲಿಲ್ಲ) ಈ ಪ್ರಸಂಗವು ಎಷ್ಟು ಮನೋಹರವಾಗಿ ವರ್ಣಿತವಾ ಗಿರುವುದೆಂಬುದನ್ನು ಓದಿನೋಡತಕ್ಕುದಾಗಿರುವುದು. ಶೃಂಗಾರರಸಕ್ಕೆ ಹೇಗೆ

ಮೆರುಗುಕೊಟ್ಟಿರುವನೆಂಬುದು ತಿಳಿಯುವುದು. ವಾಸವದತ್ತೆಯಲ್ಲಿ ಅಂತಹ ವಿಚಾರವೇ ಇಲ್ಲ. ಅಂತಹ ಭವ್ಯವಾದ, ರಮ್ಯವಾದ, ಚಂದ್ರಿಕೆಯನ್ನು ಬರಿಯ ನಿದ್ರೆಯಿಂದಲೇ ಕಳೆಯುವುದಾದರೆ ರಾತ್ರಿಯೆಲ್ಲವೂ ಎಚ್ಚರವಾಗಿದ್ದು ಬೆಳಗಿನ ಝಾಮದಲ್ಲಿ ಮಲಗಿಕೊಳ್ಳುವ ಬದಲು ಹೊತ್ತಿಗೆ ಮುಂಚೆ ಏಕೆ ಮಲಗಕೂಡದಾಗಿತ್ತು? ಇಬ್ಬರೂ ಒಂದೇ ಸಲ ಮಲಗುವುದು ಹೇಗೆ? ದಣುವೂ ಹಸಿವೂ ಆಗಿರಬಹುದೆ? ಆದರೆ ಕುದುರೆಯ ಹೆಸರು ಮನೋಜವ? ಮನೋವೇಗದಂತೆ ವೇಗವನ್ನುಳ್ಳದ್ದು. ವಿಂಧ್ಯಪರ್ವತದಿಂದ ಕುಸುಮಪುರಕ್ಕೆ ಎಷ್ಟು ಸಲ ಹತ್ತಿ ಇಳಿಯಬಹುದು? ಕಾಲವೆಷ್ಟು ಬೇಕಾಗುವುದು? ಈ ವಿಚಾರಗಳಾವುದೂ ನಮ್ಮ ಕವಿಗೆ ತೋರಲಿಲ್ಲವೆನ್ನಬೇಕಾಗಿದೆ. ಕವಿಸಮಯಾಚಾರದಂತೆ ಸಂಭೋಗ ಶೃಂಗಾರ ಮತ್ತು ವಿಪ್ರಲಂಭಶೃಂಗಾರಗಳನ್ನು ತನ್ನ ಕಾವ್ಯದಲ್ಲಿ ತರಲೇ ಬೇಕೆಂದು ತಂದಿರುವುದು ಹೊರತು ಕಥಾಸಂವಿಧಾನಚತುರತೆಯು ಮಾರ್ಪಡುವುದೆಂದು ಯೋಚಿಸಿದಂತೆ ತೋರುವುದಿಲ್ಲ. ಇದರಲ್ಲಿನ ಸಂಭೋಗ ಶೃಂಗಾರವು ಬಹೂಜ್ಜ್ವಲವಾಗಿರುವುದು. ಅಲ್ಲದೆ ನಾಯಕ-ನಾಯಕಿಯರ ವಿಚಾರವನ್ನು ಹೇಗೆ ಹೇಗೋ ಮಾಡಿ ವಿಯೋಗವಮಾಡಿರುವನು. ಇವನ ಕಾವ್ಯದಲ್ಲಿ ಅಸಂಭಾವಿತ ಮತ್ತು ಅತ್ಯುಕ್ತಿ ವಿಷಯಗಳು ಹೇರಳವಾಗಿರುವುವು. ನಾಯಕ-ನಾಯಕಿಯರು ಪರಸ್ಪರ ನೋಡಿದಾಗ ಮೊದಲು ಆನಂದವಿಮ್ಮಡಿಸಿ ಮೂರ್ಛೆಹೋಗುವಿಕೆ, ತಮಾಲಿಕೆಯು ಕಂದರ್ಪಕೇತುವಿನ ಬಳಿಗೆ ಬಂದು ತನ್ನ ಗೆಳತಿಯ ವಿರಹವನ್ನು ಸ್ವಲ್ಪದರಲ್ಲಿ ವರ್ಣನೆಯನ್ನು ಮಾಡುವೆನೆಂದು ಹೇಳುವುದು, ಸಮುದ್ರವು ಮಸಿಯಾಗಿ, ಬ್ರಹ್ಮನು ಲೇಖಕನಾಗಿ ಶೇಷನು ವರ್ಣಿಸುವುದಾದರೆ ಎಷ್ಟೋ ಸಾವಿರಾರು ಯುಗಗಳಾದರೂ ಮುಗಿಯದೆಂದು ಹೇಳುವದು, ಇಂತಹ ನಿರ್ಬಂಧರಾಹಿತ್ಯೋಕ್ತಿಯಿಂದ ತುಂಬಿರುವುದು. ಸ್ವಯಂವರದ ರಾತ್ರಿ ವಾಸವದತ್ತೆಗೆ ಸ್ವಪ್ನವಾದುದರಲ್ಲಿ ವರನ ಊರು, ರೂಪು ಮುಂತಾದುವುಗಳನ್ನು ಪ್ರತ್ಯಕ್ಷವಾಗಿ ನೋಡಿದಂತೆ ತಿಳಿಯ ಹೇಳುವದು ಶುದ್ಧ ಅಸಂಭಾವಿತವಾಗಿರುವುದು. ಉಷಾಸ್ವಪ್ನವಾದಂತಾಯಿತೆ? ಅದೂ ಇಲ್ಲ. ಇವನು ಕಲ್ಪನಾವಿಚಾರದಲ್ಲಿ ಚತುರನಾದರೂ ಕಥಾಜೋಡಣೆಯ ಚತುರತೆಯಲ್ಲಿ ಹಿಂದಾಗಿರುವನು. ಕಥೆಯನ್ನು ಸಂಕ್ಷೇಪವಮಾಡಿ ವರ್ಣನೆಯನ್ನು ಬಹು ದೊಡ್ಡದಾಗಿ ಮಾಡಿರುವನು. ಮಕರಂದನು ತನ್ನ ಗೆಳೆಯನಾದ ಕಂದರ್ಪಕೇತುವಿನ ವಿರಹಾವಸ್ಥೆಯನ್ನು ನೋಡಿ ಸಜ್ಜನರು ದುಃಖಿಸುವರೆಂದೂ ಖಲರು ಆನಂದಿಸುವರೆಂದೂ ಹೇಳಿರುವನು. ಗ್ರಂಥಾರಂಭದಲ್ಲಿ ದುರ್ಜನನಿಂದೆಯನ್ನು ೩-೪ ಆರ್ಯಾವೃತ್ತದಲ್ಲಿ ಹೇಳಿದುದು ಸಾಲದೆ ಸಂಬಂಧವಿಲ್ಲದ ದುರ್ಜನರ ನಿಂದೆಯನ್ನು ಹೆಚ್ಚಾಗಿ ಬರೆದು ತೋರಿಸಿರು

ವನು. ಮಕರಂದನು ಬಂದಕೂಡಲೇ ಎಲ್ಲರೂ ಚಿಂತಾಮಣಿನಗರಕ್ಕೆ ಹೋಗಿ ಸಂತೋಷಚಿತ್ತರಾಗಿದ್ದರೆಂದು ಹೇಳಿ ಕಥೆಯನ್ನು ಮುಗಿಸಿರುವುದು ಅಸಂಬದ್ಧವಾಗಿ ತೋರುವುದು. ಹೇಗೆಂದರೆ ಮಕರಂದನು ಇಲ್ಲಿಗೆ ಬಂದುದು ಹೇಗೆ? ಕಂದರ್ಪಕೇತುವು ಎಷ್ಟೋ ದಿವಸಗಳು ಅದೇ ಅರಣ್ಯದಲ್ಲಿ ಅಲೆಯುತ್ತಿದ್ದರೂ ಗೊತ್ತಾಗದ ಬಗೆ ಹೇಗೆ? ಹಾಗೆ ಕಾಕತಾಳೀಯದಂತೆ ಪರಸ್ಪರ ಸೇರುವುದಾಗಿದ್ದರೆ ಕೊಂಚ ಮಾತುಕಥೆಯಾದರೂ ನಡೆಯಬೇಕಾಗಿತ್ತಲ್ಲವೆ? ಇವರಿಬ್ಬರೂ ಸ್ನೇಹಿತರು. ಒಂದೇ ಕಡೆಯಲ್ಲಿರುವವರು. ಹೀಗೆ ಇದ್ದರೂ ಇವರ ವಿಚಾರದಲ್ಲಿ ಕವಿಯು ಯಾವುದನ್ನೂ ಹೇಳದೆ ತಟಸ್ಥನಾಗಿರುವನು. ಇದಲ್ಲದೆ ಸುಬಂಧುವು ಪ್ರಧಾನಚರಿತವನ್ನು ಬಿಟ್ಟು ಇಲ್ಲದ ಯಾವುದೋ ವಿಷಯವನ್ನು ಸೇರಿಸಿಕೊಂಡು ಬರೆದಿರುವುದರಿಂದ ಇವನ ಗ್ರಂಥವು ದೋಷಾಸ್ಪದ, ನಿಂದಾಸ್ಪದ, ಹಾಸ್ಯಾಸ್ಪದವಾಗಿರುವುದು. ಗ್ರಂಥದಲ್ಲಿ ಪಾತ್ರಗಳನ್ನು ಬಹು ಕಡಿಮೆಯಾಗಿ ತೋರಿಸಿ ಆಯಾ ಪಾತ್ರದವರು ಹೇಳುವಷ್ಟು ವಾಕ್ಯಗಳಿಗೂ ಮತ್ತು ಕಾಲಗಳಿಗೂ ಸಾಕಾದಷ್ಟು ಅವಕಾಶವನ್ನು ಕಲ್ಪಿಸಿರುವುದಿಲ್ಲ. ಎಲ್ಲಿಯೋ ಕೊಂಚ ವಿರಾಮವನ್ನು ಕಲ್ಪಿಸಿದಂತೆ ಮಾಡಿ ನಾಯಕಿಯ ವರ್ಣನವನ್ನು ಹೆಚ್ಚಾಗಿ ಮಾಡಿರುವನು. ಹೆಚ್ಚೇಕೆ! ಗಾರುಡಿಗನು ತನ್ನ ಕೈಚಳಕದಿಂದ ತನ್ನ ಚೀಲದಲ್ಲಿರುವ ಯಾವಯಾವುದೋ ಸಾಮಾನುಗಳನ್ನು ತೆಗೆದು ಹೊರಗೆ ಹಾಕಿ ಪ್ರೇಕ್ಷಕರನ್ನು ಸ್ತಂಭೀಭೂತರನ್ನಾಗಿ ಮಾಡುವಂತೆ ನಮ್ಮ ಸುಬಂಧುವು ವಾಸವದತ್ತ ಎಂಬ ಕಾವ್ಯದಿಂದ ಯಾವಯಾವುದೋ ವರ್ಣನೆಗಳ ಮತ್ತು ಶಬ್ದಗಳ ಅಡಕುಗಳನ್ನು ಹೊರಗೆ ಚೆಲ್ಲಿ ವಾಚಕರಾದ ನಮ್ಮನ್ನು ಸ್ತಂಭೀಭೂತರನ್ನಾಗಿ ಮಾಡಿರುವನೆಂದರೆ ಹೆಚ್ಚಾಗದು. ಹೆಸರುಮಾತ್ರಕ್ಕೆ ಕಥಾನಾಯಕನಿರುವನು. ನಾಯಕ-ನಾಯಕಿಯರಿಗೆ ಮಾತನಾಡಲು ಅವಕಾಶಕೊಡದೆ ಮೂಕರಂತೆ ರಾತ್ರಿಯನ್ನು ಕಳೆದುದಾಗಿ ತೋರಿಸಿರುವನು. ಸ್ನೇಹಿತನಾದ ಮಕರಂದನು ಮಾತನಾಡುವ ಸಂಭವವಿದ್ದರೂ ಅದಕ್ಕೆ ಅವಕಾಶ ಕೊಡದೆ ವಿಷಯಾಂತರ ಮಾಡಿರುವನು. ವಾಸವದತ್ತೆಯು ಯುದ್ಧಸ್ಥಳದಿಂದ ದೂರವಾಗಿದ್ದರೂ, ಸಹಜಭೀರುವಾದ ಆಕೆಯು ನೋಡುವ ಪ್ರಸಂಗವಿಲ್ಲದಿದ್ದರೂ, ತಾನಾಗಿಯೇ ಅನಾವಶ್ಯಕವಾದ ಯುದ್ಧಪ್ರಸಂಗವನ್ನು ಕಲ್ಪಿಸಿ ಅವಳ ಮೂಲಕ ಕಥೆಯನ್ನು ಹೇಳಿಸಿರುವನು. ಇವನ ಕಥೆಯು ಚಿಕ್ಕದಾದುದರಿಂದ ಯಾವ ಯಾವ ರಸಪೋಷಣೆಯನ್ನು ಮಾಡಿರುವನೆಂದು ಹೇಳಲಾಗುವುದಿಲ್ಲ. ಕವಿಯು ತನ್ನ ಕಾವ್ಯದಲ್ಲಿ ನವರಸಗಳನ್ನೂ ಹೇಳಿತೋರಿಸಬೇಕೆಂಬ ಆಸೆಯಿಂದ ಮನಬಂದಂತೆ ಬರೆದು

ಕೊಂಡಿರುವನು. ನಾಯಕ-ನಾಯಕಿಯರ ಸಲ್ಲಾಪಸಮಾರಂಭದಲ್ಲಿ ಕರುಣ ರಸವನ್ನೂ ಪ್ರತಾಪವರ್ಣನದಲ್ಲಿ ವೀರರಸವನ್ನೂ ಯುದ್ಧವರ್ಣನದಲ್ಲಿ ರೌದ್ರ ಮತ್ತು ಭಯಾನಕರಸಗಳನ್ನೂ ಕಥಾಭಾಗದಲ್ಲೆಲ್ಲಾ ಅದ್ಭುತರಸವನ್ನೂ ಶ್ಮಶಾನವರ್ಣನ (ಕಂದರ್ಪಕೇತುವು ವಾಸವದತ್ತೆಯೊಡನೆ ಅಶ್ವಾರೂಢನಾಗಿ ವಿಂಧ್ಯಾಟವಿಯ ಕಡೆ ಹೋದ ಸಂದರ್ಭ)ದಲ್ಲಿ ಭೀಭತ್ಸರಸವನ್ನೂ ಹೇಳಿರುವನು. ನಾಯಕ–ನಾಯಕಿಯರು ಗಾಂಧರ್ವವಿವಾಹಾನಂತರ ಶೃಂಗಾರೋತ್ಸವ ಕುತೂಹಲರಾಗಿ ಹೊರಟಿದ್ದಾಗ ಶ್ಮಶಾನ ದರ್ಶನವನ್ನು ಮಾಡಿಸುವುದು ರಸೋದ್ದೀಪಕವೆಂದು ಸುಬಂಧುವು ತಿಳಿದಿರಬಹುದು. ಮನೋಜವೆಂಬ ಕುದುರೆಯ ಮೇಲೆ ಕುಳಿತು ಕಣ್ಣುಮುಚ್ಚಿ ಕಣ್ಣುತೆರೆಯುವಷ್ಟರಲ್ಲಿ ಕುಸುಮಪುರಿಯಿಂದ ವಿಂಧ್ಯಾಟವಿಗೆ ಬಂದರೆಂದು ವರ್ಣಿಸುವಾಗ ಕಂದರ್ಪಕೇತುವಿಗೆ ಶ್ಮಶಾನವನ್ನು ನೋಡುವುದಕ್ಕೆ ಕಾಲವು ಸಿಕ್ಕಿದುದು ಹೇಗೆ? ಭೀಭತ್ಸರಸವು ಬರದಿದ್ದರೆ ನಮ್ಮ ಕವಿಯ ಆಶಯವು ಪೂರ್ತಿಯಾಗುತ್ತಿರಲಿಲ್ಲವಾಗಿ ತೋರುತ್ತದೆ. ಇದೇ ಭೀಭತ್ಸರಸವಿಚಾರವನ್ನು ಮಾಲತೀ-ಮಾಧವದಲ್ಲಿನ ಭೀಭತ್ಸರಸಕ್ಕೆ ಹೋಲಿಸಿನೋಡಿದರೆ ಪರಸ್ಪರ ಅಜಗಜಾಂತರವಿರುವುದು. ಸಹಜರಸಿಕನಾದವನು ಮೋಹಿಸುವ ಭಾಗವು ಇವನ ಕಾವ್ಯದಲ್ಲಿ ಅತ್ಯಲ್ಪವಾಗಿರುವುದು. ಇಂತಹ ವಿಲಕ್ಷಣ ಬರವಣಿಗೆಯನ್ನು ಗ್ರಂಥದಲ್ಲಿ ಕ್ರಮವಾಗಿ ವಾಚಕರಿಗೆ ತೋರಿಸಿಕೊಡುವೆವು.

(೧) ಕಂದರ್ಪಕೇತುವಿಕ್ರಮವರ್ಣನ:—

—"ಯಸ್ಯ ಚ ಸಮರಭುವಿ ಭುಜದಂಡೇನ ಕೋದಂಡಂ ಕೋದಂಡೇನ
ಶರಾಃ ಶರೈರರಿಶಿರಸ್ತೇನಾಪಿ ಭೂಮಂಡಲಂ ತೇನಚಾನನುಭೂತ
ಪೂರ್ವೋನಾಯಕೋ-ನಾಯಕೇನಕೀರ್ತಿಃ ಕೀರ್ತ್ಯಾ ಚ ಸಪ್ತ
ಸಾಗರಾಃ ಸಾಗರೈಃ ಕೃತಯುಗಾದಿ ರಾಜಚರಿತ ಸ್ಮರಣಮನೇನ
ಚ ಸ್ಥೈರ್ಯಮಮುನಾ ಚ ಪ್ರತಿಕ್ಷಣಮಾಶ್ಚರ್ಯಮಾಸಾದಿತಂ" ।

ಇದೇ ಅಭಿಪ್ರಾಯಸೂಚಕವಾದ ಶ್ಲೋಕವು ಭರ್ತೃಹರಿಯ ಶೃಂಗಾರ ಶತಕದಲ್ಲಿ ಹೀಗಿರುವುದು.

ಸಂಗ್ರಾಮಾಂಗಣಮಾಗತೇನ ಭವತಾ ಚಾಪೇ ಸಮಾರೋಪಿತೇ
ದೇವಾಕರ್ಣಯ ಯೇನ ಯೇನ ಸಹಸಾ ಯದ್ಯತ್ಸಮಾಸಾದಿತಂ ।
ಕೋದಂಡೇನ ಶರಾಃ ಶರೈರರಿಶಿರಸ್ತೇನಾಪಿ ಭೂಮಂಡಲಂ
ತೇನ ತ್ವಂ ಭವತಾ ಚ ಕೀರ್ತಿರತುಲಾ ಕೀರ್ತ್ಯಾ ಚ ಲೋಕತ್ರಯಂ ॥

(೨) ನಾಯಿಕಾವರ್ಣನ:—

—"ಭಾಸ್ವತಾಲಂಕಾರೇಣ ಚಂದ್ರೇಣ ವದನಮಂಡಲೇನ ಲೋಹಿತೇನಾಧರಪಲ್ಲವೇನ ಸೌಮ್ಯೇನ ದರ್ಶನೇನ ಗುರುಣಾನಿತಂಬಬಿಂಬೇನ ವಿಕಚೇನ ನೇತ್ರಕಮಲೇನ ಶನೈಶ್ಚರೇಣ ಪಾದೇನ ತಮಸಾ ಕೇಶಪಾಶೇನ ಗ್ರಹಮಯೀಮಿವ..........ಕನ್ಯಕಾಮಷ್ಟಾದಶವರ್ಷದೇಶೀಯಾಮಪಶ್ಯತ್ ಸ್ವಪ್ನೇ" ।

"ಗುರುಣಾ ಸ್ತನಭಾರೇಣ ಮುಖಚಂದ್ರೇಣ ಭಾಸ್ವತಾ ।
ಶನೈಶ್ಚರಾಭ್ಯಾಂ ಪಾದಾಭ್ಯಾಂ ರೇಜೇ ಗ್ರಹಮಯೀವ ಸಾ ॥

—ಭರ್ತೃಹರಿ ಶೃಂಗಾರಶತಕ

(೩) ಖಲಜನರ ವಾರ್ತಾಪ್ರಹರಣಾನಂತರ ಹೇಳಿರುವ ಅಚೇತನಪದಾರ್ಥಗಳಲ್ಲಿರುವ ಮೈತ್ರಿಯ ವರ್ಣನೆ—

—"ತಥಾ ಹಿ ಮಾಧುರ್ಯಶೈತ್ಯ ಶುಚಿತ್ವ ತಂತಾಪಶಾಂತಿಭಿಃ ಪಯಃ ಪಯ ಇವೇತಿ ಮಿತ್ರತಾಮುಪಗತಸ್ಯ ದುಗ್ಧಸ್ಯ ಸತ್ಸಂಗಮಾದ್ಸ್ವರ್ಧಿತಸ್ಯ ಕ್ವಾಥೇನ ಮಯ್ಯೇವ ಪರೋಯುಕ್ತಃ ಕ್ಷಯ ಇತಿ ವಿಚಿಂತ್ಯೇವ ವಾರಿಣಾಪಿ ಕ್ಷೀಯತೇ"

ಕ್ಷೀರೇಣಾತ್ಮಗತೋದಕಾಯ ಹಿ ಗುಣಾ ದತ್ತಾಃ ಪುರಾ ತೇಽಖಿಲಾಃ
ಕ್ಷೀರೇ ತಾಪಮವೇಕ್ಷ್ಯ ತೇನ ಪಯಸಾ ಹ್ಯಾತ್ಮಾ ಕೃಶಾನೌ ಹುತಃ ।
ಗಂತುಂ ಪಾವಕಮುನ್ಮನಸ್ತದಭವದ್ದೃಷ್ಟ್ವಾ ತು ಮಿತ್ರಾಪದಂ
ಯುಕ್ತಂ ತೇನ ಜಲೇನ ಶಾಮ್ಯತಿ ಸತಾಂ ಮೈತ್ರೀ ಪುನಸ್ತ್ವೀದೃಶೀ ॥

—ಭರ್ತೃಹರಿ ನೀತಿಶತಕ

(೪) ವಸಂತ ವರ್ಣನ—

—"ವೃಂತವಿನಿರ್ಗತವಿಚಕಿಲಕಲಿಕಾತಲೇ ಮಂಜು ಗುಂಜನ್ಮಧುಕರೋ ಮಕರಕೇತೋಸ್ತ್ರಿಭುವನವಿಜಯಪ್ರಯಾಣಶಂಖಧ್ವನಿಮಿವ ಚಕಾರ"

ಮಾಲತೀ ಮುಕುಳೇ ಭಾತಿ ಗುಂಜನ್ಮತ್ತಮಧುವ್ರತಃ ।
ಪ್ರಯಾಣೇ ಪಂಚಬಾಣಸ್ಯ ಶಂಖಮಾಪೂರಯನ್ನಿವ ॥

—ಮಾಲತೀ-ಮಾಧವ

(೫) ಸ್ವಯಂವರದ ದಿವಸ ರಾತ್ರಿ ಸ್ವಪ್ನದಲ್ಲಿ ಕಂದರ್ಪಕೇತುವನ್ನು ನೋಡಿದ ವಾಸವದತ್ತೆಯ ವಿರಹಾವಸ್ಥಾವರ್ಣನ—

—"ಶೂನ್ಯಕರಣಗ್ರಾಮೇ ಹೃದಯೇ ಲಿಖಿತಮಿವೋತ್ಕೀರ್ಣಮಿವ ಪ್ರತ್ಯುಪ್ತಮಿವ....ಆತ್ಮಾನಮಧಿಷ್ಠಿತಮಿವ ಕಂದರ್ಪಕೇತುಂ ಮನ್ಯಮಾನಾ—"

**ಲೀನೇವ ಪ್ರತಿಬಿಂಬಿತೇವ ಲಿಖಿತೇವೋತ್ಕೀರ್ಣರೂಪೇವ ಚ**
**ಪ್ರತ್ಯುಪ್ತೇವ ಚ ವಜ್ರಲೇಪಘಟಿತೇವಾಂತರ್ನಿಖಾತೇವ ಚ ।**
**ಸಾ ನಶ್ಚೇತಸಿ ಕೀಲಿತೇವ ವಿಶಿಖೈಶ್ಚೇತೋಭುವಃ ಪಂಚಭಿಃ**
**ಚಿಂತಾಸಂತತಿತಂತುಜಾಲನಿಬಿಡಸ್ಯೂತೇವ ಲಗ್ನಾ ಪ್ರಿಯಾ ॥**

**—ಮಾಲತೀ-ಮಾಧವ**

(೬) ವಾಸವದತ್ತಾಭವನವರ್ಣನ--

ಕ್ವಚಿದತಿಗಂಭೀರ ಮುರಜರವಾಹೂತಸಾನಂದನರ್ತಿತನೀಲಕಂಠಂ. . . .

**ಸಾನಂದಂ ನಂದಿಹಸ್ತಾ ಹತಮುರಜರವಾಹೂತ ಕೌಮಾರ ಬರ್ಹಿ ।**
**ತ್ರಾಸಾನ್ನಾಸಾಗ್ರರಂಧ್ರಂ ವಿಶತಿ ಫಣಿಪತೌ ಭೋಗಸಂಕೋಚಭಾಜಿ ॥**

**—ಮಾಲತೀ-ಮಾಧವ ನಾಂದಿ**

(೭) ಯುದ್ಧವರ್ಣನ—

—"ಕರ್ಣಾಭ್ಯಾಂ ಶ್ರುತಪರಪರಿವಾದಾಭ್ಯಾಂ ಖಲೋದಯಸಾಧುವಿಪ
ತ್ತಿಸಾಕ್ಷಿಭ್ಯಾಮಕ್ಷಿಭ್ಯಾಂ ಮೂರ್ಧ್ನಾಚಾಸ್ಥಾನೇಪಿ ನಮತಾ
ವಿಮುಕ್ತೋಹಮಿತಿ ಹರ್ಷಾದಿವ ನನರ್ತ ಚಿರಂ ಕಬಂಧಃ" ।

**ಕಂಧರಾಂ ಸಮುಪಹಾಯ ಕಂ ಧರಾಂ ಪ್ರಾಪ್ಯಸಂಯತಿ ಜಹಾಸ ಕಸ್ಯಚಿತ್ ।**
**ಮಾಂಕಿಲಾನಮಯತಃ ಸ್ವಪೂರ್ತಯೇ ದುರ್ಭರಾತ್ಕಿಮುದರಾದ್ವಿಯೋಗತಃ ॥**

ಇವನ ಕಾವ್ಯದಲ್ಲಿ ಕ್ಲಿಷ್ಟತೆ ಮತ್ತು ದುರ್ಬೋಧತೆ ಇವುಗಳೇ ಹೆಚ್ಚಾ
ರುವುವು. ಪ್ರತ್ಯಕ್ಷರಶ್ಲೇಷ ಮತ್ತು ಪ್ರಬಂಧವಿನ್ಯಾಸವೈದಗ್ಧ್ಯನಿಧಿತ್ವ
ನ್ನು ತೋರಿಸಿ ಅರ್ಥವನ್ನು ವಿಂಗಡಿಸಿ ಹೇಳುವ ವಿಚಾರದಲ್ಲಿ ಎಂತಹ ಘನ
ಕಾಕಾರನೂ ಕೂಡ ಸಾಕುಸಾಕಾಗಿ ಹೋಗಿಬಿಡುವನು. ಉದಾಹರಣೆ
ಾಗಿ ಸ್ವಯಂವರಕ್ಕಾಗಿ ಬಂದ ರಾಜಪುತ್ರರ ಪರಿಹಾಸರೂಪವರ್ಣನವನ್ನು
ೋಡಬಹುದು.

ತತ್ರ ಚ ಕೇಚಿತ್ ಕಲಾಂಕುರಾ ಇವ. . . . . . . . ತಾನೇಕೈಕಶಃ
ಸಮವಲೋಕ್ಯ ವಿರಕ್ತಹೃದಯಾಸೌ ಕುಮಾರಿಕಾ ತಸ್ಮಾತ್ಕರ್ಣ
ಮಂಶಾದವತತಾರ ।

ಚಂದ್ರೋದಯಾನಂತರ ಅಭಿಸಾರಿಕೆಯರು ತಮ್ಮ ತಮ್ಮ ವಲ್ಲಭರಿಗೆ
ೇಳಿ ಕಳುಹಿಸುವ ದೂತಿಯರ ವಕ್ರೋಕ್ತಿ—

ಅವಸ್ತ್ರೀಕೃತಮಾತ್ಮಾನಂ. . . . . . . . ಹಾರಿಣಾಸ್ತನಕುಂಭನೇ ಹರಿಣಾ
ಹರಿಣಾಕ್ಷಿರುಚಿಹಾರಿಣಾ ಚಕ್ಷುಷಾ ಹಾರಿಣಾ ।

ಶ್ಲೇಷಾರ್ಥವೂ ಕಟುತರಶಬ್ದಪ್ರಯೋಗವೂ ಹೆಚ್ಚಾಗಿ ಇರಬೇಕೆಂದು
ಬಯಸುವ ಜನರು ಈಗಣಕಾಲದಲ್ಲಿ ಅತಿವಿರಳರು. ಹಾಗೆಯೇ ಇರಬೇಕೆನ್ನು

ವವರಿಗೆ ಮೇಲೆ ಹೇಳಿದ ಎರಡು ಉದಾಹರಣೆಗಳು ಸಾಕಾಗಿರುವುವು.

ಇವನ ಕಾವ್ಯದಲ್ಲಿ ಕಂಡುಬರುವ ಅಶ್ಲೀಲತೆ ಮತ್ತು ಗ್ರಾಮ್ಯ ಇವಕ್ಕೆ ಉದಾಹರಣೆ:—

ವಸಂತಕಾಲ ವರ್ಣನ—

"ಪ್ರತಿದಿಶಮಶ್ಲೀಲಪ್ರಾಯಗೀಯಮಾನಗೀತಶ್ರವಣೋತ್ಸುಕಪಿದ್ಗ ಜನಪ್ರಾರಬ್ಧಚರ್ಚರೀಗೀತಾಕರ್ಣನಮುಹ್ಯಮಾನಾನೇಕಪಥಿಕ ಶತ"........

(ಮಾರ್ಗಸ್ಥರು ಅಶ್ಲೀಲತ್ವದ ಹಾಡುಗಳನ್ನು ಕೇಳಿ ದಾರಿನಡೆಯುವ ದನ್ನು ಬಿಟ್ಟು ಮುಗ್ಧರಾಗಿ ನಿಲ್ಲುವರು.)

ಸಂಧ್ಯಾಕಾಲವರ್ಣನ—

"ಕಾಮುಕಜನಾನುಬಧ್ಯಮಾನದಾಸೀಜನವಿವಿಧಾಶ್ಲೀಲವಚನಶ್ರುತಿ ವಿರಸೀಕೃತ ಸಂಧ್ಯಾವಂದನೋಪವಿಷ್ಟೇಷು ಶಿಷ್ಟೇಷು" . . .

(ಕಾಮಕೇಳಿಗಾಗಿ ಸೂಳೆಯರನ್ನು ಹಿಂಬಾಲಿಸುವ ದುರ್ಜನರೊಡನೆ ಆಡುವ ಗ್ರಾಮ್ಯಭಾಷೆಯನ್ನು ಸಾಯಂಸಂಧ್ಯೆಗಾಗಿ ಕುಳಿತಿರುವ ಶಿಷ್ಟರು ಕೇಳಿ ವಿರಸರಾಗುವರು.)

ಇಷ್ಟರಿಂದಲೇ ಇವನ ಗ್ರಂಥವನ್ನು ನಿಕೃಷ್ಟವಾಗಿ ಕಂಡು ಕಾದಂಬರಿಯೇ ಮೊದಲಾದ ಉತ್ಕೃಷ್ಟ ಗದ್ಯಕಾವ್ಯಗಳನ್ನೋದಿ ರಸಾಸ್ವಾದನಮಾಡುವ ಆನಂದದಲ್ಲಿ, ಗದ್ಯಕಾವ್ಯವನ್ನು ಮೊದಲು ಬರೆದು ದಾರಿಯನ್ನು ತೋರಿಸಿರುವ ಮಹಾಕವಿ ಸುಬಂಧುವನ್ನು ಮರೆಯಬಾರದು. ಇದರಲ್ಲಿ ಕೆಲವು ಕಡೆ ಬಹು ಸೊಗಸಾದ ಚಮತ್ಕಾರವರ್ಣನಗಳೂ ಇರುವುವು. ಖಲರವರ್ಣನೆಯು ಮೂರ್ತಿವತ್ತಾಗಿರುವುದು. ಮಲಯಾನಿಲವರ್ಣನೆಯೂ, ನಾಯಿಕೆಯ ಮದನಾವಸ್ಥೆಯ ವರ್ಣನವೂ ವಿಂಧ್ಯಾಟವಿಯ ಬಳಿ ಸಿಂಹದ ವರ್ಣನವೂ ಅನುಪಮವಾಗಿರುವುವು.

ಮಹಾಕವಿ ಬಾಣನು ಸುಬಂಧುವನ್ನು ಹೊಗಳಿರುವುದು ಸಾಲದೆ ತನ್ನ ಕಾದಂಬರಿಯಲ್ಲಿ ಒಂದು ಕಡೆ "ಉತ್ಕೃಷ್ಟಗದ್ಯಮಿವ ವಿವಿಧವರ್ಣಶ್ರೇಣೀ ಪ್ರತಿಪಾದ್ಯಮಾನಾನೇಕಾನೂನನವಾರ್ಥಸಂಚಯಂ" ಎಂದು ಹೇಳಿಕೊಂಡಿರುವನು. ಇಲ್ಲಿ ಉತ್ಕೃಷ್ಟಗದ್ಯವೆಂದರೆ ಸುಬಂಧುವಿನ ವಾಸವದತ್ತೆಯೆಂತಲೇ ಬೋಧೆಯಾಗುವುದು. ಕಾದಂಬರಿಯಲ್ಲಿ ಕಂಡುಬರುವ ಚಂದ್ರ, ಸೂರ್ಯ, ಋತು

ವರ್ಣನಾದಿಗಳನ್ನೂ ಕಥಾಸಂವಿಧಾನದಲ್ಲಿನ ಕೆಲವು ಸಂಗತಿಗಳನ್ನೂ ಸಮ್ಯಕ್ ದೃಷ್ಟಿಯಿಂದ ನೋಡಿದರೆ ಬಾಣನು ವಾಸವದತ್ತಾನುಕರಣವನ್ನು ಮಾಡಿರ ಬಹುದಾಗಿ ತೋರುತ್ತದೆ. ಆದರೂ ಕಾದಂಬರಿಯ ಸೌಂದರ್ಯಭರದ ಮುಂದೆ ವಾಸವದತ್ತೆಯು ರಾಹುಗ್ರಸ್ತಕಲಾನಿಧಿಯಂತಾಗಿರುವುದು. ಏಕೆಂದರೆ, ಬಾಣನು ಪ್ರೌಢ ಮತ್ತು ಕೋಮಲವರ್ಣರಚನೆ, ಚಮತ್ಕಾರೋಪಯುಕ್ತ ಶ್ಲೇಷಗಳನ್ನು ಮಾತ್ರವೇ ತೆಗೆದುಕೊಂಡು ಅರಸಿಕತ್ವ, ನಿರಂತರ ಪ್ರಾಸರಚನ ಅಸಮಂಜಸ ಕ್ಲಿಷ್ಟತಾದೋಷಗಳನ್ನು ದೂರಮಾಡಿರುವನು.

ಸುಬಂಧುವಿನ ವಾಸವದತ್ತೆಯಲ್ಲಿ ಕಂಡುಬರುವ ಸುಂದರವಾದ ಉದಾಹರಣೆಗಳು:—

ವಾಗ್ದೇವತೆಯನ್ನು ಸ್ತುತಿಸಿ ಕವಿಮಹಿಮಾನುವರ್ಣನ—

**ಕರಬದರಸದೃಶಮಖಿಲಂ**
**ಭುವನತಲಂ ಯತ್ಪ್ರಸಾದತಃ ಕವಯಃ ।**
**ಪಶ್ಯಂತಿ ಸೂಕ್ಷ್ಮಮತಯ**
**ಸ್ಸಾ ಜಯತಿ ಸರಸ್ವತೀದೇವೀ ॥**

ಉತ್ಕೃಷ್ಟಪದರಚನೆ ಮತ್ತು ರಾಮಣೀಯಕತೆಗಾಗಿ—

**ಅವಿದಿತಗುಣಾಪಿ ಸತ್ಕವಿ**
**ಭಣಿತಿಃ ಕರ್ಣೇಷು ವಮತಿ ಮಧುಧಾರಾಂ ।**
**ಅನಧಿಗತಪರಿಮಳಾಪಿ ಹಿ**
**ಹರತಿ ದೃಶಮ್ಮಾಲತೀ ಮಾಲಾ ॥**

ಆರ್ಯಾಶ್ಲೋಕ—

**ಸಾ ರಸವತ್ತಾ ವಿಹತಾ**
**ನವಕಾವಿಲಸಂತಿ ಚರತಿ ನೋ ಕಂಕಃ ।**
**ಸರಸೀವ ಕೀರ್ತಿಶೇಷಂ**
**ಗತವತಿ ಭುವಿ ವಿಕ್ರಮಾದಿತ್ಯೇ ॥**

ಸಜ್ಜನಪ್ರಶಂಸಾ—

**ಭವತಿ ಸುಭಗತ್ವಮಧಿಕಂ**
**ವಿಸ್ತಾರಿತಪರಗುಣಸ್ಯ ಸುಜನಸ್ಯ ।**
**ವಹತಿ ವಿಕಾಸಿತಕುಮುದೋ**
**ದ್ವಿಗುಣರುಚಿಂ ಹಿಮಕರೋದ್ಯೋತಃ ॥**

ಖಲನಿಂದಾ—

**ಅತಿಮಲಿನೇ ಕರ್ತವ್ಯೇ**
**ಭವತಿ ಖಲಾನಾಮತೀವ ನಿಪುಣಾ ಧೀಃ ।**

ತಿಮಿರೇ ಹಿ ಕೌಶಿಕಾನಾಂ
ರೂಪಂ ಪ್ರತಿಪದ್ಯತೇ ಚಕ್ಷುಃ (ದೃಷ್ಟಿಃ) ||
ವಿಧ್ವಸ್ತಪರಗುಣಾನಾಂ
ಭವತಿ ಖಲಾನಾಮತೀವ ಮಲಿನತ್ವಂ |
ಅಂತರಿತ ಶಶಿರುಚಾಮಪಿ
ಸಲಿಲಮುಚಾಂ ಮಲಿನಿಮಾಭ್ಯಧಿಕಃ ||*

ಹಸ್ತ ಇವ ಭೂತಿಮಲಿನೋ
ಯಥಾ ಯಥಾ ಲಂಘಯತಿ ಖಲಸ್ಸುಜನಂ |
ದರ್ಪಣಮಿವ ತಂ ಕುರುತೇ
ತಥಾ ತಥಾ ನಿರ್ಮಲಚ್ಛಾಯಂ ||

ಸಂಧ್ಯಾಶೋಭಾವರ್ಣನ, ನಕ್ಷತ್ರವರ್ಣನ—

—ಕ್ಷಣೇನ ಚ ಸಂಧ್ಯಾತಾಂಡವಾಡಂಬರೋಚ್ಛಲಿತಮಹಾನಟಜಟಾಜೂಟಕೂಟಕುಟಿಲವಿವರ್ತಿತಜಹ್ನುಕನ್ಯಾವಾರಿಧಾರಾಬಿಂದವ ಇವ ವಿಕೀರ್ಣಾಃ ದುರ್ಧರಧರಣಿಭಾರಭರಭುಗ್ನಭೀಮದಿಙ್ಮತ್ತಮಾತಙ್ಗಮಂಡಲಕರಪರಿಮುಕ್ತಶೀಕರಚ್ಛಟಾ ಇವ ಗಗನಮಹಾಸಾರಃ ಕುಮುದಕಾನನಸಂದೇಹದಾಯಿನ್ಯಃ ........ ಜಗತ್ರಯವಿಜಯವಿನಿರ್ಗತಸ್ಯ ಮಕರಕೇತೋಃ ರತಿಕರತಲವಿಕೀರ್ಣಲಾಜಾ ಇವ........ ವ್ಯೋಮಲಕ್ಷ್ಮೀಹಾರ ಮುಕ್ತಾನಿಕರಾ ಇವ ........ತಿಮಿರೋದ್ಗಮ ಧೂಮಧೂಮಲಸಂಧ್ಯಾನಲ ಪರಿತಪ್ತ ಗಗನಮಹಾಸ್ಥಲೀ ಕಟಾಹಭೃಜ್ಯಮಾನಲಾಜಾನುಕಾರಿಣ್ಯ ಇವ ತಾರಕಾ ವ್ಯರಾಜಂತ |

ಮಿತ್ರನಾದ ಮಕರಂದನು ಕಂದರ್ಪಕೇತುವಿನೊಡಗೂಡಿ ವಿಂಧ್ಯಾಟವಿಯಲ್ಲಿ ಒರುತ್ತಿರುವಾಗ ಅಲ್ಲಿ ಒಂದು ಸಿಂಹವನ್ನು ಕಂಡು ಕಂದರ್ಪಕೇತುವನ್ನು ಕುರಿತು ಹೇಳುತ್ತಾನೆ. ಗೆಳೆಯ! ಕಂದರ್ಪಕೇತು!! ಅತ್ತನೋಡು!!!

ಪಶ್ಯೋದಂಚದವಾಂಚದಂಚಿತವಪುಃ ಪಶ್ಚಾರ್ಧಪೂರ್ವಾರ್ಧಭಾಕ್
ಸ್ತಬ್ಧೋತ್ತಾನಿತಪೃಷ್ಠನಿಷ್ಠಿತಮನಾಗ್ಭುಗ್ನಾಗ್ರಲಾಂಗೂಲಭೃತ್ |

---

* Envy will merit, as its shade pursue;
But like a shadow, proves the substance true.
For envied wit, like Sol eclipsed, makes known.
The opposing body's grossness, not its own.

Pope:—Essay on Criticism.

**ದಂಷ್ಟ್ರಾಕೋಟಿವಿಶಂಕಟಾಸ್ಯಕುಹರಃ ಕುರ್ವನ್ ಸಟಾಮುತ್ಕಟಾ**
**ಮುತ್ಕರ್ಣಃ ಕುರುತೇ ಕ್ರಮಂ ಕರಿಪತೌ ಕ್ರೂರಾಕೃತಿಃ ಕೇಸರೀ ॥**

ಅಂದವಾದ ದೇಹದ ಮುಂಭಾಗವನ್ನೆತ್ತಿ ಹಿಂಭಾಗವನ್ನು ತಗ್ಗಿಸಿ ಬೆನ್ನ ಮೇಲೆ ನಿಶ್ಚಲವಾಗಿ ನಿಂತು ಸ್ವಲ್ಪ ಬಾಗಿರುವ ಬಾಲದಿಂದ ಕೂಡಿ ಗುಹೆಯಂತೆ ತೆರೆದ ಬಾಯಿಂದ ಹೊರಗಾಣುವ ದಂಷ್ಟ್ರಾಂಕುರಗಳಿಂದ ಕ್ರೂರಾಕಾರವಾಗಿ ಕಾಣುವ ಸಿಂಹವು ಕಿವಿಯನ್ನು ನೆಟ್ಟಗೆಮಾಡಿ ಕೇಸರಗಳನ್ನು ಬಿತ್ತರಿಸಿ ಸಲಗನ ಮೇಲೆ ಹಾಯುವ ರೀತಿಯು ಎಷ್ಟು ಸುಂದರವಾಗಿ ಕಾಣುವುದು!

ಮತ್ತು—

**ಉತ್ಕರ್ಣೋಯಮುಕೂಂಡಚಂಡಿಮಪಟುಃ ಸ್ಫಾರಸ್ಫುರತ್ಕೇಸರಃ**
**ಕ್ರೂರಾಕಾರಕರಾಲವಕ್ತ್ರವಿಕಟಸ್ತಬ್ಧೋರ್ಧ್ವಲಾಂಗೂಲಭೃತ್ ।**
**ಚಿತ್ರೇಣಾಪಿ ನ ಶಕ್ಯತೇಭಿಲಿಖಿತುಂ ಸರ್ವಾಂಗಸಂಕೋಚನಾ**
**ಚ್ಚೀತ್ಕುರ್ವದ್ಗಿರಿಕುಂಜಕುಂಜರಶಿರಃ ಕುಂಭಸ್ಥಲಸ್ಥೋ ಹರಿಃ ॥**

ಕಂಠವನ್ನು ದೀರ್ಘಮಾಡಿ ಸ್ವಾಭಾವಿಕವಾದ ಕ್ರೂರತನದಿಂದ ನಿಷ್ಠುರವಾಗಿ ಒತ್ತಾಗಿ ಬಿದ್ದಿರುವ ಕೇಸರಗಳಿಂದ ಕೂಡಿದ ಕ್ರೂರಾಕಾರಕರಾಳ ಮುಖದಿಂದ ಆರ್ಭಟಿಸುತ್ತ ವೇದನೆಯನ್ನು ಸಹಿಸಲಾರದೆ ಕಿರಿಚುತ್ತಿರುವ ಕುಂಜರದ ಕುಂಭಸ್ಥಲದ ಮೇಲೆ ಸಂಕುಚಿತಾಂಗದಿಂದ ಕುಳಿತುಕೊಂಡಿರುವ ಸಿಂಹವು ಅತ್ಯದ್ಭುತವಾಗಿ ಕಾಣುತ್ತಿರುವುದು. ಅಹಹ! ಇಂತಹ ದೃಶ್ಯವನ್ನು ಚಿತ್ರದಲ್ಲಿ ಬರೆಯುವುದು ಕೂಡ ಅಸಾಧ್ಯವೇ ಸರಿ!



## ಭಾ ರ ವಿ

ಇವನು ಬ್ರಾಹ್ಮಣನೂ ಪಾಣಿನ್ಯಾದಿ ವ್ಯಾಕರಣಶಾಸ್ತ್ರಪಾರಂಗತನೂ ನೀತಿಶಾಸ್ತ್ರವಿಶಾರದನೂ ರಾಜತಂತ್ರಕೋವಿದನೂ ಆಗಿದ್ದುದಾಗಿ ಇವನ ಕಾವ್ಯದಿಂದ ತಿಳಿಯಬರುವುದು. ಇವನು

**ಉತ್ಫುಲ್ಲಸ್ಥಲನಳಿನೀವನಾದಮುಷ್ಮಾತ್**
**ಉದ್ಧೂತಸ್ಸರಸಿಜಸಂಭವಃ ಪರಾಗಃ ।**
**ವಾತ್ಯಾಭಿರ್ವಿಯತಿ ವಿವರ್ತಿತಸ್ಸಮಂತಾ**
**ದಾಧತ್ತೇ ಕನಕಮಯಾತಪತ್ರಲಕ್ಷ್ಮೀಂ ॥**

ಎಂದುಹೇಳಿರುವುದರಿಂದ ಇವನನ್ನು '**ಛತ್ರಭಾರವಿ**'ಯೆಂದೂ ಕರೆಯುವರು. ಇವನು **ಕಿರಾತಾರ್ಜುನೀಯ**ವೆಂಬ ಕಾವ್ಯವನ್ನು ಬರೆದಿರುವನು.

ಇವನ ವಿಚಾರವಾಗಿ ಜನಜನಿತವಾಗಿ ರೂಢಿಯಲ್ಲಿ ಬಂದಿರುವ ಮನೋರಂಜಕ ಕಥೆಯೊಂದಿರುವುದು. ಅದು ನೀತಿಬೋಧಕವಾದುದರಿಂದ ಇಲ್ಲಿ ಬರೆಯಲ್ಪಟ್ಟಿದೆ.

ಭಾರವಿಯು ಚಿಕ್ಕತನದಲ್ಲಿಯೇ ವ್ಯಾಕರಣಾದಿ ಸಕಲಶಾಸ್ತ್ರಸಂಪನ್ನನಾಗಿ ಕವಿತಾನೈಪುಣ್ಯತೆಯನ್ನು ಹೊಂದಿ ಕವಿತೆಯನ್ನು ಮಾಡುತ್ತಿದ್ದಾಗ ಇವನ ಕವಿತಾಮಾಧುರ್ಯವನ್ನನುಭವಿಸಿದ ಪಂಡಿತರು ಭಾರವಿಯ ತಂದೆಯ ಬಳಿಗೆ ಬಂದು ಭಾರವಿಯ ಕವಿತ್ವದ ವಿಚಾರವಾಗಿ ಪ್ರಶಂಸಿಸುತ್ತಿದ್ದರು. ಆಗ ತಂದೆಯು ಆ ಸಂತೋಷವನ್ನು ಹೊರಪಡಿಸದೆ "ಏನೋ! ಏನುಕವಿತ್ವವೋ' ಇನ್ನೂ ಹುಡುಗ, . . . ಅವನಿಗೆ ಕವಿತಾರಹಸ್ಯವು ಏನುತಾನೇ ಗೊತ್ತು" ಎಂದು ಹೇಳಿ ಕಳುಹಿಸುತ್ತಿದ್ದನು. ಇದನ್ನು ಭಾರವಿಯು ಕೇಳಿ ತನ್ನ ವಿದ್ಯಾಕೌಶಲದ ವಿಚಾರದಲ್ಲಿ ತಂದೆಯು ಈರ್ಷ್ಯಾಪರನಾಗಿರುವನೆಂದು ನಿಶ್ಚಯಿಸಿ ಅರಿಷಡ್ವರ್ಗಾಧೀನನಾಗಿ ಅವನನ್ನು ಕೊಂದ ಹೊರತು ತನಗೆ ಪ್ರಾಶಸ್ತ್ಯ ಉಂಟಾಗದೆಂದು ತಿಳಿದು ಒಂದಾನೊಂದು ದಿವಸ ತನ್ನ ತಂದೆಯು ಭೋಜನಕ್ಕೆ ಕುಳಿತುಕೊಳ್ಳುವ ಸ್ಥಳಕ್ಕೆ ಸರಿಯಾಗಿದ್ದ ದೂಲದಮೇಲೆ ಏರಿ ಒಂದು ದೊಡ್ಡ ಪೇಸುವಕಲ್ಲಿನ ಹೋಳನ್ನು ಇಟ್ಟುಕೊಂಡು ಕುಳಿತು ಅದನ್ನು ತಂದೆಯ ತಲೆಯ ಮೇಲೆ ಎತ್ತಿ ಹಾಕಲು ಸಮಯವನ್ನು ನಿರೀಕ್ಷಿಸುತ್ತಿದ್ದನು. ತಂದೆಯು ಎಂದಿನಂತೆ ಭೋಜನಕ್ಕೆ ಕುಳಿತಾಗ ಭಾರವಿಯ ತಾಯಿಯು ಗಂಡನನ್ನು ಕುರಿತು ನಾಥ! ನಾನು ಕೇಳುವ ವಿಚಾರದಲ್ಲಿ ಭ್ರಾಂತರಾಗಬಾರದು! ನಮ್ಮ ಹುಡುಗ ಭಾರವಿಯ ವಿದ್ಯಾಕೌಶಲವನ್ನು ಕುರಿತು ಪಂಡಿತರು ನಿಮ್ಮ ಬಳಿ ಹೊಗಳುವಾಗ ನೀವು ಸಂತೋಷಪಡುವುದಕ್ಕೆ ಬದಲು ಆ ಹೊಗಳಿಕೆಯನ್ನು ಕೇಳಲು ಮನವಿಲ್ಲದವರಂತೆ ಹೇಳಿ ಕಳುಹಿಸುವುದು ಏಕೆ? ಎಂದು ಕೇಳಲು ತಂದೆಯು ಕೋಮಲೆ! ನಮ್ಮ ಭಾರವಿಯ ಕವಿತಾಸಾಮರ್ಥ್ಯವು ನನಗೆ ತಿಳಿಯದೆಂದೆಣಿಸುವೆಯಾ? ಅವನು ಮಹಾವಿದ್ಯಾವಂತನೆನ್ನುವುದಕ್ಕೆ ಯಾವ ಸಂದೇಹವೂ ಇರದು. ನಮ್ಮ ಹುಡುಗನ ವಿದ್ಯಾವೈದುಷ್ಯದ ವಿಷಯವಾಗಿ ಇತರರು ಹೊಗಳಿ ಸಂತೋಷಿಸುವರಾದರೂ ಅವರ ಹೊಗಳಿಕೆಗೆ ನಾವೂ ಉಬ್ಬಿ ಹೊಗಳುವುದಾದರೆ ಅವನಿಗೆ ಅಶ್ರೇಯಸ್ಸನ್ನೇ ಕೋರಿದಂತಾಗುವುದು. ಆದುದರಿಂದ ಹಾಗೆ ಉದಾಸೀನತೆಯಿಂದಿರುವೆನೇ ಹೊರತು ಮಾತ್ಸರ್ಯದಿಂದಾಗಲಿ, ಅವನಿಗೆ ತಿಳಿಯದೆಂದಾಗಲಿ, ಹಾಗೆ ಹೇಳುವುದಿಲ್ಲ ಎಂದನು. ತಂದೆಯನ್ನು ಕೊಲ್ಲಲುದ್ಯುಕ್ತನಾಗಿ ಮೇಲೆ ಕುಳಿತಿದ್ದ ಭಾರವಿಯು ಇದೆಲ್ಲವನ್ನೂ ಕೇಳಿ ತನ್ನ ಅವಿಜ್ಞತೆಗೆ ಪಶ್ಚಾತ್ತಾಪಪಟ್ಟವನಾಗಿ ಬೇರೊಂದು

ಮಾರ್ಗದಿಂದ ತಂದೆಯ ಬಳಿಗೆ ಬಂದು ನಮಸ್ಕರಿಸಿ ತಂದೆಯೆ! ಹಿರಿಯನೂ, ಜ್ಞಾತನೂ ಆದ ಜನ್ಮದಾತನಿಗೆ ವಿಚಾರಹೀನತೆಯಿಂದ ಸಾವನ್ನು ಕೋರುವವನಿಗೆ ಏನು ಶಿಕ್ಷೆ? ಎಂದು ಕೇಳಲು ತಂದೆಯು ಕುಮಾರ! ಅಂತಹ ಮನುಷ್ಯನಿಗೆ ಆರುತಿಂಗಳು ಶ್ವಶುರಗೃಹ (ಹೆಣ್ಣುಕೊಟ್ಟ ಅತ್ತೆಯ ಮನೆ) ವಾಸವು ಸಾಕು ಎಂದನು. ಭಾರವಿಯು ಇದನ್ನು ಕೇಳಿ ತನ್ನ ನೀಚಕಾರ್ಯಕ್ಕೆ ಎಂತಹ ಸೂಕ್ಷ್ಮದಂಡನೆ! ಎಂದುಕೊಂಡು ಮರುಮಾತನಾಡದೆ ಮಾತಾಪಿತೃಗಳಿಗೆ ನಮಸ್ಕರಿಸಿ ತಾನು ಯೋಚಿಸಿಕೊಂಡಿದ್ದ ದುಷ್ಟಪ್ರಯತ್ನವನ್ನು ಎಲ್ಲರಿಗೂ ತಿಳುಹಿ ಕ್ಷಮೆಯನ್ನು ಪ್ರಾರ್ಥಿಸಿ ಅನಂತರ ಸತಿಯೊಡನೆ ಶ್ವಶುರಗೃಹವನ್ನು ಕುರಿತು ಹೊರಟುಹೋದನು. ಎಂದೂ ಬಾರದಿದ್ದ ವಿದ್ಯಾವಂತನಾದ ಅಳಿಯನು ಪತ್ನಿಯೊಡನೆ ತಾನಾಗಿ ಈಗ ಬಂದಿರುವುದನ್ನು ನೋಡಿ ಅತ್ತೆಮಾವಂದಿರು ಕಡುಸಂತಸಗೊಂಡು ಕೆಲಕಾಲ ಅಳಿಯನನ್ನೂ ಮಗಳನ್ನೂ ವಿಶೇಷಗೌರವದಿಂದ ಉಪಚರಿಸುತ್ತಿದ್ದು ಹೊರಡುವ ಯೋಚನೆಯೇ ಇಲ್ಲದಿರುವ ಅಳಿಯನ ವಿಷಯದಲ್ಲಿ ಅಗೌರವವನ್ನು ತೋರಿಸಲು ಭಾರವಿಯು ದುಃಖಿತನಾಗಿ—

> ಶ್ವಶುರಗೃಹನಿವಾಸಸ್ಸ್ವರ್ಗತುಲ್ಯೋ ನರಾಣಾಂ
> ಯದಿ ವಸತಿ ದಿನಾನಿ ತ್ರೀಣಿ ಪಂಚಾಥ ಸಪ್ತ ।
> ದಧಿಘೃತಮಧುಭಕ್ಷ್ಯಕ್ಷೀರಸಾರಪ್ರವಾಹಃ
> *ತದುಪರಿ ನಿವಸೇಚ್ಚೇದನ್ನಸಾರಪ್ರವಾಹಃ ॥

ಎಂದು ಹೇಳುತ್ತ ಒಂದು ತಿಂಗಳಾದನಂತರ ಭಾವಮೈದುನರೇ ಮೊದಲಾದವರು ಹೇಳುವ ಕೆಲಸಗಳನ್ನು ಮಾಡುತ್ತಿದ್ದ ಕೊನೆಗೆ ಹೊಲದಲ್ಲಿ ತೆನೆಯನ್ನು ಕಾಯುವುದಕ್ಕಾಗಿ ನಿಯಮಿಸಲ್ಪಟ್ಟನು. ಆಗ ಭಾರವಿಗೆ ತಂದೆಯಿಂದ ವಿಧಿಸಲ್ಪಟ್ಟ ಇಂತಹ ಶಿಕ್ಷೆಗಿಂತಲೂ ಮರಣವೇ ಶ್ರೇಯಸ್ಕರವೆನಿಸಿತು. ಆದರೂ ಶಿಕ್ಷೆಯನ್ನು ಅನುಭವಿಸಿಯೇತೀರಬೇಕೆಂಬ ಸಿದ್ಧಸಂಕಲ್ಪನಾಗಿ ಹೊಲವನ್ನೂ ಕಾಯುತ್ತ "ಕಿರಾತಾರ್ಜುನೀಯ"ವೆಂಬ ಕಾವ್ಯವನ್ನೂ ಬರೆಯತೊಡಗಿದನು. ಇವನ ಹೆಂಡತಿಯು ಪ್ರತ್ಯಹವೂ ಊಟವನ್ನು ತರುತ್ತಿದ್ದಳು. ಹೀಗಿರಲು ಒಂದಾನೊಂದು ದಿವಸ ಎಂದಿನಂತೆ ಭಾರವಿಗೆ ಊಣಲಿಟ್ಟು ದುಃಖದಿಂದ ಎನ್ನೊಡೆಯ! ಈದಿನ ಮನೆಯಲ್ಲಿ ಯಾವುದೋ ನೋಂಪಿಯನ್ನಾಚರಿಸುತ್ತ ಎಲ್ಲರೂ ಸಸಂಭ್ರಮದಿಂದಿರುವರು. ಹತಭಾಗ್ಯಳಾದ ನನ್ನನ್ನು ಮೊದಲಿನಂತೆ ಯಾರೂ ಪುರಸ್ಕರಿಸರು, ಎಂದು ಕಣ್ಣೀರು ಬಿಡುತ್ತಿರುವ ಹೆಂಡತಿಯನ್ನು ಹಿತೋಕ್ತಿಗಳಿಂದ ಸಂತೈಸಿ ಸ್ವಾನುಭವಪೂರ್ವಕ

* ತದುಪರಿ ದಿನಮೇಕಂ ಸಾಧ್ಯರಕ್ಷಾಪ್ರಯೋಗಃ ॥ (ಪಾಠಾಂತರ)

ವಾಗಿ ತನ್ನ ಕಾವ್ಯಕಥಾಸಂದರ್ಭಕ್ಕೆ ಅನುಕೂಲವಾಗಿ ಆಗತಾನೇ ಬರೆಯುತ್ತಿದ್ದ ಎರಡನೆಯ ಸರ್ಗದ—

ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂ ಪದಂ |
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ || (೨—೩೦)

(ಎಂತಹ ಕಾರ್ಯವನ್ನೂ ದುಡುಕಿ ಮಾಡಬಾರದು, ಸಕಲವಿಧವಾದ ಆಪತ್ತುಗಳಿಗೂ ಅವಿವೇಕವೇ ಮೂಲವು, ಪ್ರತಿಯೊಂದನ್ನೂ ನಿಧಾನವಾಗಿ ವಿಮರ್ಶಿಸಿ ದೂರಾಲೋಚನೆಯಿಂದ ಕೆಲಸವನ್ನು ಮಾಡುವವನಿಗೆ ಸಕಲೈಶ್ವರ್ಯಗಳೂ ತಾವಾಗಿ ಲಭಿಸುವುವು.) ಎಂಬ ಶ್ಲೋಕವನ್ನು ಬರೆದು ಪ್ರಿಯೆ! ಇದನ್ನು ವಿಕ್ರಯಿಸು, ನಿನಗೆ ಬೇಕಾದಷ್ಟು ಧನವು ದೊರೆಯುವುದು ಎಂದು ಹೇಳಿಕೊಟ್ಟನು. ಆಗ ಅದನ್ನು ಒಬ್ಬಾನೊಬ್ಬ ವರ್ತಕನು ನೂರು ಹೊನ್ನುಗಳಿಗೆ ಕೊಂಡುಕೊಂಡನು. ಹೀಗೆ ಭಾರವಿಯು ಆರುತಿಂಗಳು ಶ್ವಶುರಗೃಹವಾಸವನ್ನುಮಾಡಿ ಮಹಾಪಾತಕಮುಕ್ತನಾಗಿ ಕಿರಾತಾರ್ಜುನೀಯವೆಂಬ ಕಾವ್ಯವನ್ನುಮುಗಿಸಿ ಸ್ವಗ್ರಾಮಕ್ಕೆ ಬಂದನು.† ಈ ವಿಚಾರದಲ್ಲಿ ಮತ್ತೊಂದು ಕಥೆಯು ಹೀಗಿರುವುದು—

ದಾರಿದ್ರ್ಯದಿಂದ ದುರ್ದಶಾಪನ್ನನಾದ ಭಾರವಿಯು ಗೃಹಕೃತ್ಯವನ್ನು ಮರೆತು ಸದಾ ಗ್ರಂಥರಚನೆಯಲ್ಲಾಸಕ್ತನಾಗಿರುವುದನ್ನು ನೋಡಿ ಭಾರವಿಯ ಹೆಂಡತಿಯು ಸಂಸಾರನಿರ್ವಹಣಕಷ್ಟಕಾತರಳಾಗಿ ಒಂದಾನೊಂದು ದಿವಸ ಭಾರವಿಯನ್ನು ನಿಷ್ಠುರಪಡಿಸಿ ದ್ರವ್ಯವನ್ನು ದೊರಕಿಸದ ಅವನ ಗ್ರಂಥಗಳನ್ನು ಅಪ್ರಯೋಜಕವೆಂದು ಅಲ್ಲಗಳೆಯಲು ಭಾರವಿಯು ಹೆಂಡತಿಯ ಕಟೂಕ್ತಿಗಳನ್ನು ಸಹಿಸಲಾರದೆ ಅವಳನ್ನು ಕುರಿತು ಎಲೌ ದಯಿತೆ! ಕುಪಿತಳಾಗದಿರು, ನಾನು ಬರೆಯುವ ಗ್ರಂಥಗಳನ್ನು ನಿಷ್ಪ್ರಯೋಜನವೆನ್ನದಿರು. ಇಗೋ! ಈ ಶ್ಲೋಕವನ್ನು ಬರೆದು ಕೊಡುವೆನು, ಇದನ್ನು ನೀನು ವಿಕ್ರಯಿಸಿದರೆ ಒಂದುಲಕ್ಷ ಹೊನ್ನುದೊರೆಯುವುದೆಂದು ಹೇಳಿ ಕೊಟ್ಟನು. ಅವಳು ಅದರಂತೆ ಆ ಊರಿನ ಸಂತೆಯಲ್ಲಿ ಅದನ್ನು ವಿಕ್ರಯಿಸುವುದಕ್ಕಾಗಿ ಇಟ್ಟುಕೊಂಡಿರಲು ಆ ಊರಿನ ರಾಜಾಜ್ಞೆಯಂತೆ ಮಂತ್ರಿಯು ಅತ್ಯಂತ ಅಪರೂಪವಾದ ಪದಾರ್ಥಗಳನ್ನು ಕೊಂಡುಕೊಳ್ಳುವ ಉದ್ದಿಶ್ಯದಿಂದ ಬರುತ್ತಾ ಇರುವಾಗ ಒಂದು ಚೂರು ವಾಲೆಯಗರಿಯಲ್ಲಿನ ಬರವಣಿಗೆಗೆ ಒಂದುಲಕ್ಷ ಹೊನ್ನೆಂದು ಹೇಳುತ್ತಿರುವ ಹೆಂಗಸನ್ನು ನೋಡಿ ಅಚ್ಚರಿಗೊಂಡು ಈ ವಿಚಾರವನ್ನು ರಾಜನಿಗೆ

† ಸಂಸ್ಕೃತ ಕವಿಜೀವಿತಮ್ಲು (ಪು, ೯೩)

ತಿಳುಹಿಸಿದನು. ಆಗ ಅವನು ಅದನ್ನು ತರಿಸಿ ಓದಿ ಆನಂದಿಸಿ ಲಕ್ಷಹೊನ್ನು ಗಳನ್ನು ಕೊಟ್ಟು ಕಳುಹಿಸಿ, ಆ ಶ್ಲೋಕವನ್ನು ತಾನು ಮಲಗುವ ಕೊಠಡಿ ಯಲ್ಲಿ ಎದುರಿಗೆ ಕಾಣುವ ಹಾಗೆ ಸ್ಫುಟಾಕ್ಷರಗಳಲ್ಲಿ ಸುವರ್ಣದಿಂದ ಕೆತ್ತಿಸಿ ದನು. ಹೀಗೆ ಕೆಲಕಾಲಾನಂತರ ಪ್ರವಾಸಕ್ಕಾಗಿ ಹೋಗಿದ್ದ ರಾಜನು ಏಕಾಂತದಲ್ಲಿ ಶಯನಗೃಹವನ್ನು ಪ್ರವೇಶಿಸಿ ಶಯನತಲ್ಪದಲ್ಲಿ ಓರ್ವಪುರುಷ ನೊಡನೆ ಮಲಗಿರುವ ಸತಿಯನ್ನು ನೋಡಿ ರುಷ್ಟನಾಗಿ ಈರ್ವರನ್ನೂ ಏಕಕಾಲ ದಲ್ಲಿಯೇ ಕೊಲ್ಲಬೇಕೆಂದು ಕತ್ತಿಯನ್ನೆತ್ತಲು ಎದುರಿಗೆ ಕಂಡುಬಂದ—

**ಸಹಸಾ ವಿದಧೀತ ನ ಕ್ರಿಯಾಮವಿವೇಕಃ ಪರಮಾಪದಾಂ ಪದಂ ।**
**ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಸ್ಸ್ವಯಮೇವ ಸಂಪದಃ ॥**

ಎಂಬ ಸುವರ್ಣಾಕ್ಷರದ ಶ್ಲೋಕವನ್ನೋದಿ ನೋಡಿ ಕತ್ತಿಯನ್ನು ಕೆಳಕ್ಕಿಳುಹಿ ಸಾವಧಾನದಿಂದ ವಿಚಾರಿಸಲಾಗಿ ತಾನು ಹೊರಟುಹೋಗುವಾಗ ಋತುಸ್ನಾತ ಳಾಗಿದ್ದ ರಾಣಿಯು ಗರ್ಭಧಾರಿಣಿಯಾಗಿ ಸುಪುತ್ರನನ್ನು ಹೆತ್ತದ್ದುಮೊದಲು ಗೊಂಡು ಎಲ್ಲಾ ಸಂಗತಿಗಳನ್ನೂ ವಿಚಾರಿಸಿ ಸಂತುಷ್ಟನಾಗಿ ಆಹಹ! ಕೊಂಚದ ರಲ್ಲಿ ಎಂತಹ ಅವಿವೇಕವಾಗುತ್ತಿತ್ತು, ಅನ್ಯಾಯವಾಗಿ ಸ್ತ್ರೀಹತ್ಯ, ಸುತಹತ್ಯ ವನ್ನು ಮಾಡಿ ಲೋಕಾಪವಾದಕ್ಕೀಡಾಗಿ ನರಕವನ್ನನುಭವಿಸುತ್ತಿದ್ದೆನಲ್ಲ! ಈ ಶ್ಲೋಕದ ನೀತಿಯನ್ನು ಗ್ರಹಿಸಿ ವಿವೇಕಿಯಾದುದರಿಂದ ನನಗೆ ಪತ್ನೀಪುತ್ರರು ಳಿದರೆಂದು ಸಂತೋಷಿಸಿ ಅದನ್ನು ಬರೆದುಕೊಟ್ಟ ಭಾರವಿಯನ್ನು ಬಹುವಿಧವಾಗಿ ಕೊಂಡಾಡಿ ಅವನನ್ನು ಕರೆಯಿಸಿ ಅವನಿಗೆ ಬೇಕಾದಷ್ಟು ಧನಕನಕವಾಹನಾದಿ ಗಳನ್ನಿತ್ತು ಮನ್ನಿಸಿ ನವರಸಭರಿತವಾಗಿಯೂ ರಾಜನೀತಿಯುಕ್ತವಾಗಿಯೂ ಇರುವ ಗ್ರಂಥವನ್ನು ಬರೆದು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡಂತೆ "ಕಿರಾತಾರ್ಜುನೀಯ"ವೆಂಬ ಕಾವ್ಯವನ್ನು ಬರೆದನು.

**ಕಾಲ:**— ಇವನು ಕ್ರಿ. ಶ. ೬ನೆಯ ಶತಮಾನದವನು. ಪ್ರೊ. ಮ್ಯಾಕ್ ಡೊನಲ್‌ರವರು ಕ್ರಿ. ಶ. ೬೩೪ ರಲ್ಲಿ ಬರೆಯಲ್ಪಟ್ಟಿರುವ ಒಂದಾನೊಂದು ಶಾಸನದಲ್ಲಿ ಈ ಕವಿಯ ಹೆಸರು ಕಂಡು ಬರುವುದೆಂದೂ ಇದಕ್ಕಿಂತ ಎಷ್ಟೋ ಮುಂಚೆ ಈ ಕವಿಯು ಇದ್ದಿರಬೇಕೆಂದೂ ಹೇಳುವರು.‡ ಇದಲ್ಲದೆ ಶಕ ಸಂ. ೫೫೬ ರಲ್ಲಿ ಬರೆಯಲ್ಪಟ್ಟಿರುವ ಒಂದಾನೊಂದು ಶಾಸನದಲ್ಲಿ ಭಾರವಿಯ ಹೆಸರು ಕಾಳಿದಾಸನ ಹೆಸರಿನೊಡನೆ ಸೇರಿಸಿ ಬರೆಯಲ್ಪಟ್ಟಿರುವುದು. ಶಕವರ್ಷಗಳು ೫೫೬ಕ್ಕೆ ಕ್ರಿ. ಶ. ೬೩೪ ಆಗುವುದು. ಇದಲ್ಲದೆ ಕ್ರಿ. ಶ. ೭೭೬ ರಲ್ಲಿ ಬರೆಯಲ್ಪ

‡ Macdonell's History of Sanskrit Literature P. 329.

ಟ್ಟಿರುವ ಒಂದಾನೊಂದು ಶಾಸನದಲ್ಲಿ ಪೃಥ್ವಿಕೊಂಗಣೀಧೊರೆಯ ಐದನೆಯತಲೆಯವನಾದ ದುರ್ವಿನೀತನು ಭಾರವಿಯ ಕಾವ್ಯ(೧೫ನೆಯ ಸರ್ಗ)ಕ್ಕೆ ವ್ಯಾಖ್ಯಾನವನ್ನು ಬರೆದಿರುವುದಾಗಿಯೂ ಕೊಂಗಣಿರಾಜನು ಸಿಂಹಾಸನವನ್ನೇರಿದ ಮೊದಲುಗೊಂಡು ಮಧ್ಯದಲ್ಲಿ ಒಂದುನೂರುವರ್ಷಗಳನ್ನು ಬಿಟ್ಟಾಗ್ಯೂ (ಕ್ರಿ. ಶ. ೭೨೬)ದುರ್ವಿನೀತನು ಸುಮಾರು ಕ್ರಿ. ಶ. ೬೨೦ರಲ್ಲಿ ಆಳಿರಬೇಕೆಂಬುದಾಗಿಯೂ ಈ ಕಾರಣಗಳಿಂದ ಭಾರವಿಯು ಕ್ರಿ. ಶ. ಆರನೆಯ ಶತಮಾನದ ಉತ್ತರಾರ್ಧದಲ್ಲಿದ್ದಿರಬೇಕೆಂದೂ ಪ್ರೊ. ಕೃಷ್ಣಮಾಚಾರ್ಯರವರು ಬರೆದಿರುವರು.$ ಕ್ರಿ. ಶ. ೬೩೪ ರಲ್ಲಿ ಎರಡನೆಯ ಪುಲಕೇಶಿಯಿಂದ ಪ್ರತಿಷ್ಠಿಸಲ್ಪಟ್ಟ ಐಹೋಲ ಶಾಸನದಲ್ಲಿ—

ಯೇನಾಯೋಜಿನವೇಶ್ಮಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।
ಸ ವಿಜಯತಾಂ ರವಿಕೀರ್ತಿಃ ಕವಿತಾಶ್ರಿತಕಾಳಿದಾಸಭಾರವಿಕೀರ್ತಿಃ ॥

ಎಂದು ಹೇಳಿರುವುದರಿಂದ ಕ್ರಿ. ಶ. ೬೩೪ ರಲ್ಲಿಯೇ ರವಿಕೀರ್ತಿಭೂಪನಿಗೆ ಉಪಮಾನಭೂತನಾಗಿದ್ದ ಭಾರವಿಯ ಕೀರ್ತಿಯು ಪ್ರಸಿದ್ಧವಾಗಿರಬೇಕಾದರೆ ಇವನ ಕಾಲವು ಒಂದುನೂರುವರ್ಷಗಳಾದರೂ ಹಿಂದಾಗಿರಬೇಕು. ಈ ಕಾರಣದಿಂದ ಕ್ರಿ. ಶ. ೫೨೦ ರಲ್ಲಿ ಕಿರಾತಾರ್ಜುನೀಯವನ್ನು ಬರೆದಿರಬೇಕೆಂದೂ ಭಾರವಿಯು ಕ್ರಿ. ಶ. ಆರನೆಯ ಶತಮಾನದವನೆಂದೂ ಹೇಳಬಹುದಾಗಿದೆ.

ಪಂಡಿತಮಂಡಲಿಯಿಂದ ಮಹಾಕಾವ್ಯಗಳೆಂದು ಪರಿಗಣಿಸಲ್ಪಟ್ಟಿರುವ ಆರು ಕಾವ್ಯಗಳಲ್ಲಿ **ಕಿರಾತಾರ್ಜುನೀಯವು** ಒಂದಾಗಿರುವುದು. ಇದರಲ್ಲಿ ಹದಿನೆಂಟು ಸರ್ಗಗಳು ಇರುವುವು. ಕಿರಾತವೇಷಧಾರಿಯಾದ ಈಶ್ವರನಿಗೂ ಅರ್ಜುನನಿಗೂ ಯುದ್ಧವು ನಡೆದು ಅರ್ಜುನನು ಈಶ್ವರನಿಂದ ಪಾಶುಪತಾಸ್ತ್ರವನ್ನು ಪಡೆದುಕೊಂಡನೆಂಬ ಮಹಾಭಾರತದ ಕಥೆಯೇ ಇದರಲ್ಲಿ ಹೇಳಲ್ಪಟ್ಟಿರುವುದು. ಮೂಲಕಥೆಯನ್ನು ಕವಿಸಮಯಕ್ಕೆ ತಕ್ಕಹಾಗೆ ಮಾರ್ಪಡಿಸಿ ಕಾವ್ಯವನ್ನು ಬರೆದು ಕಿರಾತಾರ್ಜುನೀಯವೆಂದು ಕರೆದಿರುವನು. ಇವನಿಗೆ 'ಚಿತ್ರಯಮಕ' ಮೊದಲಾದ 'ಬಂಧ' ಕವಿತ್ವದಲ್ಲಿ ಬಹಳ ಅಭಿರುಚಿ ಇದ್ದಂತೆ ತೋರುವುದು. ಮೊದಲನೆ ಮೂರುಸರ್ಗಗಳನ್ನು ಪಾಷಾಣತ್ರಯವೆನ್ನುವರು. (?) ಹದಿನೈದನೆಯ ಸರ್ಗದಲ್ಲಿ ಅನೇಕ ಶ್ಲೋಕಗಳು ವಿವಿಧ ಕ್ರಿಯಾರೂಪಭೇದ, ಬಂಧ, ಚಮತ್ಕಾರಗಳನ್ನೊಳಕೊಂಡಿವೆ. ಭಾಷಾಸರಣಿಯು ಕಾಳಿದಾಸಾದಿಕವಿಗಳ ಕಾವ್ಯಗಳಂತೆ ಸುಲಭವಿಲ್ಲದೆ ಕೊಂಚ ಕಠಿಣವಾಗಿರುವುದಾದರೂ ಉಪಮಾನಕ್ಕಾಗಿ ಹೇಳಿರುವ ಪ್ರಕೃತಿವರ್ಣನೆಯು ಬಹು ಚೆಲುವಾಗಿದೆ. ಇದಕ್ಕೆ ಜೋನರಾಜ, ಏಕನಾಥ, ಪ್ರಕಾಶವರ್ಷ, ಧರ್ಮವಿಜಯ,

$ History of the Classical Sanskrit Literature P. 38.

ವಿನಯಸುಂದರ, ನರಹರಿ, ಮಲ್ಲಿನಾಥನೇ ಮೊದಲಾದವರು ವ್ಯಾಖ್ಯಾನವನ್ನು ಬರೆದಿರುವರು. ಮಲ್ಲಿನಾಥಸೂರಿಯು ಬರೆದಿರುವ "ಘಂಟಾಪಥ"ವೆಂಬ ವ್ಯಾಖ್ಯಾನವು ಈಗಲೂ ಪ್ರಚಾರದಲ್ಲಿರುವುದು. ಮಲ್ಲಿನಾಥನು ಈ ಕಾವ್ಯದ ವಿಚಾರವಾಗಿ—

ನಾರಿಕೇಳಫಲಸಮ್ಮಿತಂ ವಚೋ
  ಭಾರವೇಃ ಸಪದಿ ತದ್ವಿಭಜ್ಯತೇ ।
ಸ್ವಾದಯಂತು ರಸಗರ್ಭನಿರ್ಭರಂ
  ಸಾರಮಸ್ಯ ರಸಿಕಾ ಯಥೇಪ್ಸಿತಂ ॥    ಎಂದೂ

ತಾನು ಬರೆದಿರುವ ವ್ಯಾಖ್ಯಾನದ ವಿಚಾರವಾಗಿ—

ನಾನಾನಿಬಂಧವಿಷಮೈಕಪದೈರ್ನಿತಾಂತಂ
  ಸಾಶಂಕಚಂಕ್ರಮಣಖಿನ್ನಧಿಯಾಮಶಂಕಂ ।
ಕರ್ತುಂ ಪ್ರವೇಶ ಮಿಹಭಾರವಿ ಕಾವ್ಯಬಂಧೇ
  'ಘಂಟಾಪಥಂ' ಕಮಪಿ ನೂತನಮಾತನಿಷ್ಯೇ ॥  ಎಂದೂ

ಕಥಾವಿಚಾರವಾಗಿ—

ನೇತಾ ಮಧ್ಯಮಪಾಂಡವೋ ಭಗವತೋ ನಾರಾಯಣಸ್ಯಾಂಶಜ
  ಸ್ತಸ್ಯೋತ್ಕರ್ಷಕೃತೇಽನುವರ್ಣ್ಯಚರಿತೋ ದಿವ್ಯಃ ಕಿರಾತಃ ಪುನಃ ।
ಶೃಂಗಾರಾದಿರಸೋಽಯಮತ್ರ ವಿಜಯೀ ವೀರಪ್ರಧಾನೋ ರಸ
  ಶ್ಶೈಲಾದ್ಯಾನಿ ಚ ವರ್ಣಿತಾನಿ ಬಹುಶೋ ದಿವ್ಯಾಸ್ತ್ರಲಾಭಃ ಫಲಂ ॥

ಎಂದೂ ಹೇಳಿರುವನು.

"ಪತ್ನಿಯೊಡಗೂಡಿದ ಪಂಚಪಾಂಡವರೇ ಇದರ ಪಾತ್ರಗಳು. ಪಾಂಡವರು ಅರಣ್ಯವಾಸಕ್ಕಾಗಿ ಬಂದು ದ್ವೈತವನದಲ್ಲಿದ್ದಾಗ ಒಂದಾನೊಂದು ದಿವಸ ಸಂಧ್ಯಾಸಮಯದಲ್ಲಿ ಎಲ್ಲರೂ ಒಂದು ಕಡೆ ಕುಳಿತು ತಮ್ಮ ದುರದೃಷ್ಟವಿಷಯವನ್ನು ಕುರಿತು ಚಿಂತಿಸುತ್ತಿದ್ದರು. ಆಗ ದ್ರೌಪದಿಯು ಪೂರ್ವದ ತಮ್ಮ ವೈಭವವನ್ನೂ ಈಗಣ ದುರ್ದೆಸೆಯನ್ನೂ ನೆನೆದುಕೊಂಡು ನೊಂದು ಹೇಗಾದರೂ ರಾಜ್ಯಸಂಪಾದನೆಯನ್ನು ಮಾಡತಕ್ಕುದೆಂದು ಧರ್ಮನಂದನನನ್ನು ಹುರಿಗೊಳಿಸಲು ಅವನು ಅವಸರಪಡಕೂಡದೆಂದೂ, ತಾಳ್ಮೆಯಿಂದಲೂ ಧರ್ಮಾವಲಂಬನದಿಂದಲೂ ರಾಜ್ಯವು ತಾನಾಗಿಯೇ ದೊರಕುವುದೆಂದೂ ಹೇಳಿ ಸಮಾಧಾನಪಡಿಸಿದನು. ಇವೆಲ್ಲವನ್ನೂ ಭೀಮನು ಕೇಳಿ ಇಂತಹ ಸಾಧುವೃತ್ತಿಯು ರಾಜ್ಯಸಂಪಾದನೆಗೆ ಸಾಧನವಲ್ಲವೆಂದೂ ಕ್ಷಿಪ್ರದಲ್ಲಿ ರಾಜ್ಯಸಾಧನವನ್ನು ಮಾಡತಕ್ಕುದೆಂದೂ ಹೇಳಲು ಯುಧಿಷ್ಠಿರನು, ತಮ್ಮ! ನೀನು ಹೇಳುವುದೆಲ್ಲವೂ ಸರಿ

ಯಾದುದು. ಅವಸರಪಡುವುದರಿಂದ ನಮಗೆ ಯಾವಪ್ರಯೋಜನವೂ ಆಗದು, ಕಾಲಪರೀಕ್ಷಣೆಯಿಂದ ರಾಜ್ಯಸಂಪಾದನವನ್ನು ಮಾಡಬೇಕು, ಈಗ ದುರ್ಯೋಧನನಕಡೆ ವಿಪುಳ ಸೈನ್ಯವು ಇರುವುದು, ನಮ್ಮ ಕಡೆ ನಾವು ಹೊರತು ಮತ್ತಾರೂ ಇಲ್ಲವಾದುದರಿಂದ ನಿಧಾನಿಸಿಯೋಚಿಸಿ ನಮ್ಮ ಕಾರ್ಯವನ್ನು ಕೈಗೂಡಿಸಿಕೊಳ್ಳತಕ್ಕುದೆಂದು ಹೇಳುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ವ್ಯಾಸಮಹರ್ಷಿಗಳು ಬಂದು ಪಾಂಡವರಿಂದ ಸತ್ಕರಿಸಲ್ಪಟ್ಟವರಾಗಿ ಇವರ ವಿಷಯಗಳೆಲ್ಲವನ್ನೂ ಕೇಳಿ ಯುಧಿಷ್ಠಿರನಿಗೆ ಮಂತ್ರೋಪದೇಶವನ್ನು ಮಾಡಿ ಈ ಮಂತ್ರಸಾಧನಕ್ಕೆ ಅರ್ಜುನನ ಹೊರತು ಮತ್ತಾರಿಂದಲೂ ಸಾಗದೆಂದು ನಿರೂಪಿಸಿ ತಪಶ್ಚರಣೆಯಿಂದ ಇಂದ್ರನನ್ನೂ ಮತ್ತು ಈಶ್ವರನನ್ನೂ ಮೆಚ್ಚಿಸಿ ಅಜೇಯವಾದ ದಿವ್ಯಾಸ್ತ್ರಗಳನ್ನು ಹೊಂದುವಂತೆ ಅರ್ಜುನನಿಗೆ ಅನುಗ್ರಹಿಸಿ ಮುಂದೆ ಕಾಮ್ಯಕವನಕ್ಕೆ ಹೋಗತಕ್ಕುದೆಂದು ಹೇಳಿ ಹೊರಟುಹೋದರು. ಅದರಂತೆಯೇ ಪಾಂಡವರು ಕಾಮ್ಯಕವನಕ್ಕೆ ಬಂದು, ಕೆಲವು ದಿವಸಗಳಾದ ಅನಂತರ ಯುಧಿಷ್ಠಿರನು ಅರ್ಜುನನನ್ನು ಏಕಾಂತದಲ್ಲಿ ಬರಮಾಡಿಕೊಂಡು ಅರ್ಜುನ! ಇಗೋ ನೋಡು! ಈಗ ಶತ್ರುಬಲವು ಹೆಚ್ಚಾಗಿರುವುದು; ಭೀಷ್ಮ, ದ್ರೋಣರನ್ನು ಗೆಲ್ಲುವುದು ಸುಲಭಸಾಧ್ಯದ ಕೆಲಸವಲ್ಲ. ಪುರಾಣಪುರುಷನ ಸಹಾಯವು ಹೊರತು ಯಾವುದೂ ಸಾಗದು, ಎಂದು ಹೇಳಿ ವ್ಯಾಸೋಪದಿಷ್ಟಮಂತ್ರವನ್ನು ಉಪದೇಶಿಸಿ ಇಂದ್ರಕೀಲಪರ್ವತಕ್ಕೆ ಹೋಗಿ ಇಂದ್ರನನ್ನು ಒಲಿಸಿಕೊಳ್ಳಲು ತಪವನ್ನಾಚರಿಸತಕ್ಕುದೆಂದು ಹೇಳಿ ಕಳುಹಿಸಿದನು. ಹಾಗೆಯೇ ತಪವನ್ನಾಚರಿಸುತ್ತಿದ್ದ ಅರ್ಜುನನ ಬಳಿಗೆ ಇಂದ್ರನು ವೃದ್ಧಬ್ರಾಹ್ಮಣ ವೇಷವನ್ನುಧರಿಸಿ ಬಂದು ಅರ್ಜುನ! ಇಂತಹ ತಪಶ್ಚರಣವು ಏಕೆ? ಬೇಡ. ಎಂದು ಪರಿಪರಿಯಾಗಿ ಬೋಧಿಸಿನೋಡಿದರೂ ಸಾಧ್ಯವಾಗದೆ ನಿಶ್ಚಲಚಿತ್ತನಾದ ಅರ್ಜುನನನ್ನು ನೋಡಿ ಮುದಿತಹೃದಯನಾಗಿ ಅರ್ಜುನ! ನಿನ್ನ ತಪಶ್ಚರಣಶಕ್ತಿಗಿಂತಲೂ ಮಿಗಿಲೆನಿಸಿದ ಮನಶ್ಶಕ್ತಿಯನ್ನು ನೋಡಿ ಸಂತುಷ್ಟನಾದೆನು. ನೀನು ಇತೋಪ್ಯತಿಶಯವಾದ ತಪಶ್ಚರಣದಿಂದ ಉಮಾರಮಣನನ್ನು ಮೆಚ್ಚಿಸಿ ದಿವ್ಯಾಸ್ತ್ರಗಳನ್ನು ಪಡೆಯುವವನಾಗೆಂದು ಹರಸಿ ಹೊರಟುಹೋದನು. ಅರ್ಜುನನು ಏಕಾಗ್ರಚಿತ್ತತೆಯಿಂದ ಪರಶಿವನನ್ನು ಕುರಿತು ತಪವನ್ನಾಚರಿಸುತ್ತಿರಲು ಇವನ ತಪೋಜ್ವಾಲೆಯನ್ನು ಸಹಿಸದ ಋಷಿಗಳು ಪರಶಿವನ ಬಳಿಗೆ ಬಂದು ಭೂತೇಶ! ಅರ್ಜುನನ ತಪೋಜ್ವಾಲೆಯನ್ನು ಸಹಿಸಲಾಗದು, ಸಾಪಕಾಶಮಾಡದೆ ಪ್ರಸನ್ನನಾಗಿ ಲೋಕವನ್ನುದ್ಧರಿಸಬೇಕೆಂದು ಪ್ರಾರ್ಥಿಸಲು ಪರಮೇಶ್ವರನು ಹಾಗೆಯೇ ಆಗಲೆಂದು ಕಿರಾತವೇಷವನ್ನು

ಧರಿಸಿ ಬಿಲ್ಲುಬಾಣಗಳೊಡಗೂಡಿ ಶಿವೆಯೊಡನೆ ಅರ್ಜುನನ ಬಳಿಗೆ ಬರುತ್ತಿದ್ದನು. ಇಷ್ಟರಲ್ಲಿ ಮೂಕನೆಂಬ ರಾಕ್ಷಸನು ಕಾಡುಹಂದಿಯರೂಪದಿಂದ ತನ್ನ ಕಡೆಗೆ ನುಗ್ಗುತ್ತಿರುವುದನ್ನು ಅರ್ಜುನನು ನೋಡಿ ಬತ್ತಳಿಕೆಯೊಳಗಿರುವ ಬಾಣವನ್ನು ಹೊರಗೆ ತೆಗೆದು ಹೆದೆಯನ್ನೇರಿಸಿ ಹಂದಿಯನ್ನು ಹೊಡೆದನು. ಆ ಸಮಯದಲ್ಲಿಯೇ ಕಿರಾತನೂ ಒಂದು ಬಾಣವನ್ನು ಬಿಟ್ಟನು. ಈ ಎರಡುಬಾಣಗಳೂ ಏಕಕಾಲದಲ್ಲಿ ಹಂದಿಗೆ ತಗುಲಿ ಹಂದಿಯು ನೆಲಕ್ಕೊರಗಿ ಪೂರ್ವರೂಪವನ್ನು ಹೊಂದಿತು. ಹಂದಿಯನ್ನು ಮೊದಲುಕೊಂದವನು ನಾನು ತಾನೆಂದು ವಾದಾರಂಭವಾಯಿತು. ಅರ್ಜುನನು ಹಂದಿಯನ್ನು ಮೊದಲು ಕೊಂದವನು ನಾನೆಂದನು. ಕಿರಾತನು ನಾನು ಮೊದಲು ಹೊಡೆದುದರಿಂದ ನೆಲಕ್ಕುರುಳಿ ತೆಂದನು. ಹೀಗೆ ವಾದಿಸುತ್ತ ಕಲಹಾರಂಭವಾಯಿತು. ಇಬ್ಬರೂ ಬಾಣದ ಮಳೆಗಳನ್ನು ಸುರಿಸಿದರು. ಈಶ್ವರನು ಅರ್ಜುನನ ಸಾಮರ್ಥ್ಯಕ್ಕೂ ದೃಢಚಿತ್ತತೆಗೂ ಸಂತೋಷಿಸಿ ಅವಾಕ್ಕಾಗಿ ನಿಂತನು. ಅರ್ಜುನನ ಶಸ್ತ್ರಾಸ್ತ್ರಗಳೆಲ್ಲವೂ ಈಶ್ವರನ ಎದುರಿನಲ್ಲಿ ನಿಷ್ಫಲವಾದುವು. ಕೊನೆಗೆ ಮುಷ್ಟಿಯುದ್ಧವನ್ನು ಮಾಡುವುದಾಗಿ ನಿಶ್ಚಯಿಸಿ ಅರ್ಜುನನು ಈಶ್ವರನನ್ನು ಸೆಣಸಲು ಉಮಾರಮಣನು ಅರ್ಜುನನನ್ನು ಕಂಕುಳಲ್ಲಿ ಅಮುಕಿ ಹಿಡಿದುಕೊಂಡನು. ಅರ್ಜುನನು ಜ್ಞಾನಶೂನ್ಯನಾಗಿ ಕೆಳಗೆ ಬಿದ್ದು ಕೊಂಚಹೊತ್ತಿನಲ್ಲಿ ಪುನಃ ಚೇತರಿಸಿಕೊಂಡು ಕಣ್ತೆರೆದು ನೋಡಲಾಗಿ ತಾನು ಮೊದಲು ಪೂಜಿಸುತ್ತಿದ್ದ ಲಿಂಗದ ಕೊರಳಿನಲ್ಲಿ ಹಾಕಿದ್ದ ಪುಷ್ಪಹಾರವು ಕಿರಾತನ ಕಂಠಪ್ರದೇಶದಲ್ಲಿರುವುದನ್ನು ಕಂಡು ಆಶ್ಚರ್ಯಚಕಿತನಾಗಿ ಈ ಕಿರಾತನನ್ನು ಸಾಕ್ಷಾತ್ಪರಶಿವನನ್ನಾಗಿಯೇ ತಿಳಿದು ಸಾಂಜಲಿಪುಟನಾಗಿ ಅಜ್ಞಾನದಿಂದಾದ ಅಪರಾಧವನ್ನು ಕೃಪೆಯಿಂದ ಕ್ಷಮಿಸಿ ಉದ್ಧರಿಸತಕ್ಕುದೆಂದು ಪ್ರಾರ್ಥಿಸಲು ಜಟಾಜೂಟನು ಅರ್ಜುನನನ್ನು ನೋಡಿ ಸಂತುಷ್ಟಾಂತರಂಗನಾಗಿ ನಿಜರೂಪವನ್ನು ತೋರಿ ಅವನ ಪರಾಕ್ರಮ, ಧೈರ್ಯ, ಸ್ಥೈರ್ಯಗಳನ್ನು ಕೊಂಡಾಡಿ ಪಾಶುಪತಾಸ್ತ್ರವನ್ನನುಗ್ರಹಿಸಿ ಇಂದ್ರಲೋಕಕ್ಕೆ ಹೋಗಿಬರಲಾಜ್ಞಾಪಿಸಿ ಕಣ್ಮರೆಯಾದನು. ಅದರಂತೆ ಅರ್ಜುನನು ದೇವಲೋಕಕ್ಕೆ ಹೋಗಿ ಅವರಿಂದ ಅನುಗ್ರಹಿಸಲ್ಪಟ್ಟವನಾಗಿ ಗಂಧಮಾದನ ಪರ್ವತಪ್ರಾಂತವಿಹರಣವನ್ನು ಮಾಡುತ್ತಿರುವ ಸೋದರರ ಬಳಿಗೆ ದಿವ್ಯಾಸ್ತ್ರಗಳೊಡನೆ ಬಂದು ಸೇರಿದನು'' ಎಂಬುದೇ ಕಥಾಸಾರಾಂಶ.

ಭಾರವಿಯು ಮಹಾಭಾರತದ ಈ ಕಥೆಯನ್ನು ತೆಗೆದುಕೊಂಡು ಮೂಲ ಕಥಾಭಿಪ್ರಾಯಕ್ಕೆ ವಿರೋಧವು ಬಾರದಂತೆ ಅಲ್ಲಲ್ಲಿ ಕೊಂಚಬದಲಾಯಿಸಿ ಮಹಾಕಾವ್ಯವನ್ನಾಗಿ ಬರೆದಿರುವನು.

ದುರ್ದಶಾಬದ್ಧರಾಗಿ ರಾಜ್ಯವನ್ನು ಕಳೆದುಕೊಂಡ ರಾಜರ ಮತ್ತು ಅವರ ಕುಟುಂಬ ಲಕ್ಷಣದ ವಿಚಾರವಾಗಿ ಹೇಳಬೇಕೆಂದಾಶಿಸಿ ಮೊದಲನೆಯ ಎರಡು ಸರ್ಗಗಳಲ್ಲಿ ವಿಧವಿಧವಾದ ರಾಜನೀತಿವಿಚಾರಗಳನ್ನು ಸಮರ್ಥಿಸಿರುವನು. ಕವಿಯು ಪುರಾಣಪ್ರಸಿದ್ಧರಾದ ವ್ಯಕ್ತಿಗಳನ್ನು ಹೇಳುವುದಾದರೂ ಪ್ರತಿಯೊಬ್ಬ ಮಾನವನ ಜೀವನಚರಿತದಲ್ಲಿ ಸಂಭವಿಸಬಹುದಾದ ವಿಷಯಗಳಿಗೆ ಸಂಬಂಧವನ್ನುಂಟುಮಾಡಿತೋರಿಸಿ ನಂಬುವಂತೆ ಮಾಡಿರುವನು. ಇವುಗಳೆಲ್ಲವನ್ನೂ ನೋಡಿದರೆ ಕವಿಯು ಲೋಕಕಲ್ಯಾಣವನ್ನೇ ಧ್ಯೇಯವಾಗಿಟ್ಟುಕೊಂಡು ಈ ಕಾವ್ಯವನ್ನು ಬರೆದಂತೆ ತೋರುತ್ತದೆ. ಮೂಲಕಥೆಯಲ್ಲಿ ಬರುವ ಅಸಾಮಾನ್ಯ ವಿಷಯಗಳನ್ನು ಜನಸಾಮಾನ್ಯವಾಡಿಕೆಯಲ್ಲಿರುವಂತೆ ಬರೆದಿರುವನು.

ಯುಧಿಷ್ಠಿರನು ದುರ್ಯೋಧನನ ರಾಜ್ಯಾಡಳಿತವಿಚಾರಗಳನ್ನು ಆಗಿಂದಾಗ ತಿಳಿಸುತ್ತಿರುವಂತೆ ಬೇಹಿನವರನ್ನು ಗೊತ್ತುಮಾಡಿರುವನು.

ಭೀಮನು ರಾಜಕಾರ್ಯವಿಶಾರದನಂತೆ ಸ್ವಪಕ್ಷ, ಪರಪಕ್ಷದ ಬಲಾಬಲಗಳನ್ನು ಯೋಚಿಸುತ್ತಾ ರಾಜ್ಯಸಾಧನದ ಹವಣಿಕೆಯನ್ನು ಮಾಡುತ್ತಿರುವನು.

ದುರ್ಯೋಧನನು ತನ್ನ ಅವಿವೇಕರಾಜ್ಯಾಡಳಿತದಿಂದ ರಾಜ್ಯಸೂತ್ರವು ಸರಿಯಾಗಿ ನಡೆಯದೆಂದೂ ಇನ್ನು ಬಹುಕಾಲ ರಾಜ್ಯವಾಳಲಾಗದೆಂದೂ ಜನರು ಪರಸ್ಪರ ಅಸಂತುಷ್ಟರಾಗಿ ಹೋಗಿ ರಾಜ್ಯಾವನತಿಯಾಗುವುದೆಂದೂ ತನ್ನ ಕಡೆಯವರಾದ ಅನೇಕ ಇಷ್ಟರೂ, ಮಿತ್ರರೂ, ಬಂಧುಗಳೂ ಪಾಂಡವರ ಪಕ್ಷವಾಗಿಇರುವುದರಿಂದ ಅಪ್ರತಿಹತಶಕ್ತರಾದ ಇವರನ್ನು ಗೆಲ್ಲುವ ತಂತ್ರವನ್ನು ಹುಡುಕುತ್ತಿರುವನು. ಈ ಸಮಯಕ್ಕೆ ಸರಿಯಾಗಿ ವ್ಯಾಸಮಹರ್ಷಿಗಳು ಬಂದು ಅರ್ಜುನನಿಗೆ ಮಂತ್ರೋಪದೇಶವನ್ನುಮಾಡಿ ಇಂದ್ರಕೀಲಪರ್ವತಕ್ಕೆ ಹೋಗಿ ತಪವನ್ನಾಚರಿಸಿ ದಿವ್ಯಾಸ್ತ್ರಗಳನ್ನು ಹೊಂದಲು ಕಳುಹಿಸಿಕೊಡುವರು. ಮೂಲಕಥೆಯಲ್ಲಿ ವ್ಯಾಸರು ಮಂತ್ರವನ್ನು ಯುಧಿಷ್ಠಿರನಿಗೆ ಉಪದೇಶಿಸಿದಂತೆಯೂ ಅನಂತರ ಯುಧಿಷ್ಠಿರನು ಅರ್ಜುನನಿಗೆ ಉಪದೇಶಿಸಿದಂತೆಯೂ ಬರೆಯಲ್ಪಟ್ಟಿದೆ. ಇದರಲ್ಲಿ ವ್ಯಾಸರು ಮೊದಲು ಅರ್ಜುನನಿಗೆ ಉಪದೇಶಮಾಡಿದಂತಿದೆ. ಮಹಾಭಾರತದಲ್ಲಿ ಅರ್ಜುನನು ಮಂತ್ರಬಲದಿಂದ ಮನೋವೇಗದಂತೆ ಜಾಗ್ರತೆಯಾಗಿ ಇಂದ್ರಕೀಲಪರ್ವತಕ್ಕೆ ಹೋದನೆಂದಿದೆ. ಕಿರಾತದಲ್ಲಿ ಋಷಿಯ ಅಪ್ಪಣೆಯಂತೆ ಯಕ್ಷನೊಬ್ಬನು ಅರ್ಜುನನನ್ನು ಇಂದ್ರಕೀಲಪರ್ವತಕ್ಕೆ ಕರದುಕೊಂಡು ಹೋದುದಾಗಿದೆ. ಅಲ್ಲಿಯ ಪರ್ವತವರ್ಣನೆ, ಹಿಮಾಲಯದಲ್ಲಿ ಕಂಡುಬರುವ ಸೊಬಗಿನ ನೋಟಗಳು, ಗಂಧಮಾದನ, ಇಂದ್ರಕೀಲಪರ್ವತಗಳ ಮನೋಹರ

ಚಿತ್ರಗಳು ಅಲ್ಲಿ ತೋರಿಬರುವ ಋತುವರ್ಣನೆ, ಅರುಣೋದಯ, ಚಂದ್ರೋದಯ ವರ್ಣನೆಗಳು ಬಹು ಸೊಗಸಾಗಿ ಜೋಡಣೆಯಾಗಿವೆ. ತಪಶ್ಚರಣೆಗಾಗಿ ನಿಂತಿರುವ ಫಲುಗುಣನ ವರ್ಣನೆಯು ಕವಿಯ ಅತ್ಯಂತ ಚತುರತೆಯನ್ನು ಸೂಚಿಸುವುದಾಗಿದೆ. ಮೂಲಕಥೆಯಲ್ಲಿ, ಅರ್ಜುನನು ಇಂದ್ರಕೀಲಕ್ಕೆ ಹೋದಕೂಡಲೇ ವೃದ್ಧಬ್ರಾಹ್ಮಣವೇಷದಿಂದ ಇಂದ್ರನು ಬಂದುದು, ತಪಶ್ಚರಣವು ಬೇಡವೆಂದು ಹೇಳಿದುದು ಶಿವನನ್ನು ಆರಾಧಿಸೆಂದುಹೇಳಿದುದು ಇರುವುವು. ಕಾವ್ಯದಲ್ಲಿ ಮೊದಲು ಇಂದ್ರಕೀಲಪರ್ವತದ ಕಾಡಿನಲ್ಲಿ ತಪೋನಿರತನಾಗಿರುವ ಅರ್ಜುನನನ್ನು ನೋಡಿ ಕಾವಲುಗಾರರು ಬಂದು ಇಂದ್ರನಲ್ಲಿ ಹೇಳುವಿಕೆ, ಇಂದ್ರನು ತಪೋಭಂಗಕ್ಕಾಗಿ ಅಪ್ಸರೆಯರನ್ನು ಕಳುಹಿಸಿಕೊಡುವಿಕೆ, ಅಪ್ಸರೆಯರ ಹಾವಭಾವವಿಲಾಸ, ಚಮತ್ಕಾರವರ್ಣನೆಗಳು ಅಪ್ಸರೆಯರ ಪ್ರಯತ್ನಗಳೆಲ್ಲವೂ ನಿಷ್ಫಲವಾಗಲು ಎಲ್ಲರೂ ಇಂದ್ರನ ಬಳಿಗೆ ಹೋಗಿ ಹೇಳಿಕೊಳ್ಳುವಿಕೆ, ಅನಂತರ ಇಂದ್ರನ ಆಗಮನ, ಕಿರೀಟಿಯ ದೃಢಚಿತ್ತವೃತ್ತಿಗೆ ಸಂತೋಷಿಸಿ ಇಂದ್ರನು ಪ್ರತ್ಯಕ್ಷನಾಗಿ ಶಿವನನ್ನು ಆರಾಧಿಸಿ ಅಭೀಷ್ಟವನ್ನು ಪಡೆಯೆಂದು ಹೇಳಿ ಹೊರಟುಹೋದುದು, ಇವೇ ಮೊದಲಾದುವು ಸುಮಾರು ನಾಲ್ಕು ಸರ್ಗಗಳಲ್ಲಿ ಬರೆಯಲ್ಪಟ್ಟಿರುವುವು. ಮಹಾಭಾರತದಲ್ಲಿ ಶಿವನು ಶಿವೆಯೊಡನೆ ಮತ್ತು ಏತವಾದ ಭೂತವೇತಾಳಗಳೊಡನೆ ಕಿರಾತವೇಷವನ್ನು ಧರಿಸಿ ಅರ್ಜುನನ ಬಳಿಗೆ ಬಂದನೆಂದಿದೆ. ಅಲ್ಲದೆ ಮೊದಲಿನಿಂದ ಕೊನೆಯವರೆಗೂ ಅರ್ಜುನ ಮತ್ತು ಈಶ್ವರ ಇವರೀರ್ವರಿಗೇ ಯುದ್ಧನಡೆದುದಾಗಿ ಹೇಳಲ್ಪಟ್ಟಿದೆ. ಕಾವ್ಯದಲ್ಲಿ ಶಿವನು ವೇಷಧಾರಿಗಳಾದ ಅನೇಕ ಕಿರಾತರನ್ನು ಅರ್ಜುನನೊಡನೆ ಜಗಳವಾಡಲು ಮೊದಲು ಕಳುಹಿಸುವನು. ಅವರೆಲ್ಲರೂ ಪರಾಜಿತರಾದ ಅನಂತರ ತಾನು ಶಿವೆಯೊಡನೆ ಯುದ್ಧಮಾಡುವುದಕ್ಕೆ ಬರುವನು. ಇಲ್ಲಿ ಕವಿಯು ಅರ್ಜುನನ ಸ್ಥೈರ್ಯಪರಾಕ್ರಮಗಳನ್ನು ಹೇಳುವುದಕ್ಕಾಗಿಯೇ ಅನೇಕ ಜನ ಕಿರಾತರೊಡನೆ ಜಗಳವಾಡಿದಂತೆ ತೋರಿಸಿರುವನು. ಇಲ್ಲಿ ಕವಿಯು ಹೇಳಿರುವ ಶೌರ್ಯವರ್ಣನೆಯನ್ನು ಮಹಾಭಾರತದ ಯುದ್ಧವರ್ಣನದೊಡನೆ ಹೋಲಿಸಿ ನೋಡಿದರೆ ಮಹಾಭಾರತದ ಯುದ್ಧಪ್ರಸಕ್ತಿಯು ನೀರಸವಾಗಿಯೇ ತೋರುವುದು. ಮಹಾಭಾರತದಲ್ಲಿ ಶಿವನು ಅರ್ಜುನನನ್ನು ಘಟ್ಟಿಯಾಗಿ ಹಿಡಿದು ತಬ್ಬಿ ಕಂಕುಳಲ್ಲಿ ಅದುಮಿಕೊಂಡನೆಂದೂ ಅರ್ಜುನನು ಜ್ಞಾನತಪ್ಪಿಕೆಳಗೆಬಿದ್ದುಹೋಗಿ ಅನಂತರ ಚೇತರಿಸಿಕೊಂಡು ನೋಡುವಾಗ ತಾನು ಹಿಂದೆ ಲಿಂಗಕ್ಕೆ ಅರ್ಚನೆಮಾಡಿದ್ದ ಪುಷ್ಪಹಾರವು ಈ ಕಿರಾತರೊಡೆಯನ ಕಂಠದಲ್ಲಿ ಇದ್ದಹಾಗೂ ಅನಂತರ ಅವನನ್ನು ಪರಶಿವನನ್ನಾಗಿ ತಿಳಿದು ಅಪರಾಧವನ್ನು ಮನ್ನಿಸತಕ್ಕುದೆಂದು ಪ್ರಾರ್ಥಿಸಿಕೊಂಡಹಾಗೂ

ಶಿವನು ಅರ್ಜುನನ ದೃಢಸಂಕಲ್ಪಕ್ಕೆ ಮೆಚ್ಚಿ ಪಾಶುಪತಾಸ್ತ್ರವನ್ನು ಕೊಟ್ಟ ಹಾಗೂ ಹೇಳಲ್ಪಟ್ಟಿದೆ. ಕಾವ್ಯದಲ್ಲಿ ಅರ್ಜುನನೊಡನೆ ಈಶ್ವರನು ಜಗಳವಾಡುತ್ತಿದ್ದ ಹಾಗೆಯೇ ಅರ್ಜುನನಿಂದ ಬಿಡಿಸಿಕೊಂಡು ಅಂತರಿಕ್ಷಕ್ಕೆ ಹೋದ ಹಾಗೂ ಅರ್ಜುನನು ಅಲ್ಲಿಗೂ ಬಿಡದೆ ಮೇಲಕ್ಕೆ ಹೋಗುತ್ತಿರುವ ಈಶ್ವರನ ಎರಡು ಕಾಲುಗಳನ್ನು ಹಿಡಿದು ಕೆಳಕ್ಕೆ ಎಳೆಯುತ್ತಿದ್ದಂತೆಯೂ ವರ್ಣಿಸಿ ಭಕ್ತ ಪರಾಧೀನನಾದ ಪರಮೇಶ್ವರನು ಇವನ ನಿಶ್ಚಲಚಿತ್ತವೃತ್ತಿಗೆ ಮೆಚ್ಚಿ ಪಾಶುಪತಾಸ್ತ್ರವನ್ನು ಕೊಟ್ಟಂತೆಯೂ ವರ್ಣಿಸಲ್ಪಟ್ಟಿದೆ. ಇದೇ ವಿಚಾರವು ಕೊಂಚ ಕೊಂಚ ಮಾರ್ಪಡಿಸಿ ಶಿವಪುರಾಣದಲ್ಲಿಯೂ ಹೇಳಲ್ಪಟ್ಟಿದೆ.

ಇವನ ಕಾವ್ಯದ ಚಿತ್ರಬಂಧಚತುರತೆಯನ್ನು ತೋರಿಸುವುದಕ್ಕಾಗಿ ಎರಡುಶ್ಲೋಕಗಳು ಸಾಕೆಂದು ತೋರುವುದು.

ಕೊನೆಯ ತಕಾರ ಬಿಟ್ಟು ನಕಾರದ ಸಹಾಯದಿಂದಲೇ ಶ್ಲೋಕವೆಲ್ಲಾ ಬರೆಯಲ್ಪಟ್ಟಿರುವುದು—

ನನೋ ನನುನ್ನೋ ನುನ್ನೋನೋ
ನಾನಾ ನಾನಾನನಾ ನನು ।
ನುನ್ನೋ ನುನ್ನೋ ನನುನ್ನೇನೋ
ನಾನೇನಾ ನುನ್ನನುನ್ನನುತ್ ॥ ೧೫–೧೪ ॥

ಪ್ರತಿಪಾದವನ್ನು ತಲೆಕೆಳಗೆಮಾಡಿ ಓದಿದರೂ ಒಂದೇ ರೀತಿಯಾಗಿರುವುದು. ಇಂತಹ ಬಂಧಕ್ಕೆ ಸರ್ವತೋಭದ್ರವೆಂದು ಹೆಸರು.

ದೇವಾಕಾನಿನಿ ಕಾವಾದೇ
ವಾಹಿಕಾಸ್ವಸ್ವಕಾಹಿ ವಾ ।
ಕಾಕಾರೇಭಭರೇ ಕಾಕಾ
ನಿಸ್ವಭವ್ಯವ್ಯಭಸ್ವನಿ ॥ ೧೫—೨೫ ॥

ಇಂತಹ ಶ್ಲೋಕಗಳು ಎಷ್ಟೋ ದೊರಕುವುವು.

ಕಿರಾತಾರ್ಜುನೀಯದಲ್ಲಿ ಕಂಡುಬರುವ ಸುಂದರಭಾಗಗಳು—

ನಾಲ್ಕನೆಯ ಸರ್ಗ— ಕವಿಕೃತಶರದ್ವರ್ಣನೆ, ಗುಹ್ಯಕಕೃತಶರದ್ವರ್ಣನೆ
ಐದನೆಯ ಸರ್ಗ— ಹಿಮಾದ್ರಿವರ್ಣನೆ
ಆರನೆಯ ಸರ್ಗ— ತಪೋವರ್ಣನೆ

ಎಂಟನೆಯ ಸರ್ಗ–ಗಂಧರ್ವ ಮತ್ತು ಅಪ್ಸರೆಯರ ಪುಷ್ಪಾಪಚಯವರ್ಣನೆ

ಒಂಭತ್ತನೆಯ ಸರ್ಗ—ಸಂಧ್ಯಾವರ್ಣನೆ, ಚಂದ್ರೋದಯವರ್ಣನೆ, ಸುರತವರ್ಣನೆ, ಪಾನಗೋಷ್ಠೀವರ್ಣನೆ ಮತ್ತು ಪ್ರಭಾತವರ್ಣನೆ

ಹತ್ತನೆಯ ಸರ್ಗ—ಅಪ್ಸರೆಯರು ಮಾಡುವ ಅರ್ಜುನನ ವರ್ಣನೆ, ವರ್ಷಾದಿ ಋತುವರ್ಣನೆ, ಅಪ್ಸರೆಯರ ಚೇಷ್ಟಾವರ್ಣನೆ, ಪ್ರಯಾಸವೈಫಲ್ಯವರ್ಣನೆಗಳೇ ಮೊದಲಾದುವು ಅತ್ಯಂತಮನೋಹರವಾಗಿ ವರ್ಣಿತವಾಗಿರುವುವು.

ಇವನು ರಾಜನೀತಿಕೋವಿದನೆಂಬುದಕ್ಕೆ ಈ ಕೆಳಗಣ ಎರಡು ಶ್ಲೋಕಗಳು ಸಾಕಾಗಿರುವುವು.

ಶುಚಿ ಭೂಷಯತಿ ಶ್ರುತಂ ವಪುಃ
　ಪ್ರಶಮಸ್ತಸ್ಯ ಭವತ್ಯಲಂಕ್ರಿಯಾ ।
ಪ್ರಶಮಾಭರಣಂ ಪರಾಕ್ರಮಃ
　ಸ ನಯಾಪಾದಿತಸಿದ್ಧಿಭೂಷಣಃ ॥ ೨—೩೨ ॥

ಲೋಕದಲ್ಲಿ ಮನುಷ್ಯನಿಗೆ ಸಂಪ್ರದಾಯಶುದ್ಧವಾಗಿರುವ ಐಹಿಕಾಮುಷ್ಮಿಕಬೋಧಕವಾದ ಶಾಸ್ತ್ರಗಳು ಭೂಷಣವಾಗಿರುವುವು. ಶಾಸ್ತ್ರಪ್ರವಚನಗಳಿಗೆ ಕೋಪಶಾಂತಿಯೇ ಭೂಷಣ, ಆ ಶಾಂತಿಗೆ ಪರಾಕ್ರಮವು ಭೂಷಣ. ಅಂತಹ ಪರಾಕ್ರಮವೂ ಕೂಡಾ ಯುಕ್ತಾಯುಕ್ತವಿವೇಚನೆಯುಳ್ಳದ್ದಾಗಿರಬೇಕು. ಹಾಗಲ್ಲದಿದ್ದರೆ ಅಂತಹ ಮನುಷ್ಯನನ್ನು ಪಶುವೆಂದು ರಾಜನೀತಿಜ್ಞರು ಹೇಳುವರು.

ಜೀಯಂತಾಂ ದುರ್ಜಯಾ ದೇಹೇ
　ರಿಪವಶ್ಚಕ್ಷುರಾದಯಃ ।
ಜಿತೇಷು ನನು ಲೋಕೋಽಯಂ
　ತೇಷು ಕೃತ್ಸ್ನಸ್ತ್ವಯಾ ಜಿತಃ ॥ ೧೧—೩೨ ॥

ಎಲೆ ಮಾನವ! ನೀನು ಬಾಹ್ಯಪ್ರಪಂಚವನ್ನೆಲ್ಲಾ ಗೆಲ್ಲುವೆನೆಂದು ಗಡಬಡಿಸುವುದಕ್ಕಿಂತಲೂ ಶರೀರದಲ್ಲಿಯೇ ಇದ್ದುಕೊಂಡು ಸುಖಮಯವೆಂದು ಭ್ರಾಂತಿಗೊಳಿಸಿ ಕಷ್ಟಕ್ಕೆ ಈಡುಮಾಡುವ ಚಕ್ಷುರಾದಿಂದ್ರಿಯಗಳನ್ನು ಜಯಿಸು. ಆಗ ಪ್ರಪಂಚವನ್ನು ಜಯಿಸಿದಂತಾಗುವುದೆಂದು ತಿಳಿ.

ಕಿರಾತಾರ್ಜುನೀಯವನ್ನೋದಿ ನೋಡಿರುವ ಕೆಲವರು ಕಾಳಿದಾಸನ ಕವಿತೆಯಂತೆ ಸರಳವೂ ಮೃದುಪದವಿನ್ಯಾಸವೂ ಇರದೆ ಕಠಿನತರವಾಗಿರುವುದೆಂದು ಭಾರವಿಯ ಮೇಲೆ ಭಾರವನ್ನು ತಳ್ಳುವರು. ಗೀರ್ವಾಣವಿದ್ಯಾಪಾರಂಗತರು ಮಹಾಕವಿ ಬಾಣನನ್ನು 'ಪ್ರತಿವಾದಿಮರ್ಮನಿರ್ಮಥನಕರ್ಮಠ'ನೆಂದೂ 'ಸೌಶೀಲ್ಯತ್ರಾಣ'ನೆಂದೂ, ಮಯೂರನನ್ನು 'ಘನಶಬ್ದಸಾಂಗತ್ಯಜನಿತಾತ್ಯಧಿಕಾಮೋದಸಂದಾಯಿ'ಯೆಂದೂ, ಭಾರವಿಯನ್ನು 'ಸಾರತರನವಾರ್ಥಪೋಷಣಧುರೀಣ'ನೆಂದೂ ಗೌರವಿಸುತ್ತಿರುವರು.

ಭಾರವಿಯ ಕಾವ್ಯವು ವೀರರಸಪ್ರಧಾನವಾದುದಾಗಿ ಪಾತ್ರಗಳು ಗಾಂಭೀರ್ಯ, ವೀರ್ಯ, ಸೌಶೀಲ್ಯಾದಿಗಳಿಂದ ಕೂಡಿರುವುದಲ್ಲದೆ ಅರ್ಥ ಗೌರವದಲ್ಲಿ ಅತ್ಯಂತೋತ್ತಮಕಾವ್ಯವಾಗಿರುವುದು. ಕಾಳಿದಾಸನ ಕಾವ್ಯವು ಶೃಂಗಾರರಸಪ್ರಧಾನವಾದುದು. ಭಾರವಿಯದಾದರೋ ವೀರರಸಪ್ರಧಾನ ವಾದುದಾಗಿ ಬಹು ಹೃದಯಂಗಮವಾದ ರಾಜನೀತಿಯೊಡನೆ ಕೂಡಿದು ದಾಗಿರುವುದು. ಇವನು ಪಾಂಡಿತ್ಯಪ್ರದರ್ಶನಕ್ಕಾಗಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳನ್ನು ವಿಶೇಷವಾಗಿ ಹಾಕಿರುವನೆಂದೂ ಕಾಳಿದಾಸನ ಗ್ರಂಥಗಳಷ್ಟು ಲಲಿತವಲ್ಲವೆಂದೂ ಹೇಳುವವರು ದ್ರಾಕ್ಷಿಯೂ ಅಂಜೂರವೂ ಎರಡೂ ಮಧುರವಾದುದಾದರೂ ರುಚಿಯು ಬೇರೆಬೇರೆಯೆಂಬುದನ್ನೂ ಕವಿಭಾರವಿಯು ರಾಜನೀತಿಜ್ಞನಾದ ಮತ್ತು ವೀರರಸಪ್ರತಿಪಾದಕನಾದ ಕವಿ ಯೆಂಬುದನ್ನೂ ಮರೆಯಬಾರದು.‡



‡ "Bharavi the author of Kiratarjuneeya however is a poet of quite a different stamp. There is little of humour or of pathos in him. He is not even a great descriptive poet. What interests his geneous most is politics and the act of Government. In other words he is essentially a political poet or a poet Statesman."

Mr. Tulasi Rama Misra.

"In the richness of a creative fancy in true tenderneess and pathos and even in the sweetness and melody of verse Kalidasa is incomparably a greater poet. But neverthless Bharavi boasts of a vigour of thought and of language a spirited and lofty eloquence in expression to which Kalidasa seldom equals"

"Only one Mahakavya the Kiratarjuneeya, of Bharavi has been left to us and it is one of the most vigorous and spirited poems in the Sanskrit Language."

Mr. R. C. Dutt.

# ಘಟಕರ್ಪರ

ಇವನ ಜನ್ಮವೃತ್ತಾಂತವು ತಿಳಿಯದು. ಇವನು ವಿಕ್ರಮನ(?) ಆಸ್ಥಾನದ ನವಮಣಿಗಳ ಪೈಕಿ ಒಬ್ಬನೆನ್ನುವ—

**ಧನ್ವಂತರಿಕ್ಷಪಣಕಾಮರಸಿಂಹಶಂಕು**
**ವೇತಾಳಭಟ್ಟಘಟಕರ್ಪರಕಾಳಿದಾಸಾಃ ||**

ಎಂಬ ಚಾಟುಶ್ಲೋಕವನ್ನುಳಿದು ಸರಿಯಾಗಿ ನಂಬಬಹುದಾದ ಚರಿತ್ರಾಧಾರಗಳು ದೊರೆತಿರುವುದಿಲ್ಲ. ಕ್ರಿ. ಶ. ಸುಮಾರು ಐದನೆಯ ಶತಮಾನದ ಅನಂತರ ವಿಧವಿಧವಾದ ಪ್ರಾಸಗಳ ಜೋಡಣೆಯೂ ಚಿತ್ರಬಂಧಗಳೂ ಕಾವ್ಯಗಳಲ್ಲಿ ಹೇರಳವಾಗಿ ತಲೆದೋರಿ ಕವಿಗಳ ಕಾವ್ಯನಿಪುಣತೆಯು ಪರಸ್ಪರ ಸ್ಪರ್ಧೆಗಳಿಗೆ ಒಳಗಾಗಿ ರಸ ನಿಪುಣತೆಯ ವಿಚಾರವು ಮರೆತುಹೋಗಲ್ಪಟ್ಟಿರುವುದಾಗಿ ಕಂಡುಬರುತ್ತದೆ. ಕ್ರಿ. ಶ. ಆರನೆಯ ಶತಮಾನದ ಆಚಾರ್ಯದಂಡಿಯ ಕಾವ್ಯಾದರ್ಶದಲ್ಲಿ ಚಿತ್ರಬಂಧ, ಕ್ರಿಯಾಭೇದ, ಯಮಕ ಮೊದಲಾದುವುಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಭಾರವಿಯ ಕಿರಾತಾರ್ಜುನೀಯ ಕಾವ್ಯಕ್ಕೆ ಪ್ರಾಚೀನವಾದ ಕಾವ್ಯಗಳಲ್ಲಿ ರಸಾಪಕರ್ಷಕವಾದ ಚಿತ್ರಬಂಧ, ಯಮಕಾದಿಗಳ ಜೋಡಣೆಯು ಕಂಡುಬರುವುದಿಲ್ಲ. ಇದರಿಂದ ಆ ನಿಯಮಗಳನ್ನು ಈಚಿನ ಕವಿಗಳು ಅನುಸರಿಸಿ ಬರೆದಿರುವುದಾಗಿ ತೋರಿಬರುತ್ತದೆ.

ಇವನು ೨೨ ಶ್ಲೋಕಗಳುಳ್ಳ ಒಂದು ಕಾವ್ಯವನ್ನು ಬರೆದು ಅದನ್ನು **ಘಟಕರ್ಪರಕಾವ್ಯ**ವೆಂದು ಕರೆದಿರುವನು. ಇದಲ್ಲದೆ ವಿಷ್ಣುಶರ್ಮಕೃತ ಪಂಚತಂತ್ರದಲ್ಲಿ ನೀತಿಗಳನ್ನು ಚತುಷ್ಪಾದಜಂತುಗಳ ಮೂಲಕ ಬೋಧಿಸಿರುವಂತೆ ಇವನೂ **ನೀತಿಸಾರ**ವೆಂಬ * ಒಂದು ಉಪದೇಶಾತ್ಮಕ (Didactic) ಗ್ರಂಥವನ್ನು ಬರೆದಿರುವನು. ವಿಷ್ಣುಶರ್ಮನು ಐದನೆಯ ಶತಮಾನದವನು. ಇದರಿಂದಲೂ ಮತ್ತು ಕಾಳಿದಾಸಕೃತರಥಾಂಗದೂತದಲ್ಲಿನ ಕೆಲವು ಶ್ಲೋಕಗಳನ್ನು ಘಟಕರ್ಪರಕಾವ್ಯದ ಶ್ಲೋಕಗಳು ಹೋಲುವುದರಿಂದಲೂ ಇದು ಕ್ರಿ. ಶ. ಆರನೆಯ ಶತಮಾನದಲ್ಲಿ ಬರೆಯಲ್ಪಟ್ಟುದುದಾಗಿ ಹೇಳಬಹುದು.

ಘಟಕರ್ಪರಕಾವ್ಯದಲ್ಲಿ ನಾಯಿಕೆಯ ವಿರಹವರ್ಣನವನ್ನು ಮೊದಲು ಮಾಡಿ ನಾಯಕಪ್ರಾಪ್ತಿಯನ್ನು ಸೂಚಿಸಿ ಕಾವ್ಯವನ್ನು ಕೊನೆಗಾಣಿಸಿರುವನು. ಈ ಶ್ಲೋಕಗಳು ಯಮಕಪ್ರಾಸದಲ್ಲಿ ಬರೆಯಲ್ಪಟ್ಟಿರುವುವಾದರೂ ಮನೋಹರವಾಗಿಯೂ, ರಸಭರಿತವಾದುವಾಗಿಯೂ, ಸುಲಭವಾಗಿಯೂ ಇರು

---

* ವಿಷ್ಣುಶರ್ಮನ ನೀತಿಸಾರವು ಬೇರೆಯಾಗಿರಬೇಕೆಂದು ತೋರುವುದು.

ವೃವು. ನೀತಿಸಾರದಲ್ಲಿ ಹಂದಿಗೂ, ಸಿಂಹಕ್ಕೂ ಸಂಭಾಷಣೆಯು ನಡೆದಂತೆ ಸೂಚಿಸಿ ನೀತಿಯನ್ನು ಬೋಧಿಸಿರುವನು.†

ಘಟಕರ್ಪರಕಾವ್ಯದ ಮೊದಲನೆಯ ಶ್ಲೋಕವು—

ನಿಚಿತಂ ಖಮುಪೇತ್ಯ ನೀರದೈಃ
ಪ್ರಿಯಹೀನಾಹೃದಯಾವನೀರದೈಃ ।
ಸಲಿಲೈರ್ನಿಹಿತಂ ರಜಃ ಕ್ಷಿತೌ
ರವಿಚಂದ್ರಾವಪಿ ನೋಪಲಕ್ಷಿತೌ ॥ ಎಂದೂ

ಕೊನೆಯ ಶ್ಲೋಕವು—

ಭಾವಾನುರಕ್ತವನಿತಾಸುರತೈಃ ಶಪೇಯ
ಮಾಲಭ್ಯ ಚಾಂಬು ತೃಷಿತಃ ಕರಕೋಶಪೇಯಂ ।
ಜೀಯೇಯ ಯೇನ ಕವಿನಾ ಯಮಕೈಃ ಪರೇಣ
ತಸ್ಮೈ ವಹೇಯಮುದಕಂ ಘಟಕರ್ಪರೇಣ ॥

ಎಂಬ ಪ್ರತಿಜ್ಞೆಯೊಡನೆ ಮುಕ್ತಾಯಮಾಡಿರುವನು. ರಥಾಂಗದೂತದ ಶ್ಲೋಕಗಳನ್ನು ಹೋಲುವ ಎರಡು ಶ್ಲೋಕಗಳು ಈ ಕೆಳಗೆ ಕೊಟ್ಟಿದೆ—

| ಘಟಕರ್ಪರಕಾವ್ಯ— | ರಥಾಂಗದೂತ— |
|---|---|
| ನವಕದಂಬ! ಶಿರೋಽವನತಾಸ್ಮಿ ತೇ<br>ವಸತಿ ತೇ ಮದನಃ ಕುಸುಮಸ್ಥಿತೇ ।<br>ಕುಟಜ! ಕಿಂಕುಸುಮೈರುಪಹಸ್ಯತೇ<br>ಪ್ರಣಿನತಾಸ್ಮಿ ಸದುಷ್ಪ್ರಸಹಸ್ಯ ತೇ॥೧೭ | ಅಪಿ ನಿಶಮ್ಯ ವನಪ್ರಿಯಕೂಜಿತಂ<br>ಕಲರವಂ ಮಧುರಾವಿದಿತೋದ್ಭವಂ ।<br>ಅಭಿರತೋಽಸ್ತಿ ಸತತ್ತ್ವಗವಾರ್ಗಣೇ<br>ವಿತತದೀರ್ಘಜಟಾಭರತಾಪಸ ॥೬೩॥ |
| ತರುವರ! ವಿನತಾಸ್ಮಿ ತೇ ಸದಾ ಹಂ<br>ಹೃದಯಂ ಮೇ ಪ್ರಕರೋಷಿ ಕಿಂ ಸದಾಹಂ।<br>ತವ ಪುಷ್ಪನಿರೀಕ್ಷಿತಾ ಪವೇ ಹಂ<br>ವಿಸೃಜೇ ಸಹಸೈವ ನೀಪ ದೇಹಂ ॥ ೧೮ ॥ | ಕಿಮು ಘನೋದಯತಾಂಡವನರ್ತನಂ<br>ಪ್ರಿಯಜನಃ ಪ್ರಸಮಿಕ್ಷ್ಯ ಮನೋಹರಂ।<br>ನ ವಿಜಹಾತಿ ಮಯೂರಸಮಾಪತಾಂ<br>ವಿತತದೀರ್ಘಜಟಾಭರತಾಪಸ ॥೬೪॥ |

## ಶಾಶ್ವತ

ಇವನು "**ಅನೇಕಾರ್ಥಸಮುಚ್ಚಯ**"ವೆಂಬ ಕೋಶವನ್ನು ಬರೆದಿರುವನು. ಕೋಶಪ್ರಾರಂಭದಲ್ಲಿ ವಿಷ್ಣುಸ್ತೋತ್ರವನ್ನು ಮಾಡಿರುವುದರಿಂದಲೂ ಕೋಶಾಂತ್ಯದಲ್ಲಿ 'ಕೃತಿರಿಯಂ ಭಟ್ಟಪುತ್ರಶಾಶ್ವತಸ್ಯ' ಎಂದೂ

ಅಭಿಧಾನಾನಿ ವಿವಿಚ್ಯ ಜ್ಞಾತ್ವಾ ನಿಖಿಲಾನಿ ಸುಕವಿಕಾವ್ಯಾನಿ ।
ಕೃತ್ವಾ ಗುರುಮಭಿಯೋಗಂ ಕೋಶೋಯಂ ಶಾಶ್ವತೇನ ಕೃತಃ ॥ ೮೦೫ ॥

† History of the classical Sanskrit Literature, P. 118.

ಎಂದಿರುವುದರಿಂದಲೂ ಇವನು ಬ್ರಾಹ್ಮಣನಾಗಿರಬೇಕೆಂದೂ ಭಟ್ಟನೆಂಬುವನ ಮಗನಾಗಿರಬೇಕೆಂದೂ ಗೊತ್ತಾಗುವುದು. ಈ ಭಟ್ಟನಾರೆಂಬುದು ತಿಳಿಯದು.

ಇವನ ಕಾಲವಿಚಾರದಲ್ಲಿ ಪಂಡಿತರು ಭಿನ್ನಾಭಿಪ್ರಾಯಪಡುವರು. ಕ್ರಿ.ಶ. ೧೨ನೆಯ ಶತಮಾನದಲ್ಲಿದ್ದವನೆಂದು ಕೆಲವರೂ, ಅಮರಸಿಂಹನಿಗಿಂತಲೂ ಪ್ರಾಚೀನನೆಂದು ಕೆಲವರೂ—

> ಅಪಿ ಶಬ್ದೇನ ಸಾಧ್ಯಂತೇ ಪೂರ್ವಾಚಾರ್ಯಾನುಸಾರತಃ ।
> ವಿಸ್ಮೃತಾ ಯೇ ಪ್ರಮಾದೇನ ಕಥ್ಯಂತೇ ತೇಧುನಾ ಪುನಃ ॥ (೫—೭೩೫)

ಎಂದು ಶಾಶ್ವತನು ಹೇಳಿರುವುದರಿಂದ ಪೂರ್ವಾಚಾರ್ಯನೆಂದರೆ ಇಲ್ಲಿ ಅಮರಸಿಂಹನೇ ಎಂದು ಕೆಲವರೂ ಹೇಳುವರು. ಆದರೂ ಈ ಕೆಳಗಣ ಪ್ರಮಾಣಗಳಿಂದ ಹಾಗೆ ತೋರುವುದಿಲ್ಲ.

ಇಲ್ಲಿ ಪೂರ್ವಾಚಾರ್ಯಶಬ್ದವು ಬಹುವಚನದಲ್ಲಿರುವುದು. ಅಮರನೊಬ್ಬನೇ ಪೂರ್ವಾಚಾರ್ಯನು ಎಂದು ಹೇಳಲಾಗುವುದಿಲ್ಲ. ಅಮರನಿಗಿಂತಲೂ ಪೂರ್ವಾಚಾರ್ಯರಾದ ಕೋಶಕಾರರನೇಕರಿರುವರು. ಅಲ್ಲದೆ ಇಲ್ಲಿ ಕೊಟ್ಟಿರುವ ಉದಾಹರಣೆಗಳಿಂದ ಅಮರಸಿಂಹನ ನಾನಾರ್ಥವರ್ಗದ ಶ್ಲೋಕಗಳನ್ನೂ ಪದಗಳನ್ನೂ ಶಾಶ್ವತನು ತೆಗೆದುಕೊಂಡೇ ತನ್ನ ಕೋಶವನ್ನು ಬರೆದಿರುವುದಾಗಿ ಕಂಡುಬರುತ್ತದೆ.

| | | ಅಮರಕೋಶ | ಶಾಶ್ವತಕೋಶ |
|---|---|---|---|
| ೧ | ಮಾತ್ರಂ ಕಾರ್ತ್ಸ್ನ್ಯೇವಧಾರಣೇ | ೩—೩ ೧೭೯ | ೬೧ |
| ೨ | ಯೋಗ್ಯಭಾಜನಯೋಃ ಪಾತ್ರಂ | ,, ೧೮೦ | ೪೦೦ |
| ೩ | ಪಶ್ಚಾತ್ಸಾದೃಶ್ಯಯೋರನು | ,, ೨೪೯ | ೭೯೯ |
| ೪ | ಪರಿಧಿರ್ಯಜ್ಞಿಯತರೋಃ ಶಾಖಾಯಾಮುಪಸೂರ್ಯಕೇ | ,, ೯೭ | ೪೨೪ |
| ೫ | ಭಾವಃ ಸತ್ತಾ ಸ್ವಭಾವಾಭಿಪ್ರಾಯಚೇಷ್ಟಾತ್ಮಜನ್ಮಸು(ಯೋನಿಷು) | ೨೦೮ | ೪೮ |
| ೬ | ಯೋಗಃಸನ್ನಹ(ವನ)ನೋಪಾಯ ಸಂಗತಿಧ್ಯಾನಯುಕ್ತಿಷು | ೩—೩೨೨ | ೧೦೦ |
| ೭ | ದಿಗ್ದೇಶಕಾಲೇ ಪೂರ್ವಾದೌ ಪ್ರಾಗುದಕ್ಪ್ರತ್ಯಗವ್ಯಯಂ | ೩-೪--೨೮ | ೧೩೯ |
| ೮ | ದೋಷೋತ್ಪಾದೇನ ಬಂಧಃ ಸ್ಯಾತ್ಪ್ರಕೃತ್ಯಾದೇರ್ವಿನಶ್ವರೇ ಮುಖ್ಯಾನುಯಾಯಿನಿ ಶಿಶೌ ಪ್ರಕೃತಸ್ಯಾನುವರ್ತನೇ | ೯೮--೯೯ | ೬೫ |

ಎಂದು ಹೇಳಲ್ಪಟ್ಟಿರುವುದರಿಂದಲೂ ಶಾಶ್ವತಕೋಶದಲ್ಲಿರುವ 'ಖಲಿನಾ' ಎಂಬ ಆಕಾರಾಂತ ಸ್ತ್ರೀಲಿಂಗಶಬ್ದವು (೫—೩೭೭) ಅಮರನ ನಾಮಲಿಂಗಾನುಶಾಸನದಲ್ಲಿ ಕಂಡುಬರದೆ ಕ್ರಿ. ಶ. ೯ನೆಯ ಶತಮಾನದ 'ಶಾಕಟಾಯನ'ನ ಲಿಂಗಾನುಶಾಸನದಲ್ಲಿ ಕಂಡುಬರುವುದರಿಂದಲೂ, ಶಂಕರಗೀತಾಭಾಷ್ಯದಲ್ಲಿ (೯—೨೨) ಅಪೂರ್ವಾರ್ಥಸಂಪ್ರಾಪ್ತಿಮುತ್ತು ಲಬ್ಧಾರ್ಥ, ರಕ್ಷಣಾರ್ಥವನ್ನೊಳಕೊಂಡಿರುವ

'ಯೋಗ' ಮತ್ತು 'ಕ್ಷೇಮ'ಶಬ್ದಗಳು ಅಮರಕೋಶದಲ್ಲಿರದೆ ಶಾಶ್ವತನ ೧೦೨ ಮತ್ತು ೬೯೨ನೆಯ ಶ್ಲೋಕಗಳಲ್ಲಿ ಕಂಡುಬರುವುದರಿಂದಲೂ, ಶಾಶ್ವತನು ಅಮರಸಿಗಿಂತಲೂ ಅರ್ವಾಚೀನನೆಂದು ತಿಳಿಯಬರುವುದು.

**ದೃಷ್ಟಶಿಷ್ಟಪ್ರಯೋಗೋಹಂ ದೃಷ್ಟವ್ಯಾಕರಣತ್ರಯಃ ।**
**ಅಧೀತೀ ಸದುಪಾಧ್ಯಾಯಾಲ್ಲಿಂಗಶಾಸ್ತ್ರೇಷು ಪಂಚಸು ॥**

ಎಂದು ಶಾಶ್ವತನು ಹೇಳಿರುವುದರಿಂದ ಇವನು ಮೂರು ವಿಧ ವ್ಯಾಕರಣಗಳನ್ನೂ ಐದುವಿಧ ಲಿಂಗಾನುಶಾಸನಗಳನ್ನೂ ಪಾಠಮಾಡಿದುದಾಗಿ ತಿಳಿಯಬರುತ್ತದೆ. ಇವುಗಳಲ್ಲಿ ಪ್ರಸಿದ್ಧಿಯನ್ನು ಹೊಂದಿದ ಚಂದ್ರಗೋಮಿಯ ವ್ಯಾಕರಣವೂ ಒಂದಾಗಿರಬಹುದೆಂದು ಒತ್ತಿ ಹೇಳಬೇಕಾದುದಿಲ್ಲ.

**ವರ್ಣಾದೀನಾಂ ಗುಣಸ್ತಂತ್ರೀ ತಂತ್ರೀ ದೇಹಸಿರಾ ಮತಾ ।** —ಶಾಶ್ವತ— ೪೨೬.

ಇಲ್ಲಿ 'ತಂತ್ರೀ' ಶಬ್ದವು 'ನದೀ' ಶಬ್ದದಂತೆ ಚಂದ್ರಗೋಮಿಯ 'ಉಣಾದಿ' ಸೂತ್ರಪ್ರಕಾರ ಸರಿಹೋಗುವುದು, ಪಾಣಿನಿಯಸೂತ್ರಪ್ರಕಾರ 'ತಂತ್ರೀಃ' ಎಂದಾಗಬೇಕು. ಮತ್ತು ೫೪ನೆಯ ಶ್ಲೋಕದಲ್ಲಿ ಕಾಣಬರುವ 'ವಿಶ್ರಾವ' ಶಬ್ದವು ಚಂದ್ರಗೋಮಿಯ ವ್ಯಾಕರಣದಂತೆ ಬರೆಯಲ್ಪಟ್ಟಿರುವುದೇ ಹೊರತು ಪಾಣಿನಿಯ ಸೂತ್ರಪ್ರಕಾರ "ವಿಶ್ರಾವು" ಎಂದು ಶಬ್ದಸಿದ್ಧಿಯಾಗುವುದಿಲ್ಲ. "ವಿಶ್ರವು" ಎಂದೇ ಆಗಬೇಕಾಗುತ್ತೆ. ಇದರಿಂದ ಕ್ರಿ. ಶ. ೪ನೆಯ ಶತಮಾನದವನಾದ ಚಂದ್ರಗೋಮಿಗಿಂತಲೂ ಶಾಶ್ವತನು ಅರ್ವಾಚೀನನೆಂದು ಹೇಳಬೇಕಾಗಿದೆ.

ಶಾಶ್ವತನ ಕೋಶವನ್ನು 'ದುರ್ಗನ ಕೋಶ'ದೊಡನೆ ಹೋಲಿಸಿದರೆ ದುರ್ಗನು ಶಾಶ್ವತನ ಕೋಶದ ಅನೇಕಭಾಗಗಳನ್ನು ತೆಗೆದುಕೊಂಡಿರುವಂತೆ ತಿಳಿಯಬರುತ್ತದೆ. ದುರ್ಗನು ೮ನೆಯ ಶತಮಾನಕ್ಕೆ ಸೇರಿದವನು.‡ ಇದರಿಂದ ಶಾಶ್ವತನು ದುರ್ಗನಿಗಿಂತಲೂ ಪ್ರಾಚೀನನೆಂದಾಯಿತು. ಇವೇ ಮೊದಲಾದ ಕಾರಣಗಳಿಂದ ಶಾಶ್ವತನು ಕ್ರಿ. ಶ. ೬ನೆಯ ಶತಮಾನದ ಉತ್ತರಾರ್ಧದಲ್ಲಿದ್ದವನೆಂದು ಹೇಳಬಹುದು. ಇವನ ಕೋಶವು ಅಮರನ ಕೋಶದಂತೆ ಸಂಪೂರ್ಣವಾಗಿರದೆ ಖಂಡಕೋಶವಾಗಿದ್ದರೂ ಕೋಶಾಂತ್ಯದಲ್ಲಿ—

'ಸಮಾಪ್ತೋಯಮನೇಕಾರ್ಥಸಮುಚ್ಚಯಃ' ಎಂದು ಹೇಳಿ ಮುಗಿಸಲ್ಪಟ್ಟಿರುವುದು,



‡ Introduction to Saswathakosha by Mr. K. G. Oka. P. 7.

# ಏಳನೆಯ ಶತಮಾನ



## ಶ್ರೀಹರ್ಷ

ಇವನು ಸ್ಥಾನೇಶ್ವರದಲ್ಲಿ ಕ್ರಿ. ಶ. ೬೦೬ ರಿಂದ ೬೪೭ರ ವರೆಗೆ ಬಹು ದಕ್ಷತೆಯಿಂದ ರಾಜ್ಯಭಾರವನ್ನು ಮಾಡಿದನು. ಇವನಿಗೆ ಎರಡನೆಯ ಶಿಲಾದಿತ್ಯ (Siladitya II) ಹರ್ಷ, ಹರ್ಷವರ್ಧನ, ಶ್ರೀಹರ್ಷವರ್ಧನಶಿಲಾದಿತ್ಯ ಇವೇ ಮೊದಲಾದ ನಾಮಾಂತರಗಳಿದ್ದುವು. ಇವನ ವಂಶವೃಕ್ಷವು * ಹೀಗಿರುವುದು.




ಗುಪ್ತವಂಶವು ಲಯವಾಗುತ್ತಾ ಬಂದಹಾಗೆಲ್ಲಾ ಸ್ಥಾನೇಶ್ವರದ ರಾಜಮನೆತನವು ಅಭಿವೃದ್ಧಿಯಾಗುತ್ತಾ ಬರುತ್ತಿತ್ತು. ಗುಪ್ತರಾಜ್ಯವು ನಾಶವಾದ ನಂತರ ಉತ್ತರ ಇಂಡಿಯಾದಲ್ಲಿ ದೇಶವು ಅನೇಕ ಭಾಗಗಳಾಗಿ ವಿಂಗಡಿಸಲ್ಪಟ್ಟು

* ಇದು ಬಂಸಖೇರಶಾಸನ ಮತ್ತು ಸೋನಪತ್ತನ ತಾಮ್ರಶಾಸನದಿಂದ ತೆಗೆದು ಬರೆದುದಾಗಿದೆ. ಮಧುವನದ ತಾಮ್ರಶಾಸನದಲ್ಲಿಯೂ ಹೀಗೆಯೇ ಇದೆ. ಬಾಣನು ಹರ್ಷಚರಿತದಲ್ಲಿ ಪುಷ್ಪಭೂತಿಯು ಈ ವಂಶದ ಮೂಲಪುರುಷನೆಂದು ಹೇಳಿರುವನು. ಆದರೆ ಇವನು ಹರ್ಷನಿಗೆ ಎಷ್ಟನೆಯ ತಲೆಯ ಹಿಂದಣನವನೆಂದು ಹೇಳುವ ಚರಿತ್ರಾಧಾರಗಳು ದೊರೆತಿಲ್ಲ.

ಅಲ್ಲಲ್ಲಿಗೆ ಶಕ್ತರಾಗಿದ್ದವರೇ ರಾಜರಾಗಿದ್ದುಕೊಂಡು ಆಳುತ್ತಿದ್ದರು. ಇವರು ಪರಸ್ಪರ ರಾಜ್ಯಲೋಭದಿಂದ ಜಗಳವಾಡುತ್ತಿದ್ದುದರಿಂದ ಹೂಣರು ಬರಲು ಅವಕಾಶವಾಯಿತು. ಆಗ ಇವರೆಲ್ಲರನ್ನು ಸದೆಬಡಿದು ಏಕಛತ್ರಾಧಿಪತ್ಯವನ್ನು ಮಾಡಲು ಶಕ್ತನಾದ ಒಬ್ಬರಾಜನ ಅವಶ್ಯಕತೆಯಿದ್ದಿತು. ಇಂತಹ ಕೊರತೆಯನ್ನು ಪ್ರಭಾಕರವರ್ಧನನು ಹೋಗಲಾಡಿಸಲೆಣಿಸಿ, ರಾಜ್ಯದಮೇಲೆ ಬಿದ್ದು ಹಾವಳಿಯನ್ನು ಮಾಡುತ್ತಿದ್ದ ಹೂಣರನ್ನೂ, ಸಿಂಧೂರಾಜರನ್ನೂ, ಗಾಂಧಾರದವರನ್ನೂ, ನೀತಿವಿಹೀನರಾದ ಗುಜರಾತಿನ ಲಾತೀಯರನ್ನೂ ಮತ್ತು ಮಾಲವದೇಶೀಯರನ್ನೂ ಜಯಿಸಿ 'ಪ್ರತಾಪಶೀಲ'ನೆಂಬ ಬಿರುದನ್ನು ಸಂಪಾದಿಸಿಕೊಂಡನು. ಹರ್ಷನ ವಂಶದವರೆಲ್ಲರೂ ಸೂರ್ಯಾರಾಧಕರಾಗಿದ್ದರು. ಮೊದಲನೆಯ ರಾಜ್ಯವರ್ಧನ, ಆದಿತ್ಯವರ್ಧನ ಮತ್ತು ಪ್ರಭಾಕರವರ್ಧನ ಈ ಮೂವರೂ ಪರಮಾದಿತ್ಯಭಕ್ತರೆಂದು ಮಧುವನದ ತಾಮ್ರಶಾಸನದಲ್ಲಿ ಹೇಳಲ್ಪಟ್ಟಿದೆ. ಪ್ರಭಾಕರವರ್ಧನನಿಗೆ 'ಪರಮಭಟ್ಟಾರಕಮಹಾರಾಜಾಧಿರಾಜ' ನೆಂಬ ಬಿರುದೂ ಇದ್ದಂತೆ ತಿಳಿಯಬರುತ್ತೆ. ಇವನು ಕ್ರಿ. ಶ. ೬೦೫ ರಲ್ಲಿ ಮೃತನಾದನಂತರ ಎರಡನೆಯರಾಜ್ಯವರ್ಧನನು ಸಿಂಹಾಸನವನ್ನೇರಿದನು. ಇವನು ಬುದ್ಧಮತಾವಲಂಬಿಯಾಗಿದ್ದನು. ಇವನಿಗೆ 'ಪರಮಸೌಗತ'ನೆಂಬ ಹೆಸರೂ ಇದ್ದಿತು. ರಾಜ್ಯಶ್ರೀಯಳ ಗಂಡನು ಮಾಳವರಾಜನಿಂದ ಕೊಲ್ಲಲ್ಪಟ್ಟುದಾಗಿ ತಿಳಿದು ರಾಜ್ಯವರ್ಧನನು ಮಾಳವರಾಜನ ಮೇಲೆ ದಂಡೆತ್ತಿ ಹೋಗಿ ತಾನೂ ಮೋಸದಿಂದ ಕೊಲ್ಲಲ್ಪಟ್ಟನು. ಆಗ ಹರ್ಷನಿಗೆ ೧೬ ವರ್ಷಗಳು. ಇವನು ಕ್ರಿ. ಶ. ೬೦೬ (October 606)ರಲ್ಲಿ ಸಿಂಹಾಸನವನ್ನೇರಿದನು. ಕೆಲವು ದಿವಸಗಳಾದನಂತರ ಹರ್ಷನು ರಾಜ್ಯಾಡಳಿತವನ್ನು ಸಿಂಹನಾದನೆಂಬ ಸೈನ್ಯಾಧಿಪತಿಯ ವಶಕ್ಕೊಳಪಡಿಸಿ ತಾನು ಹೆಚ್ಚಾದ ಸೈನ್ಯದೊಡನೆ ಮಾಳವರಾಜ್ಯದ ಮೇಲೆ ದಂಡೆತ್ತಿ ಹೋಗಿ ಆ ದೇಶವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿ ಸೆರೆಯಲ್ಲಿದ್ದ ತಂಗಿಯಾದ ರಾಜ್ಯಶ್ರೀಯು ಸೆರೆಯಿಂದ ತಪ್ಪಿಸಿಕೊಂಡು ವಿಂಧ್ಯಾಟವಿಗೆ ಹೋದುದಾಗಿ ತನ್ನ ದಾಯಾದನಾದ ಭಂಡಿಯೆಂಬವನಿಂದ ತಿಳಿದು ವ್ಯಾಘ್ರಕೇತು, ನಿರ್ಘಾತ, ಭೂಕಂಪ ಮೊದಲಾದ ಅರಣ್ಯಕರಮೂಲಕವಾಗಿಯೂ ಬುದ್ಧಸನ್ಯಾಸಿಯಾದ ದಿವಾಕರಮಿತ್ರ ಮತ್ತು ಅವನ ಶಿಷ್ಯರ ಮೂಲಕವಾಗಿಯೂ ರಾಜ್ಯಶ್ರೀಯನ್ನು ಹೊಂದಿ ಪುನಃ ದಿವಾಕರಮಿತ್ರನನ್ನು ಸಂದರ್ಶಿಸಿ ತಾನು ಸೈನ್ಯಸಮೇತನಾಗಿ ಹೊರಟಿರುವುದರಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡಿ ರಾಜ್ಯಗಳನ್ನು ಗೆದ್ದು ರಾಜ್ಯಕ್ಕೋಭೆಯನ್ನು ನಿಲ್ಲಿಸಿದನಂತರ ಪುನಃ ಅವನ ಬಳಿಗೆ ಬರುವುದಾಗಿ ಹೇಳಿ ೫೦೦೦ ಆನೆ, ೨೦,೦೦೦ ಸವಾ

ರರು, ೫೦,೦೦೦ ಕಾಲುಬಲದೊಂದಿಗೆ ಪೂರ್ವಾಭಿಮುಖವಾಗಿ ಹೊರಟು ಅವಿಧೇಯರೂ ದಂಗೆಕೋರರೂ ಆದ ರಾಜರುಗಳನ್ನು ಸೋಲಿಸಿ ಅವರಿಂದ ಕಪ್ಪ ಕಾಣಿಕೆಗಳನ್ನು ಹೊಂದಿ ೬ ವರ್ಷಗಳ ಹೊತ್ತಿಗೆ ಅವಿನೀತರಾದ ಪಂಚರಾಜ್ಯಾ*ಧಿಪತಿಗಳನ್ನು ಗೆದ್ದು ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸಿದನು. ಬಾಣನು ಬರೆದಿರುವ ಹರ್ಷಚರಿತದಲ್ಲಿ ಸಿಂಧುರಾಜ್ಯವನ್ನೂ ಹಿಮವತ್ಪರ್ವತದ ತಪ್ಪಲಲ್ಲಿರುವ ಭೂಪ್ರದೇಶ (ಪ್ರಾಯೇಣ ಈಗ ನಾವು ಕರೆಯುವ ನೇಪಾಳ)ವನ್ನೂ ಜಯಿಸಿದನೆಂದೂ ‡ ಅಸ್ಸಾಮಿನ ರಾಜನು ಮೊದಲಿನಿಂದಲೂ ಹರ್ಷನೊಡನೆ ಬಂಧುತ್ವವನ್ನು ಬೆಳಸಿ ಬೀಗನಾಗಿದ್ದನೆಂದೂ ಹೇಳಿರುವನು. ಆಮೇಲೆ ಹರ್ಷನು ಪಶ್ಚಿಮಕ್ಕೆ ಹೊರಟು ವಲ್ಲಭಿರಾಜ್ಯವನ್ನು ಗೆದ್ದನು. ಅನಂತರ ದಕ್ಷಿಣೋತ್ತರ ದೇಶಗಳ ರಾಜರುಗಳನ್ನು ಗೆದ್ದು ರಾಜ್ಯಗಳನ್ನು ಸ್ವಾಧೀನಮಾಡಿಕೊಂಡುದಲ್ಲದೆ ವಿನೀತರಾದ ರಾಜರುಗಳಿಂದ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಹೀಗೆ ಎಲ್ಲಾ ಕಡೆಯಲ್ಲಿಯೂ ರಾಜ್ಯವನ್ನು ವಿಸ್ತರಿಸಿ ದಕ್ಷಿಣರಾಜ್ಯಾಧಿಪತಿಯೂ ಮಹಾಪರಾಕ್ರಮಶಾಲಿಯೂ ಆದ ಎರಡನೆಯ ಪುಲಿಕೇಶಿಯೊಡನೆ ಹೋರಾಡಿ ಸಾಗದೆ ಹಿಂದಿರುಗಿದನು. † ಆಮೇಲೆ ಉತ್ತರಇಂಡಿಯಾದಲ್ಲಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಿ ಶಾಂತಿಯನ್ನುಂಟುಮಾಡಿದನು. ಹಿಮಾಲಯದಿಂದ ನರ್ಮದಾನದಿಯ ವರೆಗಿನ ಮತ್ತು ಕಾಮರೂಪ(Assam) ಮಾಳವ, ಗುಜರಾತ್, ಸೌರಾಷ್ಟ್ರದೇಶಗಳನ್ನೊಳಗೊಂಡು ಉತ್ತರಹಿಂದೂಸ್ಥಾನವೆಲ್ಲವೂ ಹರ್ಷನ ವಶವಾಗಿದ್ದಿತು. ಹರ್ಷನ ಸೈನ್ಯದಲ್ಲಿ ೬೦,೦೦೦ ಆನೆಗಳೂ, ೧,೦೦,೦೦೦ ಕುದುರೆಗಳೂ ಇದ್ದುವೆಂಬುದಾಗಿ ಹುಯನ್‌ತ್ಸಾಂಗನು ಹೇಳಿರುವನು. ಬಾಣನು ತನ್ನ ಹರ್ಷಚರಿತದಲ್ಲಿ ಆನೆಗಳು ಹೆಚ್ಚಾಗಿ ದೊರಕಬಹುದಾದ ಕಡೆ ಆಯಾಯ ದೇಶಪ್ರಮುಖರಿಂದ ಹಿಡಿಯಲ್ಪಟ್ಟು ರಾಜನಿಗೆ ಬಹುಮಾನಪೂರ್ವಕವಾಗಿ ಕೊಡಲ್ಪಟ್ಟುದುದಾಗಿ ಹೇಳಿರುವನು. ಹರ್ಷನ ಪಟ್ಟದಾನೆಗೆ (State Elephant) 'ದರ್ಪಶಾತ'ವೆಂದು ಹೆಸರು. ರಾಜನ ಕುದುರೆಗಳು ವನಾಯು (Arabia) ಆರಟ್ಟ, ಕಾಂಭೋಜ, ಭರದ್ವಾಜ, ಸಿಂಧು, ಪರ್ಷಿಯಾದೇಶಗಳಿಂದ ಬಂದುದಾಗಿ ಹೇಳಿ

---

* ಸ್ವರಾಷ್ಟ್ರ, (Panjab) ಕನ್ಯಕುಬ್ಜ, ಗೌಡ(Bengal), ಮಿಥಿಲಾ ಮತ್ತು ಒರಿಸ್ಸಾ ಈ ಐದು ರಾಜ್ಯಗಳನ್ನು ಹುಯನ್‌ತ್ಸಾಂಗನು ಪಂಚರಾಜ್ಯಗಳೆಂದು ಹೇಳಿರುವನು.—Watters 1. 34.

‡ ನೇಪಾಳವನ್ನು ಜಯಿಸಿ ತನ್ನ ಪರಾಕ್ರಮವನ್ನು ವರ್ಣಿಸಿ ಕೊಂಡಿರುವುದಾಗಿ ನೇಪಾಳೀಯಶಾಸನದಿಂದಲೂ ತಿಳಿಯಬರುತ್ತೆ.

† Fleet's dynasties of the Canarese districts. P. 350.

ರುವನು. ಹರ್ಷನ ಸೈನ್ಯದಲ್ಲಿ ಒಂಟೆಗಳೂ ಇದ್ದುವು. ರಾಜ್ಯದಲ್ಲಿ ಶಾಂತಿಯನ್ನುಂಟುಮಾಡಿದನಂತರ ಮತ ವಿದ್ಯಾ ಧರ್ಮಗಳನ್ನು ಹೆಚ್ಚುಗೊಳಿಸಲು ಆಶಿಸಿದನು. ಇವನು ವಿದ್ಯಾವಂತನೂ, ವಿದ್ಯಾಭಿಮಾನಿಯೂ, ಸ್ವತಃ ಕವಿಯೂ ಆಗಿದ್ದನು. ಹಿಂದೆ ದಿವಾಕರಮಿತ್ರನಲ್ಲಿ ಹೇಳಿದಂತೆ ಹುಯನ್‌ತ್ಸಾಂಗನಿಂದ ಉಪದಿಷ್ಟನಾಗಿ ಮಹಾಯಾನಪಥವನ್ನವಲಂಬಿಸಿದನು. ಇವನು ಬಂಗಾಳದಲ್ಲಿ ಸೈನ್ಯಸಮೇತನಾಗಿ ಇಳಿದುಕೊಂಡಿದ್ದಾಗ 'ಕಜುಗೃಹ'(?) ಅಥವಾ ರಾಜಮಹಲಿನಲ್ಲಿ ಹುಯನ್‌ತ್ಸಾಂಗನ ಪ್ರಥಮಸಂದರ್ಶನವಾಯಿತು. ಮಹಾಯಾನಪಥವನ್ನು ಊರ್ಜಿತಗೊಳಿಸುವುದಕ್ಕಾಗಿ ದೊಡ್ಡದೊಡ್ಡ ಸಭೆಗಳನ್ನು ಸೇರಿಸಿ ಇತರ ಮತೀಯರೆಲ್ಲರಿಗೂ ಆಮಂತ್ರಣವನ್ನು ಕಳುಹಿಸಿ ಕರೆಸಿಕೊಂಡು ಸನ್ಮಾನಿಸುತ್ತಿದ್ದನು. ಇಂತಹ ಸಭೆಯು ಪ್ರತಿವರ್ಷವೂ ೨೧ ದಿವಸಗಳವರೆಗೆ ನಡೆಯುತ್ತಿದ್ದಿತು. ಸೌಶೀಲ್ಯಹೀನರಾದವರು ರಾಜಸಭೆಯಿಂದ ಹೊರಗೆ ಕಳುಹಿಸಲ್ಪಡುತ್ತಿದ್ದರು, ಅಥವಾ ಗಡೀಪಾರುಮಾಡಲ್ಪಡುತ್ತಿದ್ದರು. ಇವನು ಅನೇಕ ಸ್ಥಳಗಳಲ್ಲಿ ಬುದ್ಧವಿಹಾರಗಳನ್ನು ಕಟ್ಟಿಸಿದನು. ಇವನ ರಾಜಧಾನಿಯಾದ ಕನೂಜ್‌ಪಟ್ಟಣವು ಬೌದ್ಧಮತದ ಕೇಂದ್ರಸ್ಥಾನವಾಗಿದ್ದಿತು. ಫಾಹಿಯಾನನು ತನ್ನ ಪ್ರವಾಸಘಟನಾವಳಿಯಲ್ಲಿ ಎರಡು ಬೌದ್ಧವಿಹಾರಗಳಿದ್ದುವೆಂದು ಹೇಳಿರುವನು. ಹುಯನ್‌ತ್ಸಾಂಗನು ಒಂದುನೂರು ವಿಹಾರಗಳಿದ್ದುವೆಂದು ಹೇಳಿರುವನು. ಇವನು ಅಲ್ಲಲ್ಲಿ ಅನ್ನಸತ್ರಗಳನ್ನೂ, ಔಷಧಾಲಯಗಳನ್ನೂ ಇಡಿಸಿದನು. ಇವನು ದಾನಶೂರನೂ ಆಗಿದ್ದನು. ಪ್ರಯಾಗಕ್ಕೆ ಕುಂಭಮೇಳಕ್ಕೆ ಬಂದು ಅಜರಾವತಿ ತೀರದಲ್ಲಿರುವ ಮಣಿತಾರೆಯಲ್ಲಿ ಇವನು ಇಳಿದುಕೊಂಡಿದ್ದಾಗ ಮಹಾಕವಿ ಬಾಣನ ಸಂದರ್ಶನವಾಯಿತು.

ಹುಯನ್‌ತ್ಸಾಂಗನ ಹೇಳಿಕೆಯ ಪ್ರಕಾರ ಹರ್ಷನ ರಾಜ್ಯಭಾರಕ್ರಮದಲ್ಲಿ ಅಧಿಕಾರಿಗಳಿಗೆ ವೇತನವು ನಾನಾತರಹವಾಗಿದ್ದಿತು. ಕೆಲವರಿಗೆ ಪಡಿಜೀವಿತವೂ (**Salary in kind**) ಕೆಲವರಿಗೆ ಭೂಸ್ಥಿತಿಯೂ ಕೆಲವರಿಗೆ ಕೆಲಸಕ್ಕೆ ತಕ್ಕಂತೆ ವೇತನವೂ ಕೊಡಲ್ಪಡುತ್ತಿತ್ತು. ಕುದುರೆಯ ಸವಾರರಿಗೆ ಮಾತ್ರ ನಗದಾಗಿ ಹಣವು ಕೊಡಲ್ಪಡುತ್ತಿತ್ತು. ಸರಕಾರದ ಭೂಮಿಯ ಉತ್ಪತ್ತಿಯ ನಾಲ್ಕರ ಒಂದು ಭಾಗವು ದೊಡ್ಡದೊಡ್ಡ ಅಧಿಕಾರಿಗಳಿಗೆ ಉಡುಗೆರೆಗಳನ್ನು ಕೊಡುವುದಕ್ಕಾಗಿಯೂ ನಾಲ್ಕರ ಒಂದು ಭಾಗವು ದೇವಸ್ಥಾನಗಳ ಪೂಜೋಪಯೋಗಗಳಿಗಾಗಿಯೂ ವೆಚ್ಚಮಾಡಲ್ಪಡುತ್ತಿತ್ತು. ಪ್ರಜೋಪಯೋಗಗಳಾದ ಕೆಲಸಗಳನ್ನು ಮಾಡಲು ಜನರು ಬಲಾತ್ಕರಿಸಲ್ಪಡುತ್ತಿದ್ದರಾದರೂ ಅವರವರ ಕೆಲಸಕ್ಕೆ ತಕ್ಕಂತೆ ದ್ರವ್ಯವು ಕೊಡಲ್ಪಡುತ್ತಿತ್ತೇ ಹೊರತು

ಬಿಟ್ಟಿಕೆಲಸವನ್ನು ಮಾಡಿಸಿಕೊಳ್ಳಲ್ಪಡುತ್ತಿರಲಿಲ್ಲ. ಸರಕಾರವು ಸತ್ಯ ಉಳ್ಳುದಾಗಿದ್ದಿತು. ದುಷ್ಟರೂ, ದುಷ್ಕೃತ್ಯಗಳೂ ಬಹುಮಟ್ಟಿಗೆ ಕಡಿಮೆಯಾಗಿದ್ದುವು. ಜನರು ಪರಸ್ಪರ ಸೌಹಾರ್ದ್ರದಿಂದಲೂ, ಸೌಶೀಲ್ಯದಿಂದಲೂ ಕೂಡಿ ಬಾಳುತ್ತಿದ್ದರು. ಮೋಸ ಮೊದಲಾದುವು ಬಹಳ ದೂರವಾಗಿದ್ದುವು. ತಪ್ಪಿತಸ್ಥರಿಗೆ ಶಿಕ್ಷೆಯು ಕಠಿಣತರದ್ದಾಗಿದ್ದಿತು. ರಾಜದ್ರೋಹಿಗಳಿಗೆ ಆಮರಣಾಂತ ಕಾರಾಗೃಹವಾಸವೂ ವ್ಯಭಿಚಾರಿಗಳಿಗೂ ಸ್ವಾಮಿನಿಷ್ಠರಲ್ಲದವರಿಗೂ ಗರ್ಭಸ್ರಾವಕರಿಗೂ ಆಯಾಯ ತಪ್ಪಿತಗಳಿಗೆ ತಕ್ಕಂತೆ ಆಯಾಯ ಅಂಗಗಳನ್ನು ಕತ್ತರಿಸಿ ಹಾಕುವುದೂ, ದೇಶಭ್ರಷ್ಟರನ್ನಾಗಿಮಾಡುವುದೂ ಅಥವಾ ಅರಣ್ಯಕ್ಕೆ ಕಳುಹಿಸುವುದೂ ವಾಡಿಕೆಯಲ್ಲಿದ್ದಿತು. ಸಾಧಾರಣ ತಪ್ಪಿತಗಳಿಗೆ ತಕ್ಕಂತೆ ದ್ರವ್ಯರೂಪವಾದ ದಂಡವು ವಿಧಿಸಲ್ಪಡುತ್ತಿತ್ತು. ಸರಕಾರವು ಪ್ರಜೆಗಳ ವಿಚಾರದಲ್ಲಿ ಧಾರಾಳವಾದ ಮನಸ್ಸುಳ್ಳುದಾಗಿದ್ದಿತು. ಸರಕಾರಕ್ಕೆ ಇಂತಹುದು ಬೇಕೆಂಬ ಅವಶ್ಯಕತೆಯೇ ಇರಲಿಲ್ಲ.(Official requirements were very few) ತೆರಿಗೆಯು ಬಹಳ ಕಡಿಮೆಯಾಗಿದ್ದಿತು. ರಾಜಾದಾಯವು ರಾಜ್ಯದ ಬೆಳೆಯ ಆರನೆಯ ಒಂದಂಶವಾಗಿರುತ್ತಿತ್ತು. ಸರಕಾರದ ಕಾಗದಪತ್ರಗಳು ಸ್ಪಷ್ಟವಾಗಿಯೂ ದೇಶಭಾಷೆಯಲ್ಲಿಯೂ ಬರೆಯಲ್ಪಡುತ್ತಿದ್ದುವು. ಹರ್ಷನ ಒಂದಾನೊಂದು ಶಾಸನ (Epi. Indica I. 70) ಮತ್ತು ಬಾಣನ ಹೇಳಿಕೆಯಿಂದ ರಾಜ್ಯದ ಮುಖ್ಯಾಧಿಕಾರಿಗೆ ಮಹಾಕ್ಷಪತಲಿಕ (Notary chief) ಎಂದೂ ಗ್ರಾಮಾಧಿಕಾರಿಗೆ ಅಕ್ಷಪತಲಿಕ (Village Notary) ಎಂದೂ, ಬರೆಯುವವನಿಗೆ ಕರಣಿಕ (Clerk) ಎಂದೂ ಹೆಸರಿದ್ದುದಾಗಿ ತಿಳಿಯಬರುತ್ತದೆ. ಹುಯನ್ತ್ಸಾಂಗನು ಇಲ್ಲಿಗೆ ಪ್ರವಾಸಕ್ಕಾಗಿ ಬಂದಿದ್ದಾಗ ಹರ್ಷನ ರಾಜ್ಯವು ಸುಖಸಂಪದದಾಯಕವಾಗಿಯೂ ಪಂಡಿತರಿಂದ ಕೂಡಿದುದಾಗಿಯೂ ಇರುತ್ತಿತ್ತು. ಬ್ರಾಹ್ಮಣಮತವು ಬೌದ್ಧಮತಕ್ಕಿಂತಲೂ ಪ್ರವರ್ಧಮಾನದಲ್ಲಿತ್ತು. ವಿದ್ಯಾವಂತರು ಬರೆಯುವುದೂ ಮಾತನಾಡುವುದೂ ಗೀರ್ವಾಣಭಾಷೆಯಾಗಿದ್ದಿತು. ವಿದ್ಯಾಭ್ಯಾಸಕ್ಕಾಗಿ ಚೈನಾ ಮತ್ತು ಬಹುದೂರದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಹರ್ಷರಾಜ್ಯವನ್ನುಳಿದು ಮಿಕ್ಕಕಡೆ ಗೀರ್ವಾಣಭಾಷಾ ಶುದ್ಧತೆಯು ಅಷ್ಟಾಗಿರಲಿಲ್ಲ. ಬ್ರಾಹ್ಮಣಮತವು ವೃದ್ಧಿಯಾಗುತ್ತಿತ್ತು. ಭಸ್ಮಲೇಪನರಾದ ಭೂತರೂ, ನಿರ್ವಾಣರಾದ ನಿರ್ಗ್ರಂಥರೂ, ರುಂಡಮಾಲಾಧರರಾದ ಕಪಾಲಿಗಳೂ ಜಟಾಧಾರಿಗಳಾದ ಜತಿಕರೂ ದುರ್ಗಾರಾಧಕರೂ ಬರ್ಹಿಪಿಂಛದೊಡಗೂಡಿ ಕೇಶಶೂನ್ಯರಾದ ಸನ್ಯಾಸಿಗಳೂ, ದಿಗಂಬರರೂ, ಪಾಶುಪತರೂ, ಸಾಂಖ್ಯರೂ, ವೈಶೇಷಿಕರೂ ಇರುತ್ತಿದ್ದರು ಎಂದು ಹೇಳಿರುವನು.

ಬಾಣನೂ ಕೂಡ ತನ್ನ ಹರ್ಷಚರಿತದಲ್ಲಿ ಒಂದುಕಡೆ ಆಗ ಇದ್ದ ವೇದವೇದಾಂತ ಪ್ರವಚನಸ್ಥಿತಿಯನ್ನು ಹೇಳುವಾಗ ಕಪಿಲಮತೀಯರೂ, ಕಾಣಾದಮತೀಯರೂ ನ್ಯಾಯ ಮತ್ತು ಉಪನಿಷನ್ಮತಸ್ಥರೂ, ಲೋಕಾಯತರೂ, ಕೃಷ್ಣಮತೀಯರೂ, ಶಿಖಾಹೀನರಾದ ಸನ್ಯಾಸಿಗಳೂ ಇದ್ದುದಾಗಿ ಹೇಳಿರುವನು. ಮತ್ತೊಂದು ಕಡೆ ಸನ್ಯಾಸಿನಿಯರಾದ ವಿಧವೆಗಳೂ, ಪಾರಾಶರ ಭಿಕ್ಷುಗಳೂ ಜೈನಸನ್ಯಾಸಿಗಳೂ ಶಿವಾರಾಧಕರೂ ಇರುತ್ತಿದ್ದರೆಂದೂ, ಇವರೆಲ್ಲರೂ ನಿಷ್ಕಾಮಿಗಳೂ ಸತ್ಯಪ್ರಿಯರೂ ಆಗಿದ್ದುಕೊಂಡು ವೇಷಕ್ಕೆ ತಕ್ಕಂತೆ ಜ್ಞಾನಮಾರ್ಗಾವಲಂಬಿಗಳಾಗಿ, ಅಭಿಮಾನಶೂನ್ಯರಾಗಿ ಲೋಕಕಲ್ಯಾಣವನ್ನು ಬಯಸುತ್ತಿದ್ದರೆಂದೂ ದ್ರವ್ಯದ ಆಸೆಗಾಗಿ ಯಾರೂ ವಿದ್ಯಾವಿಕ್ರಯವನ್ನು ಮಾಡುತ್ತಿರಲಿಲ್ಲವೆಂದೂ ಸಕಲರಿಗೂ ಪುಕ್ಕಟೆಯಾಗಿ ವಿದ್ಯಾಭ್ಯಾಸವು ದೊರಕುತ್ತಿದ್ದಿತೆಂದೂ ರಾಜಾಶ್ರಯವಿಲ್ಲದೇನೇ ಪ್ರತಿಯೊಬ್ಬರೂ ವಿದ್ಯಾವ್ಯಾಸಂಗಿಗಳಾಗಲು ಅವಕಾಶವಿದ್ದಿತೆಂದೂ ಹೇಳಿರುವನು. ದಿವಾಕರಮಿತ್ರನ ಆಶ್ರಮವನ್ನೂ ಅಲ್ಲಿನ ವಿದ್ಯಾವ್ಯಾಸಂಗಿಗಳಾದ ಶಿಷ್ಯರನ್ನೂ ಹೇಳುವಾಗ ವ್ಯಾಸಂಗಕ್ಕಾಗಿ ಬರುವ ಯಾವ ಮತೀಯನೇ ಆಗಲಿ ಅಲ್ಲಿ ವ್ಯಾಸಂಗಮಾಡಬಹುದಾಗಿದ್ದಿತೆಂದೂ ನಾನಾಕಡೆಯಿಂದ ಬಂದ ಬುದ್ಧರು, ಜೈನರು, ಬ್ರಾಹ್ಮಣ ಸನ್ಯಾಸಿಗಳು, ವೈಷ್ಣವರು, ಬ್ರಹ್ಮಚಾರಿಗಳು, ಕಪಿಲಮತೀಯರೂ, ಕಾಣಾದಮತೀಯರೂ, ನ್ಯಾಯಕಾರರೂ, ಲೋಕಾಯತರೂ, ಉಪನಿಷತ್ತನ್ನು ಹೇಳಿಸಿಕೊಳ್ಳುವವರೂ, ಸ್ಮೃತಿಗಳನ್ನೋದುವವರೂ, ಪುರಾಣವನ್ನೋದುವವರೂ, ಯಾಗನಿಪುಣರೂ, ವೈಯ್ಯಾಕರಣರೂ ಲೋಹಶೋಧಕರೂ, ಇವರೇ ಮುಂತಾದವರೆಲ್ಲರೂ ಏಕೀಭವಿಸಿ ಅನ್ಯೋನ್ಯತೆಯಿಂದ ಪಾಠಪ್ರವಚನಗಳನ್ನು ಮಾಡಿಕೊಳ್ಳುತ್ತ ವಿದ್ಯಾಭ್ಯಾಸಮಾಡುತ್ತಿದ್ದುದಾಗಿ ಹೇಳಿರುವನು.

ಹರ್ಷನ ಕಾಲದಲ್ಲಿ ತಾಮ್ರದದುಡ್ಡು, ಬೆಳ್ಳಿ, ಭಂಗಾರದ ನಾಣ್ಯಗಳಲ್ಲದೆ ಕವಡೆ, ಮತ್ತು ಮುತ್ತುಗಳೂ ಉಪಯೋಗಿಸಲ್ಪಡುತ್ತಿದ್ದುವು. ಹೆಂಗಸರು ವಿದ್ಯಾವತಿಯರಾಗಿರುತ್ತಿದ್ದರು. ರಾಜ್ಯಶ್ರೀಯು ದಿವಾಕರಮಿತ್ರನಲ್ಲಿ ಬುದ್ಧಮತತತ್ತ್ವಗಳನ್ನು ಕಲಿತುದಾಗಿ ತಿಳಿಯಬರುತ್ತೆ. ಇವಳು ರಾಜನ ಹಿಂದುಗಡೆ ಇದ್ದುಕೊಂಡು ಹುಯನ್‌ತ್ಸಾಂಗನು ಮಹಾಯಾನಪಥದವಿಚಾರವಾಗಿ ಮಾಡುವ ತರ್ಕವಾದಗಳನ್ನು ಕೇಳಿ ಅಭಿನಂದಿಸುವಷ್ಟು ಚತುರಳಾಗಿದ್ದಳು. ಆಗ ಘರದೆಯು (Ghosha) ಇರಲಿಲ್ಲವೆಂಬುದು ರಾಜ್ಯಶ್ರೀಯು ಓರ್ವಳೇ ವಿಂಧ್ಯಾಟವಿಯಲ್ಲಿ ಸಂಚರಿಸಿದುದರಿಂದಲೂ, ಪ್ರಯಾಗದಲ್ಲಿ ಕುಂಭಮೇಳಕ್ಕೆ ಸೇರಿದ ಸಭೆಯಲ್ಲಿ ಹರ್ಷನೊಡನೆ ಧಾರಾಳವಾಗಿ ಬಂದುದರಿಂದಲೂ,

ವ್ಯಕ್ತವಾಗುತ್ತದೆ. ಆಗ ಋತುಮತೀವಿವಾಹವು ಇರಲಿಲ್ಲವೆಂದೂ, ಹೆಂಗಸರಿಗೆ ದ್ವಿತೀಯವಿವಾಹವು ಇರಲೇ ಇಲ್ಲವೆಂದೂ, ಹುಯನ್‌ತ್ಸಾಂಗನು ಹೇಳಿರುವನು. ಸತಿಹೋಗುವುದು ಆಗ ವಾಡಿಕೆಯಲ್ಲಿದ್ದಿತು. ಯಶೋಮತಿಯು ಗಂಡನು ಸಾಯುವುದಕ್ಕೆ ಮುಂಚೆಯೇ ಚಿತಿಯನ್ನೇರಿದಳು. ರಾಜ್ಯಶ್ರೀಯು ಅಗ್ನಿಪ್ರವೇಶಮಾಡುವದರಲ್ಲಿದ್ದಳು. ವ್ಯಾಪಾರಮಾಡುವುದರಲ್ಲಿಯೂ ರಾಜಕೀಯಚಳವಳಿಗಳಲ್ಲಿಯೂ ಸಮುದ್ರಯಾನವನ್ನು ಮಾಡುತ್ತಿದ್ದರು. ಬ್ರಾಹ್ಮಣರು ಸಮುದ್ರಯಾನವನ್ನು ಮಾಡಬೇಕೆಂಬ ನಿರ್ಬಂಧವಿರಲಿಲ್ಲ. ಹರ್ಷನು ಕ್ರಿ. ಶ. ೬೪೧ ರಲ್ಲಿ ಒಬ್ಬ ಬ್ರಾಹ್ಮಣನನ್ನು ಚೈನಾದೇಶಕ್ಕೆ ರಾಯಭಾರಿ(Envoy)ಯಾಗಿ ಕಳುಹಿಸಿಕೊಟ್ಟಿದ್ದನು.

ಹರ್ಷನನ್ನು ೭ ನೆಯ ಶತಮಾನದ ಅಕ್ಬರನೆಂದರೂ ಸಲ್ಲುವುದು. ಹೇಗೆಂದರೆ (೧) ಇವನೂ ಅಕ್ಬರನಂತೆ ತನ್ನ ರಾಜ್ಯವು ಭದ್ರವಾಗಿರುವುದಕ್ಕಾಗಿಯೂ, ರಾಜ್ಯವನ್ನು ವಿಸ್ತರಿಸುವುದಕ್ಕಾಗಿಯೂ ಚಿಕ್ಕತನದಿಂದಲೂ ಜಗಳವಾಡಿದನು, (೨) ಸಾಯುವಾಗ ವಿಶಾಲವಾದ ರಾಜ್ಯವನ್ನು ಸಂಪಾದಿಸಿದ್ದನು. (೩) ವಿದ್ಯಾಪಕ್ಷಪಾತಿಯೂ, ಉದಾರಿಯೂ, ರಾಜ್ಯಶಾಸನದಕ್ಷನೂ, ಸರ್ವಮತಾದರಣೀಯನೂ ಆಗಿದ್ದನು. (೪) ಮತಸಂಬಂಧವಾದ ವಿವಾದ ತರ್ಕಗಳನ್ನು ಕೇಳುವುದರಲ್ಲಿ ಇಷ್ಟವುಳ್ಳವನಾಗಿದ್ದನು.

ದಯಾಳುತನದಲ್ಲಿ ಮತ್ತು ಮತಪ್ರಸಾರಕ ಕಾರ್ಯಗಳಲ್ಲಿ ಅಶೋಕನಿಗೂ, ರಿಪುಸಂಹಾರಶಿಕ್ಷಣದಲ್ಲಿ ಮತ್ತು ಪರಾಕ್ರಮದಲ್ಲಿ ಸಮುದ್ರಗುಪ್ತನಿಗೂ ಇವನನ್ನು ಹೋಲಿಸಬಹುದಾಗಿದೆ. ಇವನು ರಾಜಕವಿಯಾಗಿದ್ದು **ಪ್ರಿಯದರ್ಶಿಕಾ, ರತ್ನಾವಳಿ** ಎಂಬ ನಾಟಿಕೆಗಳನ್ನೂ ಮತ್ತು **ನಾಗಾನಂದ**ವೆಂಬ ನಾಟಕವನ್ನೂ ಬರೆದಿರುವನು. *

---

* ಭಾರತಪ್ರವಾಸಕ್ಕಾಗಿ ಬಂದಿದ್ದ ಹುಯನ್‌ತ್ಸಾಂಗನು ತಾನು ಬರೆದಿರುವ ಬುದ್ಧಮತ ಲೇಖನಗಳಲ್ಲಿ ಹೀಗೆ ಬರೆದಿರುವನು:—

King Siladitya (this was the title of Harsha) versified the Story of Bodhi-satva Jeemuthavahana who surrendered in place of a Naga. This version was set to music (Lit. string and pipe). He had it performed by a band accompanied by dancing.

ಹರ್ಷನು ಗತಾಸುವಾದನಂತರ ಕ್ರಿ. ಶ. ೬೭೩—೬೮೭ರಲ್ಲಿ ಇಂಡಿಯಾದೇಶಕ್ಕೆ ಬಂದಿದ್ದ ಚೀಣೆಯ ಇತ್ಸಿಂಗನು ಹರ್ಷನು ಮಹಾಕವಿಯಾಗಿದ್ದನೆಂದೂ ತನ್ನ ಸಭೆಯ ಮಹಾಕವಿಗಳಿಂದ ಬರೆಯಲ್ಪಟ್ಟಿರುವ ಗ್ರಂಥಗಳನ್ನು ತರಿಸಿ ಓದಿಸಿ ಅವರನ್ನು ಬಹುಮಾನಿಸಿ ಆನಂದಿಸುತ್ತಿದ್ದನೆಂದೂ ಆಸ್ಥಾನದ ಕವಿಯೊಬ್ಬನು ಬುದ್ಧನ ಪೂರ್ವಜನ್ಮದ ವಿಚಾರವಾದ ೫೦೦ ಶ್ಲೋಕಗಳುಳ್ಳ ಒಂದು

ಈತನ ಗ್ರಂಥಕರ್ತೃತ್ವವಿಚಾರವಾಗಿ ಇತರರು ಏನು ಹೇಳಿರುವರೆಂಬು ದನ್ನು ನೋಡುವುದವಶ್ಯಕವಾಗಿರುವುದು.

(೧) ಪ್ರೊ. ವಿಲ್ಸನ್‌ರವರು ತಾವು ಪರಿವರ್ತಿಸಿರುವ ರತ್ನಾವಳಿನಾಟಿ ಕೆಯ ಭೂಮಿಕೆಯಲ್ಲಿ ರತ್ನಾವಳಿಯನ್ನು ಬರೆದ ಹರ್ಷನು ಕ್ರಿ. ಶ. ೧೧೧೩— ೧೧೨೫ ರಲ್ಲಿ ಕಾಶ್ಮೀರದಲ್ಲಿ ಆಳಿದ ಹರ್ಷದೇವನೆಂದೂ†

(೨) ಪ್ರೊ. ಕೊವೆಲ್‌ರವರು ತಾವು ಬರೆದಿರುವ ವಾಸವದತ್ತಾ ಪ್ರಸ್ತಾ ವನೆಯಲ್ಲಿ ಬುದ್ಧಮತಸಂಬಂಧವಾಗಿರುವ ಈ ನಾಗಾನಂದವನ್ನು ಧಾವಕನೆಂಬು ವನು ಬರೆದನೆಂದೂ

(೩) ಡಾ. ಹಾಲ್‌ರವರು ಈ ರತ್ನಾವಳಿನಾಟಿಕೆಯನ್ನು ಕ್ರಿ. ಶ. ಏಳನೆಯ ಶತಮಾನದ ಆರಂಭದಲ್ಲಿ ಬಾಣನು ಬರೆದನೆಂದೂ

(೪) ಪ್ರೊ. ವೇಬರ್‌ರವರು ತಾವು ಬರೆದಿರುವ ಭಾರತ ಕಾವ್ಯಚರಿತ (History of Indian Literature III Edn P. 204)ದಲ್ಲಿ ಬಾಣನ ಆಶ್ರಯದಾತನೂ ಕನೂಜಿನರಾಜನೂ ಆದ ಎರಡನೆಯ ಶಿಲಾದಿತ್ಯನ ಕಾಲದಲ್ಲಿ ರತ್ನಾವಳಿಯು ಬರೆಯಲ್ಪಟ್ಟಿತೆಂದೂ ಇವನು ಕ್ರಿ. ಶ. ೬೧೦ ರಿಂದ ೬೫೦ ರ ವರೆಗೆ ಆಳಿದನೆಂದೂ

(೫) ರತ್ನಾವಳಿಯ ನಿಜವಾದ ಗ್ರಂಥಕಾರನು ಹರ್ಷನ ಆಸ್ಥಾನದ ಯಾವನೋ ಒಬ್ಬ ಕವಿಯಾಗಿರಬೇಕೆಂದೂ ಬಹುಶಃ ಪಾರ್ವತೀಪರಿಣಯ ನಾಟಕಕಾರನಾದ ಬಾಣನು ಬರೆದಿರಬಹುದೆಂದೂ, ನಾಗಾನಂದವು ಬುದ್ಧ ಸಂಬಂಧವಾದ ನಾಟಕವೆಂದೂ ನಾಂದಿಯಲ್ಲಿ ಬುದ್ಧನನ್ನು ಸ್ತುತಿಸಿರುವುದರಿಂದ ಇದರ ಗ್ರಂಥಕಾರನು ಬಾಣನ ಹಾಗೆ ಹರ್ಷನ ಆಸ್ಥಾನದಲ್ಲಿದ್ದ ಧಾವಕನೆಂಬು ವನು ಬರೆದಿರಬೇಕೆಂದೂ

(೬) ಪ್ರೊ. ರಮೇಶಚಂದ್ರ ದತ್ತ (R. C. Dutt)ರವರು "ಪ್ರಾಚೀನ ಹಿಂದೂಸ್ಥಾನದ ನಾಗರೀಕತೆ" ಎಂದು ತಾವು ಬರೆದಿರುವ ಪುಸ್ತಕದಲ್ಲಿ ಭಾರತ ಪ್ರವಾಸಕ್ಕಾಗಿ ಬಂದ ಹುಯನ್‌ತ್ಸಾಂಗನನ್ನು ಆದರಿಸಿದವನೂ ಎರಡನೆಯ

---

ಕಾವ್ಯವನ್ನು ಬರೆದು "ಜಾತಕಮಾಲಾ" ಎಂಬ ಹೆಸರನ್ನಿಟ್ಟು ರಾಜನಿಗೆ ಕಾಣಿಕೆಯಾಗಿ ಕೊಟ್ಟ ನೆಂದೂ, ಬೋಧಿಸತ್ವನಾದ ಜೀಮೂತವಾಹನನು ನಾಗಗಳಿಗೆ ಆಹಾರವಾದನೆಂಬ ವಿಚಾರವನ್ನು ತೆಗೆದುಕೊಂಡು ತಾನೇ ನಾಟಕವನ್ನು ಬರೆದು ಅದಕ್ಕೆ 'ನಾಗಾನಂದ'ವೆಂಬ ಹೆಸರಿಟ್ಟನೆಂದೂ" ಹೇಳಿರುವನು.

† ಇವನು ರಾಜನಾಗಿದ್ದನೇ ಹೊರತು ಕವಿಯಾಗಿರಲಿಲ್ಲವೆಂದು ರಾಜತರಂಗಿಣಿಯಿಂದ ತಿಳಿಯಬರುತ್ತದೆ.

ಶಿಲಾದಿತ್ಯನೆಂದು ಹೆಸರುಗೊಂಡವನೂ, ಉತ್ತರ ಹಿಂದೂಸ್ಥಾನದಲ್ಲಿ ಆಳುತ್ತಿದ್ದ ವಿದ್ವಾಂಸನೂ ಆದ ಹರ್ಷನು ಬರೆದಿರುವುದಾಗಿ ಹೇಳುವ ರತ್ನಾವಳಿಯನ್ನು ಬಾಣನು ಬರೆದುದಾಗಿಯೂ, ನಾಗಾನಂದನಾಟಕವನ್ನು ಅವನ ಆಸ್ಥಾನದ ಬೇರೊಬ್ಬ ಕವಿಯು ಬರೆದಿರಬೇಕೆಂದೂ †

(೭) ಶ್ರೀನಿವಾಸ ಗೋವಿಂದಬಾನಪರವರು ತಾವು ಬರೆದಿರುವ ನಾಗಾನಂದದ ಪೀಠಿಕೆಯಲ್ಲಿ ಕ್ರಿ. ಶ. ೭ ನೆಯ ಶತಮಾನದಲ್ಲಿ ಆಳಿದ ಶ್ರೀಹರ್ಷನ ಕಾಲದಲ್ಲಿಯೆ ರತ್ನಾವಳ್ಯಾದಿರೂಪಕಗಳನ್ನು ಬಾಣನೋ ಅಥವಾ ಧಾವಕನೋ ಬರೆದಿರಬೇಕೆಂದು ಹೇಳುವುದು ಸರಿಯಲ್ಲವೆಂದೂ ಶ್ರೀಹರ್ಷನೇ ಇವುಗಳನ್ನು ಬರೆದಿರುವನೆಂದೂ

(೮) ಪ್ರೊ. ಯಂ. ಕೃಷ್ಣಮಾಚಾರ್ಯರವರು ಹರ್ಷವರ್ಧನ ಮತ್ತು ಎರಡನೆಯ ಶಿಲಾದಿತ್ಯ ಎಂದು ಹೆಸರುಗೊಂಡ ಶ್ರೀಹರ್ಷನು ಕ್ರಿ. ಶ. ೬೦೬ರಲ್ಲಿ ರಾಜ್ಯವನ್ನಾಳಿದನೆಂದೂ ಅವನು ಸ್ವತಃ ಕವಿಯಾಗಿದ್ದನೆಂದೂ ಆಗಣ ವಿದ್ವಾಂಸರಿಗೆ ಆಶ್ರಯದಾತನಾಗಿದ್ದನೆಂದೂ ಈ ಮೂರು ರೂಪಕಗಳ ಗ್ರಂಥಕಾರನು ಶ್ರೀಹರ್ಷನೇ ಎಂದೂ ‡

(೯) ವಿನ್‌ಸೆಂಟ್. ಎ. ಸ್ಮಿತ್‌ರವರು ತಾವು ಬರೆದಿರುವ 'ಪ್ರಾಚೀನ ಭಾರತಚರಿತದಲ್ಲಿ ಹರ್ಷರಾಜನು ಕವಿಗಳಿಗೆ ಆಶ್ರಯದಾತನಾಗಿದ್ದುದಲ್ಲದೆ ತಾನೂ ಅಸಾಧಾರಣಕವಿಯಾಗಿದ್ದನು. ಇವನೇ ಬರೆದುದಾಗಿ ಹೇಳುವ ಮೂರು ರೂಪಕಗಳೂ ಒಂದು ವ್ಯಾಕರಣವೂ * ಇರುವುವು. ಕವಿತಾಚಾತುರ್ಯದಲ್ಲಿ ಪ್ರಾಚೀನ ಹಿಂದೂರಾಜರು ಒಬ್ಬರಿಗಿಂತ ಒಬ್ಬರು ಮಿಗಿಲೆನಿಸಿಕೊಂಡಿದ್ದರೆಂದೂ..........ಇವೇ ಮೊದಲಾಗಿ ಅಭಿಪ್ರಾಯಪಟ್ಟಿರುವರು. $

ಸೂಕ್ಷ್ಮದೃಷ್ಟಿಯಿಂದ ಪರ್ಯಾಲೋಚಿಸಿದರೆ ಈ ಮೂರು ರೂಪಕಗಳ ಕರ್ತೃತ್ವವು ಒಬ್ಬನದೇ ಆಗಿರುವುದೆಂದು ತೋರುವುದು. ಹೇಗೆಂದರೆ:—

ನಾಗಾನಂದದ ನಾಂದಿಯಲ್ಲಿ ಹೇಳಿರುವ 'ಅಲಮತಿವಿಸ್ತರೇಣ...... ಎಂಬುದರ ಮೊದಲು, ಮೂರನೆಯ ಶ್ಲೋಕಾಂತ್ಯದ ವರೆಗಿನ ಶ್ಲೋಕಗಳು ಪ್ರಿಯದರ್ಶಿಕಾ, ರತ್ನಾವಳಿಗಳಲ್ಲಿ ಹೇಳಲ್ಪಟ್ಟಿರುವುವು. ನಾಗಾನಂದ ನಾಟಕ

† Civilisation in Ancient India Vol II. P. 256.
‡ History of Classical Sanskrit Literature P. 80
* ಈ ವ್ಯಾಕರಣವು ಯಾವುದೆಂಬುದು ತಿಳಿಯದು.
$ Vincent A. Smith's Early History of India P. 342.

ದಲ್ಲಿ ಕಾಣಬರುವ 'ವ್ಯಕ್ತಿರ್ವ್ಯಂಜನಧಾತುನಾ . . . . . . . . . . . . (೧–೧೪) ಮತ್ತು 'ಅಂತಃಪುರಾಣಾಂ ವಿಹಿತವ್ಯವಸ್ಥಃ' (೪–೧) ಎಂಬ ಶ್ಲೋಕಗಳು ಪ್ರಿಯದರ್ಶಿಕಾ ನಾಟಿಕೆಯಲ್ಲಿ ೩–೧೦ ಮತ್ತು ೩–೩ರಲ್ಲಿ ಕ್ರಮವಾಗಿ ಕಂಡು ಬರುವುವು. ಭಾಷೆ, ಶೈಲಿ ಮೊದಲಾದುವುಗಳನ್ನು ನೋಡಿದರೂ ಕೂಡ ಗ್ರಂಥ ಕಾರನೊಬ್ಬನೆಂಬುದನ್ನೇ ಸೂಚಿಸುವುವು. ಗದ್ಯವನ್ನಾಗಲಿ ಅಥವಾ ಪದ್ಯವನ್ನಾ ಗಲಿ ಬರೆಯುವವನಿಗೆ ಅವನ ಕವಿತಾಧಾಟಿಯು ಯಾವುದಾದರೊಂದು ಮಾರ್ಗ ದಲ್ಲಿ ಸ್ಥಿರೀಕೃತವಾಗಿರುವುದು. ತಾನು ಬರೆಯಬೇಕೆಂಬುವ ಪ್ರತಿಯೊಂದನ್ನೂ ಆ ಧಾಟಿಯಲ್ಲಿಯೇ ಬರೆಯುವನು. ಅದನ್ನು ಓದುವುದರಿಂದ ಇಂತಹ ಶೈಲಿಯು ಇಂತಹ ಕವಿಯದೇ ಎಂದು ಸಾಧಾರಣವಾಗಿ ಊಹಿಸಬಹುದಾಗಿದೆ. ಸ್ಥಿರೀಕೃತ ಶೈಲಿಯನ್ನುಳ್ಳ ಲೇಖಕನು ಹಿಂದೆ ಒಂದರಲ್ಲಿ ಹೇಳಿದಂತೆ ಅಥವಾ ಕೊಂಚಮಾರ್ಪಡಿಸಿ ಮತ್ತೊಂದರಲ್ಲಿಯೂ ಹೇಳುವನು. ಉದಾಹರಣೆಗಾಗಿ ನಾಗಾನಂದವನ್ನೂ ರತ್ನಾವಳಿಯನ್ನೂ ಪರಿಶೀಲಿಸಿದರೆ ತಿಳಿಯುವುದು.

ಭೋ ವಯಸ್ಯ! ಪ್ರೇಕ್ಷಸ್ವ ಪ್ರೇಕ್ಷಸ್ವ। ವಯಸ್ಯ! ಸಮ್ಯಗುಪಲ
ಕ್ಷಿತಂ। ಸಖಿ ಅತೋಽಪಿ ಮೇ ಸಂತಾಪೋಧಿಕತರಂ ಬಾಧತೇ।
ದಾಸ್ಯಾಃ ಪುತ್ರಿ, ಲಘು, ಹತಾಶ

ಇವೇ ಮೊದಲಾದ ಶಬ್ದಗಳೂ ಈ ಕೆಳಗೆ ಹೇಳಿರುವ ಸಮಾನಾರ್ಥಗ ಳನ್ನು ಕೊಡುವ ಪದಗಳೂ ಅಲ್ಲಲ್ಲಿ ತೋರಿಬರುವುವು.

ನಾಗಾನಂದ:— **ನ್ಯಾಯ್ಯೇ ವರ್ತ್ಮನಿ ಯೋಜಿತಾಃ ಪ್ರಕೃತಯಃ ॥ ೧—೭ ॥**

ರತ್ನಾವಳಿ:— **ರಾಜ್ಯಂ ನಿರ್ಜಿತಶತ್ರುಯೋಗ್ಯಸಚಿವೇ ನ್ಯಸ್ತಸ್ಸಮಸ್ತೋ ಭರಃ ॥ ೧—೯ ॥**

ನಾಗಾನಂದ:— ಭಗವನ್ ಕುಸುಮಾಯುಧ! ಯೇನ ತ್ವಂ ರೂಪಶೋ-
ಭಯಾ ನಿರ್ಜಿತೋಽಸಿ ತಸ್ಯ ತ್ವಯಾ ನ ಕಿಮಪಿ ಕೃತಂ। ಮಮ ಪುನ
ರನಪರಾದ್ಧಾಯಾಅಪ್ಯಬಲೇತಿ ಕೃತ್ವಾ ಪ್ರಹರನ್ನ ಲಜ್ಜಸೇ। (೨)

ರತ್ನಾವಳಿ:— ಭಗವನ್ ಕುಸುಮಾಯುಧ! ನಿರ್ಜಿತಸುರಾಸುರೋ
. . . . . . ಕಥಂ ಸ್ತ್ರೀಜನಂ ಪ್ರಹರನ್ನ ಲಜ್ಜಸೇ (೨.)

ನಾಗಾನಂದ:— ಭೋ ವಯಸ್ಯ! ಪ್ರಚ್ಛಾದಯಾನೇನ ಕದಳೀಪತ್ರೇ-
ಣೇಮಾಂ ಚಿತ್ರಗತಾಂ ಕನ್ಯಕಾಂ (೨.)

ರತ್ನಾವಳಿ:— ಭೋ ವಯಸ್ಯ! ಪ್ರಚ್ಛಾದಯೈತಚ್ಚಿತ್ರಫಲಕಮನೇನ
ಕದಲೀಪತ್ರೇಣ (೨.)

ನಾಗಾನಂದ:— ದೃಷ್ಟ್ವಾ ದೃಷ್ಟಿಮಧೋ ದದಾತಿ. . . . . . (೩. ೪)

ರತ್ನಾವಳಿ:— ಪ್ರಣಯವಿಶದಾಂ ದೃಷ್ಟಿಂ ವಕ್ತ್ರೇ ದದಾತಿ ನ ಶಂಕಯಾ
...... (೩. ೯)

ನಾಗಾನಂದ:— ಎರಡನೆಯ ಅಂಕದಲ್ಲಿ ಕಥಾನಾಯಕಿಯು ಅಶೋಕವೃಕ್ಷಕ್ಕೆ ನೇಣುಹಾಕಿಕೊಳ್ಳಲೆಣಿಸುತ್ತಿರುವುದನ್ನು ನೋಡಿ ರಾಜನು ಬಂದು ಅದನ್ನು ನಿವಾರಿಸುವನು.

ರತ್ನಾವಳಿ:— ಇದೇ ವಿಚಾರವು ಮೂರನೆಯ ಅಂಕದಲ್ಲಿ ಕಂಡುಬರುವುದು.

**ನಾಗಾನಂದ** ಮತ್ತು **ಪ್ರಿಯದರ್ಶಿಕೆ**ಯ ಹೋಲಿಕೆ—

ನಾಗಾನಂದ:— ಕನ್ಯಕಾ ಹಿ ನಿರ್ದೋಷದರ್ಶನಾ ಭವಂತಿ (೧).

ಪ್ರಿಯದರ್ಶಿಕಾ:—ನಿರ್ದೋಷದರ್ಶನಾ ಕನ್ಯಕಾ ಖಲ್ವಿಯಂ (೨).

ನಾಗಾನಂದ:— ಅಯೇ! ಮಧ್ಯಮಧ್ಯಾಸ್ತೇ ನಭಸ್ತಲಸ್ಯ ಭಗವಾನ್ ಸಹಸ್ರದೀಧಿತಿಃ (೧).

ಪ್ರಿಯದರ್ಶಿಕಾ:—ಅಯೇ! ಕಥಂ ನಭೋಮಧ್ಯಮಧ್ಯಾಸ್ತೇ ಭಗವಾನ್ ಸಹಸ್ರದೀಧಿತಿಃ (೨.)

ನಾಗಾನಂದ:—ಕಿಂ ಮಧುಮಥನೋವಕ್ಷಃಸ್ಥಲೇ ನ ಲಕ್ಷ್ಮೀಮುದ್ವಹನ್ನಿರ್ವೃತೋ ಭವತಿ (೨.)

ಪ್ರಿಯದರ್ಶಿಕಾ:–ಮಧುಕರೋ ಮಾಲತೀಂ ಪ್ರೇಕ್ಷ್ಯಾಭಿನವರಸಾಸ್ವಾದ ಲಂಪಟಃ ಕುತಸ್ತಾಮನಾಸಾದ್ಯಸ್ಥಿತಿಂ ಕರೋತಿ (೩.)

ನಾಗಾನಂದ:— **ಆವೇದಯ ಮಮಾತ್ಮೀಯಂ ಪುತ್ರದುಃಖಂ ಸುದುಸ್ಸಹಂ ।**
**ಮಯಿ ಸಂಕ್ರಾಂತಮೇತತ್ತೇ ಯೇನ ಸಹ್ಯಂ ಭವಿಷ್ಯತಿ ॥ (೫—೯)**

ಪ್ರಿಯದರ್ಶಿಕಾ: —ಕಸ್ಮೈ ತಾವದೇತಂ ವೃತ್ತಾಂತಂ ನಿವೇದ್ಯ ಸಹ್ಯವೇದನಮಿವ ದುಃಖಂ ಕರಿಷ್ಯಾಮಿ (೩)

**ಪ್ರಿಯದರ್ಶಿಕಾ** ಮತ್ತು **ರತ್ನಾವಳಿಯ ಹೋಲಿಕೆ:**—

(೧) ಎರಡರಲ್ಲಿಯೂ ನಾಲ್ಕೇ ಅಂಕಗಳು.

(೨) ಎರಡರ ನಾಂದಿಯಲ್ಲಿಯೂ ಶಿವನೂ, ಮತ್ತು ಗೌರಿಯೂ ಸ್ತುತಿಸಲ್ಪಟ್ಟಿರುವರು.

(೩) ಎರಡರಲ್ಲಿಯೂ ಕ್ರಮವಾಗಿ ಉದಯನ ಮತ್ತು ವತ್ಸರಾಜನ ಪ್ರಣಯವಿಚಾರವು ಹೇಳಲ್ಪಟ್ಟಿರುವುದು.

(೪) ಎರಡರ ಕಥಾಂತ್ಯದಲ್ಲಿಯೂ ಕಥಾನಾಯಕಿಯರು ವಾಸವದತ್ತೆಯಿಂದ ರಾಜನಿಗೆ ಉಪಹಾರವಾಗಿ ಕೊಡಲ್ಪಟ್ಟಿರುವರು.

(೫) ಎರಡರ ಕಥಾನಾಯಕಿಯರೂ ಒಂದೇ ವಿಧವಾದ ಕಷ್ಟಕ್ಕೆ ಒಳಗಾಗಿರುವರು.

(೬) ಎರಡರಲ್ಲಿಯೂ ವಿದೂಷಕನಿಗೆ ವಾಸವದತ್ತೆಯಿಂದಲೇ ಬಹುಮಾನವು ಕೊಡಲ್ಪಟ್ಟಿರುವುದು.

(೭) ಗೃಹಾರಾಮ, ವೃಕ್ಷವಾಟಿಕಾ ವರ್ಣನೆಗಳು ಎರಡರಲ್ಲಿಯೂ ಒಂದೇ ವಿಧವಾಗಿರುವುವು.

ನಾಗಾನಂದನಾಟಕದ ನಾಂದೀಶ್ಲೋಕದ ನಾಲ್ಕನೆಯ ಪಾದಾಂತ್ಯದಲ್ಲಿ ಹೇಳಲ್ಪಟ್ಟಿರುವ "ಬುದ್ಧೋಜಿನಃ ಪಾತುವಃ" ಎಂಬ ಶಬ್ದವು ಅನಂತಶಯನದ ಪ್ರತಿಯಲ್ಲಿ ಮತ್ತು ಇತರ ಕೆಲವು ಪ್ರತಿಗಳಲ್ಲಿ ಕಂಡುಬರುವುದು. ಇದರ ಅರ್ಥವನ್ನು ಕೆಲವರು ಅವರವರ ಮನಬಂದಂತೆ ಮಾಡಿಕೊಂಡು 'ಬುದ್ಧ' ಶಬ್ದವನ್ನು ಗುಣವಾಚಕವಾಗಿ ಕೆಲವರೂ, 'ಜಿನ' ಪದವನ್ನು ನಾಮವಾಚಕವಾಗಿ ಕೆಲವರೂ ಉಪಯೋಗಿಸಿ ಇಷ್ಟು ಮಾತ್ರದಿಂದಲೇ ಗ್ರಂಥವು ಬುದ್ಧಗ್ರಂಥವೆಂತಲೂ ಬರೆದವನು ಬುದ್ಧಮತೀಯನೆಂತಲೂ ಹೇಳುವರು. ಮತ್ತೆ ಕೆಲವರು ಗ್ರಂಥಕರ್ತನು ಜೈನನಾಗಿರಬೇಕೆಂದೂ ಐದನೆಯ ಅಂಕದಲ್ಲಿ ಗೌರಿಯನ್ನು ಪ್ರಾರ್ಥಿಸಿರುವುದರಿಂದ ಯಾವನೋ ಅದ್ವೈತಿಯಾಗಿದ್ದು, ಆಗ ಗೌರೀಪೂಜೆಯು ಬುದ್ಧರಲ್ಲಿಯೂ ಜೈನರಲ್ಲಿಯೂ ಇರಲಿಲ್ಲವಾದರೂ ಆಗಣ ಕಾಲದ ಬುದ್ಧ ಅಥವಾ ಜೈನ ಮತಾವಲಂಬಿಗಳಿಗೆ ಸಂತೋಷಕರವಾಗಿರುವಂತೆ ಬುದ್ಧನನ್ನೋ ಅಥವಾ ಜಿನನನ್ನೋ ಸ್ತುತಿಸಿ ರಾಜಮೆಚ್ಚಿಕೆಯನ್ನು ಸಂಪಾದಿಸಲೋಸುಗ ಹಾಗೆ ಬರೆದಿರಬಹುದೆಂದೂ, ನಾಗಾನಂದದಲ್ಲಿರುವ ನಾಂದೀಶ್ಲೋಕವು ಬುದ್ಧಸ್ತುತಿಯಾಗಿರುವುದೆಂತಲೂ ಭೂತದಯಾಳುವಾದ ಜೀಮೂತವಾಹನನನ್ನು ನಾಯಕನನ್ನಾಗಿ ಹೇಳಿರುವುದರಿಂದಲೂ ಮತ್ತು "ಅಹಿಂಸಾಪರಮೋಧರ್ಮಃ" ಎಂಬ ಬುದ್ಧಮತಾನುಸಾರವಾಗಿ ನಾಗಭಕ್ಷಕನಾದ ಗರುಡನಿಗೆ ತಾನು ಆಹಾರವಾಗಿ ನಿಂತು ಶಂಖಚೂಡನೆಂಬ ನಾಗನನ್ನು ಬದುಕಿಸಿ ಸಿದ್ಧ ರಾಜಕುಮಾರಿಯಾದ ಮಲಯವತಿಯ ಪಾಣಿಗ್ರಹಣವನ್ನು ಮಾಡಿದನೆಂದು ಹೇಳಿರುವುದರಿಂದಲೂ ಬುದ್ಧಮತಾವಲಂಬಿಯಾದ ಹರ್ಷವರ್ಧನನಕಾಲದಲ್ಲಿಯೇ ನಾಗಾನಂದವು ಬರೆಯಲ್ಪಟ್ಟಿರಬೇಕೆಂದೂ ಹಲವರು ಅಭಿಪ್ರಾಯಪಡುವರು.

ಈ ಕಾರಣಗಳಿಂದಲೇ ಗ್ರಂಥಕಾರನು ಇಂತಹ ಮತೀಯನೆಂದು ಹೇಳಲಾಗುವುದಿಲ್ಲ. ಬೌದ್ಧಮತವು ಮಾತೃಮತವಾದ ಹಿಂದೂಮತಕ್ಕೆ ವಿರುದ್ಧ

ವಾದುದಲ್ಲ. ಇವುಗಳೆರಡರಲ್ಲಿಯೂ ಅಸದೃಶರಾದ ಪಂಡಿತರೂ ಆಚಾರ್ಯರೂ ಇರುವರು. ರಾಜನಾದ ಹರ್ಷನಿಗೆ ಇವೆರಡರಲ್ಲಿಯೂ ಸಮದೃಷ್ಟಿಯಿದ್ದಿತು. "ಅಹಿಂಸಾ ಪರಮೋಧರ್ಮಃ" ಎಂಬುದು ಬೌದ್ಧಮತದಲ್ಲಿಯೇ ಅಲ್ಲ; ಬೌದ್ಧ ಮತಕ್ಕಿಂತಲೂ ಬಹುಪ್ರಾಚೀನವಾದ ಹಿಂದೂಮತದ ವೇದ, ವೇದಾಂತ, ಮೊದಲಾದುವುಗಳಲ್ಲಿ "ನ ಹಿಂಸ್ಯಾತ್ಸರ್ವಾಭೂತಾನಿ" ಎಂದು ಹೇಳಲ್ಪಟ್ಟಿರುವುದು. ಪರೋಪಕಾರ, ಅಹಿಂಸೆ, ದಯಾಳುತ್ವ ಇವೇ ಮೊದಲಾದ ಸದ್ಗುಣಗಳು ರಾಮಾಯಣಭಾರತಾದಿ ಗ್ರಂಥಗಳಲ್ಲಿರುವ ಶಿಬಿ, ದಧೀಚಿಯೇ ಮೊದಲಾದವರ ಕಥೆಗಳಿಂದ ಕೂಡ ನಮಗೆ ತಿಳಿಯಬರುವುವು. ಕಥಾಸರಿತ್ಸಾಗರದಲ್ಲಿ ವಿಕ್ರಮಾರ್ಕನ ಚರಿತೆಯನ್ನು ಕೂಡ ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಇವುಗಳೆಲ್ಲವನ್ನೂ ನೋಡಿದಮೇಲೆಯೂ ಕೂಡ ನಾಗಾನಂದನಾಟಕವು ಬುದ್ಧ ಸಂಬಂಧವಾದುದೆಂದೂ ಅಹಿಂಸೆಯು ಬುದ್ಧಮತಮೂಲವೆಂದು ಹೇಳುವುದು ಹೇಗೆ? ಜೀಮೂತವಾಹನನನ್ನೇ ಬೋಧಿಸತ್ವನೆಂದು ಹೇಳಬಹುದೇ? ಅದು ಯಾವುದೋ ಯಾದೃಚ್ಛಿಕವಾದ ಶಬ್ದವೇ ಹೊರತು ತನ್ಮತಪ್ರಾಶಸ್ತ್ಯವಿಚಾರವಾಗಿ ಹೇಳುವದಲ್ಲವೆಂದು ಈ ನಾಟಕದಿಂದಲೇ ತಿಳಿಯಬಹುದಾಗಿದೆ. ಈ ಕಾರಣಗಳಿಂದ ಬೌದ್ಧಮತದ್ಯೋತಕವೆಂದೂ ಯಾವನೋ ಒಬ್ಬ ಬುದ್ಧಮತೀಯನು ಬರೆದಿರಬೇಕೆಂದೂ ಗ್ರಂಥಕಾರನು ಶ್ರೀಹರ್ಷನಲ್ಲವೆಂದೂ ಹೇಳುವುದು ಯುಕ್ತವಾಗಿ ತೋರುವುದಿಲ್ಲ. ನಾಗಾನಂದನಾಟಕದ ಕಥೆಯೂ ಕೂಡಾ ಏಕಮುಖವಾಗಿರದೆ ಭಿನ್ನಭಿನ್ನವಾಗಿರುವುದು. ಈ ನಾಟಕದ ಪಾತ್ರ, ಭಾಷೆ, ರಂಗಸ್ಥಲಗಳೂ ಕೂಡ ಹಿಂದೂಮತಸಂಬಂಧವನ್ನೇ ಸೂಚಿಸುವುವು. ಕಥಾನಾಯಕನ ತಂದೆಯಾದ ವಿದ್ಯಾಧರನು "ವಂದನೀಯಾಃ ಖಲು ದೇವತಾಃ" ಎಂದು ಹೇಳಿರುವುದಲ್ಲದೆ ರಾಜ್ಯವನ್ನು ತನ್ನ ಕುಮಾರನಿಗೆ ಕೊಟ್ಟು ಹಿಂದೂಮತಾನುಸಾರವಾಗಿ ವಾನಪ್ರಸ್ಥದೀಕ್ಷೆಯನ್ನು ಸ್ವೀಕರಿಸಿ ನಿತ್ಯಾಗ್ನಿಹೋತ್ರಿಯಾಗಿರುತ್ತಿದ್ದನು. ನಾಯಕಿಯಾದ ಮಲಯವತಿಯು ಗೌರಿಯನ್ನು ಪೂಜಿಸುತ್ತಿದ್ದಳು. ಕೌಶಿಕಮಹರ್ಷಿಯು ಈಕೆಯ ವಂಶಕ್ರಮಾಗತವಾದ ಗುರುವು. ಆತನ ಆಶ್ರಮದಲ್ಲಿಯೇ ಗೌರಿಯ ದೇವಾಲಯವಿದ್ದಿತು. ಗರುತ್ಮಂತನು ಹರಿಭಕ್ತನು. ಇವುಗಳೆಲ್ಲವನ್ನು ಸಮದೃಷ್ಟಿಯಿಂದ ನೋಡಿದರೆ ಈ ನಾಟಕವು ಹಿಂದೂಮತಾನುಸಾರವಾಗಿರುವುದೆಂದು ಸ್ಪಷ್ಟವಾಗುವುದು. ಈ ನಾಟಕ, ನಾಟಿಕೆಗಳನ್ನು ಬಾಣನು ರಾಜನಹೆಸರಿನಲ್ಲಿ ರಚಿಸಿರುವನೆಂದು ಕೆಲವರು ಹೇಳುವರು. ಅಘಟಿತಘಟನಾಚಾತುರ್ಯಕಥಾಸಂವಿಧಾನದಿಂದ ಕೂಡಿರುವ ಬಾಣನ ಕಾದಂಬರಿಯನ್ನೂ ಈ ರೂಪಕಗಳನ್ನೂ ಓದಿನೋಡಿದರೆ ಇವರ ಸಂಶಯವು ಪರಿಹಾರವಾಗುವುದು. ಬಾಣನ ಶೈಲಿಯೂ, ಭಾಷೆಯೂ,

ಶ್ಲೇಷ, ಯಮಕ, ದೀರ್ಘಸಮಾಸಗಳಿಂದಕೂಡಿ ಕಠಿನತರವಾದುದಾಗಿ ಅತಿ ಪ್ರೌಢಾವಸ್ಥೆಯಲ್ಲಿರುವುದು. ಇದಲ್ಲದೆ, ಬಾಣನ ಅದ್ಭುತಕಲ್ಪನಾವರ್ಣನೆ, ಪದಾಭಿವೃದ್ಧಿ, ಪ್ರೌಢಾಭಿಪ್ರಾಯ, ವಸ್ತುರಚನಾನೈಪುಣ್ಯಸಂಪತ್ತಿ, ಇವು ಕಾದಂಬರಿ ಮತ್ತು ಹರ್ಷಚರಿತೆಯನ್ನೋದುವುದರಿಂದಲೇ ಗೊತ್ತಾಗುವುವು. ಡಾ. ಹಾಲ್‌ರವರು ರತ್ನಾವಳಿಯನ್ನು ಬಾಣನೇ ಬರೆದುದಾಗಿ ಹೇಳುವರು—

ನಿರ್ಗತಾಸು ನವಾ ಕಸ್ಯ ಕಾಳಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರಸಾಂದ್ರಾಸು ಮಂಜರೀಷಿವ ಜಾಯತೇ ॥

ಎಂದು ಕಾಳಿದಾಸನನ್ನು ತನ್ನ ಹರ್ಷಚರಿತದಲ್ಲಿ ಗೌರವದಿಂದ ಹೊಗಳಿಕೊಂಡಿರುವ ಬಾಣನು ಅವನ ಗ್ರಂಥದಿಂದ ಕಥಾಕಲ್ಪನೆಯನ್ನು ಮಾತ್ರ ಅಪಹರಿಸಿ ಅದನ್ನೊಂದು ನಾಟಿಕೆಯನ್ನಾಗಿ ಒರೆದು ಅದರಲ್ಲಿ ಅವನ ಹೆಸರನ್ನೆತ್ತದೆ 'ಅಪೂರ್ವವಸ್ತುರಚನಾ' ಎಂದು ತನ್ನ ಪೋಷಕನಾದ ಹರ್ಷನ ಹೆಸರನ್ನು ಹೇಳಿಕೊಂಡಿರುವುದರಿಂದ ಡಾ. ಹಾಲ್‌ರವರು ಆ ರೀತಿಯಾಗಿ ಅಭಿಪ್ರಾಯಪಟ್ಟು ಇದರ ಸಮರ್ಥನೆಗಾಗಿ 'ರತ್ನಾವಳಿ'ಯ ಒಂದನೆಯ ಅಂಕದ ಆರನೆಯ ಶ್ಲೋಕವು ಬಾಣಕೃತ 'ಹರ್ಷಚರಿತ'ದ ಐದನೆಯ ಉಚ್ಛ್ವಾಸದಲ್ಲಿ ಕಂಡುಬರುವುದಾಗಿ ಹೇಳಿರುವರು. ಆದರೂ ಇವರ ಅಭಿಪ್ರಾಯವನ್ನು ಅನುಮೋದಿಸಲಾಗುವುದಿಲ್ಲ. ಏಕೆಂದರೆ ಇದುವರೆಗೆ ಅಚ್ಚಾಗಿರುವ ಹರ್ಷಚರಿತದ ಪ್ರತಿಗಳಲ್ಲಿ ಇವರು ಹೇಳುವ ಸ್ಥಳದಲ್ಲಾಗಲಿ ಅಥವಾ ಇನ್ನೆಲ್ಲಿಯಾದರೂ ಆಗಲಿ ಮೇಲೆ ಹೇಳುವ ರತ್ನಾವಳಿಯ ಶ್ಲೋಕವು ಕಂಡುಬರುವುದಿಲ್ಲ. ಮತ್ತು ಬಾಣನು ತನ್ನ ಹರ್ಷಚರಿತದಲ್ಲಿ ಸ್ವವಿಷಯವನ್ನು ಹೇಳಿಕೊಳ್ಳುವಾಗ ತಾನು ಉನ್ನತವಂಶಸ್ಥನೆಂದೂ, ಮಾತಾಪಿತೃಗಳು ಧನಾಢ್ಯರೆಂದೂ ತಾನು ಧನಿಕನೆಂದೂ ಹರ್ಷನು ತನ್ನನ್ನು ಗೌರವಿಸಿ ಆಸ್ಥಾನಕ್ಕೆ ಬರಮಾಡಿಕೊಂಡನೆಂದೂ ಹೇಳಿರುವುದರಿಂದ ಗ್ರಂಥಚೌರ್ಯವನ್ನು ಮಾಡಿ ಇತರರಿಗೆ ವಿಕ್ರಯಿಸುವಷ್ಟು ಕ್ಷುಲ್ಲಕವೃತ್ತಿಯಿಂದ ಜೀವಿಸುತ್ತಿದ್ದನೆಂದು ಹೇಳುವುದು ಅಸಂಗತವಾಗಿ ತೋರುವುದು. ಕವಿತಾಕಾಮಿನೀತಿಲಕನಾದ ಮಹಾಕವಿಬಾಣನು ಲೋಕೋತ್ತರಸುಂದರತಮವಾದ ಕಾದಂಬರಿ ಮತ್ತು ಹರ್ಷಚರಿತೆ ಇವುಗಳನ್ನು ವಿಕ್ರಯಿಸದೆ ಇಂತಹ ಸಣ್ಣದೊಂದು ನಾಟಿಕೆಯನ್ನು ಬರೆದು ಅದರ ವಿಕ್ರೀತಮೌಲ್ಯದಿಂದ ಜೀವಧಾರಣವನ್ನು ಮಾಡಬೇಕೆ! ಅಮೋಘವಾದ ತುಂಬುಹೊಳೆಗೂ ಬೆಟ್ಟದಝುರಿಯಿಂದ ಬಿದ್ದು ಸಳಸಳನೆ ಹರಿಯುವ ಶೈವಲಿನಿಗೂ ಹೇಗೆ ತೋಲನವಾಗದೋ ಹಾಗೆಯೇ ಲೋಕಾಮೋದಕರವಾದ ಕಾದಂಬರಿಗೂ, ಕ್ಷಣಿಕಾನಂದಕರವಾದ ರತ್ನಾವಳಿಗೂ ಪರಸ್ಪರ ಅಜಗಜಾಂತರವಿರುವುದು. ನಾರಿಕೇಳ

ಪಾಕದಂತಿರುವ ತನ್ನ ಗ್ರಂಥಗಳಿಗೆ ತನ್ನ ಹೆಸರನ್ನು ಹಾಕಿಕೊಂಡು ಕದಳೀ ಪಾಕದಂತಿರುವ ಗ್ರಂಥಕ್ಕೆ ಮಾತ್ರ ಹರ್ಷನ ಹೆಸರನ್ನು ಹಾಕಿಕೊಂಡಿರು ವನೆಂದರೆ ಮಹಾಕವಿಬಾಣನು ಅಷ್ಟು ಕ್ಷುಲ್ಲಕವೃತ್ತಿಯವನಲ್ಲವೆನ್ನಬೇಕಾಗು ವುದು.

ಮಮ್ಮಟನ ಕಾವ್ಯಪ್ರಕಾಶದ ಮೊದಲನೆಯ ಉಲ್ಲಾಸದಲ್ಲಿ—

"ಶ್ರೀಹರ್ಷಾದೇರ್ಧಾವಕಾದೀನಾಮಿವಧನಂ"

ಎಂದು ಬರೆದಿರುವುದು. ಇದಕ್ಕೆ ಕೆಲವು ಜನ ವ್ಯಾಖ್ಯಾನಗಾರರು—

ಧಾವಕಃತನ್ನಾಮಾಕವಿಃ. ಸಃ ಶ್ರೀಹರ್ಷಸ್ಯಪನಾಮ್ನಾ ರತ್ನಾ ವಳೀನಾಮ್ನಿಂ ನಾಟಿಕಾಂ ಕೃತ್ವಾ ಬಹುಧನಂ ಲಬ್ಧವಾನಿತಿ ಪ್ರಸಿ ದ್ಧಿರಿತ್ಯುದ್ಯೋತಾದೌಸ್ಪಷ್ಟಂ ।

ಧಾವಕನೆಂಬುವನು ರತ್ನಾವಳಿಯನ್ನು ಬರೆದು ಶ್ರೀಹರ್ಷರಾಜನ ಹೆಸರಿ ನಲ್ಲಿ ಪ್ರಚುರಪಡಿಸಿ ಅದಕ್ಕಾಗಿ ರಾಜನಿಂದ ಬೇಕಾದಷ್ಟು ಹಣವನ್ನು ಹೊಂದಿದ ನೆಂದು ಹೇಳುವರು. ಈ ವಿಚಾರದಲ್ಲಿ ಮಮ್ಮಟಭಟ್ಟನು "ಕಾವ್ಯಂ ಯಶಸೇರ್ಥ ಕೃತೇ" ಎಂಬುದಕ್ಕೆ "ಕಾಲಿದಾಸಾದೀನಾಮಿವ ಯಶಃ ಶ್ರೀಹರ್ಷಾದೇರ್ಧಾ ವಕಾ (ಭಾಸಃ)ದೀ ನಾಮಿವ ಧನಂ" **(Fame to such as Kalidasa and wealth to such as Dhavaka (Bhasa) from Sri Harsha &c.** ಎಂದು ವ್ಯಾಖ್ಯಾನಮಾಡಿರುವನು. ಕಾವ್ಯಪ್ರಕಾಶಕ್ಕೆ 'ಪ್ರಕಾಶಾದರ್ಶ'ವೆಂಬ ವ್ಯಾ ಖ್ಯಾನವನ್ನು ಬರೆದಿರುವ ಮಹೇಶ್ವರನು—

"ಶ್ರೀಹರ್ಷೋ ರಾಜಾ ಧಾವಕೇ (ಭಾಸಕೇ)ನ ರತ್ನಾವಲ್ಯಾದೀನಿ ರೂಪಕಾಣಿ ಸ್ವನಾಮ್ನಾ ಕಾರಯಿತ್ವಾ ಬಹುಧನಂ ದತ್ತವಾನ್"

ಎಂದು ಹೇಳಿರುವನು. ಇದೇ ವಿಚಾರವು, ಕಾವ್ಯಪ್ರಕಾಶವ್ಯಾಖ್ಯಾನ ಕಾರರಾದ ನಾಗೇಶಭಟ್ಟ, ವೈದ್ಯನಾಥ ಮತ್ತು ಜಯರಾಮ ಇವರು ಬರೆದಿ ರುವ ಉದ್ಯೋತ, ಪ್ರಕಾಶ ಪ್ರಭಾ ಮತ್ತು ಪ್ರಕಾಶತಿಲಕ ಎಂಬ ವ್ಯಾಖ್ಯಾನ ಗಳಲ್ಲಿಯೂ ಕಂಡುಬರುತ್ತದೆ.

ಇದಲ್ಲದೆ ಗೀರ್ವಾಣಭಾಷಾವಿಚಕ್ಷಣನಾದ ಶ್ರೀತಾರಾನಾಥ ತರ್ಕ ವಾಚಸ್ಪತಿಯು—

"ಏತಚ್ಚ ರತ್ನಾವಲ್ಯಾಂ ವರ್ಣಿತಂ ಸಾಗರಿಕಯಾ ಸಹ ವತ್ಸರಾಜಸ ಮಾಗಮವೃತ್ತಾಂತಮನುಹರತಿ । ತಸ್ಯ ನಾಟಿಕಸ್ಯ ಧನಪ್ರತ್ಯಾ ಶಯಾ ಕವಿನಾ ಶ್ರೀಹರ್ಷಕೃತತಯಾಖ್ಯಾಪಿತತ್ವೇತಪಿ ಧಾವಕ

ಕೃತಮೇವ. ಧಾವಕಸ್ಯ ಚ ಏತತ್ಕವೇಃ (ಕಾಳಿದಾಸಾತ್) ಪೂರ್ವ
ಕಾಲಿಕತ್ವಂ ಗ್ರಂಥಕೃತ್ಯೈವ ಸ್ವಯಂ ಪ್ರಸ್ತಾವನಾಪ್ರಸಂಗೇ ಭಿಹಿತ
ಮಿತ್ಯತಸ್ತದ್ವೃತ್ತಾಂತಮನುಸೃತ್ಯ ಏತದ್ಗ್ರಂಥಃ ನಿರಮಾಯಿಷಾತಿ
ಪ್ರತಿಭಾತಿ" — (Preface to Malavikagnimitra P.8)

ಎಂದು ಹೇಳಿರುವನು. ಹೇಗೂ ಧಾವಕನೇ ರತ್ನಾವಳಿಯನ್ನು ಬರೆದುದೆಂದೂ ಇವನು ಕಾಳಿದಾಸನಿಗಿಂತ ಪೂರ್ವದವನೆಂದೂ ಕಾಳಿದಾಸನು ಧಾವಕಕೃತ ರತ್ನಾವಳಿಯನ್ನು ನೋಡಿ ಮಾಳವಿಕಾಗ್ನಿಮಿತ್ರವನ್ನು ಬರೆದಿರುವನೆಂದೂ ವಾಚಸ್ಪತಿಯ ಒಪ್ಪಿಗೆ. ಮಾಳವಿಕಾಗ್ನಿಮಿತ್ರದ ಪ್ರಸ್ತಾವನೆಯಲ್ಲಿ ಕಾಳಿದಾಸನು ಧಾವಕ (ಭಾಸಕ ಅಥವಾ ಭಾಸ) ಮತ್ತು ಸೋಮಿಲನೇ ಮೊದಲಾದ ಕವಿಪುತ್ರರ ವಿಚಾರವಾಗಿ ಹೇಳಿರುವುದಕ್ಕೆ ತಾರಾನಾಥನು "ಧಾವಕಃ ನಾಗಾನಂದ ರತ್ನಾವಳ್ಯಾದಿಗ್ರಂಥಕಾರಃ" ಎಂದು ಹೇಳಿರುವನು. ಅಲ್ಲದೆ ಮಾಳವಿಕಾಗ್ನಿಮಿತ್ರವನ್ನೂ ಧಾವಕನ ಹೆಸರಿನಲ್ಲಿಯೇ ಹೇಳಿರುವನು. ಇದರಿಂದ ಹರ್ಷನ ಹೆಸರಿನಲ್ಲಿ ಹೇಳುತ್ತಿರುವ ನಾಟಿಕೆಗಳನ್ನು ಧಾವಕನು ಬರೆದುದಾಗಿ ಹೇಳಿದಂತಾಯಿತು. ಈ ವಿಚಾರದಲ್ಲಿ ನಮಗೆ ತೋರುವುದೇನೆಂದರೆ—

(೧) ಭಾಸಕವಿಯ ರೂಪಕಗಳನ್ನು ಭಾರತದ ಜನಾಂಗಕ್ಕೆ ಮೊದಲು ತೋರಿಸಿಕೊಟ್ಟ ಮಹಾಮಹೋಪಾಧ್ಯಾಯ ಟಿ. ಗಣಪತಿಶಾಸ್ತ್ರಿಗಳವರು ಈ ಮೂರು ರೂಪಕಗಳನ್ನು ಭಾಸರೂಪಕಗುಚ್ಛದಲ್ಲಿ ಸೇರಿಸದಿರುವುದರಿಂದಲೂ

(೨) ಮಮ್ಮಟನ ಕಾವ್ಯಪ್ರಕಾಶವು ಕ್ರಿ. ಶ. ೧೧ನೆಯ ಶತಮಾನದಲ್ಲಿ ಬರೆಯಲ್ಪಟ್ಟುದಾದುದರಿಂದಲೂ

(೩) ಭಾಸ(ಧಾವಕ?)ನು ಕ್ರಿ. ಪೂ. ಆರನೆಯ ಶತಮಾನದಲ್ಲಿದ್ದ ಶ್ರೀಹರ್ಷವಿಕ್ರಮಾದಿತ್ಯನ ಸಭಾಪಂಡಿತನಾಗಿದ್ದುದರಿಂದಲೂ

(೪) ತಾರಾನಾಥತರ್ಕವಾಚಸ್ಪತಿಯು ರತ್ನಾವಳಿಯ ಹೆಸರನ್ನು ಹೆಚ್ಚಾಗಿ ಹೇಳಿರುವಂತೆ ನಾಗಾನಂದ, ಪ್ರಿಯದರ್ಶಿಕೆಗಳ ಹೆಸರುಗಳನ್ನು ಹೇಳಿರುವುದಿಲ್ಲವಾದುದರಿಂದಲೂ

(೫) ಶ್ರೀಹರ್ಷೋ ನಿಪುಣಃ ಕವಿಃ . . . . . ಗಣಃ ।

ಎಂಬ ಪ್ರಸ್ತಾವನೆಯು ಮೂರು ರೂಪಕಗಳಲ್ಲಿಯೂ ಒಂದೇ ವಿಧವಾಗಿದ್ದು

ಅಂತಃ ಪುರಾಣಾಂ ವಿಹಿತವ್ಯವಸ್ಥಃ ।

ಎಂಬ ಪ್ರಿಯದರ್ಶಿಕೆಯ ಮೂರನೆಯ ಶ್ಲೋಕವೇ ನಾಗಾನಂದದ ೪ನೆಯ ಅಂಕದ ಮೊದಲನೆಯ ಶ್ಲೋಕವಾಗಿರುವುದರಿಂದಲೂ

(೬) ಶ್ರೀಹರ್ಷಕೃತರತ್ನಾವಳಿಯು ದೊರೆತು ಧಾವಕಕೃತರತ್ನಾವಳಿಯು ದೊರೆಯದೆ ತಾರಾನಾಥರು 'ಶ್ರೀಹರ್ಷವರ್ಧನಶಿಲಾದಿತ್ಯ'ನೆಂದು ಹೇಳುವುದಕ್ಕೆ ಬದಲು 'ಹರ್ಷವಿಕ್ರಮಾದಿತ್ಯ'ನೆಂದು ಪ್ರಮಾದವಶದಿಂದ ಹೇಳಿರಬಹುದಾಗಿ ಸಂಶಯ ತೋರುವುದರಿಂದಲೂ

(೭) ಸಂಸ್ಕೃತಭಾಷೆಯಲ್ಲಿ ದೊರಕುವ ಹರ್ಷನಾಮಕರೈವರಲ್ಲಿ * ಕನೂಜಿನ ಶ್ರೀಹರ್ಷವರ್ಧನ (ಎರಡನೆಯ ಶಿಲಾದಿತ್ಯ)ನು ಮಾತ್ರವೇ ರಾಜನೂ ಮತ್ತು ಕವಿಯೂ ಆಗಿದ್ದನೆಂಬುದು ಸ್ಪಷ್ಟಪಡುವುದರಿಂದಲೂ

(೮) ಸುಭಾಷಿತಾವಳಿಯಲ್ಲಿ ಉದಹರಿಸಲ್ಪಟ್ಟಿರುವ ರತ್ನಾವಳಿಯ ೮ ಶ್ಲೋಕಗಳೂ ಔಚಿತ್ಯಾಲಂಕಾರದಲ್ಲಿ ಉದಹರಿಸಲ್ಪಟ್ಟಿರುವ ರತ್ನಾವಳಿಯ ೫ ಶ್ಲೋಕಗಳೂ ಶ್ರೀಹರ್ಷನದು (ಶ್ರೀಹರ್ಷದೇವಸ್ಯ) ಎಂದು ಹೇಳಲ್ಪಟ್ಟಿರುವುದರಿಂದಲೂ

(೯) ಮಧುಸೂದನನು ಬರೆದಿರುವ ಮಯೂರಶತಕ ವ್ಯಾಖ್ಯಾನವಾದ ಭಾವಬೋಧಿನಿಯಲ್ಲಿ 'ಕವಿಜನಮೂರ್ಧನ್ಯಸ್ಯ ರತ್ನಾವಲ್ಯಾಖ್ಯನಾಟಿಕಾ ಕರ್ತ್ರುರ್ಮಹಾರಾಜ ಶ್ರೀಹರ್ಷಸ್ಯ ಸಭ್ಯೌ ಮಹಾಕವಿಪೌರಸ್ತ್ಯೌ ಬಾಣ ಮಯೂರಾವಾಸ್ತಾಂ' ಎಂದು ಹೇಳಿರುವುದರಿಂದಲೂ

(೧೦) ಇವುಗಳೆಲ್ಲಕ್ಕಿಂತಲೂ ಪ್ರಬಲವಾಗಿ ಭಾರತಪ್ರವಾಸಿಯಾದ ಹುಯನ್‌ತ್ಸಾಂಗನು ತನ್ನ ಪುಸ್ತಕದಲ್ಲಿ ಎರಡನೆಯ ಶಿಲಾದಿತ್ಯನೂ ಕನೂಜಿನ† ಧೊರೆಯೂ ಆದ ಶ್ರೀಹರ್ಷನ ಕಾಲದಲ್ಲಿ ತಾನು ಹಿಂದುದೇಶಕ್ಕೆ ಬಂದಿದ್ದ ಹಾಗೂ

---

* 'ಕಾವ್ಯಪ್ರದೀಪ'ಕಾರನ ತಮ್ಮನೊಬ್ಬ— ಇವನು ರಾಜನೂ ಆಗಿರಲಿಲ್ಲ, ಕವಿಯೂ ಆಗಿರಲಿಲ್ಲ.

'ನೈಷಧಕಾವ್ಯ'ಕಾರನೊಬ್ಬ— ಇವನು ಕ್ರಿ. ಶ. ೧೨ನೆಯ ಶತಮಾನದಲ್ಲಿದ್ದ ಕನೂಜಿನ ಧೊರೆಯ ಆಶ್ರಿತನೆಂಬ ವಿಚಾರವನ್ನು 'ತಾಂಬೂಲದ್ವಯಮಾಸನಂ ಚ ಲಭತೇ ಯಃ ಕಾನ್ಯಕುಬ್ಜೇಶ್ವರಾತ್'' ಎಂದು ತಾನೇ ಹೇಳಿಕೊಂಡಿರುವನು.

ಕ್ರಿ. ಶ. ೧೦೮೯—೧೧೦೧ ರಲ್ಲಿ ಕಾಶ್ಮೀರದಲ್ಲಿ ಆಳಿದ ರಾಜನೊಬ್ಬ— ಇವನು ರಾಜನಾಗಿದ್ದನೇ ಹೊರತು ಕವಿಯಾಗಿರಲಿಲ್ಲ.

ಮುಂಜರಾಜನ ತಂದೆಯೊಬ್ಬ— ಇವನೂ ರಾಜನಾಗಿದ್ದನೇ ಹೊರತು ಕವಿಯಾಗಿರಲಿಲ್ಲ.

† ಹುಯನ್‌ತ್ಸಾಂಗನು ಇಂಡಿಯಾದೇಶಕ್ಕೆ ಬಂದಿದ್ದಾಗ ಶ್ರೀಹರ್ಷನು ಸ್ಥಾನೇಶ್ವರವನ್ನು ಬಿಟ್ಟು ಕಾನ್ಯಕುಬ್ಜ (ಕನೂಜ್)ವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದುದಾಗಿ ತಿಳಿಯಬರುತ್ತದೆ. ಆದುದರಿಂದ ಹುಯನ್‌ತ್ಸಾಂಗನು ಶ್ರೀಹರ್ಷನನ್ನು ಕನೂಜಿನ ದೊರೆಯೆಂದಿರುವನು.

ಈ ಮೂರು ರೂಪಕಗಳನ್ನೂ ರಾಜನಾದ ಶ್ರೀಹರ್ಷನೇ ಬರೆದು ಆಟವಾಡಿಸಿದು ದಾಗಿ ಬರೆದಿರುವುದರಿಂದ ಈ ರೂಪಕಗಳ ಕರ್ತೃತ್ವವು ಕ್ರಿ. ಶ. ಏಳನೆಯ ಶತ ಮಾನದಲ್ಲಿ ಆಳಿದ ಶ್ರೀಹರ್ಷವರ್ಧನ(ಶಿಲಾದಿತ್ಯನ)ದೇ ಎಂದು ತಿಳಿಯಬೇಕಾಗಿದೆ.

ಈ ನಾಟಕನಾಟಿಕೆಗಳನ್ನು ವಸಂತಮಾಸದಲ್ಲಿ ಆಡಿತೋರಿಸುವ ಪದ್ಧತಿ ಯಾದುದರಿಂದಲೇ ಈ ಮೂರರಲ್ಲಿಯೂ ಸೂತ್ರಧಾರನು—

"ಅದ್ಯಾಹಂ ವಸಂತೋತ್ಸವೇ ಸಬಹುಮಾನಮಾಹೂಯ ನಾನಾ ದಿಗ್ದೇಶಾದಾಗತೇನ ರಾಜ್ಞಃ ಶ್ರೀಹರ್ಷದೇವಸ್ಯ ಪಾದಪದ್ಮೋ ಪಜೀವಿನಾ ರಾಜಸಮೂಹೇನೋಕ್ತಃ"

ಎಂದು ಹೇಳಿಕೊಂಡಿರುವನು.

ಮಾಲತೀಮಾಧವ, ಮುದ್ರಾರಾಕ್ಷಸ, ಹಿತೋಪದೇಶ, ಪಂಚತಂತ್ರ ಇವೇ ಮೊದಲಾದವುಗಳ ಗ್ರಂಥಕರ್ತರು ಕಥಾವಸ್ತುವನ್ನು ಬೃಹತ್ಕಥೆಯಿಂದ ಆರಿಸಿಕೊಂಡಿರುವ ಹಾಗೆ ಪ್ರಿಯದರ್ಶಿಕೆ, ರತ್ನಾವಳಿ, ನಾಗಾನಂದ ಇವುಗಳ ಕಥಾವಸ್ತುವೂ ಬೃಹತ್ಕಥೆಯನ್ನೇ ಹೋಲುತ್ತದೆ. ಈ ರೂಪಕಗಳಲ್ಲಿ ಕವಿ ಯು ಮೊದಲು ಪ್ರಿಯದರ್ಶಿಕೆಯನ್ನು ಬರೆದುದಾಗಿ ತೋರುತ್ತದೆ. ಇದು ಕಾಳಿದಾಸನ ಮಾಳವಿಕಾಗ್ನಿಮಿತ್ರವನ್ನೇ ವಿಶೇಷತಃ ಹೋಲುವುದಾಗಿದೆ. "ಅಂಗದೇಶದ ರಾಜನಾದ ದೃಢವರ್ಮನು ತನ್ನ ಪುತ್ರಿಯಾದ ಪ್ರಿಯದರ್ಶಿ ಕೆಯನ್ನು ಉದಯನನಿಗೆ ಕೊಡಬೇಕೆಂದಿರುವ ಸಮಯದಲ್ಲಿ ಕಳಿಂಗರಾಜನು ದಂಡೆತ್ತಿ ಬಂದು ದೃಢವರ್ಮನನ್ನು ಜಯಿಸಿ ಕಾರಾಗೃಹದೊಳಗಿರಿಸಿದನು. ಆತನ ಮಂತ್ರಿಯಾದ ವಿನಯವಸುವು ಪ್ರಿಯದರ್ಶಿಕೆಯನ್ನು ದೃಢವರ್ಮನ ಮಿತ್ರನಾದ ವಿಂಧ್ಯಕೇತುವಿನ ಬಳಿಯಲ್ಲಿಟ್ಟನು. ವಿಂಧ್ಯಕೇತುವಿನ ಉಪಟಳ ವನ್ನು ತಡೆಯಲಾರದೆ ಉದಯನನು ವಿಂಧ್ಯಕೇತುವನ್ನು ಅಡಗಿಸುವುದಕ್ಕಾಗಿ ವಿಜಯಸೇನನೊಡನೆ ಸೈನ್ಯವನ್ನು ಕಳುಹಿಸಿದ್ದನು. ಯುದ್ಧದಲ್ಲಿ ವಿಂಧ್ಯ ಕೇತುವು ಮಡಿದನು. ಇವನ ಪತ್ನಿಯರೂ ಮಡಿದರು. ಅನಂತರ ಉದ ಯನನ ಸೇನಾನಾಯಕನಾದ ವಿಜಯಸೇನನು ಪ್ರಿಯದರ್ಶಿಕೆಯನ್ನು ಕರೆ ದುಕೊಂಡು ಬಂದು ರಾಜನಿಗೆ ಒಪ್ಪಿಸಲು ಅವನು ರಾಣಿಯಬಳಿಗೆ ಕಳು ಹಿಸಿಕೊಟ್ಟನು. ರಾಣಿಯು ಪ್ರಿಯದರ್ಶಿಕೆಗೆ ಗಾನಾದಿ ವಿದ್ಯೆಗಳನ್ನು ಕಲಿ ಸಿದಳು. ಮಾಳವಿಕಾಗ್ನಿಮಿತ್ರದಲ್ಲಿ ಪಂಡಿತ ಕೌಶಿಕಿ ಇರುವಳು. ಇದರಲ್ಲಿ ಸಾಂಕೃತ್ಯಾಯನಿ ಇರುವಳು. ಇಲ್ಲಿಯವರೆಗೆ ಪ್ರಿಯದರ್ಶಿಕೆಯು ಸರಿಯಾಗಿ ಮಾಲವಿಕಾಗ್ನಿಮಿತ್ರವನ್ನೇ ಹೋಲುವುದು. ಇಲ್ಲಿಂದ ಮುಂದೆ ಪುಷ್ಪಾಪಚಯ

ವನ್ನು ಮಾಡುತ್ತಿರುವ ನಾಯಕಿಯು ಭ್ರಮರಬಾಧೆಯನ್ನು ನಿವಾರಿಸುವ ಸಮಯದಲ್ಲಿ ನಾಯಕನಿಗೆ ನಾಯಿಕೆಯನ್ನು ನೋಡುವ ಸುಸಮಯವನ್ನು ಕಲ್ಪಿಸಿಕೊಡುವಿಕೆ, ಪರಸ್ಪರಾನುರಾಗ, ವಿರಹವರ್ಣನೆ, ವಿದೂಷಕನ ಪರಿಹಾಸ ಇವೇ ಮೊದಲಾದ ಕಥಾಭಾಗವು ಶಾಕುಂತಲವನ್ನು ಕೊಂಚ ಹೋಲುವುದಾಗಿದೆ. ಉಳಿದುವೆಲ್ಲವೂ ಅಲ್ಲಲ್ಲಿ ಮಾಳವಿಕಾಗ್ನಿಮಿತ್ರವನ್ನೇ ಹೋಲುವುವು.

**ರತ್ನಾವಳಿ:**— ಇದೂ ಸ್ವಲ್ಪ ಹೆಚ್ಚುಕಡಿಮೆ ಪ್ರಿಯದರ್ಶಿಕೆಯನ್ನೇ ಹೋಲುತ್ತದೆ. ಮಂತ್ರಿಯಾದ ಯೌಗಂಧರಾಯಣನು ಸಮುದ್ರದಲ್ಲಿ ದೊರೆತ ರತ್ನಾವಳಿಯನ್ನು ವಾಸವದತ್ತೆಗೆ ತಂದುಕೊಡುವನು. ಇವಳನ್ನು ವಾಸವದತ್ತೆಯು 'ಸಾಗರಿಕೆ' ಎಂದು ಕರೆಯುವಳು. ಮಕರಂದೋದ್ಯಾನದಲ್ಲಿ ಮನ್ಮಥಪೂಜೆಯನ್ನು ಮಾಡುವುದಾಗಿಯೂ, ರಾಜನು ಆ ವೇಳೆಗೆ ಅಲ್ಲಿಗೆ ಬರಬೇಕೆಂದೂ ವಾಸವದತ್ತೆಯು ಹೇಳಿಕಳುಹಿಸಲು, ಇಲ್ಲಿಯವರು ಮನ್ಮಥಪೂಜೆಯನ್ನು ಹೇಗೆ ನಡೆಸುವರೋ ಎಂಬುದನ್ನು ನೋಡಲು ಕುತೂಹಲಾವಿಷ್ಟಳಾಗಿ ಸಾಗರಿಕೆಯೂ ಕೂಡ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಇತರ ಗೆಳತಿಯರೊಡನೆ ಹೊರಡುವಳು. ಇವಳನ್ನು ರಾಜನು ನೋಡಿದರೆ ಸೌಂದರ್ಯಲುಬ್ಧನಾಗುವನೆಂದು ವಾಸವದತ್ತೆಯು ತಿಳಿದು ತನ್ನ ಮೆಚ್ಚುಗೆಯಾದ ಶಾರಿಕೆಯನ್ನು ನೋಡಿಕೊಂಡಿರಲು ಸಾಗರಿಕೆಗೆ ಹೇಳಿಕಳುಹಿಸುವಳು. ಹೀಗಾಗಬಹುದೆಂದು ಮೊದಲೇ ತಿಳಿದಿದ್ದ ಸಾಗರಿಕೆಯು ಶಾರಿಕೆಯನ್ನು ಸುಸಂಗತೆಯ ಕೈಲಿಕೊಟ್ಟುಬಂದಿದ್ದಳಾದುದರಿಂದ ರಾಜ್ಞಿಯ ಅಪ್ಪಣೆಯನ್ನು ವಿಚಾರಲಾರದೆ ಹೊರಟುಹೋಗುವ ಹಾಗೆ ನಟಿಸಿ ಒಂದು ಮರದ ಹಿಂದುಗಡೆ ಇದ್ದು ಅಲ್ಲಿ ನಡೆಯುವುದನ್ನು ನೋಡುತ್ತಿದ್ದಳು. ಆಗ ರಾಜದರ್ಶನವಾಯಿತು. ರಾಜನನ್ನು ಚಿತ್ರಿಸಿ ತಾನೂ ಮನ್ಮಥಪೂಜೆಯನ್ನು ಮಾಡಬೇಕೆನ್ನುವಷ್ಟರಲ್ಲಿಯೇ ಸಾಗರಿಕೆಯನ್ನು ಹುಡುಕಿಕೊಂಡು ಸುಸಂಗತೆಯು ಬಂದು ತದೇಕಧ್ಯಾನದಿಂದ ಚಿತ್ರಿಸುತ್ತಿದ್ದ ಸಾಗರಿಕೆಯನ್ನು ನೋಡಿ ಎಲೆ ಸಾಗರಿಕೆ! ನೀನು ಮನ್ಮಥನನ್ನು ಚಿತ್ರದಲ್ಲಿ ಬರೆದುದಾದರೆ ನಾನು ಮನ್ಮಥನ ಪಕ್ಕದಲ್ಲಿ ರತಿಯನ್ನು ಬರೆಯುವೆನೆಂದು ಸಾಗರಿಕೆಯನ್ನು ರೂಪಿಸಿಬಿಟ್ಟಳು. ಕದಳೀಮಧ್ಯದಲ್ಲಿ ಸೇರಿಕೊಂಡು ಹಾವಳಿಮಾಡುತ್ತಿದ್ದ ಕಪಿಯೊಂದನ್ನು ನೋಡಿ ಇವರು ಭಯಗ್ರಸ್ತರಾಗಿ ಓಡುವ ನೆವದಲ್ಲಿ ಚಿತ್ರಪಟವನ್ನು ಅಲ್ಲಿಯೇ ಮರೆತು ಹೋದರು. ಅದು ರಾಜನ ಕೈಗೆ ಸಿಕ್ಕಿ ಉಪಾಯಕಲ್ಪನೆಗಳಿಂದ ರಾಜನಿಗೆ ವಾಸವದತ್ತೆಯಿಂದಲೇ ಸಾಗರಿಕೆಯು ಕೊಡಲ್ಪಡುವಳು.

**ನಾಗಾನಂದ:—** ಇದರ ನಾಂದಿಯನ್ನು ಓದಿದರೆ ವಿದ್ಯಾಧರಜಾತಕಗಳಿಂದ ಈ ಕಥೆಯನ್ನು ತೆಗೆದುಕೊಂಡಿರುವಂತೆ ತೋರುವುದು. ಆದರೆ ಈಗ ಸಂಗೃಹೀತವಾಗಿರುವ ಜಾತಕಮಾಲೆಯಲ್ಲಿ ಈ ಭಾಗವು ಎಲ್ಲಿಯೂ ಇರುವಂತೆ ಕಂಡುಬರುವುದಿಲ್ಲ. ಆದುದರಿಂದ ಗುಣಾಢ್ಯನು ಹೇಳಿರುವ ಜೀಮೂತವಾಹನನ ಕಥೆಯೇ ಇದೂ ಆಗಿರಬೇಕೆಂದು ತೋರುವುದು. ಇದರ ಮೊದಲಿನ ಮೂರು ಅಂಕಗಳು ಕೊನೆಯ ಎರಡು ಅಂಕಗಳ ಸಂಬಂಧದಿಂದ ದೂರವಾಗಿರುವುದರಿಂದ ಕಥಾಸಂವಿಧಾನಸರಣಿಯು (Unity of action) ಮಾರ್ಪಟ್ಟುಹೋಗಿದೆ. ಮೂಲದಲ್ಲಿ ಮಲಯವತಿ ಜೀಮೂತವಾಹನರ ಪ್ರಣಯವಿಚಾರವು ಹೆಚ್ಚಾಗಿ ಬರೆಯಲ್ಪಟ್ಟಿರುವುದಿಲ್ಲ. ಮೊದಲಿನಿಂದ ಕೊನೆಯವರೆಗೂ ಜೀಮೂತವಾಹನನ ಪರಾರ್ಥತೆಯೂ ಶಂಖಚೂಡನ ಉದಾರತ್ವದ ವರ್ಣನೆಯೂ ಇರುವುದು. ಬೃಹತ್ಕಥೆಯನ್ನು ಬರೆದ ಗುಣಾಢ್ಯನು ಇಲ್ಲಿ ಪ್ರಣಯವಿಚಾರವನ್ನೆತ್ತದೆ ಹಾಗೆಯೇ ಬಿಟ್ಟುಬಿಟ್ಟಿರುವನೆಂದು ತೋರುವುದು. ನಮ್ಮ ಕವಿಯು ಶೃಂಗಾರರಸಕ್ಕೆ ಪ್ರಾಧಾನ್ಯವನ್ನು ಕೊಡಲೆಳಸಿ ಕೆಲವು ವಿಷಯಗಳನ್ನು ಮೂಲಕ್ಕೆ ಸೇರಿಸಿಕೊಂಡು ಕಥಾನಿರ್ವಾಣಚತುರತೆಯನ್ನು ಮರತೇ ಹೋಗಿರುವನು. ಅನೇಕ ಕವಿಗಳೂ ಲೇಖಕರೂ ಇತರರ ಬರೆವಣಿಗೆಯಿಂದ ತಮಗೆ ಬೇಕಾದಷ್ಟನ್ನು ಸಂಗ್ರಹಿಸಿಕೊಂಡು ಗ್ರಂಥರಚನೆ ಮಾಡುವುದೇನೂ ಆಶ್ಚರ್ಯವಲ್ಲ. ಉದಾಹರಣೆಗಾಗಿ ಕಾಳಿದಾಸನು ತನ್ನ ಶಾಕುಂತಲನಾಟಕವನ್ನು ಬರೆಯಲು ಮಹಾಭಾರತದಿಂದ ಕಥೆಯನ್ನು ಆರಿಸಿಕೊಂಡಿರುವನು. ಮಹಾಕವಿಬಾಣನು ಲೋಕೋತ್ತರವಾದ ತನ್ನ ಕಾದಂಬರಿಯ ಮೂಲವನ್ನು ಬೃಹತ್ಕಥೆಯಿಂದಲೇ ಆರಿಸಿಕೊಂಡಿರುವನು. ಷೇಕ್ಸ್ಪಿಯರನು ರೋಮನ್‌ನಾಟಕಗಳನ್ನು ಬರೆಯುವಾಗ ನಾರ್ತ್‌ಸಾಹೇಬನ ಪ್ಲೂಟಾರ್ಕ್ಸ್ ಎಂಬವನ ಜೀವನಚರಿತೆಯ ಪರಿವರ್ತನವನ್ನೂ ಇಂಗ್ಲೀಷು ಚರಿತ್ರಕಾರರ ವಿಷಯವಾಗಿ ಬರೆಯುವಾಗ ಹಾಲ್ ಮತ್ತು ಹಾಲೆನ್‌ಷೆಡ್ ಇವರ ಬರೆವಣಿಗೆಯನ್ನೂ ಅನುಸರಿಸಿರುವನು. ನಾಗಾನಂದದ ಮೊದಲಿನ ಮೂರು ಅಂಕಗಳು ಪ್ರಣಯವಿಚಾರವನ್ನೂ ಕಡೆಯ ಎರಡು ಅಂಕಗಳು ಸ್ವಾರ್ಥತ್ಯಾಗವನ್ನೂ ಸೂಚಿಸುವುವು. ಇದರ ಮೂರನೆಯ ಅಂಕದ ಅವಶ್ಯಕತೆಯು ಅಷ್ಟಾಗಿ ತೋರುವುದೇ ಇಲ್ಲ. ಇದು ಇದ್ದರೆ ಎಷ್ಟು ಪ್ರಯೋಜನವೋ ಇಲ್ಲದಿದ್ದರೂ ಅಷ್ಟೇ ಪ್ರಯೋಜನವಾಗಿರುವುದು. ಇದನ್ನು ಯಾರೋ

ಈಚೆಗೆ ಬರೆದು ಸೇರಿಸಿರಬಹುದಾಗಿ ಕಂಡುಬರುತ್ತದೆ. ‡ ಭೂತದಯಾಳುವೂ ಪರೋಪಕಾರಪರಾಯಣನೂ ಉತ್ತಮಲಕ್ಷಣಲಕ್ಷಿತನೂ ಆದ ಜೀಮೂತ ವಾಹನನೇ ಇದರ ಕಥಾನಾಯಕನು. ಸತ್ಕುಲಪ್ರಸೂತಳೂ ಸದ್ಗುಣ ಮಂಡಿತಳೂ ಆದ ಮಲಯವತಿಯೇ ಕಥಾನಾಯಿಕಿ. ಶ್ರೀಹರ್ಷನು ಬೌದ್ಧ ಮತದೀಕ್ಷೆಯನ್ನು ವಹಿಸಿದನಂತರ ನಾಗಾನಂದವನ್ನು ಬರೆದಿರಬಹುದಾಗಿ ತೋರುತ್ತದೆ.

ಈ ರೂಪಕಗಳ ಸೌಂದರ್ಯವನ್ನು ಕುರಿತು ಕೆಲವು ಉದಾಹರಣೆಗಳನ್ನು ಇಲ್ಲಿ ಕೊಟ್ಟಿದೆ.

ಕುವಲಯಾನಂದಕಾರನು ಅನುಭಯತಾದ್ರೂಪ್ಯರೂಪಕಾಲಂಕಾರಕ್ಕೆ ಈ ಶ್ಲೋಕವನ್ನು ತೆಗೆದುಕೊಂಡಿರುವನು.

ಕಿಂ ಪದ್ಮಸ್ಯ ರುಚಿಂ ನ ಹಂತಿ ನಯನಾನಂದಂ ವಿಧತ್ತೇ ನ ಕಿಂ ।
ವೃದ್ಧಿಂ ವಾ ಝುಷಕೇತನಸ್ಯ ಕುರುತೇ ನಾಲೋಕಮಾತ್ರೇಣ ಕಿಂ ॥
ವಕ್ತ್ರೇಂದೌ ತವ ಸತ್ಯಯಂ ಯದಪರಃ ಶೀತಾಂಶುರುಜ್ಜೃಂಭತೇ ।
ದರ್ಪಸ್ಸ್ಯಾದಮೃತೇನ ಚೇದಿಹ ತವಾಪ್ಯಸ್ತ್ಯೇವ ಬಿಂಬಾಧರೇ ॥ (ರತ್ನಾವಳಿ ೩—೧೩)

ಕ್ಷೇಮೇಂದ್ರನು ರಸೌಚಿತ್ಯವಿಚಾರಕ್ಕೆ ತನ್ನ "ಔಚಿತ್ಯವಿಚಾರಚರ್ಚಾ" ಎಂಬ ಗ್ರಂಥದಲ್ಲಿ ಈ ಶ್ಲೋಕನ್ನು ಉದಹರಿಸಿರುವನು.

ಉದ್ದಾಮೋತ್ಕಲಿಕಾಂ ವಿಪಾಂಡುರರುಚಂ ಪ್ರಾರಬ್ಧಜೃಂಭಾಂ ಕ್ಷಣಾ
ದಾಯಾಸಂ ಶ್ವಸನೋದ್ಗಮೈರವಿರತೈರಾತನ್ವತೀಮಾತ್ಮನಃ ।
ಅದ್ಯೋದ್ಯಾನಲತಾಮಿಮಾಂ ಸಮದನಾಂ ನಾರೀಮಿವಾನ್ಯಾಂ ಧ್ರುವಂ
ಪಶ್ಯನ್ ಕೋಪವಿಪಾಟಲದ್ಯುತಿಮುಖಂ ದೇವ್ಯಾಃ ಕರಿಷ್ಯಾಮ್ಯಹಂ ॥
(ರತ್ನಾವಳಿ ೨—೪)

ಭಯಾನಕರಸಕ್ಕೆ—

ನಷ್ಟಂ ವರ್ಷವರೈರ್ಮನುಷ್ಯಗಣನಾಭಾವಾದಪಾಸ್ಯ ತ್ರಪಾ
ಮಂತಃ ಕಂಚುಕಿಕಂಚುಕಸ್ಯ ವಿಶತಿ ತ್ರಾಸಾದಯಂ ವಾಮನಃ ।
ಪರ್ಯಂತಾಶ್ರಯಿಭಿರ್ನಿಜಸ್ಯ ಸದೃಶಂ ನಾಮ್ನಃ ಕಿರಾತೈಃ ಕೃತಂ
ಕುಬ್ಜಾ ನೀಚತಯೈವಯಾಂತಿ ಶನಕೈರಾತ್ಮೇಕ್ಷಣಾಶಂಕಿನಃ ॥
(ರತ್ನಾವಳಿ ೨—೩)

‡ ಈನಾಟಕದ ವಿಚಾರದಲ್ಲಿ ಮಿ॥ ಕೆ. ಜೋಗಲೇಕರವರು "As a literary composition the Nagananda may rank with Ratnavali and Priyadarsika but as a drama it is inferior to both" ಎಂದು ಅಭಿಪ್ರಾಯಪಟ್ಟಿರುವರು. ಆದರೂ ಹರ್ಷನು ರಾಜಕಾರ್ಯ, ಯುದ್ಧಪ್ರಸಕ್ತಿಯೇ ಮೊದಲಾದುವುಗಳಲ್ಲಿ ನ್ಯಸ್ತಹೃದಯನಾಗಿದ್ದರೂ ಇಷ್ಟುಮಟ್ಟಿಗಾದರೂ ಸಾಹಿತ್ಯಾಭಿರುಚಿಯಿಂದ ಕಾವ್ಯರಚನೆಯನ್ನು ಮಾಡಿರುವುದು ಅಭಿನಂದನೀಯವೇ ಸರಿ.

ಅವಯವ ಸಹಜಸೌಂದರ್ಯಶೋಭಾ ವಿಶೇಷವನ್ನು ತಿಳಿಸುವುದಕ್ಕೆ—

ಕೃಚ್ಛ್ರಾದೂರುಯುಗಂ ವ್ಯತೀತ್ಯ ಸುಚಿರಂ ಭ್ರಾಂತ್ವಾ ನಿತಂಬಸ್ಥಲೇ
ಮಧ್ಯೇಽಸ್ಯಾಸ್ತ್ರಿವಲೀತರಂಗವಿಷಮೇ ನಿಷ್ಪಂದತಾಮಾಗತಾ ।
ಮದ್ದೃಷ್ಟಿಸ್ತೃಷಿತೇವ ಸಂಪ್ರತಿ ಶನೈರಾರುಹ್ಯ ತುಂಗೌಸ್ತನೌ
ಸಾಕಾಂಕ್ಷಂ ಮುಹುರೀಕ್ಷತೇ ಜಲಲವಪ್ರಸ್ಯಂದಿನೀ ಲೋಚನೇ ॥
(ರತ್ನಾವಳಿ ೨—೧೦)

ಖೇದಾಯ ಸ್ತನಭಾರ ಏಷ ಕಿಮು ತೇ ಮಧ್ಯಸ್ಯಹಾರೋಽಪರ ।
ಸ್ತಾಮ್ಯತ್ಯೂರುಯುಗಂ ನಿತಂಬಭರತಃ ಕಾಂಚ್ಯಾನಯಾ ಕಿಂ ಪುನಃ ॥
ಶಕ್ತಿಃ ಪಾದಯುಗಸ್ಯ ನೋರುಯುಗಳಂ ವೋಢುಂ ಕುತೋ ನೂಪುರೌ ।
ಸ್ವಾಂಗೈರೇವ ವಿಭೂಷಿತಾಸಿ ವಹಸಿ ಕ್ಲೇಶಾಯ ಕಿಂ ಮಂಡನಂ ॥
(ನಾಗಾನಂದ ೩—೬)

ಮುಗ್ಧಾಂಗನಾ ಹೃದಯಾವಸ್ಥೆಯನ್ನು ತಿಳಿಸುವುದಕ್ಕೆ—

ಹ್ರಿಯಾ ಸರ್ವಸ್ಯಾಧೋ ನಯತಿ ವಿದಿತಾಸ್ಮೀತಿ ವದನಂ ।
ದ್ವಯೋರ್ದೃಷ್ಟ್ವಾಲಾಪಂ ಕಲಯತಿ ಕಥಾಮಾತ್ಮವಿಷಯಾಂ ॥
ಸಖೀಷು ಸ್ಮೇರಾಸು ಪ್ರಕಟಯತಿ ವೈಲಕ್ಷ್ಯಮಧಿಕಂ ।
ಪ್ರಿಯಾ ಪ್ರಾಯೇಣಾಸ್ತೇ ಹೃದಯನಿಹಿತಾತಂಕವಿಧುರಾ ॥
(ರತ್ನಾವಳಿ ೩—೪)

ವಿಷವನ್ನು ಕುಡಿದು ಬಾಧೆಪಡುತ್ತಿರುವ ಪ್ರಿಯದರ್ಶಿಕೆಯನ್ನು ಕಾಪಾಡುವುದೆಂದು ವಾಸವದತ್ತೆಯು ರಾಜನನ್ನು ಬೇಡಿಕೊಂಡಾಗ ರಾಜನು ಹೇಳುವುದು.

ಸಂಜಾತಸಾಂದ್ರಮಕರಂದರಸಾಂ ಕ್ರಮೇಣ
ಪಾತುಂ ಗತಶ್ಚ ಕಲಿಕಾಂ ಕಮಲಸ್ಯ ಭೃಂಗಃ ।
ದಗ್ಧಾ ನಿಪತ್ಯ ಸಹಸೈವ ಹಿಮೇನಚೈಷಾ
ವಾಮೇ ವಿಧೌ ನ ಹಿ ಫಲಂತ್ಯಭಿವಾಂಛಿತಾನಿ ॥ (ಪ್ರಿಯದರ್ಶಿಕಾ ೪—೮)

ರಾಜನ ದುಃಖೋದ್ಗಾರವರ್ಣನೆ—

ಏಷಾ ಮೀಲಯತೀದಮೀಕ್ಷಣಯುಗಂಜಾತಾ ಮಮಾಂಧಾ ದಿಶಃ ।
ಕಂಠೋಽಸ್ಯಾಃ ಪ್ರತಿರುಧ್ಯತೇ ಮಮ ಗಿರೋ ನಿರ್ಯಾಂತಿ ಕೃಚ್ಛ್ರಾದಿಮಾಃ ॥
ಏತಸ್ಯಾಃ ಶ್ವಸಿತಂ ಹೃತಂ ಮಮ ತನುರ್ನಿಶ್ಚೇಷ್ಟತಾಮಾಗತಾ ।
ಮನ್ಯೇಽಸ್ಯಾ ವಿಷವೇಗ ಏವ ಹಿ ಪರಂ ಸರ್ವಂತು ದುಃಖಂ ಮಮ ॥
(ಪ್ರಿಯದರ್ಶಿಕಾ ೪—೯)

ಜೀಮೂತವಾಹನನ ವಿನಯಗುಣಸಂಪದಗಳನ್ನು ತಿಳಿಸುವುದಕ್ಕೆ—

ನಿರಾಧಾರಂ ಧೈರ್ಯಂ ಕಮಿವ ಶರಣಂ ಯಾತು ವಿನಯಃ ।
ಕ್ಷಮಃ ಕ್ಷಾಂತಿಂ ವೋಢುಂ ಕ ಇಹ ವಿರತಾ ದಾನಪರತಾ ॥
ಹತಂ ಸತ್ಯಂ ಸತ್ಯಂ ವ್ರಜತು ಚ ಕೃಪಾ ಕ್ವಾದ್ಯ ಕೃಪಣಾ ।
ಜಗಜ್ಜಾತಂ ಶೂನ್ಯಂ ತ್ವಯಿ ತನಯ ಲೋಕಾಂತರಗತೇ ॥ (ನಾಗಾನಂದ ೫—೩೦)

ಚೂಡಾಮಣಿಂ ಚರಣಯೋ
ರ್ಮಮಪಾತಯತಾ ತ್ವಯಾ ।
ಲೋಕಾಂತರಗತೇನಾಪಿ
ನೋಜ್ಝಿತೋ ವಿನಯಕ್ರಮಃ ॥ (ನಾಗಾನಂದ ೫—೧೧)

ಕವಿಯ ಭಾಷಾಸ್ವಾತಂತ್ರ್ಯಕ್ಕೆ ಮತ್ತು ಕವಿತಾನೈಪುಣ್ಯಕ್ಕೆ—

ಅಕ್ಲಿಷ್ಟಬಿಂಬಶೋಭಾ
ಧರಸ್ಯನಯನೋತ್ಸವಸ್ಯ ನೋಶಶಿನ ಇವ ।
ದಯಿತಾಮುಖಸ್ಯ ಸುಖಯಿತಿ ರೇಖಾ ಪಿ
ಪ್ರಥಮದೃಷ್ಟೇಯಂ ॥ (ನಾಗಾನಂದ ೨—೮)

ಕುಸುಮಸುಕುಮಾರಮೂರ್ತಿ
ರ್ದಧತೀ ನಿಯಮೇನ ತನುತರಂ ಮಧ್ಯಂ ।
ಆಭಾತಿ ಮಕರಕೇತೋಃ
ಪಾರ್ಶ್ವಸ್ಥಾ ಚಾಪಯಸ್ಟಿರಿವ ॥ (ರತ್ನಾವಳಿ ೧—೧೯)

ಕಾಳಿದಾಸನ ನಾಟಕಗಳಲ್ಲಿನ ಸಮಾನಾಭಿಪ್ರಾಯಗಳುಳ್ಳ ಶ್ಲೋಕಗಳು ಅನೇಕವಾಗಿ ಇವನ ರೂಪಕಗಳಲ್ಲಿಯೂ ಕಂಡುಬರುವುವಾದರೂ ಮಾದರಿಗಾಗಿ ಒಂದನ್ನು ಮಾತ್ರ ಇಲ್ಲಿ ಕೊಟ್ಟಿದೆ.

*ನ ಖಲು ನ ಖಲು ಮುಗ್ಧೇ ಸಾಹಸಂ ಕಾರ್ಯಮೀದೃಕ್ ।
ವ್ಯಪನಯ ಕರಮೇತಂ ಪಲ್ಲವಾಭಂ ಲತಾಯಾಃ ॥
ಕುಸುಮಮಪಿ ವಿಚೇತುಂ ಯೋ ನ ಮನ್ಯೇ ಸಮರ್ಥಃ ।
ಕಲಯತಿ ಸ ಕಥಂ ತೇ ಪಾಶಮುದ್ಬಂಧನಾಯ ॥ (ನಾಗಾನಂದ ೨—೧೧)

ರಸಮಾಧುರ್ಯಕ್ಕೂ ಸ್ವಭಾವೋಕ್ತಿಗೂ ಉದಾಹರಣೆ—

ದೃಷ್ಟ್ವಾ ದೃಷ್ಟಿಮಧೋ ದದಾತಿ ಕುರುತೇ ನಾಲಾಪಮಾಭಾಷಿತಾ ।
ಶಯ್ಯಾಯಾಂ ಪರಿವೃತ್ಯ ತಿಷ್ಠತಿ ಬಲಾದಾಲಿಂಗಿತಾ ವೇಪತೇ ॥
ನಿರ್ಯಾಂತೀಷು ಸಖೀಷು ವಾಸಭವನಾನ್ನಿರ್ಗಂತುಮೇ ವೇಹತೇ ।
ಜಾತಾ ವಾಮತಯೈವ ಮೇऽದ್ಯ ಸುತರಾಂ ಪ್ರೀತ್ಯೈನವೋಢಾಪ್ರಿಯಾ॥ (ನಾಗಾನಂದ ೩-೪)

---

*ನ ಖಲು ನ ಖಲು ಬಾಣಃ ಸಂನಿಪಾತ್ಯೋಽಯಮಸ್ಮಿನ್ ।
ಮೃದುನಿ ಮೃಗಶರೀರೇ ಪುಷ್ಪರಾಶಾವಿವಾಗ್ನಿಃ ॥
ಕ್ವ ಬತ ಹರಿಣಕಾನಾಂ ಜೀವಿತಂ ಚಾತಿಲೋಲಂ ।
ಕ್ವ ಚ ನಿಶಿತನಿಪಾತಾ ವಜ್ರಸಾರಾಃ ಶರಾಸ್ತೇ ॥ (ಶಾಕುಂತಲ ೧—೧೦)

ಜೀಮೂತವಾಹನನ ಧೈರ್ಯಔದಾರ್ಯ ವರ್ಣನೆಗೆ—

ಶಿರಾಮುಖೈಸ್ಸ್ಯಂದತ ಏವ ರಕ್ತ
ಮದ್ಯಾಪಿ ದೇಹೇ ಮಮ ಮಾಂಸಮಸ್ತಿ ।
ತೃಪ್ತಿಂ ನ ಪಶ್ಯಾಮಿ ಚ ತೇ ಮಹಾತ್ಮನ್
ಕಿಂ ಭಕ್ಷಣಾತ್ತ್ವಂ ವಿರತೋ ಗರುತ್ಮನ್ ॥ (ನಾಗಾನಂದ ೫—೧೫)

ಈ ಶ್ಲೋಕವನ್ನೇ "ದಶರೂಪ"ಕಕಾರನಾದ ಧನಂಜಯನು ಧೀರೋದಾತ್ತಲಕ್ಷಣಕ್ಕೂ ಔದಾರ್ಯಕ್ಕೂ ಉದಾಹರಣೆಯಾಗಿ ತೆಗೆದುಕೊಂಡಿರುವನು.

ಸಮುದ್ರದಲ್ಲಿ ಸಿಕ್ಕಿದ ರತ್ನಾವಳಿಯನ್ನು ಸಾಗರಿಕೆ ಎಂತಲೂ ಅರಣ್ಯದಲ್ಲಿ ಸಿಕ್ಕಿದ ಪ್ರಿಯದರ್ಶಿಕೆಯನ್ನು ಅರಣ್ಯಕೆ ಎಂತಲೂ ಗ್ರಂಥಾಂತರದಲ್ಲಿ ಗ್ರಂಥಕಾರನು ವ್ಯವಹರಿಸಿಕೊಂಡಿರುವನು.



## ಬಾಣಭಟ್ಟ

ಶೋಣಾನದಿಯ ಪಶ್ಚಿಮಕ್ಕಿರುವ 'ಪ್ರೀತಿಕೂಟ'ವೆಂಬ ಅಗ್ರಹಾರವು **ಬಾಣನ** ಜನ್ಮಭೂಮಿ. ರಾಜದೇವಿ ಮತ್ತು ವಾತ್ಸ್ಯಾಯನವಂಶಚಿಂತಾಮಣಿಯಾದ ಚಿತ್ರಭಾನು ಎಂಬ ಬ್ರಾಹ್ಮಣದಂಪತಿಗಳೇ ಬಾಣನ ಮಾತಾಪಿತೃಗಳು. ಬಾಣನಿಗೆ ಭಟ್ಟನೆಂಬ ಪದಪ್ರಯೋಗವಿರುವುದರಿಂದಲೂ—

". . . . . . . ಅಲಭತ ಚ ಚಿತ್ರಭಾನು ಸ್ತೇಷಾಂ ಮಧ್ಯೇ ರಾಜ
ದೇವ್ಯಭಿಧಾನಾಯಾಂ ಬ್ರಾಹ್ಮಣ್ಯಾಂ ಬಾಣಮಾತ್ಮಜಂ . . ."

ಎಂದಿರುವುದರಿಂದಲೂ ಇವನು ಬ್ರಾಹ್ಮಣನೆಂಬುದು ವ್ಯಕ್ತಪಡುವುದು. ಶೋಣಾನದಿಯ ಅಪರತೀರದಲ್ಲಿ 'ಯಷ್ಟಿಗೃಹ'ವೆಂಬ ಊರೂ ಇದಕ್ಕೆ ಕೊಂಚ ದೂರದಲ್ಲಿ ಮಹಾ ಪ್ರಸಿದ್ಧನಾದ ಶ್ರೀಹರ್ಷವರ್ಧನ (ಶಿಲಾದಿತ್ಯ ೨)ನ ರಾಜ್ಯವಾದ ಶ್ರೀಕಂಠದೇಶವೂ ಇದ್ದಿತು. ಬಾಣನಿಗೆ ಶೈಶವದಲ್ಲಿಯೇ ಮಾತೃವಿಯೋಗವಾಗಲು ತಂದೆಯಾದ ಚಿತ್ರಭಾನುವು ಹುಡುಗನ ರಕ್ಷಣಾವೇಕ್ಷಣಭಾರವನ್ನು ವಹಿಸಿ ಸತ್ಕಾಲದಲ್ಲಿ ವಿಧ್ಯುಕ್ತೋಪನಯನಸಂಸ್ಕಾರಗಳನ್ನು ಮಾಡಿ ಸುಶಿಕ್ಷಿತನಾದ ಮಗನನ್ನು ನೋಡಿ ಆನಂದಿಸುತ್ತಿದ್ದನು. ಬಾಣನಿಗೆ ಹದಿನಾಲ್ಕು ವರ್ಷಗಳು ತುಂಬುವುದರೊಳಗಾಗಿಯೇ ಚಿತ್ರಭಾನುವಿಗೆ ಮಾನವಲೀಲೆಯು ಕೊನೆಯಾಯಿತು. ಶಿಕ್ಷಕನೂ ರಕ್ಷಕನೂ ಆದ ತಂದೆಯು ಕಣ್ಮರೆಯಾದುದನ್ನು ನೆನೆಸಿಕೊಂಡು ಬಾಣನು ಕೆಲಕಾಲ ಹಂಬಲಿಸಿ ಯೌವನ

ನಾರಂಭದಿಂದ ಮುಗ್ಧನಾಗಿ ದೇಶಾಟನಕುತೂಹಲಚಿತ್ತನಾಗಿ ತನ್ನ ಜನ್ಮ ಭೂಮಿಯಾದ ಪ್ರೀತಿಕೂಟವನ್ನೂ ಸುಸಜ್ಜಿತವಾದ ಮನೆಯನ್ನೂ ಅತ್ಯಂತ ಪ್ರೀತಿಪಾತ್ರರಾದ ಗೆಳೆಯರನ್ನೂ ಬಿಟ್ಟು ಹೊರಟುಹೋದನು. ಶೂದ್ರಸ್ತ್ರೀ ಜಾತರಾದ ಚಂದ್ರಸೇನ, ಮಾತೃಷೇಣರೆಂಬ ಸೋದರರೂ ಭಾಷಾಕವಿಯಾದ ಈಶಾನನೂ ವಾರಬಾಣ ಮತ್ತು ವೀಸಬಾಣರೆಂಬ ವಿದ್ವಾಂಸರೂ ವರ್ಣಕವಿ ಯಾದ ವೇಣೀಭಾರತನೂ ಜಾಂಗಲಿಕ(ವಿಷವೈದ್ಯ)ನಾದ ಮಯೂರನೂ ಭಿಷಕ್ಪುತ್ರನಾದ ಮಂದಾರಕನೇ ಮೊದಲಾದವರು ಬಾಣನ ಗೆಳೆಯರಾಗಿ ದ್ದರು. ದೇಶಾಟನಕ್ಕಾಗಿ ಹೊರಟುಹೋದ ಬಾಣನು ಕೆಲವು ಕಾಲ ದೇಶಾ ಟನವನ್ನು ಮಾಡಿ ತಾನು ಜನ್ಮಿಸಿದ ಊರನ್ನೂ ಮಿತ್ರರನ್ನೂ ಜ್ಞಾಪಿಸಿಕೊಂಡು ನೋಡಬೇಕೆಂಬ ಕುತೂಹಲದಿಂದ ಹಿಂದಿರುಗಿ ಪ್ರೀತಿಕೂಟಕ್ಕೆ ಬಂದು ಇಷ್ಟ ಗೋಷ್ಠಿಗಳಲ್ಲಿ ಕಾಲಹರಣವನ್ನು ಮಾಡುತ್ತಿದ್ದನು. ಇವನು ಹಿಂದಿರುಗಿ ಬಂದ ವಿಚಾರವನ್ನೂ ಇವನ ವಿದ್ಯಾಪಾಂಡಿತ್ಯವನ್ನೂ ಶ್ರೀಹರ್ಷಸಾರ್ವ ಭೌಮನ ಸೋದರಮಾವನೂ ಚಿತ್ರಭಾನುವಿನಗೆಳೆಯನೂ ಆದ ಕೃಷ್ಣನು ತಿಳಿದು ಶ್ರೀಹರ್ಷನನ್ನು ಕೇಳಿಕೊಂಡಂತೆ ಹರ್ಷನು ಬಾಣನನ್ನು ತನ್ನಾಸ್ಥಾ ನಕ್ಕೆ ಕರೆಯಿಸಿಕೊಂಡು ಆಸ್ಥಾನದ ಪಂಡಿತಮಂಡಲಿಯಲ್ಲಿ ಸೇರಿಸಿಕೊಂಡನು.

ಕವಿವಂಶವರ್ಣನವು ಹರ್ಷಚರಿತದಲ್ಲಿ ಗದ್ಯರೂಪವಾಗಿಯೂ ಕಾದಂಬರಿ ಯಲ್ಲಿ ಪದ್ಯರೂಪವಾಗಿಯೂ ಬರೆಯಲ್ಪಟ್ಟಿರುವುದು.

**ಕಾಲ:—** ಹರ್ಷವರ್ಧನ(ಶಿಲಾದಿತ್ಯ ೨)ನು ಏಳನೆಯ ಶತಮಾನದಲ್ಲಿ (ಕ್ರಿ. ಶ. ೬೦೬ ರಿಂದ ೬೪೭ ರ ವರೆಗೆ) ಆಳಿದುದಾಗಿ ಅವನ ಚರಿತ್ರೆಯಲ್ಲಿ ಹೇಳಿರುವೆವು. ಇವನ ಆಸ್ಥಾನದಲ್ಲಿದ್ದ ಬಾಣಭಟ್ಟನೂ ಕೂಡಾ ಕ್ರಿ. ಶ. ಏಳ ನೆಯ ಶತಮಾನದವನೆಂದು ಹೇಳುವುದರಲ್ಲಿ ಯಾವ ಅಭ್ಯಂತರವೂ ಇರದು.

ಬಾಣನು ಕೆಲಕಾಲಾನಂತರದಲ್ಲಿ ಹರ್ಷವರ್ಧನನ ನಂಬಿಕೆಪರನಾದ ಗೆಳೆ ಯನಾಗಿ ತನಗೆ ಆಶ್ರಯದಾತನಾದ ಅವನ ಜೀವನಚರಿತೆಯನ್ನು ಗದ್ಯರೂಪದಲ್ಲಿ ಬರೆದು ಅದನ್ನು **ಹರ್ಷಚರಿತ**ವೆಂದು ಕರೆದಿರುವನು. ಇದಲ್ಲದೆ ಇವನು **ಕಾದಂಬರೀ,** ಮತ್ತು **ಚಂಡೀಶತಕ**ವೆಂಬ ಗ್ರಂಥಗಳನ್ನು ರಚಿಸಿರುವನು. ಇವನು ಬರೆದುದೆಂದು ಹೇಳುವ **ಶ್ಲೋಕಬದ್ಧಕಾದಂಬರೀ** ಮತ್ತು **ಮುಕುಟತಾಡಿತಕ**ವೆಂಬ ಗ್ರಂಥಗಳು ಉಪಲಬ್ಧವಿಲ್ಲ. **ಪಾರ್ವತೀಪರಿಣಯ ನಾಟಕ**ವನ್ನು ಬರೆದುದಾಗಿ ಕೆಲವರ ಮತವಿರುವುದು.

ಬಾಣನ ಕವಿತಾಸಾಮರ್ಥ್ಯವಿಚಾರವಾಗಿ ಪಂಡಿತ ಗೋವರ್ಧನಾಚಾ ರ್ಯನು—

**ಜಾತಾ ಶಿಖಂಡಿನೀ ಪ್ರಾಕ್ ಯಥಾ ಶಿಖಂಡೀ ತಥಾವ ಗಚ್ಛಾಮಿ ।**
**ಪ್ರಾಗಲ್ಭ್ಯ ಮಧಿಕಮಾಪ್ತುಂ ವಾಣೀ ಬಾಣೀ ಬಭೂವೇತಿ ॥** ಎಂದೂ

ಧರ್ಮದಾಸನು ತನ್ನ ವಿದಗ್ಧಮುಖಮಂಡನವೆಂಬ ಗ್ರಂಥದಲ್ಲಿ—

**ರುಚಿರಸ್ವರವರ್ಣಪದಾ ರಸಭಾವವತೀ ಜಗನ್ಮನೋ ಹರತಿ ।**
**ತತ್ಕಿಂ ತರುಣೀ ನಹಿ ನಹಿ ವಾಣೀ ಬಾಣಸ್ಯ ಮಧುರಶೀಲಸ್ಯ ॥** ಎಂದೂ

ಮತ್ತೊಂದರಲ್ಲಿ—

"**ಹೃದಯವಸತಿಃ ಪಂಚಬಾಣಸ್ತು ಬಾಣಃ ।**" ಎಂದೂ

ಇನ್ನೊಂದರಲ್ಲಿ—

"**ಬಾಣೋಚ್ಛಿಷ್ಟಂ ಜಗತ್ಸರ್ವಂ ।**"

ಎಂದೂ ಹೇಳಲ್ಪಟ್ಟಿರುವುದು.

**ಹರ್ಷಚರಿತ:**— ಇದರಲ್ಲಿ ೮ ಉಛ್ವಾಸಗಳಿರುವುವು. ಇದಕ್ಕೆ ಮಹಾಕವಿಚೂಡಾಮಣಿಯಾದ ಶಂಕರನೆಂಬವನು 'ಸಂಕೇತ'ವೆಂಬ ವ್ಯಾಖ್ಯಾನವನ್ನು ಬರೆದಿರುವನು.*

**ಹರ್ಷಚರಿತದ ಕಥೆಯು ಹೀಗಿರುವುದು.**

ಭರತಖಂಡದಲ್ಲಿ ಶ್ರೀಕಂಠವೆಂಬ ದೇಶವಿರುವುದು. ಇದನ್ನಾಳಿ ಕೀರ್ತಿಶೇಷರಾದವರಲ್ಲಿ 'ಪುಷ್ಪಭೂತಿ' ಎಂಬ ಅರಸನು ಮುಖ್ಯನು. ಇವನ ವಂಶೋತ್ಪನ್ನನೂ ಪ್ರಬಲಪರಾಕ್ರಮಿಯೂ ಆದ ಪ್ರಭಾಕರವರ್ಧನನೆಂಬವನು ಶ್ರೀಹರ್ಷನ ತಂದೆಯು. ಶ್ರೀಹರ್ಷನನ್ನು ಹರ್ಷನೆಂದೂ ಹರ್ಷವರ್ಧನನೆಂದೂ ಕರೆಯುವರು. ಯಶೋಮತಿಯೆಂಬವಳೇ ಶ್ರೀಹರ್ಷನ ಜನ್ಮಧಾರಿಣಿ. ಶ್ರೀಹರ್ಷನಿಗೆ ರಾಜ್ಯವರ್ಧನನೆಂಬ ಅಣ್ಣನೂ ರಾಜ್ಯಶ್ರೀ ಎಂಬ ತಂಗಿಯೂ ಇದ್ದರು. ತಂದೆಯಾದ ಪ್ರಭಾಕರವರ್ಧನನು ರಾಜ್ಯಶ್ರೀಯು ಪ್ರಾಪ್ತವಯಸ್ಕಳಾದುದನ್ನು ನೋಡಿ ಕ್ಷತ್ರಿಯಕುಲರತ್ನಪ್ರಾಯವಾದ ಮೌಖರಿ ವಂಶದ ಅವಂತಿವರ್ಮನ ಹಿರಿಯಮಗನಾದ ಗೃಹವರ್ಮನೆಂಬವನಿಗೆ ಕೊಟ್ಟು ಬಹು ಸಂಭ್ರಮದಿಂದ ವಿವಾಹವನ್ನು ಬೆಳೆಯಿಸಿ ಅಳಿಯನೊಡನೆ ಮಗಳನ್ನೂ ಕಳುಹಿಸಿಕೊಟ್ಟನು. ಹೀಗೆ ಕೆಲವು ಕಾಲ ಕಳೆಯಿತು. ಪ್ರಭಾಕರವರ್ಧನನು ವಯೋಗಳಿತನಾದನು. ಇದೇ ಸಮಯವನ್ನು ಕಾಯುತ್ತಿದ್ದ ಹೂಣರೆಂಬ ದುಷ್ಟರು ಪ್ರಜೆಗಳನ್ನು ಹಿಂಸಿಸುತ್ತಿರುವರೆಂಬುದನ್ನು ಕೇಳಿ ಅವರನ್ನು ನಿಗ್ರಹಿಸುವುದಕ್ಕಾಗಿ ಸೈನ್ಯವನ್ನು ಸಜ್ಜುಗೊಳಿಸಿ ರಾಜ್ಯವರ್ಧನನೊಡನೆ ಕಳುಹಿಸಿದನು.

---

* **ಶಂಕರನಾಮಾ ಕಶ್ಚಿದ್ಬುಧಸ್ತುಚ್ಛವ್ಯಾಕರಣಾತ್ಮಜೋವ್ಯಲಿಖತ್ । ಶಿಷ್ಯೋಪರೋಧವಶತಃ 'ಸಂಕೇತಂ' ಹರ್ಷಚರಿತಸ್ಯ ॥**

ಉತ್ತರದಿಗ್ಭಾಗವನ್ನು ಕುರಿತು ಹೋದ ಅಣ್ಣನೊಡನೆ ಹರ್ಷವರ್ಧನನೂ ಕೂಡ ಸೈನ್ಯಸಮೇತನಾಗಿ ಹಿಮವತ್ಪರ್ವತದ ವರೆಗೂ ಹೋದನು. ರಾಜ್ಯ ವರ್ಧನನು ಎಲ್ಲರನ್ನೂ ಅಲ್ಲಿಯೇ ಬಿಟ್ಟು ದುಷ್ಟರನ್ನು ನಿಗ್ರಹಿಸುವುದಕ್ಕೆ ಮಿತಪರಿವಾರದೊಡನೆ ಹೊರಟುಹೋದನು. ಹರ್ಷನು ಅಣ್ಣನ ಬರುವಿಕೆ ಯನ್ನೆದುರುನೋಡುತ್ತ ಸುತ್ತುಮುತ್ತಲಿನ ವನದೇವತೆಯ ನೈಸರ್ಗಿಕ ಸೌಂದರ್ಯವನ್ನು ನೋಡಿ ಆನಂದಿಸುತ್ತ ವನವಿಹಾರೋತ್ಸುಕತೆಯಿಂದ ಅಲ್ಲಿ ರುವ ದುಷ್ಟಜಂತುಗಳನ್ನು ನಿಗ್ರಹಿಸುತ್ತ ಒಂದಾನೊಂದು ದಿವಸ ಬಹು ಹೊತ್ತಿನವರೆಗೂ ಬೇಟೆಯಾಡಿ ಆಯಾಸಗೊಂಡು ಹಾಸುಗೆಯಲ್ಲಿ ಮಲಗಿ ನಿದ್ರೆಯು ಬಾರದೆ ಏನನ್ನೋ ಯೋಚಿಸುತ್ತಿದ್ದನು. ಆ ಸಮಯದಲ್ಲಿ ತನ್ನ ತಂದೆಯ ಪರಮಾಪ್ತಭೃತ್ಯನಾದ ಕುರಂಗಕನೆಂಬವನು ಓಡಿಬಂದು ಪ್ರಭಾಕರ ವರ್ಧನನು ರುಗ್ಣಶಯ್ಯಾಗತನಾಗಿರುವನೆಂದು ಹೇಳುವದೆಲ್ಲವನ್ನೂ ಹೇಳಿ ಕಾಗದವನ್ನು ಕೊಟ್ಟನು.

ಹರ್ಷನು ಇದನ್ನು ಓದಿನೋಡಿಕೊಂಡು ಏಕಾಕಿಯಾಗಿ ತನ್ನ ಕುದುರೆ ಯನ್ನೇರಿ ಹೊರಟು ಗೋಳಿಡುತ್ತಿರುವ ಅರಮನೆಯನ್ನು ಪ್ರವೇಶಿಸಿ ಚಿತಾರೋ ಹಣಕ್ಕಾಗಿ ಸಿದ್ಧಳಾಗಿರುವ ತಾಯಿಯನ್ನೂ ಪ್ರಾಣಪ್ರಯಾಣೋನ್ಮುಖನಾಗಿ ರುವ ತಂದೆಯನ್ನೂ ನೋಡುತ್ತಿದ್ದ ಹಾಗೆಯೇ ತಾಯಿಯು ಚಿತಾರೋಹಣ ಮಾಡಿದಳು. ಕೊಂಚ ಹೊತ್ತಿನಲ್ಲಿಯೇ ತಂದೆಯು ಸರ್ವಶೋಕಾಸ್ಪದವಾದ ಈ ನಶ್ವರಶರೀರವನ್ನು ಬಿಟ್ಟುಬಿಟ್ಟನು. ಅನಂತರ ಪುರಜನರೂ ಪುರೋಹಿತರೂ ಹರ್ಷನನ್ನು ಸಂತೈಸಿ ರಾಜಮರ್ಯಾದೆಗಳೊಡನೆ ಸರಸ್ವತೀತೀರದಲ್ಲಿ ಆ ಕಳೇ ಬರವನ್ನು ವಿಧ್ಯುಕ್ತಕರ್ಮಗಳೊಡನೆ ಸಂಸ್ಕರಿಸಿದರು. ಇಷ್ಟರಲ್ಲಿ ಅಣ್ಣನಾದ ರಾಜ್ಯವರ್ಧನನೂ ಬಂದು ಸೇರಿದನು. ಸೋದರರಿಬ್ಬರೂ ತಾಯಿತಂದೆಗಳ ಮರ ಣಕ್ಕೆ ದುಃಖಿಸಿ ರಾಜ್ಯಾಡಳಿತಗಳಲ್ಲಿ ಬೇಸರಗೊಂಡಿರುವ ರಾಜ್ಯವರ್ಧನನನ್ನು ಹರ್ಷನು ವಿನಯೋಕ್ತಿಗಳಿಂದ ಸಮಾಧಾನಗೊಳಿಸುತ್ತಿರುವಾಗ ತಂಗಿಯಾದ ರಾಜ್ಯಶ್ರೀಯ ಪರಿಚಾರಕನಾದ ಸಂವಾದಕನೆಂಬವನು ಓಡಿಬಂದು ಕಣ್ಣೀರಿ ಡುತ್ತ ಜೀಯ್ಯ! ಪ್ರಭಾಕರವರ್ಧನನು ಗತಾಸುವಾದುದನ್ನು ತಿಳಿದು ಮಾಳವ ರಾಜನು ಗೃಹವರ್ಮನನ್ನು ಕೊಂದು ರಾಜ್ಯಶ್ರೀಯನ್ನು ಕಾರಾಗೃಹದಲ್ಲಿ ಇಟ್ಟಿ ರುವನು. ಎಂದು ಹೇಳಿದನು. ಇದನ್ನು ಕೇಳಿ ತಂಗಿಯ ದುರವಸ್ಥೆಯನ್ನು ನೆನೆದು ಹಂಬಲಿಸಿ ರಾಜ್ಯವರ್ಧನನು ಮಾಳವಕುಲನಾಶವನ್ನು ಮಾಡದೆ ಬಿಡೆ ನೆಂದು ಪ್ರತಿಜ್ಞೆಗೊಂಡು ತಾನು ಬರುವವರೆಗೂ ರಾಜ್ಯಾಧಿಕಾರವನ್ನು ಮಾಡು ತ್ತಿರುವುದೆಂದು ಹರ್ಷನಿಗೆ ಆಜ್ಞಾಪಿಸಿ ತಾನೊಬ್ಬನೇ ಬೇಕಾದ ಸೈನ್ಯ

ದೊಡನೆ ಪ್ರಯಾಣಬೆಳಸಿದನು. ಹೀಗೆ ಪ್ರಯಾಣಬೆಳಸಿದ ೨-೩ ದಿನಗಳ ಅನಂತರ ರಾಜ್ಯವರ್ಧನನ ಆಪ್ತಭೃತ್ಯನಾದ ಕುಂತಳನೆಂಬವನು ಹರ್ಷನಬಳಿಗೆ ಬಂದು ತಲೆಬಾಗಿ ಎನ್ನೊಡೆಯ! ಮಾಲವರಾಜನನ್ನು ಅನಾಯಾಸದಿಂದ ಗೆದ್ದು ಜಯಶೀಲರಾದ ತಮ್ಮ ಅಣ್ಣಂದಿರನ್ನು ಮಾಲವರಾಜನು ಕೇವಲ ಮಿಥ್ಯೋಪಚಾರದಿಂದ ಉಪಚರಿಸಿ ಔತಣದನೆಪದಿಂದ ತನ್ನ ಅರಮನೆಗೆ ಕರೆಯಿಸಿಕೊಂಡು ಏಕಾಕಿಯಾಗಿ ಶಸ್ತ್ರವಿಹೀನರಾಗಿದ್ದಾಗ ಕೊಂದುಬಿಟ್ಟಿರುವನು ಎಂದು ಹೇಳಿದನು. ಇದನ್ನು ಕೇಳಿ ಪಿತೃಸಮಾನನಾದ ಹಿರಿಯ ಸೋದರನು ಮೃತನಾದುದಕ್ಕೆ ಚಿಂತಿಸಿ ಅತ್ಯಂತ ರೋಷಕಷಾಯಿತಲೋಚನನಾಗಿ ಮೂರು ದಿವಸಗಳೊಳಗಾಗಿ ಆ ನರಾಧಮನಾದ ಗೌಡಾಧಿಪನನ್ನು ಕೊಲ್ಲದಿದ್ದರೆ ಅಗ್ನಿಪ್ರವೇಶವನ್ನು ಮಾಡುವುದಾಗಿ ನಿಷ್ಕರ್ಷಿಸಿ ಸೈನ್ಯಸಮೇತನಾಗಿ ಹೊರಟು ಕಾಮರೂಪ, ಪ್ರಾಗ್ಜ್ಯೋತಿಷ ಮೊದಲಾದ ದೇಶಗಳ ರಾಜರಿಂದ ಸತ್ಕರಿಸಲ್ಪಟ್ಟವನಾಗಿ ಮುಂದೆ ಪ್ರಯಾಣಮಾಡುವುದಕ್ಕೆಂದು ಸಿದ್ಧನಾಗಿರುತ್ತಿರುವ ಸಮಯದಲ್ಲಿ ಪ್ರತೀಹಾರಿಯೋರ್ವನು ಬಂದು ಹರ್ಷನಿಗೆರಗಿ ಪರಾಕೆ! ತಮ್ಮ ಆಪ್ತನಾದ ಭಂಡಿಯೆಂಬವನು ಮಾಳವರಾಜನನ್ನು ಕೊಂದು ಅವನ ಸರ್ವಸ್ವವನ್ನೂ ತೆಗೆದುಕೊಂಡುಬಂದು ಹೊರಗಡೆ ಕಾದಿರುವನೆಂದು ಬಿನ್ನವಿಸಿದುದನ್ನು ಕೇಳಿ ಭಂಡಿಯನ್ನು ಒಳಗೆ ಕರೆಯಿಸಿಕೊಂಡು ಅವನಿಂದ ಸಕಲವಿದ್ಯಮಾನವನ್ನರಿತು ತನ್ನ ಅಣ್ಣನ ಮರಣಸಮಾಚಾರವನ್ನು ಸಾಂಗೋಪಾಂಗವಾಗಿ ಕೇಳಿ ಕಣ್ಣೀರಿಡುತ್ತ ರಾಜ್ಯಶ್ರೀಯ ವಿಚಾರವನ್ನು ಕೇಳಿದನು. ಅದಕ್ಕೆ ಭಂಡಿಯು ಆಯುಷ್ಮಂತನೆ! ರಾಜ್ಯವರ್ಧನನ್ನು ಕೊಂದ ಗೌಡರಾಜನು ಗತಾಸುವಾದನು. ಗುಪ್ತನು ಕುಶಸ್ಥಲವನ್ನಾಕ್ರಮಿಸಿದನು. ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗಿರುವ ರಾಜ್ಯಶ್ರೀಯನ್ನು ಹುಡುಕಿತರಬೇಕೆಂದು ಬಹುಜನರನ್ನು ಕಳುಹಿಸಿದರೂ ದೊರಕಲಿಲ್ಲ ಎಂದುಹೇಳಿದನು. ಬಳಿಕ ಹರ್ಷನು ತಾನೇ ರಾಜ್ಯಶ್ರೀಯನ್ನು ಹುಡುಕಿಕೊಂಡು ಬರುವುದಾಗಿ ಹೇಳಿ ಮಿತಪರಿವಾರದೊಡನೆ ವಿಂಧ್ಯಾರಣ್ಯವನ್ನು ಕುರಿತು ಪ್ರಯಾಣಮಾಡಿ ಅಲ್ಲಲ್ಲಿ ಹುಡುಕುತ್ತ ವ್ಯಾಘ್ರಕೇತುವೆಂಬ ಶಬರನಾಯಕನ ಮೈತ್ರಿಯನ್ನು ಸಂಪಾದಿಸಿ ಗೃಹವರ್ಮನ ಬಾಲ್ಯಸ್ನೇಹಿತನೂ, ಉದ್ದಾಮಪಂಡಿತನೂ, ಮಹಾಜ್ಞಾನಿಯೂ, ಬೌದ್ಧಮತಾವಲಂಬಿಯೂ ಆಗಿ ಯೌವನದಲ್ಲಿಯೇ ಕಾಷಾಯವನ್ನು ಧರಿಸಿದ ದಿವಾಕರಮಿತ್ರನೆಂಬ ಬೌದ್ಧಸನ್ಯಾಸಿಯ ಆಶ್ರಮವನ್ನು ಹೊಕ್ಕು ಅವನಿಂದ ಸತ್ಕರಿಸಲ್ಪಟ್ಟವನಾಗಿ ಅವನನ್ನು ನೋಡಿ ಮಹಾಮಹಿಮ! ನಾನು ತಾಯಿತಂದೆ ಅಣ್ಣತಂಗಿ ಬಂಧುಬಳಗಗಳಿಂದ ಬಿಡಲ್ಪಟ್ಟಿರುವೆನು. ನನ್ನನ್ನು ಹರ್ಷನೆಂದು ಕರೆ

ಯುವರು. ಪತಿವಿಯೋಗಶೋಕಾಕುಲಿತೆಯೂ ಶತ್ರುಭಯಾನ್ವಿತೆಯೂ ಸಹಾಯರಹಿತೆಯೂ ಅಬಲೆಯೂ ಆಗಿರುವ ನನ್ನ ತಂಗಿಯೊಬ್ಬಳಿಗಾಗಿ ಇದುವರೆಗೆ ಜೀವಧಾರಣವನ್ನು ಮಾಡಿ ಅವಳನ್ನು ಹುಡುಕಿಕೊಂಡು ಅಲೆಯುತ್ತಿರುವೆನು. ಎಂದು ಹೇಳುತ್ತಿರುವಾಗ ಯುವಕನೋರ್ವನು ಗಾಬರಿಗೊಂಡವನಂತೆ ಆ ಸ್ಥಳಕ್ಕೆ ಬಂದು ಸ್ವಾಮಿನ್! ಅಗೋ! ಆ ಸ್ಥಳದಲ್ಲಿ ಶೋಕಾಕುಲಿತೆಯಾದ ಯುವತಿಯೋರ್ವಳು ಅಗ್ನಿಪ್ರವೇಶವನ್ನು ಮಾಡುತ್ತಿರುವಳೆಂದೂ ಅವಳನ್ನು ಉಳಿಸುವ ಭಾರವು ತಮ್ಮದಾಗಿರುವುದೆಂದೂ ಹೇಳುತ್ತಿರುವುದನ್ನು ಹರ್ಷನು ಕೇಳಿ ತನ್ನ ತಂಗಿಯಾಗಿರಬೇಕೆಂದು ನಿಶ್ಚಯಿಸಿ ಅವಸರವಸರದಿಂದಲೂ ಮನಸ್ಸಿನ ಕಳವಳದಿಂದಲೂ ದಿವಾಕರಮಿತ್ರನೊಡನೆ ಆ ಸ್ಥಳಕ್ಕೆ ಹೋಗಿ ಅಗ್ನಿಪತನೋದ್ಯುಕ್ತಳಾಗಿರುವ ತಂಗಿಯ ಕೈಯನ್ನು ಹಿಡಿದು ನಿಲ್ಲಿಸಿ ಸಂತೈಸಿ ತಾನು ಪುನಃ ಬರುವವರೆಗೂ ದಿವಾಕರಮಿತ್ರನ ಆಶ್ರಮದಲ್ಲಿರಲೊಡಂಬಡಿಸಿ ಶತ್ರುರಾಜ್ಯದ ಮೇಲೆ ದಂಡೆತ್ತಿ ಶತ್ರುರಾಜರನ್ನು ನಿಗ್ರಹಿಸಿ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ರಾಜ್ಯವನ್ನು ಸ್ಥಿರಗೊಳಿಸಿ ತನ್ನ ಮಗನಿಗೆ ರಾಜಪಟ್ಟವನ್ನಿತ್ತು ಐಹಿಕ ಸುಖಪರಾಙ್ಮುಖನಾಗಿ ದಿವಾಕರಮಿತ್ರನ ಆಶ್ರಮಕ್ಕೆ ಬಂದು ತಂಗಿಯೊಡನೆ ಈಶ್ವರಧ್ಯಾನಾಸಕ್ತನಾಗಿದ್ದನು.

ಶೃಂಗಾರರಸವನ್ನಾಸ್ವಾದಿಸಬೇಕೆನ್ನುವ ರಸಿಕರಿಗೆ ಹರ್ಷಚರಿತವು ಹರ್ಷವನ್ನುಂಟುಮಾಡದು. ಏಕೆಂದರೆ ಹರ್ಷಚರಿತೆಯು ಚಾರಿತ್ರಿಕ ಗ್ರಂಥವಾಗಿರುವುದು.

ಇತಿಹಾಸೇತರ ಗ್ರಂಥಗಳಲ್ಲಿ ಕಂಡುಬರುವ ರಸೋನ್ನತಿಯು ಈ ಗ್ರಂಥದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಇದರಲ್ಲಿ ಕರುಣರಸವು ಪ್ರಧಾನವಾಗಿರುವುದೆಂದು ಮಾತ್ರ ಹೇಳಬಹುದು. ಕಥೆಯ ಸೊಂಪಿಗಿಂತಲೂ ಅನ್ಯಾದೃಶವರ್ಣನೆಯ ಇಂಪು ಹೆಚ್ಚಾಗಿರುವಂತೆ ತೋರುವುದು. ಪ್ರಭಾಕರವರ್ಧನನ ರಾಜ್ಯವರ್ಣನೆ, ಮೂರ್ತಿಮತ್ತಾಗಿ ಎದುರಿಗೆ ನಿಂತಿರುವಂತೆ ವರ್ಣಿಸಿರುವ ತುರಗವರ್ಣನೆ, ಯಶೋಮತಿಯ ಗರ್ಭವರ್ಣನೆ, ರಾಜ್ಯವರ್ಧನನು ಹರ್ಷನಿಗೆ ಮಾಡಿದ ಉಪದೇಶವರ್ಣನೆ, ದಿವಾಕರಮಿತ್ರನ ಆಶ್ರಮವರ್ಣನೆ, ವಿಂಧ್ಯಾಟವಿಯ ವರ್ಣನೆಯೇ ಮೊದಲಾದುವುಗಳನ್ನು ಕವಿಯು ಹೃದಯಂಗಮವಾಗುವಂತೆ ವರ್ಣಿಸಿರುವನು. ಹರ್ಷಚರಿತವನ್ನು ಬರೆದಿರುವ ಬಾಣನು ಅದರಲ್ಲಿ ತನ್ನ ವಂಶಚರಿತವನ್ನು ಬರೆಯುವಾಗ ತಾನು ವಿವಾಹಿತನೆಂದು ಹೇಳಿರುವುದನ್ನು ಹೊರತು ತನ್ನ ಹೆಂಡತಿಯ ಹೆಸರು ಕುಲಗಳಾವುದನ್ನೂ ಹೇಳಿರುವುದಿಲ್ಲ. ಹರ್ಷಚರಿತದ ಕೊನೆಯಲ್ಲಿ ಶ್ರೀಹರ್ಷನು ತನ್ನ ಮಗನಿಗೆ

ರಾಜ್ಯಾಧಿಕಾರವನ್ನು ವಹಿಸಿ ತಾನು ದಿವಾಕರಮಿತ್ರನ ಆಶ್ರಮಕ್ಕೆ ಬಂದು ತಂಗಿಯಾದ ರಾಜ್ಯಶ್ರೀಯೊಡನೆ ವೈರಾಗ್ಯಸಂಪದವನ್ನು ಅನುಭವಿಸುತ್ತಿದ್ದನೆಂದು ಹೇಳಿರುವನೇ ಹೊರತು ಹರ್ಷನ ಮಗನಾರು? ಅವನ ವಿದ್ಯಾಭ್ಯಾಸವೇ ಮೊದಲಾದ ವಿಚಾರಗಳಾವುವೆಂಬುದನ್ನು ಹೇಳಿರುವುದಿಲ್ಲ.

ಕಾದಂಬರಿ:—ಇದು ಪಾಶ್ಚಾತ್ಯರು ಹೇಳುವ ಕಲ್ಪಿತಕಥೆ (Romance) ಯ ಜಾತಿಗೆ ಸೇರಿದುದು. ಇದರಲ್ಲಿ ಕವಿಯು ಕಥಾನಾಯಕಿಯಾದ ಕಾದಂಬರಿಯನ್ನು ಲಕ್ಷಿಸಿ ಗ್ರಂಥವನ್ನು ಕಾದಂಬರಿ ಎಂದೇ ಕರೆದಿರುವನು. ಇವಳು ಓರ್ವ ಗಂಧರ್ವನ ಮಗಳು. ಉಜ್ಜಯಿನೀನಗರದ ರಾಜನ ಮಗನಾದ ಚಂದ್ರಾಪೀಡನನ್ನು ವರಿಸುವಳು. ಕಥಾಸಂವಿಧಾನವು ಚಾತುರ್ಯಯುಕ್ತವಾದುದಾಗಿ ಮುಂದೆ ಏನಿರುವುದು? ಹೇಗಾಗುವುದು? ಓದಿನೋಡಬೇಕೆಂಬ ಕುತೂಹಲವನ್ನು ಹೆಚ್ಚಿಸುವುದಾಗಿದೆ. ಕಥಾನಾಯಕಿಯ ಹೆಸರು ಮೊದಲು ತಿಳಿಯದೆ ಗ್ರಂಥಾರ್ಧವನ್ನೋದಿದನಂತರ ಕಂಡುಬರುವುದು. ಮಾಧುರ್ಯಪೂರ್ಣವಾದ ಪ್ರೌಢರಚನೆ, ಸಮಯೋಚಿತ ಶ್ಲೇಷಾರ್ಥಗಳ ಬಿಕ್ಕಟ್ಟು, ಮನೋರಂಜಕ ಶಬ್ದಪ್ರಯೋಗಚಾತುರ್ಯ, ಸಮೀಚೀನವರ್ಣನೆ, ಇವುಗಳೆಲ್ಲಕ್ಕಿಂತಲೂ ಇನಿದಾದ ಮನಮೋಹಕ ಶೈಲಿಯಿಂದ ಕಾದಂಬರಿಗೆ ವಿಶೇಷ ಪ್ರಶಸ್ತಿಯು ಬಂದಿರುವುದು. ಅದರಲ್ಲಿಯೂ ಬಾಣಭಟ್ಟನಂತಹ ಚತುರಕಲ್ಪನಾಕೋವಿದನು ಬರೆದಿರುವುದೆಂದರೆ ಆ ಗ್ರಂಥವು ವರ್ಣನಾತೀತವೆನ್ನುವುದರಲ್ಲಿ ಸಂಶಯವಿರದು. ಭಾರತೀಯರ ಕಲ್ಪನಾಶಕ್ತಿ, ಸಂಸ್ಕೃತಭಾಷೆಯ ಶಬ್ದಾರ್ಥಸಂಯೋಜನಚತುರತೆ, ಕವಿತ್ವದ ಉಜ್ವಲಸ್ವರೂಪ ಇವುಗಳೆಲ್ಲವನ್ನೂ ಇದರಲ್ಲಿ ನೋಡಬಹುದಾಗಿದೆ.

ಕಾದಂಬರಿಯಲ್ಲಿ ಪೂರ್ವಭಾಗವೆಂದೂ ಉತ್ತರಭಾಗವೆಂದೂ ಎರಡುಭಾಗಗಳಿರುವುವು. ಪೂರ್ವಭಾಗವು ಬಾಣನಿಂದ ಬರೆಯಲ್ಪಟ್ಟುದು. ಉತ್ತರಭಾಗವು ಇವನ ಮಗನಾದ ಭೂಷಣಭಟ್ಟನಿಂದ ಬರೆಯಲ್ಪಟ್ಟುದು. ಭಾನುಚಂದ್ರ ಮತ್ತು ಇವನ ಶಿಷ್ಯ ಸಿದ್ಧಚಂದ್ರ ಇವರು ಇದಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ಬಾಣನು ಪೂರ್ವಾರ್ಧವನ್ನು ಬರೆದು ಕಾಲವಶನಾದನು. ಇದರ ಕೊನೆಯಲ್ಲಿ ಕಾದಂಬರಿಯ ಆರಂಭಭಾಷಣವು ಪೂರ್ತಿಯಾಗದೆ ಅಷ್ಟಕ್ಕೆ ನಿಂತು ಹೋಗಿರುವುದು. ಸಂಪೂರ್ಣ ಕಾದಂಬರಿಯನ್ನು ಬಾಣನೇ ಮುಗಿಸಿದ್ದರೆ ಗ್ರಂಥಕ್ಕೆ ಮತ್ತಷ್ಟು ಕಳೆಯೇರುತ್ತಿತ್ತು. ಕಾದಂಬರಿಯ ಕಥಾಸಾರಾಂಶವನ್ನು ಇಲ್ಲಿ ಕೊಟ್ಟಿದೆ.

ಉಜ್ಜಯಿನಿಯಲ್ಲಿ ತಾರಾಪೀಡನೆಂಬರಸು ಶುಕನಾಸನೆಂಬ ಮಂತ್ರಿಯೊ

ಯೊಡನೆ ರಾಜ್ಯವಾಳುತ್ತಿದ್ದನು. ರಾಜ್ಯಭಾರವು ಧರ್ಮವಿರುದ್ಧವಿಲ್ಲದೆ ಸರಿ ಯಾಗಿ ನಡೆಯುತ್ತಿದ್ದುದರಿಂದಲೂ ಮಂತ್ರಿಯು ರಾಜ್ಯದಬಿಗಿಯು ತಪ್ಪದಂತೆ ಕ್ರಮವಾಗಿ ನೋಡಿಕೊಳ್ಳುತ್ತಿದ್ದುದರಿಂದಲೂ ಈತಿಬಾಧೆಗಳಾವುವೂ ಇಲ್ಲದೆ ಪ್ರಜೆಗಳು ಸುರಕ್ಷಿತರಾಗಿರುತ್ತಿದ್ದರು. ರಾಜನು ಜ್ಞಾನಸಭೋಗಗಳಲ್ಲಿ ಆಸಕ್ತನಾಗಿರುತ್ತಿದ್ದನು. (ಪ್ರಜಾಹಿತಚಿಂತಕನಾದ ರಾಜನಿಗೆ ಇಂತಹ ವಿಲಾಸಗಳು ಯುಕ್ತವೆಂತಲೂ ಇತರರಿಗೆ ಯೋಗ್ಯವಲ್ಲವೆಂತಲೂ ಬಾಣನು ಪ್ರತಿಪಾದಿಸಿರುವನು.) ಎಷ್ಟು ದಿವಸಗಳಾದರೂ ರಾಜನಿಗೆ ಮಕ್ಕಳಿಲ್ಲವೆಂಬ ಕೊರತೆಯಿದ್ದಿತು. ರಾಜ್ಞಿಯಾದ ವಿಲಾಸವತಿಯು ಕಡುದುಃಖದಿಂದ ನೊಂದು ಈಶ್ವರಸೇವಾವ್ರತಾನುಷ್ಠಾನಗಳನ್ನು ಕೈಕೊಂಡು ಕೆಲ ಕಾಲಾನಂತರ ಗರ್ಭವನ್ನು ಧರಿಸಿ ಒಬ್ಬ ಸುಪುತ್ರನನ್ನು ಪಡೆದಳು. ಅವನಿಗೆ ಚಂದ್ರಾಪೀಡನೆಂದು ನಾಮಕರಣವಾಯಿತು. ಇದೇ ಸಮಯದಲ್ಲಿ ಮಂತ್ರಿಗೂ ಒಬ್ಬ ಕುಮಾರನು ಜನಿಸಿದನು. ಅವನಿಗೆ ವೈಶಂಪಾಯನನೆಂದು ಹೆಸರು. ಇವರಿಬ್ಬರೂ ಒಂದೇ ಕಡೆಯಲ್ಲಿದ್ದು ವಿದ್ಯಾಭ್ಯಾಸಂಗವನ್ನು ಮಾಡಿದರು. ಇದಕ್ಕಾಗಿ ರಾಜನು ಊರಹೊರಗಡೆ ವಿದ್ಯಾಶಾಲೆಯೊಂದನ್ನು ಕಲ್ಪಿಸಿ ಅದಕ್ಕೆ ಬೇಕಾದ ಉಪಾಧ್ಯಾಯರುಗಳನ್ನು ನಿಯಮಿಸಿ ಈರ್ವರನ್ನೂ ಚತುಷ್ಷಷ್ಟಿಕಲಾಪ್ರವೀಣರನ್ನಾಗಿಮಾಡಿದನು. ಇವರಿಬ್ಬರೂ ಒಬ್ಬರನ್ನೊಬ್ಬರು ಅಗಲದೆ ಏಕದೇಹನ್ಯಾಯದಂತೆ ವರ್ತಿಸುತ್ತಿದ್ದರು. ಚಂದ್ರಾಪೀಡನಿಗೆ ಹದಿನಾರು ವರ್ಷಗಳಾದುವು. ರಾಜನು ವಿದ್ಯಾಶಾಲೆಯನ್ನು ಬಿಡಿಸಿ ಚಂದ್ರಾಪೀಡನಿಗೆ ಯುವರಾಜಪಟ್ಟವನ್ನು ಕಟ್ಟಿದನು. ಅನಂತರ ವಿದೇಶಗಳಿಗೆ ದಂಡೆತ್ತಿಹೋಗಿ ತನಗೆ ಅನುರೂಪಳಾದ ಕನ್ಯೆಯನ್ನು ತರುವಂತೆ ವೈಶಂಪಾಯನನೊಡನೆ ಚಂದ್ರಾಪೀಡನನ್ನು ವಿಜಯಯಾತ್ರೆಗೆ ಕಳುಹಿಸಿಕೊಟ್ಟನು. ದೇಶಾಂತರಕ್ಕೆ ಹೋದ ಇವರಿಬ್ಬರೂ ಜಯಶಾಲಿಗಳಾಗಿರುತ್ತಿದ್ದು ಒಂದಾನೊಂದು ದಿವಸ ಚಂದ್ರಾಪೀಡನು ಬೇಟೆಯಾಡುವುದಕ್ಕೆ ಹೋಗಿ ಅಲ್ಲಿ ವಿಹರಿಸುತ್ತಿದ್ದ ಕಿನ್ನರಯುಗ್ಮವನ್ನು ನೋಡಿ ಅವುಗಳ ಬಳಿಗೆ ಹೋಗಬೇಕೆಂಬಾಸೆಯಿಂದ ಇಂದ್ರಾಯುಧವೆಂಬ ತನ್ನ ಕುದುರೆಯನ್ನೇರಿ ಬೆನ್ನಟ್ಟಿದನು. ಕಿನ್ನರಯುಗ್ಮವು ಇವನ ದೃಷ್ಟಿಪಥವನ್ನು ಮೀರಿ ಎಲ್ಲಿಯೋ ಹೋಗಿಬಿಟ್ಟಿತು. ಚಂದ್ರಾಪೀಡನು ತಾನೊಬ್ಬನೇ ಆಗಿ ತನಗೂ ತನ್ನ ಬಳಲಿದ ಕುದುರೆಗೂ ವಿಶ್ರಾಂತಿಯನ್ನು ಕೊಡಲೆಳಸಿ ಅನತಿದೂರದಲ್ಲಿರುವ ಯಾವುದೋ ಕಾಲುಹಾದಿಯನ್ನನುಸರಿಸಿ ಅಚ್ಛೋದಕವೆಂಬ ಸರಸ್ಸಿನ ಬಳಿಗೆ ಬಂದನು. ತಾನೂ ತನ್ನ ಕುದುರೆಯೂ ಕೊಂಚ ವಿಶ್ರಮಿಸಿಕೊಂಡು ಹೊರಡಬೇಕೆನ್ನುವ ಸಮಯದಲ್ಲಿ ಎಲ್ಲಿಂದಲೋ ಮನ

ಮೋಹನವಾದ ಸಂಗೀತಧ್ವನಿಯು ಕೇಳಿಸಿತು. ಚಂದ್ರಾಪೀಡನು ಆಶ್ಚರ್ಯ ಚಕಿತನಾಗಿ ಆ ಧ್ವನಿಯ ಮಾರ್ಗವನ್ನನುಸರಿಸಿ ಹೋಗಿ ನೋಡಲಾಗಿ ತ್ರಿನಯನನ ದೇವಸ್ಥಾನದಲ್ಲಿ ಶ್ವೇತಶರೀರೆಯಾದ ಒಬ್ಬ ಬಾಲಾಮಣಿಯು ದೇವರ ಎದುರಿನಲ್ಲಿ ಗಾನಮಾಡುತ್ತಾ ಸಮಸ್ಕರಿಸುತ್ತಿದ್ದಳು. ಅವಳು ದೇವರನ್ನು ಪೂಜಿಸಿದನಂತರ ಹೊರಡಲುದ್ಯುಕ್ತಳಾಗಿ ಹೊರಗಡೆ ಬಂದು ನಿಂತಿರುವ ಚಂದ್ರಾಪೀಡನನ್ನು ನೋಡಿ ಅವನಿಗೆ ಸುಖಾಗಮನವನ್ನು ಬಯಸಿ ತನ್ನಾಶ್ರಮಕ್ಕೆ ಕರೆದುಕೊಂಡು ಹೋಗಿ ಹಣ್ಣುಹಂಪಲುಗಳನ್ನು ಕೊಟ್ಟು ಸತ್ಕರಿಸಿ ಚಂದ್ರಾಪೀಡನ ಪೂರ್ವೋತ್ತರಗಳನ್ನು ವಿಚಾರಿಸಿ ತಿಳಿದುಕೊಂಡಳು. ಚಂದ್ರಾಪೀಡನು ಇಂತಹ ಕಾಡಿನಲ್ಲಿ ಏಕಾಕಿನಿಯಾಗಿದ್ದುಕೊಂಡು ತಪೋನಿಷ್ಠಳಾದ ಈ ಸೌಂದರ್ಯದ ಗಣಿಯಾದ ಶ್ವೇತಶರೀರೆಯನ್ನು ನೋಡಿ ಮನದೊಳಗಚ್ಚರಿಪಟ್ಟು ಅವಳ ಚರಿತೆಯನ್ನು ಕೇಳಲಾಶಿಸಿದನು. ಆ ಬಾಲೆಯು ಸ್ವಲ್ಪಹೊತ್ತು ಕಣ್ಣೀರನ್ನು ತುಂಬಿ ಉಕ್ಕಿಉಕ್ಕಿ ಬರುತ್ತಿರುವ ಕಂಬನಿಗಳನ್ನಡಗಿಸುತ್ತಾ ಹೇಳಲುಪಕ್ರಮಿಸಿದಳು.

ಮಹಾಶಯ! ನಾನು ಭರತವರ್ಷವನ್ನೂ ಕಿಂಪುರುಷವರ್ಷವನ್ನೂ ಬೇರೆ ಮಾಡುವ ಹೇಮಕೂಟದಲ್ಲಿ ವಾಸಮಾಡುತ್ತಿದ್ದ ಗಂಧರ್ವರಾಜನ ಮಗಳು. ನನ್ನ ಶರೀರವು ಬಿಳುಪಾಗಿದ್ದುದರಿಂದ ನನ್ನ ತಂದೆಯು ನನಗೆ ಮಹಾಶ್ವೇತೆಯೆಂದೇ ನಾಮಕರಣಮಾಡಿದನು. ಒಂದಾನೊಂದು ದಿವಸ ಈ ಸರಸ್ಸಿನಲ್ಲಿ ಸ್ನಾನಮಾಡಲೆಳಸಿ ನನ್ನ ಗೆಳತಿಯರೊಂದಿಗೆ ವಿಹರಿಸುತ್ತಿದ್ದಾಗ ಈ ಮಾರ್ಗವಾಗಿ ಹೋಗುತ್ತಿದ್ದ ಋಷಿಗಳೀರ್ವರನ್ನು ನೋಡಿ ಅವರಲ್ಲೊಬ್ಬನ ಸೌಂದರ್ಯಾತಿಶಯಕ್ಕೆ ಮನಸೋತೆನು. ಅವರಲ್ಲಿ ಒಬ್ಬನನ್ನು ವಿಚಾರಿಸಲಾಗಿ ಅವನು ಶ್ವೇತಕೇತು ಮುನೀಶ್ವರನ ಮಗನೆಂತಲೂ ಅವನ ಹೆಸರು ಪುಂಡರೀಕನೆಂತಲೂ ತಿಳಿಯಿತು. ನನಗೂ ಅವನಿಗೂ ಕೊಂಚ ಸಂಭಾಷಣೆಯಾದನಂತರ ಒಬ್ಬರನ್ನೊಬ್ಬರು ಅಗಲಲಾರದಷ್ಟು ಪ್ರಣಯಾಕೃಷ್ಟೆಯಾದೆನು. ಅಷ್ಟರಲ್ಲಿಯೇ ನನ್ನನ್ನು ಕರೆದುಕೊಂಡು ಬರಬೇಕೆಂದು ನನ್ನ ತಾಯಿಯಿಂದ ಕಳುಹಿಸಲ್ಪಟ್ಟ ಚೇಟಿಯೊಡನೆ ನನ್ನ ಪ್ರಣಯಮೂರ್ತಿಯನ್ನು ಬಿಟ್ಟು ಹೋಗಲು ಮನಸ್ಸಿಲ್ಲದಿದ್ದರೂ ಅನಿರ್ವಾಹದಿಂದ ಹೊರಟುಹೋಗಬೇಕಾಯಿತು. ಮನೆಗೆ ಹೋದಾಗ್ಯೂ ನನ್ನ ಮನಸ್ಸು ಪುಂಡರೀಕನಲ್ಲಿಯೇ ಎರಕವಾಗಿದ್ದಿತು. ಸಂಧ್ಯಾಕಾಲದಲ್ಲಿ ನನ್ನ ಆಪ್ತಸಂಗಾತಿಯಾದ ತರಳಿಕೆಯು ಬಂದು ನನ್ನ ಮನೋವಲ್ಲಭನ ಗೆಳೆಯನಾದ ಕಪಿಂಜಲನೆಂಬವನು ಬಾಗಲಿನಲ್ಲಿ ಬಂದು ನಿಂತಿರುವುದಾಗಿಯೂ ನನ್ನ ಪ್ರಣಯನಾಥನಿಂದ ಯಾವುದೋ ಸಮಾಚಾರವನ್ನು ತಂದಿರುವುದಾಗಿಯೂ ಹೇಳಿದಳು.

ಪುಂಡರೀಕನ ಪ್ರಣಯದಲ್ಲಿ ಲೀನಮಾನಸಳಾದ ನನಗೆ ಮನಸ್ಸು ಡವಡವ ಗುಟ್ಟಲಾರಂಭಿಸಿತು. ಈಗ ನಾನು ಏನು ಮಾಡಬೇಕು? ಪುಂಡರೀಕನಲ್ಲಿರುವ ಪ್ರಣಯಕ್ಕೋಸ್ಕರ ಮಾನಪ್ರಾಣಗಳನ್ನು ಲೆಕ್ಕಿಸದೆ ಪರಾಪವಾದಕ್ಕೆ ಹೆದರದೆ ವಿರಹಮುಗ್ಧಳಾಗಿ, ಕಪಿಂಜಲನ ಜತೆಯಲ್ಲಿ ಹೊರಡಬೇಕೆ? ಅಥವ ತಾಯಿತಂದೆಗಳಿಗೆ ತಿಳಿಸದೆ ಅಂತರ್ಯದಲ್ಲಿ ವಿರಹವೇದನೆಯನ್ನನುಭವಿಸುತ್ತಾ ಹೃದಯೇಶ್ವರನನ್ನು ಲೆಕ್ಕಿಸದೆ ಇಲ್ಲಿಯೇ ಉಳಿದುಕೊಳ್ಳತಕ್ಕುದೆ? ಹೀಗೆಂಬ ಯೋಚನೆಯಲ್ಲಿ ಬಿದ್ದೆನಾದರೂ ವಸಂತಸಮಯ– ಬೆಳದಿಂಗಳಿನ ರಾತ್ರಿ– ಇವೇ ಮೊದಲಾದವುಗಳೆಲ್ಲವನ್ನೂ ನೋಡಿ ನನ್ನ ಮನೋವಲ್ಲಭನ ಬಳಿಗೆ ಹೋಗುವುದೇ ಸರಿ ಎಂದು ನಿಶ್ಚಯಿಸಿ ತರಳಿಕೆಯೊಡನೆ ಹೊರಟು ಪುಂಡರೀಕನನ್ನು ಮೊದಲು ನೋಡಿದ ಸ್ಥಳಕ್ಕೆ ಬಂದು ನೋಡುವಾಗ ಹಾಯ್! ಹಾಯ್! ಪುಂಡರೀಕನಿಗೆ ಬದಲಾಗಿ ಗತಾಸುವಾಗಿರುವ ಪುಂಡರೀಕನ ಕಳೇಬರವನ್ನೂ ಅವನ ಹತ್ತಿರ ಕುಳಿತುಕೊಂಡು ಕಪಿಂಜಲನು ಅಳುತ್ತಿರುವುದನ್ನೂ ಕಂಡೆನು. ವಿಚಾರಿಸುವಲ್ಲಿ ಪುಂಡರೀಕನು ವಿರಹಯಾತನೆಯಿಂದ ಕಾಲವಶವನ್ನೈದಿದನೆಂದು ತಿಳಿಯಿತು. ಕೂಡಲೆ ಮೂರ್ಛೆಹೋದ ನಾನು ಕೆಲಹೊತ್ತಿನ ನಂತರ ಮೂರ್ಛೆತಿಳಿದೆದ್ದು ಈ ಪ್ರಪಂಚದಲ್ಲಿ ಇನ್ನೇಕೆ ಇರಬೇಕೆಂದಾಲೋಚಿಸಿ ಚಿತೆಯನ್ನು ಸಿದ್ಧಗೊಳಿಸಬೇಕೆಂದು ಗೆಳತಿಯಾದ ತರಳಿಕೆಗೆ ಹೇಳಿದೆನು. ಆ ಸಮಯದಲ್ಲಿ ಅಂತರಿಕ್ಷದಿಂದ ದೇವಾಕೃತಿಯೊಂದು ಬಂದು ನಿಂತು ಸತಿಯನ್ನು ನಿರೋಧಿಸಿ ನನ್ನನ್ನು ಕುರಿತು ಎಲೌ! ಮಹಾಶ್ವೇತೆ! ನೀನು ಪತಿಯ ಯೋಚನೆಯನ್ನು ಬಿಡು, 'ಇನ್ನು ಕೊಂಚ ಕಾಲದಲ್ಲಿಯೇ ನೀನು ನಿನ್ನ ಪ್ರಾಣನಾಥನೊಡನೆ ಕೂಡಿ ಬಾಳುವೆ ಎಂದು ಹೇಳಿ ಪುಂಡರೀಕನ ಕಳೇಬರವನ್ನೆತ್ತಿಕೊಂಡು ಹೋಗಿಬಿಟ್ಟಿತು. ಇದೆಲ್ಲವನ್ನು ನೋಡುತ್ತಿದ್ದ ಕಪಿಂಜಲನೂ ಕೂಡ ಆ ದೇವಾಕೃತಿಯನ್ನೇ ಹಿಂಬಾಲಿಸಿ ಅದೃಶ್ಯನಾಗಿಬಿಟ್ಟನು. ನನ್ನ ಸ್ವಾಮಿಯ ಗೆಳೆಯನಾದ ಕಪಿಂಜಲನೂ ಹೊರಟುಹೋದುದನ್ನು ನೋಡಿ ನನಗೆ ದುಃಖವಿಮ್ಮಡಿಸಿತಾದರೂ ಆ ದೇವಾಕೃತಿಯು ಹೇಳಿದಂತೆ ನನ್ನ ಮನೋನಾಯಕನನ್ನು ಸೇರಿ ಸುಖಿಸುವೆನೆಂಬಾಸೆಯಿಂದ ನನ್ನ ಸ್ವಾಮಿಯ ಕಮಂಡಲವನ್ನು ತೆಗೆದುಕೊಂಡು ಅವನ ನಾರುಮಡಿಯನ್ನುಟ್ಟು ಈ ರೀತಿ ಶಿವಾರ್ಚನೆಯಲ್ಲಿ ಕಾಲಕಳೆಯುತ್ತಿರುವೆನೆಂದು ಹೇಳಿದಳು. ಚಂದ್ರಾಪೀಡನು ಇದೆಲ್ಲವನ್ನು ಕೇಳಿ ಎಲೌ! ಮಹಾಶ್ವೇತೆ! ಗೆಳತಿಯಾದ ತರಳಿಕೆಯು ಎಲ್ಲಿ? ಎಂದು ಕೇಳಲು ಮಹಾಶಯ! ನನ್ನ ಗೆಳತಿಯಾದ ತರಳಿಕೆಯನ್ನು ಗಂಧರ್ವರಾಜನ ಕುವರಿಯಾದ ಕಾದಂಬರಿಯ ಬಳಿಗೆ ಕಳುಹಿಸಿ

ರುವೆನು. ನನ್ನ ಮಿತ್ರಳಾದ ಕಾದಂಬರಿಯು ನನಗೆ ಈಗ ಬಂದಿರುವ ದುರವಸ್ಥೆಯು ಕಳೆಯುವವರೆಗೆ ತಾನು ವಿವಾಹಿತಳಾಗುವುದಿಲ್ಲವೆಂದು ಮುಷ್ಕರ ಹಿಡಿದಿರುವುದಾಗಿಯೂ ಈ ವಿಚಾರದಲ್ಲಿ ಹೇಗಾದರೂ ಮಾಡಿ ಕಾದಂಬರಿಯನ್ನು ವಿವಾಹಮಾಡಿಕೊಳ್ಳುವಂತೆ ಹೇಳಿ ಒಡಂಬಡಿಸಬೇಕೆಂದೂ ಕಾದಂಬರಿಯ ತಾಯಿತಂದೆಗಳು ನೊಂದುಕೊಂಡು ತರಳಿಕೆಯೊಡನೆ ಹೇಳಿಕಳುಹಿಸಿರುವರೆಂದೂ ಹೇಳಿದಳು. ಇತ್ಯವಸರದಲ್ಲಿ ಒಂದು ಹಗಲೂ ಅರ್ಧರಾತ್ರಿಯೂ ಕಳೆಯಿತು. ಮಹಾಶ್ವೇತೆಯು ತರಳಿಕೆಯಿಂದ ಇದೆಲ್ಲವನ್ನೂ ಕೇಳಿ ತಾನೇ ಹೋಗಿ ತಾಯಿತಂದೆಗಳ ಇಷ್ಟಾನುಸಾರವಾಗಿ ನಡೆದುಕೊಳ್ಳಬೇಕೆಂದು ಕಾದಂಬರಿಗೆ ಹೇಳಬೇಕೆಂದು ಯೋಚಿಸಿ ಚಂದ್ರಾಪೀಡನನ್ನು ತನ್ನ ಜತೆಯಲ್ಲಿ ಬರಬೇಕೆಂತಲೂ ಅಲ್ಲಿ ಒಂದು ರಾತ್ರಿ ಇದ್ದು ಪುನಹ ಹೊರಡಬಹುದಾಗಿ ಚಂದ್ರಾಪೀಡನನ್ನು ಪ್ರಾರ್ಥಿಸಿಕೊಂಡಳು. ಚಂದ್ರಾಪೀಡನು ಬಹು ಸಂತೋಷದಿಂದ ಮಹಾಶ್ವೇತೆಯನ್ನು ಹಿಂಬಾಲಿಸಿದನು. ಮಹಾಶ್ವೇತೆಯು ಹೇಮಕೂಟಕ್ಕೆ ಹೋದನಂತರ ಕಾದಂಬರಿಗೆ ಚಂದ್ರಾಪೀಡನ ಪರಿಚಯವನ್ನು ಮಾಡಿಕೊಟ್ಟಳು. ಕೆಲಹೊತ್ತು ಇವರೀರ್ವರೂ ಪರಸ್ಪರ ಮಾತನಾಡುತ್ತಿದ್ದಾಗ ಕಾದಂಬರಿಯು ಚಂದ್ರಾಪೀಡನಿಗೆ ವೀಳ್ಯವನ್ನು ಕೊಡುವವಳಾದಳು. ಆ ಸಮಯದಲ್ಲಿ ಮಹಾಶ್ವೇತೆಯು ಅಲ್ಲಿರದೆ ಗಂಧರ್ವರಾಜನ ಬಳಿಗೆ ಬಂದಳು. ಚಂದ್ರಾಪೀಡನೂ ತನ್ನ ಬಿಡದಿಯ ಮನೆಗೆ ಹೊರಟುಹೋದನು. ಕಾದಂಬರಿಯು ಸಂಧ್ಯಾಕಾಲಕ್ಕೆ ಸರಿಯಾಗಿ ಚಂದ್ರಾಪೀಡನಿಗೆ ತನ್ನ ಕಂಠಾಭರಣವನ್ನು ಉಪಹಾರವನ್ನಾಗಿ ಕಳುಹಿಸಿ ಅದನ್ನು ಪರಿಗ್ರಹಿಸಬೇಕೆಂದು ಪ್ರಾರ್ಥಿಸಿ ಹೇಳಿಕಳುಹಿಸಿ ಕೊಂಚಕಾಲಾನಂತರ ತಾನೂ ಬಂದಳು. ಇವರಿಬ್ಬರೂ ಬಹಳಹೊತ್ತಿನವರೆಗೂ ಮಾತನಾಡುತ್ತಿದ್ದರು. ಮರುದಿನ ಪ್ರಾತಃಕಾಲ ಚಂದ್ರಾಪೀಡನು ಕಾದಂಬರಿಯಿಂದ ಅಪ್ಪಣೆಯನ್ನು ಪಡೆದು ಮರಳಿ ಮಹಾಶ್ವೇತೆಯ ಕುಟೀರಕ್ಕೆ ಬಂದು ಆ ವೇಳೆಗೆ ತನ್ನನ್ನು ಹುಡುಕಿಕೊಂಡು ಬಂದಿದ್ದ ತನ್ನ ಪರಿವಾರದೊಡನೆ ಸೇರಿಕೊಂಡವನಾಗಿ ಅಲ್ಲಿ ಒಂದು ದಿವಸ ವಿದ್ದನು. ಮರುದಿನ ಪ್ರಾತಃಕಾಲ ಕಾದಂಬರಿಯು ತಾನು ವ್ಯಾಧಿಗ್ರಸ್ತಳಾಗಿರುವೆನೆಂದೂ ಚಂದ್ರಾಪೀಡನನ್ನು ನೋಡಲಪೇಕ್ಷೆಯುಳ್ಳವಳಾಗಿರುವೆನೆಂದೂ ಹೇಳಿಕಳುಹಿಸಿದಳು. ಚಂದ್ರಾಪೀಡನು ಆಶ್ಚರ್ಯಚಕಿತನಾಗಿ ಕಾದಂಬರಿಯು ವಿರಹದರೋಗಿಯಾಗಿರುವಳೆಂದು ತಿಳಿದು ಕೂಡಲೇ ಹೇಮಕೂಟಕ್ಕೆ ಹೋದನು. ಹೊರಡುವಾಗ ತನ್ನೊಡನೆ ಪತ್ರಲೇಖೆಯೆಂಬವಳನ್ನು ಕರೆದುಕೊಂಡು ಹೋದನು. (ಈಕೆಯು ಚಂದ್ರಾಪೀಡನ ತಾಯಿ

ಯಿಂದ ಪೋಷಿಸಲ್ಪಟ್ಟ ಗುಣಾಢ್ಯಳಾದ ಒಬ್ಬ ಚೇಟಿ) ಚಂದ್ರಾಪೀಡನ ತಾಯಿಯು ಮಗನ ಶುಶ್ರೂಷೆಗಾಗಿ ಇವಳನ್ನು ಜತೆಯಲ್ಲಿಯೇ ಕಳುಹಿಸಿ ಕೊಟ್ಟಿದ್ದಳು. ಚಂದ್ರಾಪೀಡನು ಕಾದಂಬರೀ ಮಹಾಶ್ವೇತೆಯರೊಡನೆ ಸ್ವಲ್ಪಹೊತ್ತು ಮಾತನಾಡುತ್ತಿದ್ದು ಕೊನೆಗೆ ಕಾದಂಬರಿಯು ಪತ್ರಲೇಖೆ ಯನ್ನು ತನ್ನ ಬಳಿಯಲ್ಲಿಯೇ ಬಿಟ್ಟುಹೋಗುವ ಹಾಗೆ ಚಂದ್ರಾಪೀಡನನ್ನು ಪ್ರಾರ್ಥಿಸಿಕೊಂಡಮೇರೆ ಪತ್ರಲೇಖೆಯನ್ನು ಅಲ್ಲಿಯೇ ಬಿಟ್ಟು ತನ್ನ ವಾಸ ಸ್ಥಳಕ್ಕೆ ಹಿಂದಿರುಗಿದನು. ಅಷ್ಟರಲ್ಲಿಯೇ ಬಹು ದಿವಸಗಳಿಂದ ಅಗಲಿರುವ ಪುತ್ರನನ್ನು ನೋಡಬೇಕೆಂಬಾಸೆಯಿಂದ ಚಂದ್ರಾಪೀಡನ ತಂದೆಯು ಮಗ ನನ್ನು ಕೂಡಲೇ ಬರಬೇಕೆಂದು ಹೇಳಿಕಳುಹಿಸಿದ್ದನು. ಹಾಗೆಯೇ ಮಂತ್ರಿ ಯು ವೈಶಂಪಾಯನನಿಗೂ ಬರಬೇಕೆಂದು ಬರೆಸಿದ್ದನು. ಚಂದ್ರಾಪೀಡನು ಕಾಗದವನ್ನು ನೋಡಿಕೊಂಡವನಾಗಿ ವೈಶಂಪಾಯನನ ಬಳಿ ತನ್ನ ಸೈನ್ಯವ ನ್ನಿಟ್ಟು ಅವನನ್ನು ನಿಧಾನವಾಗಿ ಬರಹೇಳಿ ಪತ್ರಲೇಖೆಯನ್ನು ಕಳುಹಿಸಿ ಕೊಡುವಂತೆ ಕಾದಂಬರಿಗೆ ಪತ್ರವನ್ನು ಬರೆದು ಅವಳನ್ನು ಕರೆದುಕೊಂಡು ಬರಲು ದೂತನೋರ್ವನನ್ನು ನಿಯಮಿಸಿ ತಾನು ನಗರಾಭಿಮುಖನಾದನು. ಬಹುಕಾಲದಿಂದ ಅಗಲಿದ್ದ ಪುತ್ರನನ್ನು ನೋಡಿ ತಾಯಿತಂದೆಗಳು ಆನಂದಿ ಸುವವರಾದರು. ಚಂದ್ರಾಪೀಡನಾದರೋ ಕಾದಂಬರಿಯನ್ನು ಮರೆಯದೆ ಅವಳ ಯೋಚನೆಯಲ್ಲಿಯೇ ಇರುತ್ತಿದ್ದನು. ಕೊಂಚದಿವಸಗಳಲ್ಲಿಯೇ ಪತ್ರ ಲೇಖೆಯು ಹೇಮಕೂಟದಿಂದ ಹಿಂದಿರುಗಿದಳು. ಚಂದ್ರಾಪೀಡನು ಅವಳಿಂದ ಕಾದಂಬರಿಯ ಅವಸ್ಥೆಯನ್ನರಿತನೆಂಬಲ್ಲಿಗೆ **ಪೂರ್ವಕಾದಂಬರಿ**ಯು ಮುಗಿ ದುದು. ನಮ್ಮ ಕವಿಯಾದ ಬಾಣಭಟ್ಟನು ಇಷ್ಟನ್ನು ಮಾತ್ರವೇ ಬರೆದು ಇಹ ಲೋಕದಿಂದ ಮರೆಯಾದನು. ಉತ್ತರಾರ್ಧವನ್ನು ಇವನ ಮಗನು ಬರೆ ದುದು. ಇವನ ಜೀವನ ಚರಿತವನ್ನು ಹೇಳುವಾಗ ಉತ್ತರಾರ್ಧವನ್ನು ಹೇಳಿ ಕಾದಂಬರಿಯನ್ನು ಸಂಪೂರ್ಣಮಾಡುವೆವು.

ಕಾದಂಬರಿಯು ಶೃಂಗಾರರಸಪ್ರಧಾನವಾದ ಕಾವ್ಯವಾಗಿರುವುದು. ಕರುಣ ಮತ್ತು ಅದ್ಭುತರಸಗಳೂ ಇರುವುವು. ಬಹುದೀರ್ಘವಾದ ಸಮಾಸಪದ ಗಳು ಇದರಲ್ಲಿ ದೊರೆಯುತ್ತವೆ. ಇಂತಹ ದೀರ್ಘಸಮಾಸಪದಗಳನ್ನು ಗದ್ಯ ಕಾವ್ಯದಲ್ಲಿ ಉಪಯೋಗಿಸುವುದು ಸುಲಭವಾದುದು. ಸಂಸ್ಕೃತಭಾಷೆಯು ಸರ್ವತ್ರ ಪ್ರಚಾರದಲ್ಲಿದ್ದಾಗ ಉಪಯೋಗಿಸಿದ ಇಂತಹ ದೀರ್ಘಸಮಾಸಪದ ಗಳು ವಿಲಕ್ಷಣವೆಂದು ಈಗ ಹೇಳುವುದು ಶಕ್ಯವಲ್ಲ. ಕಾದಂಬರಿಯಲ್ಲಿನ ವಿಂಧ್ಯಾ ರಣ್ಯವರ್ಣನೆ, ಅಚ್ಛೋದಕಸರಸ್ಸಿನ ವರ್ಣನೆ, ಜಾಬಾಲಿಮಹರ್ಷಿಯ ಆಶ್ರಮ

ವರ್ಣನೆ ಇವು ಸ್ವಭಾವಸೌಂದರ್ಯವನ್ನು ಮೀರದೆ ಕಾಳಿದಾಸನ ಶಾಕುಂತಲವನ್ನು ಜ್ಞಾಪಕಕ್ಕೆ ತರುವುದು. ಬಾಣನು ಬಾಹ್ಯಪ್ರಪಂಚವರ್ಣನೆಯನ್ನು ಸ್ವಾಭಾವಿಕವಾಗಿಯೂ, ಮನೋರಂಜಕವಾಗಿಯೂ ಹೇಗೆ ವರ್ಣಿಸಿರುವನೋ ಹಾಗೆಯೇ ರಾಜಾಂತಃಪುರವರ್ಣನೆ, ರಾಜಸಭಾವರ್ಣನೆಗಳನ್ನು ಪ್ರತ್ಯಕ್ಷವಾಗಿ ನಡೆಯುತ್ತಿರುವಂತೆ ವರ್ಣಿಸಿತೋರಿಸಿರುವನು. ಬಾಣನು ಯಾವುದಾದರೊಂದು ಅಪೂರ್ವಕಥೆಯನ್ನು ಕಲ್ಪಿಸಿಕೊಂಡು ತನ್ನ ವರ್ಣನಾಕುಶಲತೆಯನ್ನೂ ಕಲ್ಪನಾಶಕ್ತಿಯನ್ನೂ ಪ್ರಪಂಚಕ್ಕೆ ತೋರಿಸಬೇಕೆಂದೆಣಿಸಿ ಬೇಕಾದ ಸ್ಥಳಗಳಲ್ಲಿ ಮನಮೆಚ್ಚುವಂತೆ ಹೇಳಿ ತೋರಿರುವನು. ಮುಂದೆ ಬರುವ ಕವಿಗಳಿಗೆ ಮತ್ತು ಲೇಖಕರಿಗೆ ಬೇರೊಂದು ಶಬ್ದವೂ ದೊರಕಕೂಡದೆಂದು ಕಾದಂಬರಿಯನ್ನು ಬರೆದು "ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂಬ ಖ್ಯಾತಿಯನ್ನು ಬಾಣನು ಉಳಿಸಿಕೊಂಡಂತೆ ತೋರುತ್ತದೆ. ಇವನು ತನ್ನ ಕಥೆಯನ್ನು ಇದ್ದಕ್ಕಿದ್ದ ಹಾಗೆ ಎಲ್ಲಿಯೋ ಪ್ರಾರಂಭಿಸಿ ಎಲ್ಲಿಯೋ ನಿಲ್ಲಿಸಿ ಬಿಟ್ಟಿರುವನು. ಕಾವ್ಯವು ಲೋಕಮೆಚ್ಚುಗೆಗೆ ಗುರಿಯಾಗಬೇಕಾದರೆ (೧) ಛಂದೋಬದ್ಧವಾಗಿರಬೇಕೆಂದೂ (೨) ಕಥಾನಾಯಕನು ಪ್ರಸಿದ್ಧಪುರುಷನಾಗಿರಬೇಕೆಂದೂ (೩) ಮನೋರಂಜಕ ಕಥಾನುವರ್ಣನವಾಗಿರಬೇಕೆಂದೂ ಮಹಾಕವಿ ಕಾಳಿದಾಸನು ಹೇಳಿರುವನು. ಆದರೆ ಬಾಣನು ಈ ಮೂರನ್ನೂ ಮೀರಿ ಕಾದಂಬರಿಯನ್ನು ಬರೆದು ತೋರಿಸಿರುವನು. ಇದರಲ್ಲಿ ಗಿಳಿಯು ರಾಜನಿಗೆ ಹೇಳುವ ಆರ್ಯಾಶ್ಲೋಕ ಒಂದು ಹೊರತು ಉಳಿದವೆಲ್ಲವೂ ಗದ್ಯರೂಪದಲ್ಲಿರುವುವು. ಮನೋವೃತ್ತಿಯು ಕಾರಣಾಂತರಗಳಿಂದ ಹೇಗೆ ಹೇಗೆ ರೂಪಾಂತರಗಳನ್ನು ಹೊಂದುವುದೋ ಹಾಗೆ ಹಾಗೆಯೇ ಬರೆದು ವರ್ಣಿಸುವುದರಲ್ಲಿ ಭಾರತೀಯರು ನಿಸ್ಸೀಮಪಂಡಿತರಾಗಿರುವರು. ಎಷ್ಟೋ ವಿಧವಾದ ಪ್ರಣಯಭೇದಗಳು ಆಯಾಯ ಕಾಲಕ್ಕೆ ಭಿನ್ನಭಿನ್ನವಾಗಿ ತೋರಿಬರುವ ಅವುಗಳ ಸ್ವರೂಪಕಥನ, ವಿರಹಿಣಿಯ ಮನೋಕಾತರತೆಯ ಭಾವ, ಹೃದಯಕಟಾಹವನ್ನು ಭೇದಿಸಿ ಎಲ್ಲೆಯನ್ನು ಮೀರಿಬರುವ ಪ್ರಣಯೋದ್ವೇಗ, ಇದನ್ನು ಬಂಧಿಸುವಂತಹ ಸಹಜಲಜ್ಜಾವಿನಯಗಳ ಸುಹೃತ್ವ, ಪ್ರಣಯತೇಜೋವಧೆಯನ್ನು ಸಹಿಸಲಾರದಂತಹ ಕೋಪವಿಚಾರ, ದಾಹ, ಶೋಕ, ಮೂರ್ಛಾದಿ ಹತ್ತು ಅವಸ್ಥೆಗಳ ನಿರೂಪಣೆ ಇವುಗಳನ್ನು ವಿಮರ್ಶಿಸಿ ತೋರಿಸಿ ವರ್ಣಿಸಿ ಹೇಳುವುದರಲ್ಲಿ ಪಾಶ್ಚಾತ್ಯರು ಇನ್ನೂ ಸಾಹಸಿಗಳಾಗಬೇಕಾಗಿದೆ. ತನ್ನ ಮಗುವಿನ ವಿಚಾರದಲ್ಲಿ ತಾಯಿಯ ಸಹಜವಾದ ವಾತ್ಸಲ್ಯ, ಯುವಕನ ಕೇಳಿಕೆ, ರಮಣಿಯ ಧೋರಣೆ, ಇಷ್ಟಮಿತ್ರಬಂಧುಗಳ ವಿಯೋಗದುಃಖವೇ ಮೊದಲಾದುವುಗಳನ್ನು ಸಹಜರೀತಿಯಿಂದ ವರ್ಣಿಸಿ ಸಾವಿರಾರು ಜನಗಳನ್ನು

ಅಳುವಂತೆಯೂ ನಗುವಂತೆಯೂ ಮಾಡುವುದು ಭಾರತೀಯ ಕವಿಗಳ ನೈಪುಣ್ಯವನ್ನು ತೋರಿಸುವುದು.

ಬಾಣನು ಕಥೆಯ ಮುಖ್ಯಭಾಗವನ್ನು ಗಿಳಿಯ ಕೈಯಲ್ಲಿ ಹೇಳಿಸುವುದನ್ನು ನೋಡಿ ಒಂದು ವೇಳೆ ನಾವು ವಿರಸಗೊಳ್ಳುವೆವಾದರೂ ಬಾಣನ ಆ ವಾಕ್ಸರಣಿಯು ನಮ್ಮ ಅಲಸಿಕೆಯನ್ನು ದೂರಮಾಡಿ ಪುನಃ ಓದಲು ಅವಕಾಶವನ್ನು ಕಲ್ಪಿಸಿಕೊಡುವುದು. ಆ ಕಿಶೋರಮಾಕಂದಮಧುರನ ದುರದೃಷ್ಟ, ಮಾತಾಪಿತೃಗಳ ವಿಯೋಗ, ಕೀರಶಾಬನ ಕಷ್ಟನಷ್ಟಗಳನ್ನು ನೋಡಿ ಸಂಕಟಗೊಳ್ಳುವುದಾದ ವಿಚಾರವನ್ನು ಮಾನವಹೃದಯವು ಕರಗಿ, ಸೊರಗಿ, ಬಳಲಿ, ಬೆಂಡಾಗಿ ಕಣ್ಣೀರಿಡುವಂತೆ ವರ್ಣಿಸಿರುವನು. ಗಿಳಿಯ ಹಾಗೆ ತಾನೂ ಚಿಕ್ಕವನಾಗಿರುವಾಗಲೇ ಮಾತೃವಿಯೋಗವನ್ನು ಹೊಂದಿದನು. ತನಗೆ ತಾಯಿಯು ಇಲ್ಲವೆಂದೆನಿಸದಂತೆ ತಂದೆಯು ಮಗನನ್ನು ಬಹು ಅಕ್ಕರೆಯಿಂದ ಕಾಪಾಡಿದನು. ಈ ವಿಚಾರಗಳನ್ನು ಬಾಣನು ತಾನು ಬರೆದಿರುವ ಹರ್ಷಚರಿತದಲ್ಲಿ ಕಲ್ಲು ಕೂಡಾ ದ್ರವಿಸಿ ಕಣ್ಣೀರಿಡುವಂತೆ ಬರೆದಿರುವನು. ಮಹಾರಾಣಿಯಾದ ವಿಲಾಸವತಿಯು ತನಗೆ ಮಕ್ಕಳಿಲ್ಲದುದನ್ನರಿತು ಕಡುನೊಂದು ಉಪವಾಸಾದಿ ವ್ರತಗಳನ್ನಾಚರಿಸಿ ಮಗನನ್ನು ಪಡೆದು ಆನಂದಿಸುವಿಕೆಯನ್ನು ಪ್ರತ್ಯಕ್ಷಾನುಭವದಂತೆ ವರ್ಣಿಸಿರುವನು. ಪುಂಡರೀಕನ ವಿಚಾರವಾಗಿ ಮಹಾಶ್ವೇತೆಯ ಪ್ರಣಯ, ಮಾತಾಪಿತೃಗಳಿಗೆ ತಿಳಿಸದೆ ಆ ಪ್ರಣಯಲಾಭಕ್ಕಾಗಿ ಪಡುವ ತೊಂದರೆಗಳು, ಗತಾಯುವಾದ ಮನೋವಲ್ಲಭನನ್ನೋಡುವುದರಿಂದಾಗುವ ಮರ್ಮವೇದನೆ ಇವುಗಳೆಲ್ಲವನ್ನೂ ಓದಿ ಮನನೊಂದು ಬೇಸರಗೊಂಡಿರುವ ಸಮಯದಲ್ಲಿ ಅತಿ ದಾರುಣವಾಗಿರುವ ನಮ್ಮ ಹೃದಯನೋಟವನ್ನು ಕಥಾನಾಯಕಿಯಾದ ಕಾದಂಬರಿಯ ಕಡೆಗೆ ತಿರುಗಿಸಿರುವನು. ಇಲ್ಲಿ ತನ್ನ ಮನೋಹಾರಿಣಿಯಾದ ಕಾದಂಬರಿಯ ವಿಷಯದಲ್ಲಿ ತನಗಿರುವ ಅಭಿಪ್ರಾಯವನ್ನು ಚಂದ್ರಾಪೀಡನಿಂದಲೇ ಹೇಳಿಸಿರುವನು. ಚಂದ್ರಾಪೀಡನು ತನ್ನ ಎದುರಿನಲ್ಲಿ ರಮಣನ ವಿಯೋಗದಿಂದ ಶೋಕಿಸುತ್ತ ಚಿತಿಯೇರಲುದ್ಯುಕ್ತಳಾಗಿರುವ ಮಹಾಶ್ವೇತೆಯನ್ನು ಸಂತೈಸಿ ಎಲೌ! ಮಹಾಶ್ವೇತೆ! ಇಂತಹ ಕಾರ್ಯವನ್ನು ಬುದ್ಧಿಹೀನರು ಮಾಡತಕ್ಕುದು. ದುಃಖವೇ ಮನುಷ್ಯನನ್ನು ಕೊಲ್ಲುವುದಾದರೆ ಆತ್ಮಹತ್ಯೆಯಿಂದ ಯಾವ ಪ್ರಯೋಜನವೂ ಆಗದು. ದೈವವಿಲಾಸವನ್ನು ಮೀರುವರಾರು! ಇದಲ್ಲದೆ ದುಃಖಕ್ಕೆ ಅಂಜಿ ಗೋಳಿಡುವುದು ಹೇಡಿತನವನ್ನು ಸೂಚಿಸುವುದಿಲ್ಲವೆ! ಮನುಷ್ಯನಾದವನು ತನ್ನ ಜೀವಿತಕಾಲದಲ್ಲಿ ಸಂಭವಿಸಬಹುದಾದ ವಿಪತ್ಪರಂಪರೆಗಳನ್ನು ಲೆಕ್ಕಿಸದೆ ಎದೆಗೆಡದೆ

ಧೈರ್ಯದಿಂದಲೂ, ವಿವೇಕದಿಂದಲೂ, ಶಾಸ್ತ್ರಜನ್ಯಜ್ಞಾನದಿಂದಲೂ ನಿರ್ವಹಿಸ ತಕ್ಕುದು. ಇದಲ್ಲದೆ ಇತರರ ಮೃತ್ಯುವಿಯಿಂದ ಮೃತನಿಗೆ ಯಾವ ಪ್ರಯೋಜ ನವೂ ಆಗದು. ವಿವೇಕವಿಲ್ಲದೆ ಮಾಡಿಕೊಳ್ಳುವ ಆತ್ಮಹತ್ಯೆಯು ಜಘನ್ಯವಾ ದುದು. ಮೃತನ ಕಡೆಯವರು ಅವನಿಗಾಗಿ ಕೊಡುವ ತಿಲತರ್ಪಣಾದಿಗಳಿಂದ ಉಭಯತ್ರರೂ ಪ್ರಯೋಜನಕಾರಿಗಳಾಗಬಹುದು. ಮಾರನ ಸತಿಯಾದ ರತಿ, ವಿರಾಟನ ಮಗಳಾದ ಉತ್ತರೆ, ಅಭಿಮನ್ಯುವಿನ ಹೆಂಡತಿ ಇವರೇ ಮೊದಲಾದ ದೇವದಾನವರ ಸ್ತ್ರೀಯರು ಮನಸ್ಸಿಂಯಮ ದಕ್ಷತೆಯಿಂದ ಪತಿವಿಯೋಗ ದುಃಖವನ್ನು ಸಹಿಸಿಕೊಂಡಿರಲಿಲ್ಲವೆ ಎಂದು ಸಂತೈಸಿರುವನು.

ಇಲ್ಲಿ ಬಾಣನು ಹೇಳಿರುವ ಸಹಗಮನನಿಷೇಧಸಮಾಚಾರವು ಎಷ್ಟು ಸಮಂಜಸವಾಗಿ ತೋರುವುದು! ಬಾಣನು ಮಹಾಶ್ವೇತೆಯನ್ನು ನಮಗೆ ತೋ ರಿಸುವಾಗ ನಮ್ಮ ಮನಾಪಹರಣವನ್ನು ಮಾಡಿಕೊಂಡೇ ತೋರಿಸಿರುವನು. ಅವಳ ಸೌಂದರ್ಯ, ಗಾಂಭೀರ್ಯ, ವಿವೇಕ, ಚಾತುರ್ಯ, ವಾಕ್ಪಟುತ್ವ, ಅವಳ ಜೀವನಚರಿತೆ ಇವುಗಳಲ್ಲದೆ ಚಂದ್ರಾಪೀಡನಿಗೆ ಕಾದಂಬರಿಯನ್ನು ತೋರಿ ಸಿದ ವಿಷಯಗಳೆಲ್ಲವನ್ನೂ ಹೇಳುವಾಗ ಎಲ್ಲವೂ ಎದುರಿಗೆ ಬಂದು ನಿಂತಂತಾಗಿ ನಮ್ಮನ್ನು ಸ್ತಂಭೀಭೂತವನ್ನಾಗಿ ಮಾಡುವ ಹಾಗೆ ಹೇಳಿರುವನು. ಬಾಣನು ಕಥಾನಾಯಕಿಯಾದ ಕಾದಂಬರಿಯ ವಿಷಯವಾದ ತನ್ನ ಅತುಲವೈಭವೋ ಪೇತವಾದ ಲಕ್ಷ್ಯ ಅಥವ ನೋಟ, ಅಸದೃಶವಾದ ಊಹೆ ಅಥವ ಕಲ್ಪನೆ, ಅಪಾ ರವಾದ ಸಹಾನುಭೂತಿತ್ವವನ್ನು ತೋರಿಸುವುದರಲ್ಲಿ ತನ್ನ ಬುದ್ಧಿಕೌಶಲವೆಲ್ಲ ವನ್ನೂ ವೆಚ್ಚಮಾಡಿ ತೋರಿಸಿರುವನು. ಕಾದಂಬರಿಯು ಪ್ರಥಮದೃಷ್ಟಿಯು ಚಂದ್ರಾಪೀಡನ ಮೇಲೆ ಬಿದ್ದಂದಿನಿಂದ ಾ ಅನಾಘ್ರಾತಹೃದಯವು ಒಂದು ಕಡೆ ಪ್ರಣಯ, ಮತ್ತೊಂದುಕಡೆ ಮುಗ್ಧಸ್ತ್ರೀಯೋಚಿತವಾದ ಸಹಜಲಜ್ಜಾ, ಇನ್ನೊಂದುಕಡೆ ಆಶಾಪರತೆ, ಮತ್ತೊಂದುಕಡೆ ನಿರಾಶೆ, ಮಗುದೊಂದುಕಡೆ ಸ್ವಕರ್ತವ್ಯ, ಇನ್ನೊಂದುಕಡೆ ಪ್ರತಿಕ್ಷಣದಲ್ಲಿಯೂ ಹುಟ್ಟುವ ನೂತನಾಪೇಕ್ಷೆ, ಮತ್ತೊಂದುಕಡೆ ಲೋಕಾಪವಾದದ ಭೀತಿ ಇವುಗಳ ಆಂದೋಳನದಲ್ಲಿ ಸಿಲುಕಿ ವಿದೀರ್ಣವಾಗಿ ಹೋಗಿರುವುದನ್ನು ಬಾಣನು ಬಹು ಸಮಂಜಸವಾಗಿಯೂ ಸರಸವಾಗಿಯೂ ಸಮದೃಷ್ಟಿಯಿಂದಲೂ ವರ್ಣಿಸಿರುವನು ಇದಲ್ಲದೆ—

"ಕಾದಂಬರೀರಸಭರೇಣ ಸಮಸ್ತ ಏವ– ಮತ್ತೋನಕಿಂಚಿದಪಿ
ಚೇತಯತೇ ಜನೋಽಯಂ"— ಎಂಬಂತೆ

ಮಾನವನ ಹೃದಯವು ಎಲ್ಲಿ ತಲ್ಲಣಿಸುವುದೋ, ಎಲ್ಲಿ ವರ್ಣನಾತಿಕ್ರಮ ದಿಂದ ಬೇಸರವಾಗುವುದೋ ಅಂತಹ ಸ್ಥಳಗಳಲ್ಲಿ ಹೃದಯಂಗಮವಾಗುವಂತಹ

ವ್ಯಕ್ತಿವಿಶೇಷಗಳನ್ನು ತೋರಿಸಿ ಮುಂದೆ ಮುಂದೆ ಓದಬೇಕು, ಮುಂದೆ ನೋಡ ಬೇಕು, ಕೇಳಬೇಕೆಂಬ ಅನುರಕ್ತತೆಯನ್ನುಂಟುಮಾಡಿರುವ ಬಾಣಕವಿಸಾರ್ವ ಭೌಮನ ವಿದಗ್ಧತೆಯೆಂತಹುದೆಂಬದನ್ನು ನಮ್ಮಂತಹ ಪಾಮರರು ಯೋಚಿಸ ಲರಿಯರು. ಕಥಾನಾಯಕಿಯಾದ ಕಾದಂಬರಿಯನ್ನು ಕಥಾರ್ಧದಲ್ಲಿ ತೋರಿ ಸಿರುವನೆಂದು ಮೊದಲು ಹೇಳಿರುವೆವಲ್ಲವೆ! ನಾವು ಬಾಣನ ಸಂಪೂರ್ಣವರ್ಣ ನಾಚತುರತೆಯನ್ನು ನೋಡಲಾಶಿಸಿ ಎಲ್ಲಿಗೆ ಬಂದು ನೋಡುನೆವೋ ಅಂತಹ ಸ್ಥಳದಲ್ಲಿ ಗ್ರಂಥಕರ್ತನು ತನ್ನ ವರ್ಣನಾಚಮತ್ಕಾರಪ್ರತಿಭೆಯನ್ನು ತೋರ ಲೆಳಸದೆ ಮೃತ್ಯುವಿಗೆ ಗ್ರಾಸವಾಗಿರುವ ಮನೋವೇಧಕ ಕಳೇಬರವನ್ನು ತೋರಿ ಸಿರುವನು. ಇದಲ್ಲದೆ ದುಃಖಾರ್ತಳಾದ ಕಾದಂಬರಿಗೆ ಕೊಂಚ ಸಮಾಧಾ ನವನ್ನು ಕಲ್ಪಿಸಿ ಅವಳ ಬಾಯಿಂದಲೇ ಅವಳ ನಿಜಾಭಿಪ್ರಾಯವನ್ನು ಹೊರ ಡಿಸಿರುವನು.

ಇನ್ನು ಕಾದಂಬರಿಯ ವಿಚಾರದಲ್ಲಿ ಪಾಶ್ಚಾತ್ಯಪಂಡಿತರ ಅಭಿಪ್ರಾಯ ವೇನೆಂಬದನ್ನು ತಿಳಿಯಬೇಕಾಗಿದೆ. ಪ್ರೊ. ವೀಬರ್‌ಸಾಹೇಬರು ಬಾಣನ ಕಾದಂಬರಿಯು ಮಹಾರಣ್ಯದಂತೆ ಇರುವುದೆಂದೂ, ಅದರ ಒಳಹೊಗಲು ಸಾಧ್ಯವೇ ಇಲ್ಲವೆಂದೂ ಒಂದು ವೇಳೆ ಹೋಗಬೇಕೆಂದಾಶಿಸುವ ದಾರಿಗನು ದಾರಿಯಲ್ಲಿ ಸಿಕ್ಕಬಹುದಾದ ಮುಳ್ಳು ಗಿಡ ಗೆಡ್ಡೆಗಳನ್ನು ಕತ್ತರಿಸಿ ಬಹು ಕಷ್ಟದಿಂದ ಒಳಹೊಗುವನಾದರೆ ಅಲ್ಲಿ ಅತ್ಯಂತ ಕ್ರೂರಮೃಗಗಳಂತೆ ಇರುವ ದೊಡ್ಡದೊಡ್ಡ ಕ್ಲಿಷ್ಟಸಮಾಸಪದಗಳು ಓದಬೇಕೆಂದಾಶಿಸುವನನ್ನು ಭಯಪಡಿ ಸುವುವೆಂದೂ ಹೇಳಿರುವರು. *

ಕಾದಂಬರಿಯಲ್ಲಿ ವಿಲಕ್ಷಣ ದೀರ್ಘಸಮಾಸ ಶಬ್ದಗಳಿರುವುವೆಂದು ಒಪ್ಪಿ ಕೊಳ್ಳಬಹುದಾದರೂ ಶಬ್ದಾರ್ಥಸೌಂದರ್ಯ ವಿಚಾರಗಳಲ್ಲಿ ಭಿನ್ನಾಭಿಪ್ರಾಯ ಪಡಬೇಕಾಗುವುದು. ಒಂದೇ ವಿಧವಾದ ಶಬ್ದಗಳನ್ನು ಎಲ್ಲೆಲ್ಲಿ ಹೇಗೆ ಹೇಗೆ ಉಪಯೋಗಿಸಿದರೆ ಎಂತೆಂತಹ ಅರ್ಥಸೌಂದರ್ಯವನ್ನು ಕೊಡುವುವು ಎಂಬದನ್ನು ರಸಿಕನಾದವನು ತಿಳಿಯುವನು. ಅಪರಂಜಿಯನ್ನು ತೆಗೆದುಕೊಂಡು ಅದರಲ್ಲಿ ಒಂದು ಕೆಂಪು ಹರಳನ್ನು ಮೆಟ್ಟಿದರೆ ಮೂಗಿನ ನತ್ತಾಗುವುದು. ಮೂರು ನಾಲ್ಕು ಹರಳನ್ನು ಮೆಟ್ಟಿ ಮೂಗಿಗೆ ತಕ್ಕಂತೆ ಬಗ್ಗಿಸಿದರೆ ಮೂಗುತಿ ಯಾಗುವುದು, ಇನ್ನೂ ಸ್ವಲ್ಪ ಹೆಚ್ಚುಹರಳುಗಳನ್ನು ತೆಗೆದುಕೊಂಡು ಮೆಟ್ಟಿ ದರೆ ಮನೋಹರವಾದ ಪದಕವಾಗುವುದು, ಇನ್ನೂ ಹೆಚ್ಚಾಗಿ ಸೇರಿಸಿ ಉದ್ದ

* **Weber's History of Indian Literature.**

ವಾಗಿರುವಂತೆ ಮಾಡಿದರೆ ಒಂದು ಕೆಂಪಿನ ಹಾರವೇ ಆಗುವುದು. ಹಾಗೆಯೇ ಒಂದೇ ಶಬ್ದವನ್ನು ಬೇರೆ ಬೇರೆ ಸೌಂದರ್ಯವು ತೋರುವಂತೆ ಉಪಯೋಗಿಸುವುದು ಚತುರನಾದ ರಸಜ್ಞನಿಗೆ ಗೊತ್ತಿರುವಂತೆ ಇತರರಿಗೆ ಗೊತ್ತಿರದು. ಸ್ವರ್ಣಕಾರನು ಪದಾರ್ಥವು ಒಂದೇ ಆದರೂ ಅದನ್ನು ತನ್ನ ಬುದ್ಧಿಕುಶಲತೆಯಿಂದ ಬೇರೆ ಬೇರೆ ರೂಪಕ್ಕೆ ತಿರುಗಿಸಿ ಮನಮೋಹಿಸುವಂತೆ ಆಭರಣಗಳನ್ನು ಮಾಡುವ ಹಾಗೆಯೇ ಕಲಾಚತುರನಾದ ಕವಿಯೂ ಕೂಡ ಶಬ್ದವು ಒಂದೇ ಆದರೂ ಅವುಗಳ ಪರಸ್ಪರ ಸಂಯೋಜನದಿಂದ ಅರ್ಥಗೌರವವು ಹೆಚ್ಚುವಂತೆ ಮಾಡಿ ಒಂದೊಂದು ಕಡೆ ಒಂದೊಂದು ವಿಧವಾದ ಆನಂದರಸವು ಹೊರ ಹೊಮ್ಮುವರತೆ ತೋರಿಸುವನು. ತಾನು ಮಾಡಿದ ಆಭರಣಗಳನ್ನು ಇತರರು ನೋಡಿ ಮೋಹಿಸಬೇಕೆಂದು ಸ್ವರ್ಣಕಾರನಿಗೆ ಹೇಗೆ ಆಸೆಯೋ ಹಾಗೆಯೇ ಕವಿಗೂ ತನ್ನ ಕಾವ್ಯವು ಲೋಕಾಮೋದಕರವಾಗಬೇಕೆಂದು ಆಸೆ.

ಇದೇ ವಿಚಾರದಲ್ಲಿ ಮತ್ತೊಬ್ಬ ಪಾಶ್ಚಾತ್ಯಪಂಡಿತನು ಏನು ಅಭಿಪ್ರಾಯಪಟ್ಟಿರುವನೆಂಬುದನ್ನು ಇಲ್ಲಿ ತಿಳಿಯಬಹುದು. *

ಇನ್ನು ಕಾದಂಬರಿಯ ಉತ್ಕೃಷ್ಟಭಾಗವನ್ನು ಹೇಳಿ ತೋರಿಸುವೆವು. (೧) ಶೂದ್ರಕರಾಜನ ಸ್ನಾನಸಮಾರಂಭವರ್ಣನ, (೨) ಮಹಾಶ್ವೇತೆಯು ಕಾದಂಬರಿಯನ್ನು ನೋಡಲು ಹೇಮಕೂಟಕ್ಕೆ ಚಂದ್ರಾಪೀಡನೊಡನೆ ಹೋದಾಗ ಚಂದ್ರಾಪೀಡನಿಗೆ ಒಂದು ಬಿಡದಿಮನೆಯನ್ನು ಮಾಡಿಕೊಟ್ಟು ತಾನು ಕಾದಂಬರಿಯ ತಂದೆಯನ್ನು ನೋಡಲು ಹೋದಳು. ಚಂದ್ರಾಪೀಡನ ಬಿಡದಿಯು ಕಾದಂಬರಿಯ ಮನೆಗೆ ಸಮೀಪವಾಗಿದ್ದಿತು. ಉಪವನದ ಸೊಬಗನ್ನು ನೋಡಲೆಳಸಿ ಹೊರಗೆ ಬಂದ ಚಂದ್ರಾಪೀಡನನ್ನು ಕಾದಂಬರಿಯು ನೋಡಿ ಕುಲೀನತೋಚಿತಲಜ್ಜೆಯನ್ನು ದೂರಮಾಡಿ ಅವನನ್ನು ಮೋಹಿಸಿದುದನ್ನು ಕವಿಯು ಸಾಕ್ಷಾತ್ತಾಗಿ ವರ್ಣಿಸಿರುವನು. ಕಾದಂಬರಿಯ ಮುಗ್ಧಲೀಲಾವರ್ಣನವನ್ನು ಹೆಚ್ಚಾಗಿ ತೋರಿಸಿರುವನು.

ಅಚ್ಛೋದನಾಮಕಸರೋವರವಿಸ್ತೀರ್ಣ ಮತ್ತು ರಮ್ಯತೆ, ಬಹುದೂರ ಕೇಳಿಸುವ ಗಾಯನ, ಶಿವಾಲಯದಲ್ಲಿ ಕುಳಿತು ಗಾನಮಾಡುವ ದಿವ್ಯಕನ್ಯಾ

* "His words breath a freshness and vigour that bespeak a warmth of admiration. We in England are too apt to look upon as the exclusive possession of certain of our poets."—
—Prof. Peterson in his introduction to *Kadambari*.

ಸಂದರ್ಶನ, ಆಗಂತುಕನಾಗಿ ಬಂದ ಚಂದ್ರಾಪೀಡನ ಸತ್ಕಾರ, ಗಂಧರ್ವಕು ಲಾವತೀರ್ಣ, ಪುಂಡರೀಕನ ದರ್ಶನ ಇವೇ ಮೊದಲಾದುವುಗಳು ಹೃದಯಂಗ ಮವಾಗಿ ಬರೆಯಲ್ಪಟ್ಟಿರುವುವು. ಶೃಂಗಾರ ಕರುಣಾದ್ಭುತರಸಗಳು ಮೂರ್ತಿ ಮತ್ತಾಗಿವೆ. ವಿಂಧ್ಯಾರಣ್ಯವರ್ಣನೆ, ಶಾಲ್ಮಲೀವೃಕ್ಷವರ್ಣನೆ ಇವು ಬಹು ಅದ್ಭುತರಸವತ್ತಾಗಿ ವರ್ಣಿಸಲ್ಪಟ್ಟಿವೆ. ಗಿಳಿಯ ವೃತ್ತಾಂತವು ಹೃದಯ ದ್ರಾವಕವಾಗುವಂತೆ ವರ್ಣಿಸಲ್ಪಟ್ಟಿದೆ. ಇದರಲ್ಲಿ ರಸೋತ್ಕರ್ಷತೆಯು ಬಹು ಚೆಲುವಾಗಿದೆ. ಶಬರರು ವಿಂಧ್ಯಾಟವಿಯಲ್ಲಿ ಬೇಟೆಯಾಡಿದನಂತರ ಸೇನಾಪತಿ ಯು ವಿಶ್ರಾಂತಿಗಾಗಿ ಶಾಲ್ಮಲೀವೃಕ್ಷದ ಕೆಳಗೆ ಕುಳಿತುಕೊಂಡ ವರ್ಣನವನ್ನು ಕವಿಯು ಬಹು ನಾಜೂಕಾಗಿ ವರ್ಣಿಸಿರುವನು. ಚಂದ್ರಾಪೀಡನ ವಿದ್ಯಾ ಭ್ಯಾಸವು ಮುಗಿದನಂತರ ತಾರಾಪೀಡನು ಉಜ್ಜಯಿನಿಗೆ ಚಂದ್ರಾಪೀಡ ನನ್ನು ಕರೆಯಿಸಿ ಯುವರಾಜಪದದಲ್ಲಿ ಪಟ್ಟಾಭಿಷೇಕವನ್ನು ಮಾಡಬೇಕೆಂದು ಯೋಚಿಸಿದಾಗ ಮಂತ್ರಿಯಾದ ಶುಕನಾಸನು ಪ್ರಸಂಗೋಚಿತವಾಗಿ ಮಾಡಿದ ಉಪದೇಶವು ಅನುಸರಣೀಯವಾಗಿದೆ. ಇದರಲ್ಲಿ– ಯೌವನ, ರಾಜ್ಯಮದ, ಮೋಸಗಾರರ ಹಾವಳಿ, ಇವರುಗಳಿಂದ ಎಂತಹ ಅನರ್ಥಗಳು ಸಂಭವಿ ಸುತ್ತವೆಯೆಂಬುದನ್ನು ಕವಿಯು ಸಂಪ್ರದಾಯಾನುಸಾರ ವರ್ಣನವನ್ನು ಮಾಡಿರುವನು. ಕಿರಾತರ ವನವಿಹಾರವರ್ಣನೆ, ಮಹಾಶ್ವೇತೆಯ ಪಾತಿ ವ್ರತ್ಯವರ್ಣನೆ, ಕಾದಂಬರಿಯ ಕ್ಲೇಶಸಹಿಷ್ಣುತೆ, ಉದಾರತೆ, ಸ್ನೇಹ, ಚಾತು ರ್ಯ, ಧೈರ್ಯ, ವಿನಯವರ್ಣನೆಗಳು ಬಹು ಚತುರತೆಯಿಂದ ವರ್ಣಿಸಲ್ಪ ಟ್ಟಿರುವುವು. ಹೆಚ್ಚು ಹೇಳುವುದೇನು! ಮಹಾಕವಿಯಾದ ಬಾಣನು ಬರೆದಿ ರುವ ಅಮೋಘವಾದ ಕಾದಂಬರೀಗ್ರಂಥದಲ್ಲಿ ಯಾವ ಭಾಗವು ತಾನೇ ನೀರಸ ವಾಗಿರುವುದು! ಮಂತ್ರಿಯಾದ ಶುಕನಾಸನು ಯುವರಾಜನಾದ ಚಂದ್ರಾ ಪೀಡನಿಗೆ ಉಪದೇಶಿಸಿದ ನೀತಿಸಾರವು ಇಲ್ಲಿ ಸಂಗ್ರಹಿಸಲ್ಪಟ್ಟಿದೆ.

"ಕುಮಾರ, ಚಂದ್ರಾಪೀಡ! ಸಕಲಶಾಸ್ತ್ರಗಳನ್ನು ಅಭ್ಯಸಿಸಿರುವ ನಿನಗೆ ಉಪದೇಶಿಸಬೇಕಾದುದು ಯಾವುದೂ ಇರದು. ಯೌವನವೆಂಬುದು ಗಾಢಾಂಧ ಕಾರದಂತಿರುವುದು. ಧನಸಂಪತ್ತಿಯು ದಾರುಣವೂ ವಿವೇಕಶೂನ್ಯವೂ ಆಗಿರು ವುದು. ಆಗರ್ಭರಾಜತ್ವ, ಅಭಿನವಯೌವನತ್ವ, ಅಸಮಾನರೂಪತ್ವ, ಅಮಾನುಷ ಶಕ್ತಿತ್ವ ಇವು ಅನರ್ಥಪರಂಪರೆಗಳ ಕಾರಣಗಳು. ಇವು ಒಂದೊಂದೇ ಸಾಕಾ ಗಿರುವಾಗ ನಾಲ್ಕೂ ಸೇರಿದ ಕಡೆ ಹೆಚ್ಚಾಗಿ ಹೇಳಬೇಕಾದುದೇನಿರುವುದು! ಎಷ್ಟೇ ಓದಿದ ಪಂಡಿತನಾಗಿದ್ದರೂ ಯೌವನದಲ್ಲಿ ಬುದ್ಧಿಯು ಕಲುಷಿತವಾ ಗದಿರದು. ಶಶಿಕಿರಣವು ಚಂದ್ರೋಪಲದಲ್ಲಿ ಲೀನವಾಗುವಂತೆ ಗುರೂಪ

ದೇಶವು ಧೀರನ ಚಿತ್ತದಲ್ಲಿ ಚೆನ್ನಾಗಿ ಸೇರುವುದು. ಅದೇ ಉಪದೇಶವನ್ನು ಅಭಾಗ್ಯನಿಗೆ ಮಾಡುವುದಾದರೆ ಕಿವಿಯಲ್ಲಿ ನೀರುಬಿಟ್ಟಂತಾಗಿ ತೊಂದರೆಯ ನ್ನುಂಟುಮಾಡುವುದು. ಆದುದರಿಂದ ಕುಮಾರ! ವಿಷಯಸುಖಾಸಕ್ತನಾಗ ಬೇಕೆನ್ನುವ ಯೌವನದಿಂದ ಕೂಡಿರುವ ನಿನಗೆ ಈ ಸಮಯವು ಉಪದೇಶ ಯೋಗ್ಯವಾದುದಾಗಿರುವುದು. ದುಃಸ್ವಭಾವಕ್ಕೆ ವಂಶವೂ ವಿನಯಗಳಿಗೆ ವಿದ್ಯೆಯೂ ಕಾರಣಗಳಲ್ಲವು. ಚಂದನತರುವು ಅತ್ಯಂತ ಶೀತಲವಾದುದಾದರೂ ಅಗ್ನಿಯನ್ನು ಆರಿಸಬಲ್ಲುದೆ? ಶಾಂತವಾದ ಜಲನಿಧಿಯಲ್ಲಿರುವುದಾದರೂ ಬಡ ಬಾಗ್ನಿಯು ಉಗ್ರವಾದುದಲ್ಲವೆ? ಯೋಗ್ಯನಾದವನಿಗೆ ಗುರೂಪದೇಶವು ನಿರ್ಮಲ ಜಲಸ್ನಾನದಂತಿರುವುದು. ಅಹಂಕಾರದಾಹಜ್ವರಪೀಡಿತ ಪ್ರಕೃತಿಯುಳ್ಳ ರಾಜ ನಿಗೆ ಇದು ಮುಖ್ಯಾವಶ್ಯಕವಾದುದು. ಲಕ್ಷ್ಮಿಯು ಚಪಲಳು. ಹೊಂದಿದರೂ ಹೊಂದದಿದ್ದರೂ ಕೂಡ ದುಃಖವನ್ನುಂಟುಮಾಡುವಳು. ಲಕ್ಷ್ಮಿಯು ಕುಲ ವನ್ನು ನೋಡಳು, ಶೀಲವನ್ನೆಣಿಸಳು, ವಿದ್ಯೆಯನ್ನು ಕೇಳಳು, ಧರ್ಮವನ್ನನುಸ ರಿಸಳು, ತ್ಯಾಗವನ್ನಾದರಿಸಳು, ಜ್ಞಾನವನ್ನು ವಿಚಾರಿಸಳು, ಗುಣವನ್ನರಿಯಳು, ಯೋಗ್ಯತೆಯನ್ನು ಮನ್ನಿಸಳು, ಪೌರುಷವನ್ನು ಗಣಿಸಳು,-ಇಂತಹ ಲಕ್ಷ್ಮಿಯ ನ್ನು ರಾಜರಾದವರು ಪರಿಗ್ರಹಿಸಿ ಸಕಲ ದುರ್ವಿನಯಗಳಿಗೆ ಪಾತ್ರರಾಗುವರು. ರಾಜ್ಯಛತ್ರವನ್ನು ಹಿಡಿದುಕೊಂಡಕೂಡಲೇ ಅವರನ್ನಾಶ್ರಯಿಸಿಕೊಂಡಿದ್ದ ದಾ ಕ್ಷಿಣ್ಯ, ಪರಲೋಕಭೀತಿ, ಸತ್ಯವಾದಿತ್ವವೇ ಮೊದಲಾದುವುಗಳೆಲ್ಲವೂ ಎಲ್ಲಿಯೋ ಹೋಗಿಬಿಡುವುವು. ಅವರು ಸಪ್ತವ್ಯಸನಗಳನ್ನು ಸದ್ಗುಣಗಳನ್ನಾಗಿ ತಿಳಿ ಯುವರು. ತಮ್ಮ ಅನುವರ್ತಿಗಳ ಮಾತನ್ನು ಆದರಿಸುವರು. ಹೆಚ್ಚೇಕೆ! ಅವರ ದರ್ಶನವೇ ಅನುಗ್ರಹವೆಂದೂ ಆಲೋಕನವೇ ಮಹೋಪಕಾರವೆಂದೂ ಭಾಷಣವೇ ವೇದಾಕ್ಷರಗಳೆಂದೂ ಸ್ಪರ್ಶವೇ ಪಾವನವೆಂದೂ ಆಜ್ಞೆಯೇ ವರ ದಾನವೆಂದೂ ತಿಳಿಯುವರು. ದೇವತೆಗಳಿಗೆ ನಮಸ್ಕರಿಸರು, ಬ್ರಾಹ್ಮಣರನ್ನ ರ್ಚಿಸರು, ಮಾನ್ಯರನ್ನು ಮನ್ನಿಸರು. ಯಾವನು ಹಗಲೂ ರಾತ್ರಿಯೂ ಕೈಕಟ್ಟಿ ಕೊಂಡು ಬಹು ವಿನಯದಿಂದಿರುವವನಂತೆ ನಟಿಸುತ್ತಾ ಇದ್ದುದೂ ಇಲ್ಲದುದನ್ನು ವಿಪರೀತಮಾಡಿ ಹೇಳುತ್ತ ಅನುಸರಿಸಿಕೊಂಡಿರುವನೋ ಅಂತಹನ ಮಾತುಗಳು ಎಂತಹುದಾದರೂ ಆಲೈಸುವರು. ಆದುದರಿಂದ ಕುಮಾರ, ಚಂದ್ರಾಪೀಡ! ಅತಿಕಷ್ಟವೂ ದಾರುಣವೂ ಆದ ರಾಜ್ಯದ ತಂತ್ರಗಳನ್ನೂ ಮಹಾಮೋಹಕಾರ ಣವಾದ ಯೌವನವನ್ನೂ ಸರ್ವಜನಸಮ್ಮತದಂತೆ ಅನುಸರಿಸಲು ಪ್ರಯತ್ನಪಡು. ಎಂತಹ ಸತ್ಕುಲಪ್ರಸೂತನಾದರೂ ಎಂತಹ ವಿದ್ವಾಂಸನಾದರೂ ಎಂತಹ ಧೀರ

ನಾದರೂ ಲಕ್ಷ್ಮಿಯು ದುರ್ಮಾರ್ಗಗಳಿಗೆಳೆದೊಯ್ಯುಳೆಂಬ ನನ್ನ ಮಾತನ್ನು ಮಾತ್ರ ಮರೆಯದಿರು.

**ಚಂಡೀಶತಕ**— ಇದರ ಕಥಾಭಾಗವನ್ನು ಮಾರ್ಕಂಡೇಯಪುರಾಣ ದಲ್ಲಿರುವ ದೇವೀಮಹಾತ್ಮ್ಯದಿಂದ ತೆಗೆದುಕೊಂಡಿರುವನು.

ದೇವಾಸುರಯುದ್ಧದಲ್ಲಿ ಅಸುರರ ಮುಖ್ಯನಾದ ಮಹಿಷಾಸುರನನ್ನು ಚಂಡಿಯು ತನ್ನ ಕಾಲಿನಿಂದ ಕೆಡವಿ ಕೊಂದು ಲೋಕವನ್ನು ರಕ್ಷಿಸಿದಳೆಂ ಬುದು ಕಥಾಸಾರಾಂಶವಾಗಿರುವುದು. ಚಂಡೀಶತಕದ ವರ್ಣನೆಗಳೆಲ್ಲವೂ ಚಂಡಿಯ ಪದಾಘಾತವನ್ನು ಹೇಳುವುದಾಗಿರುವುವು. ಶ್ಲೋಕಗಳೆಲ್ಲವೂ ಚಂಡಿಗೂ ಮಹಿಷಾಸುರನಿಗೂ ನಡೆದ ಯುದ್ಧವಿಚಾರವಾಗಿರುವುವು. ದೇವಿ ಗಿಂತಲೂ ದೇವಿಯ ಪದಾಘಾತವರ್ಣನವು ವಿಧವಿಧವಾಗಿ ವರ್ಣಿತವಾಗಿ ರುವುದು.

ಚಂಡಿಯ ಪದಾಘಾತವಿಚಾರವಾಗಿ ಕಥಾಸರಿತ್ಸಾಗರದಲ್ಲಿ—

ನಮಸ್ತುಭ್ಯಂ ಮಹಾದೇವಿ! ಪಾದೌ ತೇ ಯಾವಕಾಂಕಿತೌ |
ಮೃದಿತಾಸುರಲಗ್ನಾಸ್ರಪಂಕಾವಿವ ನಮಾಮ್ಯಹಂ || ಎಂದೂ

(ಕಾಲಿನಿಂದ ತುಳಿಯಲ್ಪಟ್ಟು ಮೃತನಾದ ಮಹಿಷಾಸುರನ ರಕ್ತದಿಂದ ಆರಕ್ತವಾಗಿರುವ ಚರಣಕಮಲಗಳುಳ್ಳ ಎಲೈ ಚಂಡಿಯೇ! ನಿನಗೆ ನಮ ಸ್ಕಾರವು.)

ಜಯ ಜಗದರ್ಚಿತಚರಣೇ . . . | ಎಂದೂ
ಪಾದಪದ್ಮತಲಾಕ್ಷಿಪ್ತಮಹಿಷಾಸುರಮರ್ದಿನೀಂ | ಎಂದೂ

ಬಾಣನು ತನ್ನ ಕಾದಂಬರಿಯಲ್ಲಿ ಚಂಡಾಲಕನ್ಯೆಯ ವಿಚಾರವಾಗಿ ಹೇಳುವಾಗ—

ಅಚಿರಮುದಿತಮಹಿಷಾಸುರರಕ್ತಚರಣಾಮಿವ ಕಾತ್ಯಾಯಿನೀಂ | ಎಂದೂ

ಪದ್ಮಗುಪ್ತನ ನವಸಾಹಸಾಂಕಚರಿತದಲ್ಲಿ—

ಮಹಾಮಹಿಷನಿಷ್ಪೇಷಕೇಳಿಃ ಪಾರಮಗಾದ್ದ್ವಯೋಃ |
ರಾಜ್ಞಸ್ತಸ್ಯಾತಿಚಂಡಸ್ಯ ಚಂಡಿಕಾಭರಣಸ್ಯ ಚ ||

ಎಂದೂ ಹೇಳಲ್ಪಟ್ಟಿರುವುದು.

ಮತ್ತೊಂದು ತಾಮ್ರಶಾಸನ†ದಲ್ಲಿ—

ನಮೋಸ್ತು ನಿರ್ಜಿತಾಶೇಷಮಹಿಷಾಸುರಘಾತಿನೇ |
ಪಾರ್ವತೀಪಾದಪದ್ಮಾಯ ಜಗದಾನಂದದಾಯಿನೇ || ಎಂದೂ

† ಗೊರಖಪುರದಲ್ಲಿ ದೊರೆತು ಈಗ ಬಂಗಾಳದ ಏಷಿಯಾಟಿಕ್ ಸೊಸೈಟಿಯವರ ಸ್ವಾಧೀನ ದಲ್ಲಿರುವುದು. ಇದು ಸಂಸ್ಕೃತಲಿಪಿಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಕಾಲವನ್ನು ತಿಳಿಸಿರುವುದಿಲ್ಲ.

ಬಂಗಾಳಾಪ್ರಾಂತ್ಯದಲ್ಲಿ ಗಯದ ಡಿಸ್ಟ್ರಿಕ್ಟಿನಲ್ಲಿರುವ ನಾಗಾರ್ಜುನಗಿರಿ ಗುಹೆಯ ಬಾಗಿಲಿನ ಹತ್ತಿರ ಇರುವ ಶಿಲೆಯಲ್ಲಿ*—

**ಉನ್ನಿದ್ರಸ್ಯ ಸರೋರುಹಸ್ಯ ಸಕಲಾಮಾಕ್ಷಿಪ್ಯ ಶೋಭಾಂ ರುಚಾ**
**ಸಾವಜ್ಞಂ ಮಹಿಷಾಸುರಸ್ಯ ಶಿರಸಿ ನ್ಯಸ್ತಃ ಕ್ವಣಂನೂಪುರಃ ।**
**ದೇವ್ಯಾವಸ್ಥಿರಭಕ್ತಿವಾದಸದೃಶೀಮುಂಜನ್ಫಲೇನಾರ್ಥಿತಾಂ(?)**
**ದಿಶ್ಯಾದಚ್ಛ ನಖಾಂಶುಜಾಲಜಟಿಲಃ ಪಾದಃ ಪದಂ ಸಂಪದಾಂ ॥**

ಎಂದೂ ಬರೆಯಲ್ಪಟ್ಟಿರುವುದು.

ಕೃಷ್ಣಮಿಶ್ರಕೃತ ಪ್ರಬೋಧಚಂದ್ರೋದಯನಾಟಕದಲ್ಲಿ—

"ಕ್ರೋಧಂ........ಕಾತ್ಯಾಯನೀವ ಮಹಿಷಂ ವಿನಿಪಾತಯಾಮಿ" ಎಂಬುದು ಕಂಡುಬರುವುದು. ಚಂಡೀಕಥೆಯು ವಾಮನಪುರಾಣದಲ್ಲಿಯೂ ವರಾಹಪುರಾಣದಲ್ಲಿಯೂ ಭಾಗವತಪುರಾಣದಲ್ಲಿಯೂ ವಿಧವಿಧವಾಗಿ ಹೇಳಲ್ಪಟ್ಟಿರುವುದಾದರೂ ಪದಾಘಾತದಿಂದ ಮಹಿಷಾಸುರನನ್ನು ಕೊಂದುಹಾಕಿದಳೆಂಬುದು ಎಲ್ಲದರಲ್ಲಿಯೂ ಒಂದೇಯಾಗಿರುವುದು. ಇದು ಗೌಡೀಶೈಲಿಯಲ್ಲಿ ಬರೆಯಲ್ಪಟ್ಟಿರುವುದು. ಅನುಪ್ರಾಸ, ಯಮಕವರ್ಣಾನುಪ್ರಾಸ ಉತ್ಪ್ರೇಕ್ಷೆಗಳೊಡನೆ ಕೂಡಿಕೊಂಡಿರುವುದು. ಇದರಲ್ಲಿರುವ ೨೫, ೩೨, ೪೯, ೫೫, ೫೬, ೭೨ನೆಯ ಶ್ಲೋಕಗಳು 'ಸ್ರಗ್ಧರಾ'ವೃತ್ತದಲ್ಲಿಯೂ ಉಳಿದವು ಶಾರ್ದೂಲವಿಕ್ರೀಡಿತದಲ್ಲಿಯೂ ಇರುವುವು. ಅರುವತ್ತು ಶ್ಲೋಕಗಳಿಗಿಂತಲೂ ಹೆಚ್ಚಾಗಿ ಚಂಡಿಯು ಪಾದಪ್ರಹಾರದಿಂದ ಕೊಲ್ಲಲ್ಪಟ್ಟ ಮಹಿಷಾಸುರನ ವಿಚಾರವಾಗಿರುವುದು. ೨೫, ೪೫, ೫೪ ನೆಯ ಶ್ಲೋಕಗಳು ಯೋಗಮಾಯೆಯನ್ನು ಕೊಲ್ಲಲೆತ್ನಿಸಿದ ಕಂಸನ ವಿಚಾರವಾಗಿರುವುದು. ೪೯ನೆಯ ಶ್ಲೋಕವು ಈಶ್ವರನು ಕಾಮದಹನವನ್ನು ಮಾಡಿದಾಗ ಪಾರ್ವತಿಗಾದ ದೀನತೆಗಾಗಿ ಚಂಡಿಯು ಕ್ಷಮಾಪ್ರಾರ್ಥನರೂಪವಾಗಿರುವುದು. ಇದರಲ್ಲಿನ ಭೀಭತ್ಸ, ರೌದ್ರ, ಅದ್ಭುತ, ಭಯಾನಕ, ವೀರರಸವರ್ಣನೆಗಳು ಮೂರ್ತಿಮತ್ತಾಗಿ ಎದುರಿಗೆ ನಿಂತಂತೆ ತೋರುವುವು.

ಮಹಾಕವಿಯಾದ ಭವಭೂತಿಯು ಒಂದೊಂದು ರಸಕ್ಕೆ ಬೇರೆ ಬೇರೆ ಗ್ರಂಥವನ್ನು ಬರೆದಿರುವಂತೆ ಬಾಣನು ಶೃಂಗಾರರಸಕ್ಕೆ ಕಾದಂಬರಿಯನ್ನೂ ಕರುಣರಸಕ್ಕೆ ಹರ್ಷಚರಿತವನ್ನೂ ವೀರರಸಕ್ಕೆ ಚಂಡೀಶತಕವನ್ನೂ ಬರೆದಿರು

---

*** ಈ ಶಾಸನವು ಕ್ರಿ. ಶ. ೧೭೮೫ರಲ್ಲಿ ಕಂಡು ಹಿಡಿಯಲ್ಪಟ್ಟಿತು. ಮೌಖರಿವಂಶದಲ್ಲಿ ಮುಖ್ಯನಾದ ಅನಂತವರ್ಮನಿಂದ ಆ ಗುಹೆಯಲ್ಲಿ ಚಂಡಿಮೂರ್ತಿಯು 'ಕಾತ್ಯಾಯಿನೀ' ಎಂಬ ಹೆಸರಿನಿಂದ ಪ್ರತಿಷ್ಠಿಸಲ್ಪಟ್ಟುದಾಗಿಯೂ ಅದರ ಜ್ಞಾಪಕಾರ್ಥವಾಗಿ ಆ ದೇವಿಯ ಹೆಸರಿನಲ್ಲಿ ಒಂದು ಗ್ರಾಮವೇ ಕೊಡಲ್ಪಟ್ಟಿರುವುದಾಗಿಯೂ ಹೇಳಲ್ಪಟ್ಟಿರುವುದು.**

ವುದಾಗಿ ತೋರುತ್ತದೆ. ಬಾಣನು ಮಯೂರನ ಸ್ಪರ್ಧೆಗಾಗಿ ಕೈಕಾಲುಗಳನ್ನು ಕತ್ತರಿಸಿಕೊಂಡು ಚಂಡಿಯನ್ನು ಸ್ತುತಿಸಿ ಕೈಕಾಲುಗಳನ್ನು ಪುನಃ ಹೊಂದಿದನೆಂದೂ ಅದೇ ಚಂಡೀಶತಕವೆಂದೂ ಹೇಳುವ ಲೋಕವಾರ್ತೆಯು ಮನೋರಂಜಕಕಥೆಯೆಂದು ಹೇಳಬೇಕಾಗುವುದು.

ಬಾಣನ ಕಾಲದಲ್ಲಿ ಬೌದ್ಧಮತವು ಪ್ರಾಬಲ್ಯದೆಸೆಯಲ್ಲಿದ್ದಂತೆ ಶಕ್ತಿಪೂಜೆಯೂ ಪ್ರಬಲವಾಗಿದ್ದಿತು. ಮಯೂರನು ನೂರುಶ್ಲೋಕಗಳಿಂದ ಆದಿತ್ಯನನ್ನು ಸ್ತುತಿಸಿ ಹೆಸರುವಾಸಿಗೆ ಬಂದಂತೆ ಬಾಣನು ಚಂಡೀಶತಕವನ್ನು ಬರೆದು ಹೆಸರುಗೊಂಡಿರುವನೆಂದು ನಮಗೆ ತೋರುವುದು. ಶಾರ್ಙ್ಗಧರನ ಪದ್ಧತಿಯಲ್ಲಿ ಇದರ ೭೭ನೆಯ ಶ್ಲೋಕವು ಮಾತ್ರ ಕಂಡುಬರುವುದು. 'ಸರಸ್ವತೀಕಂಠಾಭರಣ'ದಲ್ಲಿ ಚಿತ್ರ ಮತ್ತು ವೇಣಿಕಾಲಕ್ಷಣಗಳನ್ನು ಹೇಳುವುದಕ್ಕೆ ಚಂಡೀಶತಕದ ೪೦ ಮತ್ತು ೭೭ನೆಯ ಶ್ಲೋಕಗಳು ಮಾತ್ರವೇ ಭೋಜನಿಂದ ತೆಗೆದುಕೊಳ್ಳಲ್ಪಟ್ಟಿರುವುವು. ಹೇಮಚಂದ್ರನ ನಿಘಂಟಿಗೆ ಮಹೇಂದ್ರನು ಬರೆದಿರುವ ಅನೇಕಾರ್ಥಸಂಗ್ರಹವೆಂಬ ವ್ಯಾಖ್ಯಾನಪುಸ್ತಕದಲ್ಲಿ ಚಂಡೀಶತಕದ ಮೊದಲನೆಯ ಶ್ಲೋಕವು ತೆಗೆದುಕೊಳ್ಳಲ್ಪಟ್ಟಿರುವುದು. ಅದರಲ್ಲಿ ಚಂಡಿಯ ಪಾದಾಂಗುಷ್ಠ ವಿಚಾರವು ಬಹು ಜಾಣ್ಮೆಯಿಂದ ವರ್ಣಿತವಾಗಿದೆ. ಇವುಗಳಲ್ಲದೆ ಹರಕವಿರಚಿತಹಾರಾವಳಿಗ್ರಂಥದಲ್ಲಿಯೂ ಶ್ರೀಧರದಾಸನ ಸದುಕ್ತಿಕರ್ಣಾಮೃತದಲ್ಲಿಯೂ ಸುಭಾಷಿತರತ್ನಭಾಂಡಾಗಾರದಲ್ಲಿಯೂ ಇದರ ಶ್ಲೋಕಗಳು ಕಂಡುಬರುವುವು. ಇದರ ವ್ಯಾಖ್ಯಾನಗಳಲ್ಲಿ ಸೋಮೇಶ್ವರನ ವ್ಯಾಖ್ಯಾನವೂ ಮಗಧೇಶ್ವರನ ವ್ಯಾಖ್ಯಾನವೂ ಮುಖ್ಯವಾದವುಗಳಾಗಿರುವುವು.

**ಪಾರ್ವತೀಪರಿಣಯನಾಟಕ:—**

ಇದರಲ್ಲಿ ೫ ಅಂಕಗಳು ಇರುವುವು. ಶಿವಪುರಾಣದಲ್ಲಿ ಹೇಳಲ್ಪಟ್ಟಿರುವ ಪಾರ್ವತಿಯ ವಿವಾಹಕಥೆಯನ್ನು ತೆಗೆದುಕೊಂಡು ನಾಟಕವನ್ನು ಬರೆದಿರುವನು. ಇದರಲ್ಲಿ ಸೂತ್ರಧಾರನು ನಟಿಯನ್ನು ಕುರಿತು—

ಆರ್ಯೇ!

"ಅದ್ಯ ಖಲು ಕಿಮಪ್ಯಭಿನವಂ ಪಾರ್ವತೀಪರಿಣಯಂ ನಾಮ
ರೂಪಕಂ ದ್ರಷ್ಟುಮಭಿಲಷತಿ ಪರಿಷದೇಷಾ" ಎಂದೂ

**ಅಸ್ತಿ ಕವಿಸಾರ್ವಭೌಮೋ**
**ವತ್ಸಾನ್ವಯಜಲಧಿಸಂಭವೋ ಬಾಣಃ ।**
**ನೃತ್ಯತಿ ಯದ್ರಸನಾಯಾಂ**
**ವೇಧೋಮುಖಲಾಸಿಕಾ ವಾಣೀ ॥** (೧—೪)

ಎಂದೂ ಹೇಳಿರುವನು. ನಾಟಕಾಂತ್ಯದಲ್ಲಿ—

"ಶ್ರೀ ಬಾಣಕವಿಕೃತಂ ಪಾರ್ವತೀಪರಿಣಯಂ ನಾಟಕಂ ಸಂಪೂರ್ಣಂ" ಎಂದಿರುವುದು.

ಈ ನಾಟಕವನ್ನು ಓದಿ ಮಹಾಕವಿಬಾಣಭಟ್ಟಕೃತ ಇತರ ಗ್ರಂಥಗಳೊಡನೆ ತೋಲನಮಾಡಿ ನೋಡಿದರೆ ಈ ನಾಟಕಕಾರನು ಕಾದಂಬರೀಕಾರನಿಗಿಂತ ಭಿನ್ನನಾಗಿ ತೋರುವನು. ಈ ವಿಚಾರವಾಗಿ—

(೧) ಕ್ರಿ. ಶ. ಏಳನೆಯ ಶತಮಾನದ ಪೂರ್ವಾರ್ಧದಲ್ಲಿ ಕಾನ್ಯಕುಬ್ಜದಲ್ಲಿ ಆಳುತ್ತಿದ್ದ ಶ್ರೀಹರ್ಷವರ್ಧನನ ಸಭಾಪಂಡಿತನಾಗಿದ್ದ ಬಾಣನು ಬರೆದಿರುವ ಹರ್ಷಚರಿತ, ಕಾದಂಬರೀಪೂರ್ವಭಾಗ, ಪಾರ್ವತೀಪರಿಣಯನಾಟಕ ಮತ್ತು ಚಂಡೀಶತಕ ಈ ನಾಲ್ಕು ಗ್ರಂಥಗಳು ಪ್ರಕೃತದೊರೆತಿರುವುವೆಂದು ಪಂಡಿತ ದುರ್ಗಾಪ್ರಸಾದರವರು ಹೇಳುವರು. *

(೨) ಈಚಿನ ಕೆಲವರು ಪಾರ್ವತೀಪರಿಣಯನಾಟಕದ ರೀತಿ ವೈಲಕ್ಷಣ್ಯಗಳನ್ನು ನೋಡಿ ಇದು ಬಾಣಕೃತವಾದುದಾಗಿರುವುದಿಲ್ಲವೆಂದು ಅಭಿಪ್ರಾಯಪಡುವುದಾಗಿಯೂ ಬಲವತ್ಪ್ರಮಾಣಗಳಿಂದ ಈ ವಿಷಯವು ಸಮರ್ಥಿಸಲ್ಪಡತಕ್ಕುದಾಗಿದೆಯೆಂದು ಮಂಗೇಶರಾಮಚಂದ್ರತೆಲಂಗರವರು ಬರೆದಿರುವರು.‡ ಅದುವರೆಗೆ ಲೋಕವಾರ್ತೆಯಂತೆ ಬಾಣಕೃತವೆನ್ನುವುದು ಅವರ ಬರೆವಣಿಗೆಯಿಂದ ಧ್ವನಿತವಾಗುವುದು.

(೩) ಅಭಿನವಭಟ್ಟಬಾಣಬಿರುದಾಂಕಿತರಾದ ಶ್ರೀ ಕೃಷ್ಣಮಾಚಾರ್ಯರವರು ಪಾರ್ವತೀಪರಿಣಯಕ್ಕೆ ಬರೆದಿರುವ ಭೂಮಿಕೆಯಲ್ಲಿ ಕಾದಂಬರೀಕಾರನಾದ ಬಾಣಭಟ್ಟನು ಈ ಪಾರ್ವತೀಪರಿಣಯನಾಟಕಕಾರನಲ್ಲವೆಂದು ಸಮರ್ಥಿಸಿರುವರು. †

(೪) ಪಾರ್ವತೀಪರಿಣಯವನ್ನೋದಿ ಆನಂದಗೊಂಡಿರುವ ಕೆಲವರು ಗದ್ಯಶೈಲಿಗೂ ನಾಟಕಶೈಲಿಗೂ ಬಹಳ ವ್ಯತ್ಯಾಸವಿರುವುದಾಗಿಯೂ ಮಹಾಕವಿ ಕಾಳಿದಾಸನ ಕಾವ್ಯಶೈಲಿಗೂ ನಾಟಕಶೈಲಿಗೂ ಎಷ್ಟೋ ಅಂತರವಿರುವುದೆಂದೂ ನಿಜವಾದ ಗ್ರಂಥಕಾರನನ್ನು ಬಿಟ್ಟು ಬೇರೊಬ್ಬನನ್ನು ಹೇಳುವುದು ಅಸಂಗತವೆಂದೂ—

---

* Introduction to *Parvati Parinayam* P. 1.

‡ ,, ,, ,, ,, *Nirnayasagara* Edn.

† ,, ,, ,, *Srirangam Vani Vilas* ,,

(೫) ಮತ್ತೆ ಕೆಲವರು ಪಾರ್ವತೀಪರಿಣಯವನ್ನು ಬರೆದವನು ಬಾಣನೆಂದೂ ಅದು ಇತರರು ಹೇಳುವ ಪಾಡುವಷ್ಟು ನೀರಸವಾಗಿರುವುದಿಲ್ಲವೆಂದೂ—

(೬) ಮತ್ತೆ ಕೆಲವರು ಈ ನಾಟಕವನ್ನು ಕಾದಂಬರೀ ಲೇಖಕನಾದ ಬಾಣನು ತನ್ನ ಪೂರ್ವವಯಸ್ಸಿನಲ್ಲಿ ಬರೆದುದಾಗಿರಬೇಕೆಂದೂ ವಯೋಧರ್ಮಾನುಸಾರ ಕವಿತಾಶೈಲಿಯು ಮಾರ್ಪಡುವುದೆಂದೂ ಸಂಸ್ಕೃತಸಾಹಿತ್ಯದ ಅತ್ಯಂತ ವೈಭವದೆಸೆಯ ಆಗಣ ಕಾಲದಲ್ಲಿ ಬಾಣನ ಉದ್ಗ್ರಂಥಗಳು ಮಾತ್ರವೇ ತಲೆದೋರಿ ಇಂತಹ ಸಣ್ಣ ಗ್ರಂಥಗಳು ಗೀರ್ವಾಣಭಾಷಾವನತಿಯ ಈಗಣ ಕಾಲದಲ್ಲಿ ತಲೆಯೆತ್ತಿರಬೇಕೆಂದೂ ಆಂಗ್ಲಕವಿಯಾದ ಮಿಲ್ಟನ್ನನು (Milton) ಮೊದಲು ಬರೆದ ಪ್ಯಾರಡೈಸ್ ಲಾಸ್ಟ್ (Paradise lost) ಎಂಬುದರ ರಸಮಾಧುರ್ಯ ಮತ್ತು ಶೈಲಿಯು ಎಷ್ಟೋ ವರ್ಷಗಳ ಅನಂತರ ಬರೆದುದಾದ ಪ್ಯಾರಡೈಸ್ ರಿಗೇನ್ಡ್ (Paradise regained) ಎಂಬುದರ ಶೈಲಿಗೂ ಎಷ್ಟೋ ಭೇದವು ತೋರುವುದೆಂದೂ—

(೭) ಮತ್ತೆ ಕೆಲವರು ಇದನ್ನು ಈ ಬಾಣನು ಬರೆದುದಲ್ಲವಾದರೆ ವಾಮನಭಟ್ಟಬಾಣನು ಬರೆದಿರುವುದಾಗಿರಬೇಕೆಂದೂ......ವಾದಿಸುವರು.

ಕಾದಂಬರಿಯ ಪೂರ್ವಭಾಗವನ್ನು ಬರೆದ ಬಾಣನ ಗ್ರಂಥಗಳನ್ನೂ ವಾಮನಭಟ್ಟಬಾಣಕೃತನಳಾಭ್ಯುದಯ, ಶೃಂಗಾರಭೂಷಣಭಾಣ, ಗದ್ಯಕಾವ್ಯವಾದ ವೀರನಾರಾಯಣ ಅಥವಾ ವೇಮಭೂಪಾಲಚರಿತ ಈ ಗ್ರಂಥಗಳನ್ನು ಪಾರ್ವತೀಪರಿಣಯನಾಟಕದೊಡನೆ ಹೋಲಿಸಿ ಸಮದೃಷ್ಟಿಯಿಂದ ಪರಿಶೀಲಿಸಿದುದಾದರೆ ಪಾರ್ವತೀಪರಿಣಯನಾಟಕಕರ್ತರು ಇವರಲ್ಲಾರೂ ಅಲ್ಲವೆನ್ನಬೇಕಾಗುವುದು. ಏಕೆಂದರೆ ಆ ಗ್ರಂಥಗಳ ಹಾಗೆ ಕಥಾಸಂವಿಧಾನಚಾತುರ್ಯ ವರ್ಣನಾಶೈಲಿ, ರಸಪುಷ್ಟಿ, ಉದಾತ್ತರಸಭಾವಕಲ್ಪನೆ, ಶಬ್ದಾರ್ಥಸಂಯೋಜನದಕ್ಷತೆ, ಇವುಗಳಲ್ಲಿ ಯಾವುದೂ ಈ ನಾಟಕದಲ್ಲಿರುವಂತೆ ಕಂಡುಬರುವುದಿಲ್ಲ. ಬಾಣಭಟ್ಟನು ಕ್ರಿ. ಶ. ೭ ನೆಯ ಶತಮಾನದವನು. ವಾಮನಭಟ್ಟನು ಕ್ರಿ. ಶ. ೧೫ ನೆಯ ಶತಮಾನದವನು. ಆದುದರಿಂದ ಇವರೀರ್ವರೂ ಈ ನಾಟಕಕರ್ತರಲ್ಲವೆನ್ನುವುದು ಸ್ಪಷ್ಟವಾಗುವುದು. ಬಾಣನೆಂಬ ಹೆಸರಲ್ಲದ 'ವಾಮನ' ಎಂಬ ಹೆಸರಿನವರಾರಾದರೂ ಬರೆದಿರಬೇಕೆಂದೂ ಪರಸ್ಪರ ಹೆಸರು ಮಾರ್ಪಟ್ಟಿರಬಹುದೆಂದೂ ಹೇಳುವವರಿಗೆ ಸಂಸ್ಕೃತವಾಙ್ಮಯದಲ್ಲಿ (೧) ಭಟ್ಟಬಾಣನ ಹೆಸರಿನೊಡನೆ ಸೇರಿದ ವಾಮನನೊಬ್ಬ (೨) ಕಾವ್ಯಾಲಂಕಾರಸೂತ್ರವೃತ್ತಿಯನ್ನು ಬರೆದಿರುವ ವಾಮನನೊಬ್ಬ (೩) ಕಾಶಿಕಾವೃತ್ತಿಯನ್ನು ಬರೆದ ವಾಮನನೊಬ್ಬ ಈ ಮೂವರು ದೊರಕುವರು. ಈ ಮೂವರ ಗ್ರಂಥಗಳೊಡನೆ ಪಾರ್ವತೀ

ಪರಿಣಯ ನಾಟಕವನ್ನು ಹೋಲಿಸಿ ನೋಡುವುದಾದರೆ ಇವರಾರೂ ಅಲ್ಲವೆಂತಲೇ ಬೋಧೆಯಾಗುವುದು. ಕುಮಾರಸಂಭವವನ್ನನುಸರಿಸಿ ಬರೆದಿರಬಹುದಾಗಿ ತೋರಿಬರುವ ಈ ಪಾರ್ವತೀಪರಿಣಯನಾಟಕದ ಶ್ಲೋಕಗಳನ್ನು ತೆಗೆದುಹಾಕಿದರೆ ನಾಟಕವು ನೀರಸವಾಗಿಯೇ ಹೋಗುವುದು.

ಹಾಗಾದರೆ ಪಾರ್ವತೀಪರಿಣಯ ನಾಟಕದ ನಿಜವಾದ ಕವಿ ಯಾರು ಎಂಬ ಪ್ರಶ್ನೆಗೆ ಉತ್ತರವಾಗಿ ಮೇಲೆಹೇಳಿದವರಾರೂ ಅಲ್ಲದ, ವತ್ಸಕುಲಜಾತ, ಅಭಿನವಬಾಣಾಭಿಧಾನದ ಬೇರೊಬ್ಬನೆನಬೇಕಾಗುವುದು. ಇವನನ್ನೇ ಸೂತ್ರಧಾರನು ಪಾರ್ವತೀಪರಿಣಯನಾಟಕದಲ್ಲಿ ಹೇಳಿರಬೇಕೆಂದೂ ತೋರುವುದು.



## ಭೂಷಣಭಟ್ಟ

ಏಕೇನಾಪಿ ಸುವೃಕ್ಷೇಣ ಪುಷ್ಪಿತೇನ ಸುಗಂಧಿನಾ ।
ವಾಸಿತಂ ತದ್ವನಂ ಸರ್ವಂ ಸುಪುತ್ರೇಣ ಕುಲಂ ಯಥಾ ॥

"ಕಾಡಿನಲ್ಲಿ ಎಷ್ಟೋ ಮರಗಳು ಹುಟ್ಟುವುವಾದರೂ ಪರಿಮಳಪೂಯುಕ್ತವಾದ ಒಂದು ಮರದಿಂದಲೇ ಕಾಡೆಲ್ಲವೂ ಸುವಾಸನೆಯಾಗುವಂತೆ ಸುಪುತ್ರನೋರ್ವನಿಂದಲೇ ಕುಲವೆಲ್ಲವೂ ಪವಿತ್ರವಾಗುವುದು" ಎಂಬದನ್ನು ಭೂಷಣಭಟ್ಟನು ಸಾರ್ಥಕಗೊಳಿಸಿರುವನು. ಇವನು ಬಾಣನ ಮಗನು.* ಕಾದಂಬರೀ

* ಇವನು ಬಾಣನ ಮಗನೆಂದೂ ಭೂಷಣಭಟ್ಟನೆಂದೂ ಪ್ರಕೃತ ಅಚ್ಚಾಗಿ ದೊರೆತಿರುವ ಬಾಲಬೋಧಲಿಪಿಯ ಕಾದಂಬರೀ ಪುಸ್ತಕದ ಮುಖಪತ್ರದಲ್ಲಿ ಮಾತ್ರ ಕಂಡುಬರುವುದು ಹೊರತು ಕಥೆಯಲ್ಲಾಗಲಿ ಕಥಾಂತ್ಯದಲ್ಲಾಗಲಿ ಎಲ್ಲಿಯೇ ಆಗಲಿ ತನ್ನ ಹೆಸರನ್ನು ಭೂಷಣಭಟ್ಟನೆಂದು ಹೇಳಿಕೊಂಡಿರುವುದಾಗಿ ಕಂಡುಬರುವುದಿಲ್ಲ. ತಂದೆಯ ಇಷ್ಟದಂತೆ ಕಥೆಯನ್ನು ಬರೆದುದಾಗಿ ಮಾತ್ರ ತಿಳಿಯಬರುತ್ತದೆ. ಬಾಣನ ಕಾದಂಬರಿಯನ್ನೋದಿ ಆನಂದಿಸುವ ರಸಿಕರು ಮಗನಿಂದ ಬರೆಯಲ್ಪಟ್ಟ ಉತ್ತರಭಾಗವನ್ನು ನೋಡಿ ಮನಸೋತು ಭಲೆ! ಇವನು ಆ ಬಾಣಭೂಷಣನೇ ಹೌದು, ಎಂದು ಅಭಿಮಾನದಿಂದ ತಲೆದೂಗಿ ಹೇಳಿರಬಹುದಾಗಿ ತೋರುವುದೇ ಹೊರತು ಇದು ಇವನ ನಿಜವಾದ ಹೆಸರಾಗಿ ನಮಗೆ ತೋರುವುದಿಲ್ಲ. ತನ್ನ ತಂದೆಯ ಕೀರ್ತಿಗೆ ಏನಾದರೂ ಲೋಪಬರಬಹುದೋ ಹೇಗೋ ಎಂಬಾಶಂಕೆಯಿಂದ ತನ್ನ ಹೆಸರನ್ನು ಹೇಳಲಿಲ್ಲವೋ, ಅಥವಾ ತಂದೆಯಿಂದ ಬರೆಯಲ್ಪಟ್ಟ ಆ ಅಮೋಘವಾದ ಸುಂದರವಾದ ಕಾದಂಬರಿಗೆ ತಾನು ಬರೆದಿರುವ ಉತ್ತರಭಾಗವು ಸಾಟಿಯಾಗದೆಂದಾಲೋಚಿಸಿ ತನ್ನದನ್ನು ಕ್ಷುಲ್ಲಕವನ್ನಾಗಿ ಎಣಿಸಿ ಹೆಸರನ್ನು ಹೇಳಿಕೊಳ್ಳಲಿಲ್ಲವೋ ಅಥವಾ ತನ್ನ ಆಚಾರ್ಯನೂ ಜನ್ಮದಾತನೂ ಆದ ಬಾಣನಿಗೆ ಕೇವಲ ಶಿಷ್ಯನೂ ಪುತ್ರನೂ ಆದ ತಾನು ಯಾವುದೊಂದುಪಹಾರವನ್ನೂ ಕೊಡಲರಿಯದೆ ಈ ಗ್ರಂಥವನ್ನೇ ದಕ್ಷಿಣಾಧನವನ್ನಾಗಿ ಕೊಡಲಾಶಿಸಿ ಸ್ವಾರ್ಥತ್ಯಾಗದಿಂದ ಹೆಸರನ್ನು ಹೇಳದೆ ಮರೆಮಾಚಿಕೊಂಡಿರುವನೋ ಅಥವಾ ಉದ್ದಾಮಕವಿಗಳಮುಂದೆ ತಾನೆಷ್ಟರವನೆಂಬ ವಿನಯಪಾಶಾಬದ್ಧನಾಗಿ ತನ್ನ ಹೆಸರನ್ನು ಮುಚ್ಚಿಟ್ಟುಕೊಂಡಿರುವನೋ ಹೇಗೆ ಎಂಬುದು ತಿಳಿಯದಾಗಿದೆ.

ಭಾಗ್ಯವಿಧಾತನಾದ ಬಾಣನ ಚೇತನವು ಬಹುಕಾಲ ಜಡಕಳೇಬರದಲ್ಲಿರಲೊಪ್ಪದೆ— "ಆತ್ಮಾ ವೈ ಪುತ್ರನಾಮಾಸಿ" (ತಾನೇ ತನ್ನ ಮಗನಾಗಿ ಹುಟ್ಟುವನು) ಎಂಬ ಶ್ರುತಿವಚನವನ್ನು ಸಾರ್ಥಕಗೊಳಿಸಬೇಕೆಂದೂ, ಪೂರ್ವಜನ್ಮದಲ್ಲಿ ತನ್ನಿಂದ ಬರೆಯಲ್ಪಟ್ಟ ಕಾದಂಬರಿಯು ಪೂರ್ಣವಾಗದುದನ್ನು ನೋಡಿ ಅದನ್ನು ಹೇಗಾದರೂ ಮಾಡಿ ಪೂರೈಸಲೇಬೇಕೆಂದೂ ಭೂಷಣಭಟ್ಟನ ಅವತಾರಕ್ಕೆ ಡೆಗೊಟ್ಟಂತೆ ತೋರುತ್ತದೆ. ತಂದೆಯ ಈ ಅಭಿಮತವನ್ನನುಸರಿಸಿಯೇ ಇವನು "**ಕಾದಂಬರಿಯ ಉತ್ತರಭಾಗ**"ವನ್ನು ಬರೆದು ಮುಗಿಸಿರುವನು. ಇವನು ಕ್ರಿ. ಶ. ಏಳನೆಯ ಶತಮಾನದ ಮಧ್ಯಕಾಲದಲ್ಲಿದ್ದವನು. ಇದು ಹೊರತು ಇವನು ಯಾವ ರಾಜಾಶ್ರಯದಲ್ಲಿದ್ದವನೆಂಬುದು ತಿಳಿಯದು.

ಈತನು ಬರೆದಿರುವ ಕಾದಂಬರಿಯ ಉತ್ತರಭಾಗವು ಕಾದಂಬರಿಯ ಪೂರ್ವಭಾಗಕ್ಕೆ ಸರಿಗಟ್ಟಲಾರದೆಂದು ಒಂದು ವೇಳೆ ಇತರರು ಹೇಳಬಹುದಾದರೂ ತಂದೆಯ ಕವಿತ್ವಚ್ಛಾಯಾಸಂಬಂಧವನ್ನು ದೊರಕಿಸಿಕೊಂಡು ಎಲ್ಲಿಯೋ ಬಿಟ್ಟುಹೋಗಿರುವ ಕಥಾಭಾಗದಿಂದ ಪ್ರಾರಂಭಿಸಿ, ಪೂರ್ವೋಕ್ತಕಥಾಸಂದರ್ಭಕ್ಕೆ ವಿರೋಧವು ಬಾರದಂತೆಯೂ ರಸಭಂಗವಾಗದಂತೆಯೂ ಕಡೆಯವರೆಗೆ ಬರೆದು ಮುಗಿಸಿರುವುದು ಪಂಡಿತಲೋಕಭೂಷಣನಾದ ಭೂಷಣಭಟ್ಟನಿಗೆ ಸಾಧ್ಯವೇ ಹೊರತು ಇತರರಿಗೆ ಸಾಧ್ಯವಾಗದು. ಇವನು ತನ್ನ ಗ್ರಂಥವನ್ನು ತಂದೆಯ ಆಬ್ದಿಕದ ದಿವಸಕ್ಕೆ ಸರಿಯಾಗಿ ಮುಗಿಸಿರುವನೆಂಬುದು ಈ ಕೆಳಗಣ ಶ್ಲೋಕದಿಂದ ತಿಳಿಯಬರುತ್ತದೆ.

**ಯಾತೇ ದಿವಂ ಪಿತರಿ ತದ್ವಚಸೈವ ಸಾರ್ಥಂ**
**ವಿಚ್ಛೇದಮಾಪಭುವಿ ಯಸ್ತು ಕಥಾ ಪ್ರಬಂಧಃ ।**
**ದುಃಖಂ ಸತಾಂ ತದಸಮಾಪ್ತಿಕೃತಂ ವಿಲೋಕ್ಯ**
**ಪ್ರಾರಬ್ಧ ಏವ ಸ ಮಯಾ ನ ಕವಿತ್ವದರ್ಪಾತ್ ॥**

ಚಂದ್ರಾಪೀಡನಿಗೆ ಕಾದಂಬರಿಯಿಂದ ಬಂದ ಪ್ರಣಯಲೇಖನವಿಚಾರವನ್ನು ಹೇಳಿ ಪೂರ್ವಾರ್ಧಕಾದಂಬರಿಯು ಮುಗಿಸಲ್ಪಟ್ಟಿರುವುದು. ಭೂಷಣಭಟ್ಟನು ಇಲ್ಲಿಂದ ಮುಂದಕ್ಕೆ ಆಗ ಬೇಕಾದ ಕಥೆಯನ್ನು ಪ್ರಾರಂಭಿಸಿ ಕಾದಂಬರೀ ಮತ್ತು ಚಂದ್ರಾಪೀಡ ಇವರ ಕಷ್ಟ–ಕಾರ್ಪಣ್ಯ, ಮೃತಿ–ಪುನರುಜ್ಜೀವನ, ವಿವಾಹ, ಮಹಾಶ್ವೇತೆ ಮತ್ತು ಪುಂಡರೀಕ ಇವರ ಸಮಾಗಮ ಇವೇ ಮೊದಲಾದುವುಗಳನ್ನು ವರ್ಣಿಸಿ ಕಥೆಯನ್ನು ಶುಭಾಂತವನ್ನಾಗಿ ಮಾಡಿರುವನು. ಉತ್ತರಾರ್ಧದ ಕಥೆಯನ್ನು ಇಲ್ಲಿ ಸಂಕ್ಷೇಪವಾಗಿ ಕೊಟ್ಟಿದೆ.

ಹೇಮಕೂಟದಿಂದ ಹಿಂದಿರುಗಿ ಬಂದ ಪತ್ರಲೇಖೆಯು ಚಂದ್ರಾಪೀಡನನ್ನು ನೋಡಿ ತನಗೂ ಕಾದಂಬರಿಗೂ ಆಗಿರುವ ವಾಗ್ದಾನವನ್ನು ಹೇಳಿ ಅದರಂತೆ ನಡೆಯುವುದಾಗಿ ಮಾತುಕೊಡದಿದ್ದರೆ ತನ್ನನ್ನು ಕಳುಹಿಸಿಕೊಡುತ್ತಿರಲಿಲ್ಲವೆಂದೂ ತಾನು ಹಿಂದಿರುಗಿ ಅವಳ ಬಳಿಗೆ ಹೋಗುವಾಗ ತನ್ನ ಜತೆಯಲ್ಲಿ ಚಂದ್ರಾಪೀಡನನ್ನು ಕರೆದುಕೊಂಡುಬರಬೇಕೆಂದೂ ಹೇಳಿರುವುದಾಗಿ ಹೇಳಿದಳು. ಇದನ್ನು ಕೇಳಿ ಚಂದ್ರಾಪೀಡನು ಅತ್ಯಂತ ಸಂತೋಷದಿಂದ ಹಿಂದೆ ಸೈನ್ಯದೊಡನೆ ಸಾವಕಾಶವಾಗಿ ಬರುತ್ತಿರುವ ಗೆಳೆಯನಾದ ವೈಶಂಪಾಯನನೊಡನೆ ಆಲೋಚಿಸಬೇಕೆಂದು ಬಹು ಸಡಗರದಿಂದ ಅವನು ಇಳಿದುಕೊಂಡಿದ್ದ ಬಿಡದಿಗೆ ಬಂದು ನೋಡಲಾಗಿ ವೈಶಂಪಾಯನನು ಅಲ್ಲಿ ಇರಲಿಲ್ಲ. ವೈಶಂಪಾಯನನು ಅಚ್ಛೋದಕಸರಸ್ಸಿನ ಬಳಿ ತಿರುಗುತ್ತಿದ್ದಾಗ ಯಾವುದೋ ಎದುರಿನಲ್ಲಿ ಬಂದಂತಾಗಿ ಬಡಲಾಯಿಸಲ್ಪಟ್ಟು ಬಧಿರನಂತೆಯೂ ಮೂಕನಂತೆಯೂ ಆಗಿ ನಿಂತುಕೊಂಡಿದ್ದನು. ಅವನಿಗೆ ತಾಯಿತಂದೆಗಳ ವಿಚಾರವಾಗಲಿ ಸೈನ್ಯದ ಹಿತಚಿಂತನೆಯಾಗಲಿ ಯಾವುದೂ ತೋರಲಿಲ್ಲ. ಆಗ ಅವನ ಕಡೆಯವರು ಇವನೊಬ್ಬನನ್ನೇ ಬಿಟ್ಟು ಹೊರಟುಹೋಗಲು ಇಷ್ಟವಿಲ್ಲದಿದ್ದರೂ ಸೈನ್ಯದ ಹಿತಚಿಂತನೆಯಿಂದ ಬಿಟ್ಟು ಹೊರಟುಹೋಗಬೇಕಾಯಿತು. ಸೈನಿಕರು ಮುಂದಾದರು. ಚಂದ್ರಾಪೀಡನು ತನ್ನ ಮಿತ್ರನನ್ನು ಕರೆದುಕೊಂಡು ಬರುವುದಾಗಿ ಬಹು ದುಃಖದಿಂದ ಹಿಂದಿರುಗಿ ದುಃಖಸಮುದ್ರದಲ್ಲಿ ಮುಳುಗಿ ಹೋಗಿದ್ದ ಊರಿನವರನ್ನೂ ಅರಮನೆಯವರನ್ನೂ ಎಲ್ಲರನ್ನೂ ಸಂತೈಸಿ ತಾಯಿತಂದೆಗಳ ಅಪ್ಪಣೆಯನ್ನು ಪಡೆದು ತನಗೆ ಬೇಕಾದ ಮಿತಪರಿವಾರದೊಡನೆ ಹೊರಟು ಮೊದಲು ಅಚ್ಛೋದಕಸರಸ್ಸಿನ ಬಳಿಗೆ ಹೋಗಿ ನೋಡಿದನು. ಅಲ್ಲಿ ವೈಶಂಪಾಯನನು ಇರಲಿಲ್ಲ. ಅನಂತರ ಸಮೀಪವರ್ತಿಯಾಗಿದ್ದ ಮಹಾಶ್ವೇತೆಯ ಕುಟೀರಕ್ಕೆ ಹೋಗಿ ನೋಡುವಲ್ಲಿ ಅವಳು ತನ್ನ ಕುಟೀರದ ಬಾಗಿಲಿನಲ್ಲ ಕುಳಿತುಕೊಂಡು ಅಳುತ್ತಿದ್ದುದನ್ನು ಕಂಡು ಆಶ್ಚರ್ಯಗೊಂಡವನಾಗಿ ಅವಳನ್ನು ಕುರಿತು ನಡೆದ ಸಮಾಚಾರವೇನೆಂದು ಕೇಳಲಾಗಿ ಮಹಾಶ್ವೇತೆಯು ಹೀಗೆಂದಳು.

ಮಹಾಶಯ! ನಾನು ಹೇಮಕೂಟದಿಂದ ಬಂದು ನೋಡುವಾಗ ಈ ಮನೆಯ ಬಾಗಲಿನಲ್ಲಿ ಬ್ರಾಹ್ಮಣಯುವಕನೋರ್ವನು ಇದ್ದುದನ್ನು ಕಂಡೆನು. ಅವನು ನನ್ನನ್ನು ನೋಡಿದ ಕೂಡಲೆ ಅತ್ಯಾತುರದಿಂದ ನನ್ನ ಬಳಿಗೆ ಬಂದು ನಾನಾಚರಿಸುವ ಇಂತಹ ಕ್ಲೇಶಕರವಾದ ವ್ರತಾನುಷ್ಠಾನಗಳನ್ನು

ಬಿಟ್ಟು ತನ್ನ ಪ್ರಣಯಿನಿಯಾಗಬೇಕೆಂದು ನನ್ನನ್ನು ಬಹು ವಿಧವಾಗಿ ಪ್ರಾರ್ಥಿಸಿ ಕೊಂಡನು. ಆದರೆ ಪುಂಡರೀಕನಿಗೆ ಆತ್ಮಾರ್ಪಣವನ್ನು ಮಾಡಿ ವಿಶ್ವಸಂಸಾರ ತ್ಯಾಗಿನಿಯಾದ ನಾನು ಮತ್ತೊಬ್ಬನ ಪ್ರಣಯಭಾಗಿಯಾಗಲು ಇಷ್ಟಪಡದೆ ಬೇಡಿಕೊಳ್ಳುತ್ತಿರುವ ಬ್ರಾಹ್ಮಣಯುವಕನನ್ನು ನೋಡಿ ಯುವಕ! ಹೊರಡು, ನನ್ನ ಪ್ರಣಯಕ್ಕಾಗಿ ಆಶೆಗೊಳ್ಳದಿರು, ಈ ಪರಿಯಾಗಿ ಕಾಡದಿರೆಂದು ನಾನು ಎಷ್ಟು ವಿಧವಾಗಿ ಪ್ರಾರ್ಥಿಸಿಕೊಂಡರೂ ಕೇಳದೆ ಮೂರ್ಖತನವನ್ನು ಬಿಡದಿದ್ದುದ ರಿಂದ ನಾನು ಕೋಪಗೊಂಡು ಗಿಳಿಯಾಗೆಂದು ಶಪಿಸಿದೆನು. ಕೂಡಲೇ ಆ ಮನು ಷ್ಯಾಕೃತಿಯು ಭೂತಲಶಾಯಿಯಾಗಿ ಮೃತಿಯನ್ನೈದಿತು. ಅನಂತರ ವಿಚಾರ ಮಾಡಿದುದರಲ್ಲಿ ಮೃತನು ಚಂದ್ರಾಪೀಡನ ಮಿತ್ರನೆಂದು ತಿಳಿದು ಈ ರೀತಿ ದುಃಖಿಸುತ್ತಿರುವುದಾಗಿ ಹೇಳಿದಳು. ಚಂದ್ರಾಪೀಡನು ಇದೆಲ್ಲವನ್ನು ಕೇಳಿ ದುಃಖಾತಿಶಯದಿಂದ ಮೂರ್ಛಿತನಾಗಿ ಪ್ರಾಣವನ್ನು ಬಿಟ್ಟನು. ಇದನ್ನು ನೋಡಿ ಮಹಾಶ್ವೇತೆಗೂ ಮತ್ತು ಚಂದ್ರಾಪೀಡನ ಸಂಗಡಿಗರಿಗೂ ದುಃಖ ವಿಮ್ಮಡಿಸಿ ರೋದಿಸುತ್ತಿದ್ದರು. ಇಷ್ಟರಲ್ಲಿ ಕಾದಂಬರಿಯು ತನ್ನ ಪ್ರಾಣಾ ಧಿಕನ ಸಮಾಚಾರವಾವುದೂ ತಿಳಿಯದುದರಿಂದ ತನ್ನ ಗೆಳತಿಯಾದ ಮಹಾ ಶ್ವೇತೆಯನ್ನು ನೋಡುವುದಕ್ಕೆ ಬಂದಳು. ಬಂದ ಕೂಡಲೆ ಮೃತನಾಗಿರುವ ಹೃದಯೇಶ್ವರನನ್ನೂ ಮಹಾಶ್ವೇತೆ ಮತ್ತು ಚಂದ್ರಾಪೀಡನ ಅನುಚರರು ರೋದಿಸುತ್ತಿರುವುದನ್ನೂ ನೋಡಿ ತಾನೂ ಮೂರ್ಛೆಯನ್ನು ಹೊಂದಿ ಕೆಲ ಹೊತ್ತಿನ ನಂತರ ಮೂರ್ಛೆಯನ್ನು ತಿಳಿದೆದ್ದು ಪರಲೋಕವಾಸಿಯಾದ ತನ್ನ ಸ್ವಾಮಿಯನ್ನು ಸೇರಬೇಕೆಂದು ಚಿತಿಯನ್ನು ಸಿದ್ಧಗೊಳಿಸುತ್ತಿರುವಲ್ಲಿ ಎಲಾ! ಅಲೌಕಿಕಸುಂದರಿ! ಕಾದಂಬರಿ! ನೀನು ಚಂದ್ರಾಪೀಡನ ಕಳೇಬರವನ್ನು ಜಾಗ ರೂಕತೆಯಿಂದ ಕಾಪಾಡುತ್ತಿರು. ಪುಂಡರೀಕನೂ ಚಂದ್ರಾಪೀಡನೂ ಈರ್ವ ರೂ ಪುನಃ ಜೀವಂತರಾಗುವರೆಂಬ ದಿವ್ಯವಾಣಿಯು ಕೇಳಿಸಿತು. ಇದನ್ನು ಕೇಳಿ ಅಲ್ಲಿಗೆ ಬಂದಿದ್ದ ಪತ್ರಲೇಖೆಯು ಏನನ್ನೋ ಯೋಚಿಸುತ್ತಿದ್ದುದನ್ನು ಬಿಟ್ಟು ಇದ್ದಕ್ಕಿದ್ದ ಹಾಗೆ ಚಂದ್ರಾಪೀಡನ ಕುದುರೆಯಾದ ಇಂದ್ರಾಯುಧ ವನ್ನು ತನ್ನೊಡನೆ ತೆಗೆದುಕೊಂಡು ಅಚ್ಛೋದಸರಸ್ಸಿನಲ್ಲಿ ಧುಮುಕಿಬಿಟ್ಟಳು. ಕೂಡಲೇ ಜಲಮಧ್ಯದಲ್ಲಿ ಸನ್ಯಾಸಿಯೋರ್ವನು ಕಾಣಿಸಿಕೊಂಡನು. ಇವನೇ ಕಪಿಂಜಲ. ಪರಲೋಕಕ್ಕೆ ಒಯ್ಯಲ್ಪಟ್ಟ ಪುಂಡರೀಕನ ಕಳೇಬರದ ಜತೆಯಲ್ಲಿ ಹೋಗಿದ್ದ ಈ ಕಪಿಂಜಲನನ್ನು ಮಹಾಶ್ವೇತೆಯು ಗುರ್ತಿಸಿ ಅವನು ಇದು ವರೆಗೂ ಎಲ್ಲಿದ್ದನು? ಪುಂಡರೀಕನ ಗತಿಯೆಂತಾದುದು? ಎಂದು ಕೇಳಿದುದಕ್ಕೆ ಕಪಿಂಜಲನಿಂತೆಂದನು.

ತಾಯೆ! ಪುಂಡರೀಕನ ಶರೀರವನ್ನು ತೆಗೆದುಕೊಂಡುಹೋದವನು ಚಂದ್ರನು. ಪುಂಡರೀಕನು ವಿರಹಸಂತಪ್ತನಾಗಿದ್ದಾಗ ಅವನು ಚಂದ್ರನನ್ನು ಕುರಿತು ಎಲೈ ಚಂದ್ರನೇ! ನೀನು ಮಾನುಷಲೋಕದಲ್ಲಿ ಅನೇಕಾವೃತ್ತಿ ಜನ್ಮವನ್ನೆತ್ತಿ ನನ್ನ ಹಾಗೆಯೇ ನೀನೂ ವಿರಹಿಯಾಗೆಂದು ಶಪಿಸಿದನು. ಚಂದ್ರನು ಇದನ್ನು ಕೇಳಿ ಕುಪಿತನಾಗಿ ಪುಂಡರೀಕನನ್ನು ಕುರಿತು ತಪ್ಪಿಲ್ಲದ ನನ್ನನ್ನು ಈರೀತಿಯಾಗಿ ಶಪಿಸಿದೆಯಾದುದರಿಂದ ಎಲೈ ಪುಂಡರೀಕನೇ! ನೀನೂ ಭೂಮಿಯಲ್ಲಿ ಹುಟ್ಟಿ ನನ್ನೊಡನೆ ಕಷ್ಟಸುಖಗಳಲ್ಲಿ ಭಾಗವನ್ನು ಪಡೆಯುವವನಾಗೆಂದು ಮರುಶಾಪವನ್ನಿತ್ತನು, ಎಂದು ಮೊದಲಾಗಿ ಹೇಳಿ ತಾನು ಚಂದ್ರಲೋಕಕ್ಕೆ ಹೋಗಿ ತಿಳಿದುಕೊಂಡು ಬಂದುದೆಲ್ಲವನ್ನೂ ವಿಸ್ತಾರವಾಗಿ ಹೇಳಿದನು. ಅನಂತರ ತಾನು ತನ್ನ ಮಿತ್ರನ ಶಾಪವಿಮೋಚನಕ್ಕೆ ತಕ್ಕ ಉಪಾಯವನ್ನು ಮಾಡಬೇಕೆಂದೆಣಿಸಿ ಪುಂಡರೀಕನ ತಂದೆಯಾದ ಶ್ವೇತಕೇತುಮುನೀಶ್ವರನ ಬಳಿಗೆ ಅತ್ಯವಸರದಿಂದ ಹೋಗುತ್ತಿದ್ದಾಗ ಕಾಣದೆ ಒಬ್ಬ ಋಷಿಯ ಮೇಲೆ ಬೀಳಲು ಅವನು ಕುಪಿತನಾಗಿ ತನ್ನನ್ನು ಕುದುರೆಯಾಗೆಂದು ಶಪಿಸಲು ಆಗ ತಾನು ಆ ಋಷಿಯನ್ನು ಕುರಿತು ಎಲೈ ಮಹಾಭಾಗನೇ! ನನ್ನ ಸ್ನೇಹಿತನ ಪ್ರಾಣರಕ್ಷಣೆಗಾಗಿ ಅವಸರವಸರದಿಂದ ಹೋಗುತ್ತಿದ್ದು ಅಜ್ಞಾನವಶದಿಂದ ನಿನ್ನ ಮೇಲೆ ಬಿದ್ದ ನನ್ನ ತಪ್ಪನ್ನು ಕ್ಷಮಿಸುವವನಾಗು, ಎಂದು ಪರಿಪರಿಯಾಗಿ ಕೇಳಿಕೊಂಡುದಕ್ಕೆ ದಯಾವಿಷ್ಟನಾದ ಆ ಋಷಿಯು ಎಲೈ ಕಪಿಂಜಲನೇ! ಚಂದ್ರನೂ ಮತ್ತು ಪುಂಡರೀಕನೂ ಈರ್ವರೂ ಪರಸ್ಪರ ಶಾಪದ ದೆಶೆಯಿಂದ ಭೂಲೋಕದಲ್ಲಿ ಉಜ್ಜಯಿನೀನಗರಾಧಿಪನಾದ ತಾರಾಪೀಡನಿಗೆ ಒಬ್ಬನು ಮಗನಾಗಿಯೂ, ಮಂತ್ರಿಯಾದ ಶುಕನಾಸನಿಗೊಬ್ಬನು ಮಗನಾಗಿಯೂ ಹುಟ್ಟುವರು. ಕಪಿಂಜಲನಾದ ನೀನು ಕುದುರೆಯಾಗಿ ಇವರೀರ್ವರ ಸ್ನೇಹದಲ್ಲಿರು ಎಂದು ಹೇಳಿದ ಹಾಗೆ ತಾನು ಚಂದ್ರಾಪೀಡನಿಗೆ ಇಂದ್ರಾಯುಧವೆಂಬ ಕುದುರೆಯಾದುದನ್ನೂ ಹೇಳಿದನು. ಇದನ್ನು ಕೇಳಿ ಮಹಾಶ್ವೇತೆಯು ಕಡುದುಃಖದಿಂದ ಗದ್ಗದಕಂಠಳಾಗಿ ಪ್ರಾಣೇಶ್ವರನು ಗಿಳಿಯ ರೂಪಾದುದಕ್ಕೆ ತನ್ನ ಶಾಪವೇ ಕಾರಣವಾದುದೆಂದು ಬಹುತರವಾಗಿ ದುಃಖಿಸಿದುದಲ್ಲದೆ ಪುಂಡರೀಕನು ಹೇಗೆ ವೈಶಂಪಾಯನನಾದನೆಂಬ ವಿಚಾರ ಮತ್ತು ಪತ್ರಲೇಖೆಯ ಸಮಾಚಾರಗಳನ್ನು ತಿಳಿಯಲು ಅತಿಕುತೂಹಲೆಯಾಗಿ ಕಪಿಂಜಲನನ್ನು ಕೇಳಿದಳು. ಆದರೆ ಕಪಿಂಜಲನು ತನಗೆ ಈ ವಿಚಾರವು ಯಾವುದೂ ತಿಳಿಯದೆಂದೂ ಶ್ವೇತಕೇತುವಿನಿಂದ ಈ ವಿಚಾರವನ್ನು ತಿಳಿಯುವೆನೆಂದೂ ಹೇಳಿ ಹೊರಟು ಹೋದನು. ಕಾದಂಬರಿಯೂ ಮತ್ತು ಮಹಾಶ್ವೇತೆಯೂ

ಕಪಿಂಜಲನಿಂದ ಈ ಆಶ್ಚರ್ಯಕರವಾದ ಕಥೆಯನ್ನು ಕೇಳಿ ದೇವವಾಕ್ಯದ ಅವಧಿಯನ್ನೆದುರುನೋಡುವುದೆಂದು ದೃಢಸಂಕಲ್ಪರಾದರು. ಕಾದಂಬರಿಯು ತನ್ನ ತಾಯಿತಂದೆಗಳಿಗೆ ಇಲ್ಲಿನ ಸಮಾಚಾರಗಳೆಲ್ಲವನ್ನೂ ವಿಶದವಾಗಿ ಹೇಳಿ ಕಳುಹಿಸಿ ಅವರು ತನ್ನ ವಿಚಾರದಲ್ಲಿ ಯಾವುದೊಂದುವಿಧವಾದ ಯೋಚನೆಯನ್ನೂ ಮಾಡಕೂಡದೆಂಬುದಾಗಿ ಪ್ರಾರ್ಥಿಸಿ ಹೇಳಿಕಳುಹಿಸಿದುದಲ್ಲದೆ ತಮ್ಮ ತಮ್ಮ ಗಂಡಂದಿರೊಡನೆ ಬಂದಾಗ ಎಲ್ಲಾ ಸಮಾಚಾರವನ್ನೂ ತಿಳಿಸುವುದಾಗಿಯೂ ಹೇಳಿಕಳುಹಿಸಿದಳು. ಕಾದಂಬರಿಯು ಚಂದ್ರಾಪೀಡನ ಕಳೇಬರವನ್ನು ಬಹುಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದಳು. ಚಂದ್ರಾಪೀಡನ ಕಳೇಬರವು ಕಾದಂಬರಿಯ ಜಾಗರೂಕತೆಯಲ್ಲಿ ದಿನೇದಿನೇ ತೇಜೋಪೇತವಾಗುತ್ತಿತ್ತು. ಅಷ್ಟರಲ್ಲಿಯೇ ತಾರಾಪೀಡ, ವಿಲಾಸವತಿ, ಶುಕನಾಸ, ಶುಕನಾಸನ ಪತ್ನಿ ಇವರೇ ಮೊದಲಾದವರು ಪರಿವಾರದೊಡನೆ ಅಚ್ಛೋದಕಸರಸ್ಸಿನ ಬಳಿಗೆ ಬಂದರು. ತಾರಾಪೀಡನು ಮತ್ತು ವಿಲಾಸವತಿಯು, ಮಗನಾದ ಚಂದ್ರಾಪೀಡನು ಮಲಗಿ ನಿದ್ರಿಸುತ್ತಿರುವುದಾಗಿ ಭಾವಿಸಿಕೊಂಡು ಕಾದಂಬರಿ ಮಹಾಶ್ವೇತೆಯರ ಸಾಷ್ಟಾಂಗನಮಸ್ಕಾರಗಳನ್ನು ಸ್ವೀಕರಿಸಿ, ಅವರನ್ನು ಆಶೀರ್ವದಿಸಿ ಚಂದ್ರಾಪೀಡನ ಕಳೇಬರವನ್ನು ಚೆನ್ನಾಗಿ ನೋಡಿಕೊಳ್ಳುತ್ತಿರುವಂತೆ ಕಾದಂಬರಿಗೆ ಆಜ್ಞಾಪಿಸಿ ಅಲ್ಲೊಂದು ಕುಟೀರವನ್ನುಕಲ್ಪಿಸಿಕೊಂಡು ತಾನೂ ಮಂತ್ರಿಯೂ ಈರ್ವರೂ ವಾಸಮಾಡುತ್ತಾ ಕಷ್ಟನಿವಾರಣಕಾಲವನ್ನು ನಿರೀಕ್ಷಿಸುತ್ತಿದ್ದರು. ಇಷ್ಟರಲ್ಲಿಯೇ ಚಂದ್ರಾಪೀಡನು ಮನುಷ್ಯಜನ್ಮವನ್ನೆತ್ತಿ ವಿದಿಶಾನಗರದ ನಾಯಕನಾಗಿ ಶೂದ್ರಕಾಭಿಧಾನದಿಂದ ಇರುತ್ತಾ ಬಹುಪರಾಕ್ರಮದಿಂದ ರಾಜ್ಯವಾಳುತ್ತಿದ್ದನು. ಮಹಾಶ್ವೇತೆಯಿಂದ ಶಾಪಗ್ರಸ್ತನಾದ ಪುಂಡರೀಕನು ವೈಶಂಪಾಯನನೆಂಬ ಹೆಸರಿನಿಂದ ವಿಂಧ್ಯಾರಣ್ಯದಲ್ಲಿ ಗಿಳಿಯಾಗಿ ಹುಟ್ಟಿದನು. ಹುಟ್ಟುವಾಗಲೇ ಮಾತೃಹೀನವಾದ ಶುಕವನ್ನು ತಂದೆಯಾದುದು ಬಹು ಜಾಗರೂಕತೆಯಿಂದ ಕಾಪಾಡುತ್ತಿದ್ದಿತು.

ಬಂದಾನೊಂದು ದಿವಸ ಒಬ್ಬಾನೊಬ್ಬ ಬೇಡರೊಡೆಯನು ವನವಿಹಾರವನ್ನುಮಾಡಲೆಳಸಿ ಈ ವಿಂಧ್ಯಾಟವಿಗೆ ಬಂದು ಸಾವಿರಾರು ಗಿಳಿಗಳಿಗೆ ಆಶ್ರಯವಾಗಿದ್ದ ಶಾಲ್ಮಲೀವೃಕ್ಷದ ಕೆಳಗೆ ವಿಶ್ರಮಿಸಿಕೊಂಡು ಅನಂತರ ಮುಂದಾದನು. ಅವನ ಪರಿವಾರದ ಪೈಕಿ ಭೀಕರನೂ ಕರಾಳಹೃದಯನೂ ಆದ ಬೇಡನೊಬ್ಬನು ಆ ಮರವನ್ನು ಹತ್ತಿ ನೂರಾರು ಗಿಳಿಗಳನ್ನು ಸೆರೆಹಿಡಿದು ಕೊಂದುಹಾಕಿದನು. ಆಗ ಈ ಮರಿಗಿಳಿಯು ನಿರಾಶ್ರಯವಾಗಿ ಬೇಡರವನ ಕೈಗೆ ಸಿಕ್ಕಿಬಿಟ್ಟಿತು.

ಮರಿಗಿಳಿಯು ಕೆಳಗೆ ಉದುರಿಬಿದ್ದಿದ್ದ ಎಲೆಗಳ ಸಂದಿನಲ್ಲಿ ಯಾರೂ ಕಾಣದಂತೆ ದೂರಿಕೊಂಡಿತು. ಅನಂತರ ಜಾಬಾಲಿಯ ಮಗನಾದ ಹಾರೀತನು ಅನತಿದೂರ ದಲ್ಲಿರುವ ತಮ್ಮ ಪರ್ಣಶಾಲೆಗೆ ಈ ಮರಿಗಿಳಿಯನ್ನು ಕನಿಕರದಿಂದ ತೆಗೆದು ಕೊಂಡು ಹೋಗಿ ತನ್ನ ತಂದೆಯಾದ ಜಾಬಾಲಮುನೀಶ್ವರನಿಗೆ ತೋರಿಸಿದಾಗ ಆ ಜಾಬಾಲಿಯು ಅವನಿಗೂ ಶಿಷ್ಯರಿಗೂ ಈ ಮರಿಗಿಳಿಯು ಇದರ ಮೊದ ಲನೆಯ ಜನ್ಮದಲ್ಲಿ ಪುಂಡರೀಕನೆಂದಾದುದೂ ಎರಡನೆಯ ಜನ್ಮದಲ್ಲಿ ವೈಶಂಪಾ ಯನನೆಂದಾದುದೂ ಇವೇ ಮೊದಲಾದ ಕಾರಣಗಳನ್ನು ಸವಿಸ್ತರವಾಗಿ ತಿಳಿಸಿದನು. ಜಾಬಾಲಿಮುನಿಯಿಂದ ಈ ಕಥೆಯನ್ನು ಕೇಳಿದ ಈ ಮರಿಗಿಳಿಗೆ ಪೂರ್ವಜನ್ಮಸ್ಮರಣವಾದರೂ ಕೆಲಕಾಲ ಆ ಮುನಿಯ ಆಶ್ರಮದಲ್ಲಿಯೇ ಇರಬೇಕಾಯಿತು. ಶ್ವೇತಕೇತುವಿನ ಬಳಿಗೆ ಹೋಗಿದ್ದ ಕಪಿಂಜಲನು ಇಷ್ಟ ರಲ್ಲಿಯೇ ಶ್ವೇತಕೇತುವಿನ ಅಪ್ಪಣೆಯಂತೆ ಜಾಬಾಲಿಯ ಆಶ್ರಮಕ್ಕೆ ಬಂದು ಅಲ್ಲಿ ರುವ ಗಿಳಿಯನ್ನು ನೋಡಿ ಅಳುತ್ತ ನಿಂತುಕೊಂಡನು. ಕಪಿಂಜಲನು ಗಿಳಿಯ ಬಳಿಗೆ ಬಂದು ಗಿಳಿಯನ್ನು ಕುರಿತು ಎಲೈ ಗಿಳಿಯೆ! ನೀನು ಇನ್ನೂ ಕೆಲಕಾಲ ಈ ಆಶ್ರಮದಲ್ಲಿ ವಾಸಿಸುತ್ತಿರು. ಮಹಾತ್ಮನಾದ ಶ್ವೇತಕೇತುವು ಪುಂಡ ರೀಕನ ಪೂರ್ವಜನ್ಮಸಿದ್ಧಿಗಾಗಿ ಬೇಕಾದ ಹೋಮಗಳನ್ನು ಮಾಡುತ್ತಿರು ವನು, ಎಂದು ಹೇಳಿ ಹೊರಟುಹೋದನು. ಜಾಬಾಲಿಯು ತನ್ನಾಶ್ರಮಕ್ಕೆ ಹಾರೀತನು ತಂದ ಗಿಳಿಯಮರಿಗೆ ವೈಶಂಪಾಯನನೆಂದೇ ನಾಮಕರಣ ಮಾಡಿದನು. ಗಿಳಿಗೆ ತನ್ನ ಪೂರ್ವಜನ್ಮದ ವಿಚಾರವಾಗಿ ಹೇಳುವ ಸಮಾಚಾ ರಗಳೆಲ್ಲವೂ ತಿಳಿಯುತ್ತಿತ್ತು. ಹೆಚ್ಚು ಹೇಳುವುದೇನು! ಈ ಗಿಳಿಯು ಮಾನು ಷಶರೀರರಹಿತವಾದ ಪುಂಡರೀಕನೇಯಾಗಿತ್ತೆಂದರೆ ಅತ್ಯುಕ್ತಿಯಾಗಲಾರದು. ಒಂದಾನೊಂದು ದಿವಸ ಈ ಗಿಳಿಯು ತನಗೆ ಹಾರಿಹೋಗುವ ಶಕ್ತಿ ಇರುತ್ತ ದೆಯೋ ಇಲ್ಲವೋ ಎಂಬದನ್ನು ತಿಳಿಯಲಾಶಿಸಿ ಉತ್ತರಾಭಿಮುಖವಾಗಿ ಹೊರಟು ಮಹಾಶ್ವೇತೆಯ ಕುಟೀರದ ಮೇಲೆ ಹಾರಿಹೋಗುತ್ತಾ ಮಾರ್ಗ ಮಧ್ಯದಲ್ಲಿ ಚಂಡಾಲನೊಬ್ಬನ ಕೈಗೆ ಸಿಕ್ಕಿಬಿಟ್ಟಿತು. ಅವನು ಅದನ್ನು ತನ್ನ ಹೆಂಡತಿಯ ಕೈಗೆ ಕೊಟ್ಟನು. ಅವಳು ಅದರ ಮಾತು ಕಥೆ ರೂಪುಗಳಿಗೆ ಆನಂದಿಸಿ ಬೆರಗಾಗಿ ಅದನ್ನು ಶೂದ್ರಕರಾಜನಿಗೆ ಕಾಣಿಕೆಯಾಗಿ ಕೊಡಬೇ ಕೆಂದು ರಾಜನ ಸಮ್ಮುಖಕ್ಕೆ ಗಿಳಿಯೊಡನೆ ಬಂದಳು. ಶೂದ್ರಕನು ವೈಶಂಪಾ ಯನಗಿಳಿಯಿಂದ ತನ್ನ ಪೂರ್ವವೃತ್ತಾಂತವನ್ನು ತಿಳಿದು ಕಾದಂಬರಿಯ ಪ್ರಣ ಯವನ್ನು ಜ್ಞಾಪಿಸಿಕೊಂಡು ಆ ಪ್ರಣಯದಲ್ಲಿಯೇ ಲೀನಮನಸ್ಕನಾಗಿ ಚಂದ್ರಾಪೀಡನ ರೂಪವನ್ನು ಧರಿಸಿ ಕಾದಂಬರಿಯ ಸಮಾಗಮವನ್ನಾಶಿಸು

ತ್ತಿದ್ದನು. ಇಷ್ಟರಲ್ಲಿಯೇ ವಸಂತಋತುವು ಪ್ರಾಪ್ತವಾದುದು. ಕಾದಂಬರಿ ಯು ವಿರಹವ್ಯಥೆಯನ್ನು ಸಹಿಸಲಾರದೆ ತಾನು ಕಾಪಾಡುತ್ತಿದ್ದ ಚಂದ್ರಾಪೀ ಡನ ಮೃತಕಳೇಬರವನ್ನಾಲಿಂಗಿಸಿ ಮುದ್ದಿಟ್ಟುಕೊಂಡಳು. ಆಗ ಅತ್ಯಾಶ್ಚ ರ್ಯವಾಗುವಂತೆ ಚಂದ್ರಾಪೀಡನು ಸಜೀವನಾಗಿ ಎದ್ದು ನಿಂತುಕೊಂಡು ರಮಣಿ! ಇಗೋ! ನಾನು ಶೂದ್ರಕರಾಜನ ಜನ್ಮವನ್ನು ತ್ಯಜಿಸಿ ಈಗ ಪೂರ್ವ ರೂಪವನ್ನು ಹೊಂದಿ ನೀನು ಅಪೇಕ್ಷಿಸುತ್ತಿದ್ದ ಚಂದ್ರಾಪೀಡನಾಗಿರುವೆನು. ಇನ್ನು ಯಾವಾಗಲೂ ಈ ಶರೀರವನ್ನೇ ಧರಿಸಿಕೊಂಡಿರುವೆನು. ಏಕೆಂದರೆ ಈ ಶರೀರದ ರೂಪಿನ ಮೂಲಕ ನಿನ್ನ ಮನೋಮೋಹನರೂಪಲಾಭವು ನನಗೆ ದೊರ ಕಿತು. ಇನ್ನು ಮೇಲೆ ಇಲ್ಲಿಯೇ ಆಗಲೀ ಅಥವಾ ಚಂದ್ರಲೋಕದಲ್ಲಿಯೇ ಆಗಲಿ ಎಲ್ಲಿ ಇರಲು ಇಷ್ಟವಿದೆಯೋ ಅಲ್ಲ ಉಭಯತ್ರರೂ ಇರೋಣ; ಮಹಾ ಶ್ವೇತೆಯು ನಾಥನಾದ ಪುಂಡರೀಕನೂ ಕೂಡ ಶಾಪವಿಮುಕ್ತನಾಗಿ ನಮ್ಮೊ ಡನೆ ಇಷ್ಟರಲ್ಲಿಯೇ ಸೇರುವನು, ಎಂದು ಹೇಳುತ್ತಿದ್ದ ಹಾಗೆ ಪುಂಡರೀಕನು ಗಿಳಿಯ ರೂಪವನ್ನು ಬಿಟ್ಟು ಮಾನುಷಶರೀರವನ್ನು ಧರಿಸಿ ಇವರೊಡನೆ ಸೇರಿಕೊಂಡನು. ಈ ಸಮಯದಲ್ಲಿ ಕಪಿಂಜಲನು ಕೂಡ ಶ್ವೇತಕೇತುವಿನ ಬಳಿಯಿಂದ ಬಂದು ಶ್ವೇತಕೇತುವು ಇದುವರಿಗೆ ಮಾಡಿದ ಹೋಮಾದಿಗಳ ಫಲ ವನ್ನು ವೈಶಂಪಾಯನರೂಪವನ್ನು ಧರಿಸಿದ ಪುಂಡರೀಕನಿಗೆ ಧಾರೆಯನ್ನೆರದು ತನ್ಮೂಲಕ ವೈಂಶಾಪಾಯನನಿಗೆ ಪೂರ್ವದೇಹಪ್ರಾಪ್ತಿಯಾಗುವುದೆಂದೂ ಶ್ವೇತ ಕೇತುವು ಊರ್ಧ್ವಲೋಕಕ್ಕೆ ಹೋಗುವವನಾಗಿದಾನೆಂದೂ ಮಂತ್ರಿಯಾದ ಶುಕನಾಸನೊಡನೆ ಹೇಳಿದನು. ತಾರಾಪೀಡನು ವಿಲಾಸವತಿ ಮತ್ತು ಶುಕನಾಸ ಇವರು ತಮ್ಮ ಪುತ್ರರು ಜೀವಿಸಿದುದನ್ನು ನೋಡಿ ಅತ್ಯಂತ ಸಂತೋಷಿಸಿದರು. ಕಾದಂಬರಿಯ ತಾಯಿತಂದೆಗಳು ಈ ಶುಭ ಸಮಾಚಾರ ವನ್ನು ಕೇಳಿ ಹೇಮಕೂಟದಿಂದ ಅಲ್ಲಿಗೆ ಬಂದು ಸೇರಿದರು. ಅವರ ಹೇಳಿಕೆಯ ಪ್ರಕಾರ ಕಾದಂಬರಿಯೊಡನೆ ಹೇಮಕೂಟಕ್ಕೆ ಹೋಗಿ ಕಾದಂಬರಿಯ ವಿವಾಹ ವನ್ನು ಬಹು ಸಂಭ್ರಮದಿಂದ ನೆರವೇರಿಸಿದರು. ನೂತನದಂಪತಿಗಳು ಅಲ್ಲಿಯೇ ಕೆಲಕಾಲ ಸುಖದಿಂದ ಇರುತ್ತಿದ್ದರು. ಈ ಸಮಾರಂಭದಲ್ಲಿ ಕಾದಂಬರಿಯು ಪತ್ರಲೇಖೆಯನ್ನು ಮರೆಯಲಿಲ್ಲ. ಒಂದಾನೊಂದು ದಿವಸ ಕಾದಂಬರಿಯು ಚಂದ್ರಾಪೀಡನನ್ನು ಕುರಿತು ಪತ್ರಲೇಖೆಯ ಸಮಾಚಾರವನ್ನು ಕೇಳಿದಳು. ಅದಕ್ಕೆ ಅವನು ತನ್ನ ರಾಣಿಯಾದ ರೋಹಿಣಿಯ ಗೆಳತಿಯೆಂದೂ ಪತ್ರಲೇಖಾ ಭಿದಾನದಿಂದ ತನಗಾಗಿ ಭೂಮಿಯಲ್ಲಿ ಅವತರಿಸಿ ಇದುವರೆಗೆ ತನ್ನೊಡನೆ ಇದ್ದು ತನ್ನ ಸ್ಥಾನವಾದ ಚಂದ್ರಲೋಕಕ್ಕೆ ಹೊರಟುಹೋದಳೆಂದೂ ಚಂದ್ರಾಪೀ ಡನು ಕಾದಂಬರಿಗೆ ತಿಳುಹಿಸಿದನು. ಕೆಲಕಾಲಾನಂತರ ಚಂದ್ರಾಪೀಡನು

ಆತ್ರೇಯಮಾವಂದಿರ ಅಪ್ಪಣೆಯನ್ನು ಹೊಂದಿ ಉಜ್ಜಯಿನಿಗೆ ಬಂದನು. ಅಲ್ಲಿ ಪುಂಡರೀಕನನ್ನು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಮಹಾಶ್ವೇತೆಯೊಡನೆ ವಿವಾಹಸಮಾರೋಹವನ್ನು ಬೆಳೆಯಿಸಿದನು. ಮಹಾಶ್ವೇತೆಯು ಪುಂಡರೀಕನಿಗಾಗಿ ಇಷ್ಟೊಂದು ಕಷ್ಟವನ್ನನುಭವಿಸಿ ಕೊನೆಗೆ ಈರ್ವರೂ ಸೇರಿ ಸುಖದಿಂದ ಇರುತ್ತಿದ್ದರು. ಚಂದ್ರಾಪೀಡನು ಮಿತ್ರನೊಡನೆಯೂ ತನ್ನ ತಾಯಿತಂದೆಗಳೊಡನೆಯೂ ಉಜ್ಜಯಿನಿಯಲ್ಲಿಯೂ ಕೆಲಕಾಲ ಹೇಮಕೂಟದಲ್ಲಿಯೂ ಕೆಲಕಾಲ ಚಂದ್ರಲೋಕದಲ್ಲಿಯೂ ಸುಖವಾಗಿರುತ್ತಿದ್ದನು.

ಕಾದಂಬರಿಯ ಇನಿದಾದ ಸಾರವನುಂಡು ಮೈಮರೆತು ತಲೆದೂಗುವ ರಸಿಕರಿಗೆ—

ಕಾದಂಬರೀರಸಜ್ಞಾನಮಾಹಾರೋಽಪಿ ನ ರೋಚತೇ ।

ಎಂಬುದು ಪ್ರತ್ಯಕ್ಷಾನುಭವವೂ ಅಕ್ಷರಶಃ ನಿಜವಾದುದೂ ಆಗಿರುವುದು.

ಈ ರೀತಿ ಕಾದಂಬರಿಯ ಕಾದಂಬರಿಯು ಮುಗಿದುದು.

—+++++++—

# ಮಯೂರ

ಪ್ರಸಿದ್ಧಕಾದಂಬರೀಲೇಖಕನಾದ ಮಹಾಕವಿಬಾಣನು ತಾನು ಬರೆದಿರುವ ಹರ್ಷಚರಿತದಲ್ಲಿ ತನ್ನ ಸ್ನೇಹಿತರನ್ನು ಹೇಳುವಾಗ "ಜಾಂಗಲಿಕೋ **ಮಯೂರಃ**" ಎಂದು ಹೇಳಿರುವುದರಿಂದ ಇವನು ಬಾಣನ ಸ್ನೇಹಿತನೆಂದೂ ವಿಷವೈದ್ಯನಾಗಿದ್ದನೆಂದೂ ಇವನ ಕವಿತಾಪ್ರತಿಭೆಗೆ ಮನಸೋತು ಶ್ರೀಹರ್ಷವರ್ಧನನು ಆಶ್ರಯವನ್ನು ಕೊಟ್ಟನೆಂದೂ ತಿಳಿಯಬರುವುದರ ಹೊರತು ಮಯೂರನ ಕುಲ, ಜನ್ಮವೃತ್ತಾಂತಗಳು ತಿಳಿಯವು. ಇವನು ಸಂಸ್ಕೃತಸಾಹಿತ್ಯದಲ್ಲಿ ಉದ್ದಾಮಕವಿಗಳಾದ ಕಾಳಿದಾಸ, ಭವಭೂತಿ, ಬಾಣನೇ,--ಮೊದಲಾದವರ ಶ್ರೇಣಿಯಲ್ಲಿ ಸೇರಿಸಲ್ಪಟ್ಟಿರುವನು. ಇವನನ್ನು ಕುರಿತು ಸೂರ್ಯಶತಕವ್ಯಾಖ್ಯಾನಕಾರನಾದ ಜಯಮಂಗಳನು—

ದರ್ಪಂ ಕವಿಭುಜಂಗಾನಾಂ ಗತಾ ಶ್ರವಣಗೋಚರಂ ।
ವಿಷವೈದ್ಯೇವ ಮಾಯೂರೀ ಮಾಯೂರೀವಾನ್ನಿಕೃಂತತಿ ॥ ಎಂದೂ

ಭಕ್ತ್ಯಾ ಮಯೂರವಕ್ತ್ರಾಬ್ಜಪದವಿನ್ಯಾಸಶಾಲಿನೀ ।
ನರ್ತಕೀವ ನರೀನರ್ತಿ ಸಭಾಮಧ್ಯೇ ಸರಸ್ವತೀ ॥ ಎಂದೂ

ಮಹಾಕವಿರಾಜಶೇಖರನು—

ಶ್ರೀಹರ್ಷಸ್ಯಾಭವತ್ಸಭ್ಯಃ ಸಮೋ ಬಾಣಮಯೂರಯೋಃ ।　ಎಂದೂ

ನವಸಾಹಸಾಂಕಚರಿತಕಾರನಾದ ಪದ್ಮಗುಪ್ತನು—

ಸಚಿತ್ರವರ್ಣವಿಚ್ಛಿತ್ತಿಹಾರಿಣೋರವನೀಶ್ವರಃ ।
ಶ್ರೀಹರ್ಷ ಇವ ಸಂಘಟ್ಟಂ ಚಕ್ರೇ ಬಾಣಮಯೂರಯೋಃ ॥　ಎಂದೂ

ಇವನ ಕವಿತಾದಕ್ಷತೆಯ ವಿಚಾರವಾಗಿ ತ್ರಿಲೋಚನನು—

ಹೃದಿ ಲಗ್ನೇನ ಬಾಣೇನ ಯನ್ಮಂದೋಽಪಿ ಪದಕ್ರಮಃ ।
ಭವೇತ್ಕವಿಕುರಂಗಾಣಾಂ ಚಾಪಲಂ ತತ್ರ ಕಾರಣಂ ॥

ತಾವತ್ಕವಿವಿಹಂಗಾನಾಂ ಧ್ವನಿರ್ಲೋಕೇಷು ಶಸ್ಯತೇ ।
ಯಾವನ್ನೋ ವಿಶತಿ ಶ್ರೋತ್ರೇ ಮಯೂರಮಧುರಧ್ವನಿಃ ॥　ಎಂದೂ

ವಾಮನ ಭಟ್ಟನು—

ಪ್ರತಿಕವಿಭೇದನಬಾಣಃ
　ಕವಿತಾತರುಗಹನವಿಹರಣಮಯೂರಃ ।
ಸಹೃದಯಲೋಕಸುಬಂಧು
　ರ್ಜಯತಿ ಶ್ರೀಬಾಣಭಟ್ಟಕವಿರಾಜಃ ॥ ಎಂದೂ

ಜಯದೇವನು—

ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋ ಮಯೂರೋ
　ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ ।
ಹರ್ಷೋ ಹರ್ಷೋ ಹೃದಯವಸತಿಃ ಪಂಚಬಾಣಸ್ತು ಬಾಣಃ
　ತೇಷಾಂ ನೈಷಾ ಕಥಯ ಕವಿತಾ ಕಾಮಿನೀಕೌತುಕಾಯ ॥

ಎಂದೂ ಹೇಳಿರುವುದರಿಂದ ಇವನು ಮಹಾಕವಿಯೆಂಬುದು ನಿರ್ವಿವಾದವಾಗಿರುವುದು. ಸಂಸ್ಕೃತಸಾಹಿತ್ಯದಲ್ಲಿ ಇವನಲ್ಲದೆ "ಮಯೂರ"ನೆಂಬ ಹೆಸರಿನ ಇತರರು ಕೆಲವರು ದೊರೆಯುವರು. ಅವರು ಯಾರೆಂದರೆ—

(೧) ಕ್ರಿ. ಶ. ಒಂಭತ್ತನೆಯ ಶತಮಾನದಲ್ಲಿ "ನಂದಾವಲ್ಲ"ನೆಂಬುವನನ್ನು ಯುದ್ಧದಲ್ಲಿ ಸೋಲಿಸಿ ಕೊನೆಗೆ ಭೌಕೂಪದ ಬಳಿ ನಡೆದ ಕದನದಲ್ಲಿ ಪ್ರತೀಹಾರವಂಶದ ಮುಖ್ಯನಾದ ಬಾಹುಕನೆಂಬವನಿಂದ ಸೋಲಿಸಲ್ಪಟ್ಟ 'ಮಯೂರ'

(೨) ಶಂಕುಕನೆಂಬುವನ ತಂದೆಯೆಂದು ತಿಳಿಯಬರುವ (ಮಯೂರ ಸೂನೋಶ್ಶಂಕುಕಸ್ಯ— ಶಾರ್ಙ್ಗಧರಪದ್ಧತಿ ಶ್ಲೋ. ೩೭೫೩) "ಮಯೂರ"

(೩) ಚಂದ್ರಿಕಾ ಎಂಬ ಗ್ರಂಥವನ್ನು ಬರೆದಿರುವ "ಮಯೂರ"

(೪) ಬಳ್ಳಾಳನ ಭೋಜಪ್ರಬಂಧದಲ್ಲಿ ಹೇಳಲ್ಪಟ್ಟಿರುವ "ಮಯೂರ"

(೫) ಲಕ್ಷ್ಮಣಗಿರಿಯ ಗ್ರಂಥಗಳಲ್ಲೊಂದಕ್ಕೆ ವ್ಯಾಖ್ಯಾನವನ್ನು ಬರೆದಿರುವ "ಮಯೂರಭಟ್ಟ"

(೬) ವಿಶ್ವವರ್ಮನೆಂಬ ರಾಜನ ಮಂತ್ರಿಯಾಗಿದ್ದು ವಿಷ್ಣುವಿಗೂ ಸಪ್ತಮಾತೃಕೆಗಳಿಗೂ ದೇವಾಲಯವನ್ನು ಕಟ್ಟಿಸಿದುದಾಗಿ ಕ್ರಿ. ಶ. ೪೨೪ ರಲ್ಲಿ ಬರೆಯಲ್ಪಟ್ಟಿರುವ ಗುಪ್ತರ ಕಾಲದ ಒಂದಾನೊಂದು ಶಾಸನದಿಂದ ತಿಳಿದುಬರುವ "ಮಯೂರಾಕ್ಷ"

(೭) ಕ್ರಿ. ಶ. ೧೧-೧೨ನೆಯ ಶತಮಾನಗಳಲ್ಲಿ ಅಥವಾ ಇನ್ನು ಕೊಂಚ ಹಿಂದೆ ಹಾನಗಲ್ಲಿನಲ್ಲಾಳಿದ ಮೂರು ಜನ ಕದಂಬರಾಜರಲ್ಲೊಬ್ಬನಾದ "ಮಯೂರವರ್ಮ"

(೮) ಆರನೆಯ ಶತಮಾನಕ್ಕಿಂತ ಪ್ರಾಚೀನರಾದ ಕದಂಬ ಅರಸರಲ್ಲೊಬ್ಬನಾದ "ಮಯೂರವರ್ಮ"

(೯) ಕ್ರಿ. ಶ. ೧೩ ನೆಯ ಶತಮಾನದ ಉತ್ತರಾರ್ಧದಲ್ಲಿದ್ದು ಪ್ರಸಿದ್ಧ ಸಿಂಹಳೀಯಲೇಖಕನೂ ಪೂಜಾವಳಿ ಮತ್ತು ಯೋಗಾರ್ಣವವೆಂಬ ಗ್ರಂಥಗಳ ಕರ್ತೃವೂ ಆದ "ಮಯೂರಪಾದ ತೀರ"

(೧೦) ಕ್ರಿ. ಶ. ೧೮ ನೆಯ ಶತಮಾನದ ಪ್ರಸಿದ್ಧ ಮರಾಠೀಲೇಖಕನೂ ಕೇಕಾವಳೀ ಮತ್ತು ಆರ್ಯಮಾಲಾ ಎಂಬ ಗ್ರಂಥಗಳ ಕರ್ತೃವೂ ಆದ "ಮಯೂರಪಂತ" ಅಥವಾ "ಮೋರೋಪಂತ" (ಮಯೂರಪಂಡಿತ)

(೧೧) ವೇದಸಂಬಂಧವಿಷಯಗಳು ಚರ್ಚಿಸಲ್ಪಟ್ಟಿರುವ 'ಕಲ್ಪಕಾರಿಕಾಸಾರ'ವೆಂಬ ಗ್ರಂಥವನ್ನು ಬರೆದಿರುವ "ಮಯೂರವಾಹ".

(೧೨) ಪೌರಾಣಿಕರಾಜನಾದ "ಮಯೂರಧ್ವಜ"

(೧೩) ಖಂಡಭಟ್ಟನ ತಂದೆ "ಮಯೂರೇಶ್ವರ"

(೧೪) ವಾಚಸ್ಪತಿಮಿಶ್ರನೆಂದು ಹೇಳುವ "ಮಯೂರವಾಚಸ್ಪತಿ" ಈ ರೀತಿಯಾಗಿ ಹದಿನಾಲ್ಕು ಜನರು ದೊರೆಯುವರು.

ಬಾಣ ಮತ್ತು ಮಯೂರ ಇವರ ಬಾಂಧವ್ಯ ವಿಚಾರದಲ್ಲಿ (೧) ಪ್ರಬಂಧಚಿಂತಾಮಣಿಯನ್ನು ಬರೆದಿರುವ ಮೇರುತುಂಗಾಚಾರ್ಯನು ಬಾಣನ ತಂಗಿಯು ಮಯೂರನ ಹೆಂಡತಿಯೆಂದು ಹೇಳಿರುವನು.† (೨) ಪ್ರಬಂಧಚಿಂತಾಮ

† ಬಾಣನು ಹರ್ಷಚರಿತದಲ್ಲಿ ತನ್ನ ವಂಶವಿಚಾರವನ್ನು ಹೇಳುವಾಗ ಚಿತ್ರಭಾನು ಮತ್ತು

ಕಾರನೆಂದೂ, ಮಯೂರನು ಚಂಡೀಶತಕಕಾರನೆಂದೂ, ಮಯೂರನು ಬಾಣನ ತಂಗಿಯ ಗಂಡನೆಂದೂ ಹೇಳಿರುವರು. ‡ (೩) ಸೂರ್ಯಶತಕಕ್ಕೆ ವ್ಯಾಖ್ಯಾನ ವನ್ನು ಬರೆದಿರುವ ಯಜ್ಞೇಶ್ವರಶಾಸ್ತ್ರಿಗಳು ಮಯೂರನ ತಂಗಿಯು ಬಾಣನ ಹೆಂಡತಿಯೆಂದು ಹೇಳಿರುವರು. ಇವುಗಳನ್ನು ಸಮರ್ಥಿಸಲು ಸರಿಯಾದ ಚರಿ ತ್ರಾಧಾರಗಳೂ ಇಲ್ಲ. ಮತ್ತು ಇವನ ಕುಲಜನ್ಮ ವಿಚಾರವಾಗಿ ಹೆಚ್ಚು ತಿಳಿ ಯದುದಾಗಿ ಮೊದಲೇ ಹೇಳಿರುವೆವು.

ಇವನು **ಮಯೂರಾಷ್ಟಕ, ಸೂರ್ಯಶತಕ**ವೆಂಬ ಗ್ರಂಥಗಳನ್ನು ಬರಿ ದಿರುವನು. ಮಯೂರಾಷ್ಟಕದಲ್ಲಿ ೮ ಶ್ಲೋಕಗಳು ಮಾತ್ರ ಇರುವುವು. ಅಷ್ಟಕಾಂತ್ಯದಲ್ಲಿ—

"ಇತಿ ಶ್ರೀ ಮಯೂರಾಷ್ಟಕಂ ಸಮಾಪ್ತಂ" ಎಂದಿರುವುದು.

ಮೂಲದಲ್ಲಿ ಮೊದಲನೆಯ ಮತ್ತು ಆರನೆಯ ಶ್ಲೋಕಗಳು ಜೀರ್ಣ ವಾಗಿ ಹರಿದು ಹೋಗಿರುವುದರಿಂದ ಅಪೂರ್ಣವಾಗಿವೆ. ಇದರ ೧, ೨, ೪, ನೆಯ ಶ್ಲೋಕಗಳು ಸ್ರಗ್ಧರಾವೃತ್ತದಲ್ಲಿಯೂ ಉಳಿದುವು ಶಾರ್ದೂಲವಿಕ್ರೀಡಿತ ವೃತ್ತದಲ್ಲಿಯೂ ಬರೆಯಲ್ಪಟ್ಟಿವೆ. ಗ್ರಂಥಾರಂಭಕ್ಕೆ ಮೊದಲು—

"ಓಂ ನಮಃ ಶ್ರೀಹರಿಹರಾಭ್ಯಾಂ"

ಎಂದಿದೆ. ಈ ಅಷ್ಟಕವು ಶೃಂಗಾರರಸಪ್ರಧಾನವಾದುದಾಗಿ ಶಯ್ಯಾಗಾರಕ್ಕೆ ಹೋಗುತ್ತಿರುವ ಯುವತಿಯೋರ್ವಳ ವರ್ಣನೆಯಾಗಿರುವುದು. ಇವನು ಮಯೂರಾಷ್ಟಕವನ್ನು ಬರೆದನಂತರ ಸೂರ್ಯಶತಕವನ್ನು ಬರೆದುದಾಗಿಯೂ ಮಯೂರಾಷ್ಟಕವನ್ನುಬರೆಯಲು ಇವನ ತಂಗಿಯೇ ಕಾರಣಳೆಂದೂ ಪ್ರಣಯ ಕುಪಿತೆಯಾಗಿದ್ದ ತನ್ನ ಅಂತರ್ಯವನ್ನು ಹೊರಗೆಡವಿದ ಮಯೂರನ ಮೇಲೆ ಕೋಪಿಸಿಕೊಂಡು ಕುಷ್ಠಶರೀರನಾಗೆಂದು ಬಾಯಿಯಲ್ಲಿದ್ದ ತಂಬುಲವನ್ನು ಉಗಿದಂತೆಯೂ ಅದರಂತೆಯೇ ಮಯೂರನು ಕುಷ್ಠರೋಗಿಯಾಗಿ ತನ್ನಿ ವಾರಣಾರ್ಥವಾಗಿ ಸೂರ್ಯಶತಕವನ್ನು ಬರೆದು ಗುಣಹೊಂದಿದಂತೆಯೂ ಜೈನ ಕಥೆಗಳು ಹೇಳುವುವು. ಈ ವಿಚಾರವಾಗಿ ಕಾವ್ಯಪ್ರಕಾಶದಲ್ಲಿ ಮಮ್ಮಟನು— ಣಿಯ ಭಾಷಾಂತರಕಾರರಾದ ಮಿ. ಟಾನಿಸಾಹೇಬರು ಬಾಣನು ಸೂರ್ಯಶತಕ

ರಾಜದೇವಿಗೆ ತಾನೊಬ್ಬನೇ ಮಗನೆಂದೂ ಅತಿಶೈಶವದಲ್ಲಿಯೇ ಮಾತೃವಿಯೋಗವಾಯಿತೆಂದೂ ಹೇಳಿರುವನು. ಹಾಗೆ ತನಗೊಬ್ಬ ತಂಗಿಯು ಇದ್ದುದಾಗಿದ್ದರೆ ತನ್ನ ವಂಶಾನುಕ್ರಮಣಿಕೆಯಲ್ಲಿ ಹೇಳಬಹುದಾಗಿದ್ದಿತು.

‡ *Prabandha Chintamani* by C. H. Tawney. P. 64.

ಆದಿತ್ಯಾಧಿರ್ಮಯೂರಾದೀನಾಂ ಇವಾನರ್ಥನಿವಾರಣಂ। ಎಂದೂ

ಕಾವ್ಯಪ್ರಕಾಶದ ವ್ಯಾಖ್ಯಾತೃವಾದ ಜಯರಾಮನು—

"ಮಯೂರನಾಮಾ ಕವಿಃ ಶತಶ್ಲೋಕೇನಾದಿತ್ಯಂ ಸ್ತುತ್ವಾ ಕುಷ್ಠಾ
ನ್ನಿಸ್ತೀರ್ಣಃ ಇತಿ ಪ್ರಸಿದ್ಧಃ। ಎಂದೂ

ಸುಧಾಸಾಗರದಲ್ಲಿ— ಕುಷ್ಠರೋಗಪೀಡಿತನಾದ ಮಯೂರನು ಹರಿದ್ವಾರಕ್ಕೆ ಹೋಗಿ ಗಂಗಾತಟದಲ್ಲಿ ನಿಂತು ನಿಶ್ಚಲಚಿತ್ತದಿಂದ ಆದಿತ್ಯನನ್ನು ಸ್ತುತಿಸಿ ಗುಣಹೊಂದಿದನೆಂದೂ

ಜಗನ್ನಾಥನು— ಮಯೂರನು ಪೂರ್ವಜನ್ಮಕೃತಪಾಪಫಲದಿಂದ ಕುಷ್ಠಿಯಾಗಿ ನೂರುಶ್ಲೋಕಗಳಿಂದ ಸೂರ್ಯನನ್ನು ಸ್ತುತಿಸಿ ನಿವಾರಣೆಯನ್ನು ಹೊಂದಿದುದು ಹೊರತು ಸಾಧ್ವೀಶಾಪದಿಂದಲ್ಲವೆಂದು ಹೇಳಿರುವನು.

ಇವುಗಳೆಲ್ಲವೂ ಜೈನಕಥಾಧಾರಗಳಮೇಲೆ ಬರೆಯಲ್ಪಟ್ಟಿರಬಹುದಾಗಿ ತಿಳಿವಳಿಕೆಯಾಗುತ್ತದೆ. ಆದರೆ ಇವನು ಜೈನನಲ್ಲ. ಶ್ರೀಹರ್ಷವರ್ಧನನ ಕಾಲದಲ್ಲಿ ಸೂರ್ಯಾರಾಧನೆಯು ಪ್ರಬಲವಾಗಿದ್ದಿತು. ಈ ವಿಚಾರವು ಹರ್ಷನ ಶಾಸನಗಳಲ್ಲಿ ಕಂಡುಬರುವುದು. ಹರ್ಷವರ್ಧನನ ತಂದೆಯಾದ ಪ್ರಭಾಕರವರ್ಧನನು ತ್ರಿಕಾಲದಲ್ಲಿಯೂ ಸೂರ್ಯಾರಾಧನೆಯನ್ನು ಮಾಡುತ್ತಿದ್ದನೆಂದು ಹರ್ಷಚರಿತೆಯು ಹೇಳುತ್ತದೆ. ಸೂರ್ಯಶತಕವು ರಾಜನ ಕೋರಿಕೆಯಂತೆ ಪ್ರಯಾಗದಲ್ಲಿ ನಡೆಯುತ್ತಿದ್ದ ಉತ್ಸವಕಾಲಗಳಲ್ಲಿ ವಿಶೇಷತಃ ಸಕಲ ಜನೋಪಯೋಗಕ್ಕಾಗಿ ಬರೆಯಲ್ಪಟ್ಟಿರಬೇಕೆಂದು ತೋರುವುದು. ಪರಸ್ಪರ ಸಂಬಂಧವಿರದ ಈ ಕಥೆಗಳನ್ನು ದಂತಕಥೆಗಳೆನಬೇಕಾಗುವುದು.

**ಕಾಲ**— ಶ್ರೀಹರ್ಷರ್ಧನನು ಕ್ರಿ. ಶ. ೭ ನೆಯ ಶತಮಾನದ ಪೂರ್ವಾರ್ಧದವನಾದುದರಿಂದ ಇವನ ಸಮಕಾಲಿಕನೂ ಆಸ್ಥಾನಪಂಡಿತನೂ ಆದ ಮಯೂರನೂ ಕ್ರಿ. ಶ. ಏಳನೆಯ ಶತಮಾನದ ಪೂರ್ವಾರ್ಧದವನೆಂಬುದು ಸ್ಪಷ್ಟವಾಗುತ್ತದೆ.

ಮಯೂರಾಷ್ಟಕವನ್ನೂ ಸೂರ್ಯಶತಕವನ್ನೂ ಪರಸ್ಪರ ಹೋಲಿಸಿ ನೋಡಿದರೆ ಇವೆರಡೂ ಭಿನ್ನಕರ್ತೃಗಳೆನ್ನಬೇಕಾಗುವುದು. ಇದರ ನಿಜಾಂಶವನ್ನು ಹೇಳುವುದಕ್ಕಾಗಿ ಒಂದೊಂದು ಶ್ಲೋಕವನ್ನು ಬರೆದು ತೋರುವೆವು—

**ಉಜ್ಜೃಂಭಾಂಭೋರುಹಾಣಾಂ ಪ್ರಭವತಿ ಪಯಸಾಂ ಯಾ ಶ್ರಿಯೇ ನೋಷ್ಣತಾಯೈ**
**ಪುಷ್ಣಾತ್ಯಾಲೋಕಮಾತ್ರಂ ನ ತು ದಿಶತಿ ದೃಶಾಂ ದೃಶ್ಯಮಾನಾ ವಿಘಾತಂ।**
**ಪೂರ್ವಾದ್ರೇರೇವ ಪೂರ್ವಂ ದಿವಮನು ಚ ಪುನಃ ಪಾವನೀ ದಿಙ್ಮುಖಾನಾಂ**
**ಏನಾಂಸ್ಯೈನೀವಿಭಾಸೀನುದತುನುತಿಪದ್ವೈಕಾಸ್ಪದಂ ಪ್ರಾಕ್ತನೀ ವಃ॥**

**—ಸೂರ್ಯಶತಕ ೯೩.**

ವಾಮೇನಾವೇಷ್ಟಯಂತೀ ಪ್ರವಿರಳಕುಸುಮಂ ಕೇಶಭಾರಂ ಕರೇಣ
ಪ್ರಭ್ರಷ್ಟಂ ಚೋತ್ತರೀಯಂ ರತಿಪತಿತಗುಣಾಂ ಮೇಖಲಾಂ ದಕ್ಷಿಣೇನ |
ತಾಂಬೂಲಂ ಚೋದ್ವಹಂತೀ ವಿಕಸಿತವದನಾ ಮುಕ್ತಕೇಶಾ ನರಾಗಾ
ನ್ನಿಷ್ಕ್ರಾಂತಾ ಗುಹ್ಯದೇಶಾತ್ ಮದನವಶಗತಾ ಮಾರುತಂ ಪ್ರಾರ್ಥಯಂತೀ ||
—ಮಯೂರಾಷ್ಟಕ ೪.

ಈ ಎರಡು ಶ್ಲೋಕಗಳೂ ಸ್ರಗ್ಧರಾವೃತ್ತದಲ್ಲಿರುವುವಾದರೂ ಮೇಲೆ ಹೇಳಿರುವ ಸೂರ್ಯಶತಕದ ಶ್ಲೋಕಶೈಲಿ, ಗಂಭೀರಪದವಿನ್ಯಾಸ, ಅರ್ಥ ಸೌಂದರ್ಯ, ಶ್ಲೇಷೆಯಮಾಧುರ್ಯ ಮತ್ತು ಚತುರತೆ ಇವು ಎರಡನೆಯ ಶ್ಲೋಕವಾದ ಮಯೂರಾಷ್ಟಕದಲ್ಲಿ ಕಂಡುಬರುವುದಿಲ್ಲ. ಈ ಅಷ್ಟಕದಲ್ಲಿ ವರ್ಣಿತಳಾದ ಯುವತಿಯು ಮಯೂರನ ಸೋದರಿಯೆಂದು ಧ್ವನಿತವಾಗುವುದಿಲ್ಲ. ಯಾವಳೋ ಓರ್ವ ಯುವತಿಯ ವರ್ಣನವಿರುವುದರಿಂದಲೂ ಸೂರ್ಯಶತಕಕಾರನಾದ ಮಯೂರನ ಕವಿತೆಗೂ ಮಯೂರಾಷ್ಟಕದ ಕವಿತೆಗೂ ಅಜಗಜಾಂತರ ವಿರುವುದರಿಂದಲೂ ಮಯೂರನೆಂಬ ಹೆಸರಿನ ಎಷ್ಟೋ ಜನರಲ್ಲಿ ಯಾರೋ ಈ ಮಯೂರಾಷ್ಟಕವನ್ನು ಬರೆದಿರಬೇಕೆಂದೂ ಸೂರ್ಯಶತಕವನ್ನು ಬರೆದವನಾಗಿರನೆಂದೂ ಹೇಳಬೇಕಾಗುವುದು.

**ಸೂರ್ಯಶತಕ**— ಇದರಲ್ಲಿ ೧೦೧ ಶ್ಲೋಕಗಳಿರುವುವು. ಇದರ ಒಂದುನೂರು ಶ್ಲೋಕಗಳು ಮಾತ್ರವೇ ಹೆಸರಿಗೆ ತಕ್ಕಂತೆ ಸೂರ್ಯವರ್ಣನವೇ ಮೊದಲಾದುವನ್ನು ಹೇಳುವುದಾಗಿ ಕೊನೆಯ ಒಂದು ಶ್ಲೋಕವು ಫಲಶ್ರುತಿಯಾಗಿರುವುದು. ಇದನ್ನು ಯಾರೋ ಈಚೆಗೆ ಬರೆದು ಸೇರಿಸಿರಬೇಕೆಂದು ಬೋಧೆಯಾಗುವುದು. ಸೂರ್ಯಶತಕವು 'ಗೌಡೀ' ಶೈಲಿಯಲ್ಲಿ ಬರೆಯಲ್ಪಟ್ಟು ಓಜಸ್ಸಿನಿಂದಲೂ ಕಾಂತಿಯಿಂದಲೂ ಕೂಡಿ ಅನುಪ್ರಾಸ ಬದ್ಧವಾಗಿರುವುದು. ಇದರ ೧–೪೩ ಶ್ಲೋಕಗಳು ಸೂರ್ಯನ ಕಿರಣಗಳವಿಚಾರವಾಗಿಯೂ ೪೪–೪೯ ಶ್ಲೋಕಗಳು ಅವನ ತೇರನ್ನೆಳೆಯುವ ಕುದುರೆಗಳ ವಿಚಾರವಾಗಿಯೂ ೫೦–೬೧ ಶ್ಲೋಕಗಳು ಸಾರಥಿಯಾದ ಅರುಣನ ವಿಚಾರವಾಗಿಯೂ ೬೨–೭೨ ಶ್ಲೋಕಗಳು ರಥವರ್ಣನವಿಷಯವಾಗಿಯೂ ೭೩–೮೦ ಶ್ಲೋಕಗಳು ಸೂರ್ಯ ಮಂಡಲದ ವಿಚಾರವಾಗಿಯೂ ಹೇಳಲ್ಪಟ್ಟಿರುವುವು. ಉಳಿದುವುಗಳು ಸೂರ್ಯನ ವಿವಿಧವರ್ಣನೆಗಳಿಂದ ಕೂಡಿವೆ. ಅದರಲ್ಲಿ ೯೧–೯೨–೯೩ನೆಯ ಶ್ಲೋಕಗಳು ಶಿವ, ವಿಷ್ಣು ಮತ್ತು ಬ್ರಹ್ಮ ಇವರಿಗೆ ಕ್ರಮವಾಗಿ ಹೋಲಿಸಲ್ಪಟ್ಟಿವೆ. ಜನರ ಇಷ್ಟಪೂರ್ತಿಯನ್ನು ಮಾಡುವುದರಲ್ಲಿ ಸೂರ್ಯನು ತ್ರಿಮೂರ್ತಿಗಳಿಗಿಂತ ಹೆಚ್ಚಿನವನೆಂದು ೮೮ ನೆಯ ಶ್ಲೋಕವು ವರ್ಣಿಸುತ್ತದೆ. ೮೫, ೯೫, ೯೬ ನೆಯ

ಶ್ಲೋಕಗಳು ಸೂರ್ಯಾಸ್ತಮಾನದ ರಾತ್ರಿಯಲ್ಲಿ ಭೂಪ್ರಕೃತಿಯು ಹೇಗಿರುವುದೆಂಬುದನ್ನೂ ೮೭ನೆಯ ಶ್ಲೋಕವು ಸೂರ್ಯೋದಯಾನಂತರ ಭೂಪ್ರಕೃತಿಯು ಹೇಗಿರುವುದೆಂಬುದನ್ನೂ ಹೇಳುವುದಾಗಿದೆ. ೯೪ನೆಯ ಶ್ಲೋಕದಲ್ಲಿ ಸೂರ್ಯನ ಶ್ರೇಷ್ಠತ್ವವನ್ನು ಕುರಿತು ವರ್ಣಿಸಿದೆ. ೯೯ನೆಯ ಶ್ಲೋಕದಲ್ಲಿ ಸಾಕ್ಷಾದೀಶ್ವರನೆಂದು ವರ್ಣಿತವಾಗಿದೆ. ೧೦೦ನೆಯ ಶ್ಲೋಕದಲ್ಲಿ ಸೂರ್ಯವರ್ಣನವು ಅತ್ಯುತ್ತಮವಾಗಿ ಪ್ರತಿಪಾದಿತವಾಗಿದೆ. ಸೂರ್ಯಶತಕದ ವರ್ಣನೆಗಳನ್ನು ವೇದ, ಪುರಾಣ, ಭಾರತೇತಿಹಾಸಗಳಿಂದ ಆರಿಸಿಕೊಂಡುದುದಾಗಿ ತೋರುತ್ತದೆ. ಇದು ಶ್ಲೇಷಯಮಕ ಮೊದಲಾದ ಕಾವ್ಯಲಕ್ಷಣಗಳಿಂದ ಕೂಡಿ ಎಲ್ಲದಕ್ಕಿಂತಲೂ ಮಿಗಿಲೆನಿಸುತ್ತಿದೆ.

ವರ್ಣನೆಗೆ ತಕ್ಕಹಾಗೆ ಶ್ಲೋಕಗಳು ವಿಭಾಗಿಸಲ್ಪಟ್ಟು ಸೂರ್ಯ, ಅರುಣ, ಕಿರಣ, ಅಶ್ವ, ರಥ ಮೊದಲಾದುವುಗಳ ವರ್ಣನೆಗಳಿಂದ ತುಂಬಿ ಮನೋಹರವಾಗಿವೆ. ಇದರಲ್ಲಿ ಕರುಣರಸವೂ ಮತ್ತು ಶಾಂತಿರಸವೂ ಮೂರ್ತಿಮತ್ತಾಗಿರುವುವು. ಸೂರ್ಯಶತಕಕ್ಕೆ ವ್ಯಾಖ್ಯಾನವನ್ನು ಬರೆದಿರುವವರನೇಕರಲ್ಲಿ— (೧) ಜಯಮಂಗಳ (೨) ತ್ರಿಭುವನ ಕಾಲ (೩) ಮಧುಸೂದನ (೪) ಯಜ್ಞೇಶ್ವರ (೫) ವಲ್ಲಭದೇವ (೬) ಶ್ರೀರಂಗದೇವ (೭) ಲಿಂಗಯ್ಯ (೮) ಗಂಗಾಧರಪಾಠಕ (೯) ಬಾಲಂಭಟ್ಟ (೧೦) ಹರಿವಂಶ (೧೨) ಗೋಪೀನಾಥ (೧೨) ಅನ್ನಯಮುಖಿ (೧೩) ಜಗನ್ನಾಥ (೧೪) ರಾಮಭಟ್ಟ ಇವರ ಹೆಸರುಗಳು ಕಂಡುಬರುವುವು.

ಮಯೂರನ ಸೂರ್ಯಶತಕವನ್ನು ಡಾ॥ ಕಾರ್ಲೊ ಬರ್ನ್ಹೇಮರ್ (Dr. Carlo Bernhemier) ಎಂಬವರು ಇಟಾಲಿಯನ್ ಭಾಷೆಗೂ* ಎ. ಯಸ್. ಸುಬ್ಬರಾಯರೆಂಬವರು ಆಂಧ್ರಭಾಷೆಗೂ‡ ಪರಾಕ್ರಮಬಾಹುವಿಲ್ಲಂಮೂಲ ಎಂಬುವರು ಸಿಂಹಳ ಭಾಷೆಗೂ ಭಾಷಾಂತರಿಸಿರುವರು.

ಮಯೂರಕವಿಯ ಸೂರ್ಯಶತಕವಲ್ಲದೆ ಇತರರದೆಂದು ದೊರೆತಿರುವ ಸೂರ್ಯಶತಕಗಳಾವುವೆಂಬುದನ್ನು ಇಲ್ಲಿ ಕೊಟ್ಟಿದೆ—

(೧) ಕಾಶಿಯಲ್ಲಿ ಪ್ರಸಿದ್ಧವಾಗಿರುವ ಜಯನಾರಾಯಣ ಸಂಸ್ಕೃತ ವಿದ್ಯಾಲಯದಲ್ಲಿ ಪ್ರಥಮಾಧ್ಯಾಪಕರಾದ ಗೋಪಾಲಶರ್ಮರೆಂಬವರು ಬರೆ

* Published by Liverno in 1905.

‡ Published in a monthly Journel *Saraswatee* in 1898. at *Rajamahendry*.

ದಿರುವ "ಸೂರ್ಯಶತಕ.". ಇವರಿಗೆ ಉಪಾಸಸಿ ಎಂಬ ನಾಮಾಂತರವಿದ್ದಿತು. ಇದು ಕಲ್ಕತ್ತಾದಲ್ಲಿ ಕ್ರಿ. ಶ. ೧೮೭೧ ರಲ್ಲಿ ಮುದ್ರಿತವಾಗಿರುವುದು.

(೨) ಶ್ರೀಶ್ವರವಿದ್ಯಾಲಂಕಾರ ಎಂಬುವರು ಬರೆದಿರುವ "ಸೂರ್ಯ ಶತಕ." ಇವರು ಕ್ರಿ. ಶ. ೧೮೮೯ ರಲ್ಲಿ ಜೀವಿಸಿದ್ದುದಾಗಿ ತಿಳಿಯಬರುತ್ತದೆ.

(೩) ಕ್ರಿ. ಶ. ೧೫೯೩ ರಲ್ಲಿ ರಾಘವೇಂದ್ರಸರಸ್ವತಿ ಎಂಬವರು ಬರೆದಿರುವ "ಸೂರ್ಯಶತಕ".

(೪) ಲಿಂಗಕವಿ ಎಂಬುವರು ಬರೆದಿರುವ ಸೂರ್ಯಶತಕ.

(೫) ಮದ್ರಾಸಿನಲ್ಲಿ ಕ್ರಿ. ಶ. ೧೮೯೭ ರಲ್ಲಿ ಅಚ್ಚಾಗಿ ಪಿ. ಕೆ. ಆರ್. ಲಚ್ಛನನೆಂಬವರಿಂದ ಆಂಧ್ರಭಾಷೆಯಲ್ಲಿ ಬರೆಯಲ್ಪಟ್ಟು ೧೦೫ ಶ್ಲೋಕಗಳಿಂದ ಕೂಡಿರುವ "ಸೂರ್ಯಶತಕ".

ಇನ್ನು ಮಯೂರನ ಸೂರ್ಯಶತಕದ ಶ್ಲೋಕಗಳನ್ನುದಹರಿಸಿಕೊಂಡಿರುವ ಗ್ರಂಥಗಳಾವುವೆಂದರೆ—

(೧) ಆನಂದವರ್ಧನನು 'ಧ್ವನ್ಯಾಲೋಕ'ವೆಂಬ ಅಲಂಕಾರಗ್ರಂಥದಲ್ಲಿ ಶ್ಲೇಷೋದಾಹರಣೆಗೆ ೯ ನೆಯ ಶ್ಲೋಕವನ್ನೂ ವ್ಯತಿರೇಕೋದಾಹರಣೆಗೆ ೨೩ ನೆಯ ಶ್ಲೋಕವನ್ನೂ ಉದಹರಿಸಿಕೊಂಡಿರುವನು.

(೨) ಕ್ಷೇಮೇಂದ್ರನು ಕವಿಕಂಠಾಭರಣವೆಂಬ ಗ್ರಂಥದಲ್ಲಿ ಉಚ್ಚ ನೀಚೋಕ್ತಿಗಳನ್ನು ಹೇಳುವುದಕ್ಕೆ ಸೂರ್ಯಶತಕದ ೧೮ ನೆಯ ಶ್ಲೋಕವನ್ನು ಉದಹರಿಸಿಕೊಂಡಿರುವನು.

(೩) ಮಮ್ಮಟನು ಕಾವ್ಯಪ್ರಕಾಶವೆಂಬ ಗ್ರಂಥದಲ್ಲಿ ಕರ್ಕಶಧ್ವನ್ಯುದಾಹರಣೆಗೆ ಸೂರ್ಯಶತಕದ ೬ ನೆಯ ಶ್ಲೋಕವನ್ನುದಹರಿಸಿಕೊಂಡಿರುವನು.

(೪) ವರ್ಧಮಾನನು ಗಣರತ್ನಮಹೋದಧಿಯಲ್ಲಿ ದ್ಯುಃ--ದಿವ್ ಎಂದು ಆಕಾಶವೆಂಬರ್ಥವನ್ನು ಹೇಳುವುದಕ್ಕೆ ೭೯ನೆಯ ಶ್ಲೋಕದ ಮೊದಲನೆಯ ಪಾದವನ್ನುದಹರಿಸಿಕೊಂಡಿರುವನು.

(೫) ಗದಾಧರನು ರಸಿಕಜೀವನದಲ್ಲಿ ಸೂರ್ಯಶತಕದ ೧ ಮತ್ತು ೨ ನೆಯ ಶ್ಲೋಕಗಳನ್ನುದಹರಿಸಿಕೊಂಡಿರುವನು.

(೬) ಶಾರ್ಙ್ಗಧರಪದ್ಧತಿಯಲ್ಲಿ ೧ ಮತ್ತು ೨ನೆಯ ಶ್ಲೋಕಗಳು ಹೇಳಲ್ಪಟ್ಟಿರುವುವು.

(೭) ಕವೀಂದ್ರವಚನಸಮುಚ್ಚಯದಲ್ಲಿ ಸೂರ್ಯವ್ರಜ್ಯೋದಾಹರಣೆಗೆ ಸೂರ್ಯಶತಕದ ೩೪ ನೆಯ ಶ್ಲೋಕವು ತೆಗೆದುಕೊಳ್ಳಲ್ಪಟ್ಟಿದೆ.

(೮) ಉಜ್ವಲದತ್ತನೆಂಬವನು ಉಣಾದಿ ಸೂತ್ರಕ್ಕೆ ಸೂರ್ಯಶತಕದ ೧೯, ೪೨, ೭೧ನೆಯ ಶ್ಲೋಕಗಳನ್ನುದಹರಿಸಿಕೊಂಡಿರುವನು.

(೯) ಸೂರ್ಯಶತಕದ ಶ್ಲೋಕಗಳು ಟೀಕಾಸರ್ವಸ್ವವೆಂಬುದರಲ್ಲಿಯೂ ಅಮರಸಿಂಹನ ನಾಮಲಿಂಗಾನುಶಾಸನಕ್ಕೆ ಸರ್ವಾನಂದನನೆಂಬವನು ಬರೆದಿರುವ ವ್ಯಾಖ್ಯಾನದಲ್ಲಿಯೂ ಹೇಳಲ್ಪಟ್ಟಿದೆ.

(೧೦) ಶರಣದೇವನ ವ್ಯಾಕರಣಗ್ರಂಥವಾದ 'ದುರ್ಘಟವೃತ್ತಿ'ಯಲ್ಲಿ ೨, ೩, ೨೫ ಮತ್ತು ೫೨ನೆಯ ಶ್ಲೋಕಗಳು ಉದಹರಿಸಲ್ಪಟ್ಟಿರುವುವು.

(೧೧) ಸೂರ್ಯಶತಕದ ಪದ–ಪದ್ಯಗಳನ್ನು ಕೋಶಗಾರರನೇಕರು ಉದಹರಿಸಿಕೊಂಡಿರುವುದಾಗಿ ತಿಳಿಯಬರುತ್ತದೆ.

(೧೨) ಸುಭಾಷಿತರತ್ನಭಾಂಡಾಗಾರದಲ್ಲಿ ಸೂರ್ಯಶತಕದ ೧, ೨ ಮತ್ತು ೬ ನೆಯ ಶ್ಲೋಕಗಳು ಕಂಡುಬರುವುವು.

ಇವುಗಳಿಂದ ಮಯೂರನ ಸೂರ್ಯಶತಕವು ಎಂತಹ ಮಹತ್ವವುಳ್ಳುದೆಂದು ರಸಜ್ಞರು ಅರಿಯದಿರರು. ಇದರ ೧–೨ ಮಾದರಿಯ ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ.

ಸಾರಥಿವರ್ಣನ:— .

**ಪರ್ಯಾಪ್ತಂ ತಪ್ತಚಾಮೀಕರ ಕಟಕತಟೇ ಶ್ಲಿಷ್ಟಶೀತೇತರಾಂಶೋ**
**ರಾಸೀದತ್ಸ್ಯಂದನಾಶ್ವಾನುಕೃತಿಮರಕತೇ ಪದ್ಮರಾಗಾಯಮಾಣಃ ।**
**ಯಃ ಸೋತ್ಕರ್ಷಾಂ ವಿಭೂಷಾಂ ಕುರುತ ಇವ ಕುಲಕ್ಷ್ಮಾಭೃದೀಶಸ್ಯ ಮೇರೋಃ**
**ಏನಾಂ ಸ್ಯಹ್ನಾಯ ದೂರಂ ಗಮಯತು ಸ ಗುರುಃ ಕಾದ್ರವೇಯದ್ವಿಷೋ ವಃ॥**
**—ಸೂ. ಶ. ೮೬.**

ಉತ್ತಪ್ತಸ್ವರ್ಣದಂತೆ ಕಂಗೊಳಿಸುವ ಮೇರುವಿನ ಶಿಖರದಲ್ಲಿ ಉದಯಿಸುತ್ತಿರುವ ಸೂರ್ಯದೇವನ ವಾಜಿಗಳು ಮರಕತಮಣಿಯುಲ್ಲಿ ಪ್ರತಿಫಲಿಸುತ್ತಿರುವಾಗ ಪದ್ಮರಾಗಮಣಿಯಂತೆ ಕಾಣುವುದರಿಂದ ಕುಲಾಚಲಾಧೀಶನಾದ ಮೇರುವಿಗೆ ಅತ್ಯುತ್ತಮವಾದ ಅಲಂಕಾರವನ್ನು ಮಾಡುತ್ತಿರುವಂತೆ ಕಾಣುವ ಪನ್ನಗಾರಿಯ ಅಗ್ರಜನಾದ ಅರುಣನು ನಿಮ್ಮ ಪಾಪಗಳನ್ನು ಕೂಡಲೇ ದೂರಮಾಡಲಿ.

ರಶ್ಮಿ ವರ್ಣನೆ:—

ಸಂಸಕ್ತಂ ಸಿಕ್ತಮೂಲಾದಭಿನವಭುವನೋದ್ಯಾನಕೌತೂಹಲಿನ್ಯಾ
ಯಾಮಿನ್ಯಾ ಕನ್ಯಯೇವಾಮೃತಕರಕಲಶಾವರ್ಜಿತೇನಾಮೃತೇನ |
ಅರ್ಕಾಲೋಕಃ ಕ್ರಿಯಾದ್ವೋ ಮುದಮುದಯಶಿರಶ್ಚಕ್ರವಾಲಾಲವಾಲಾತ್
ಉದ್ಯನ್ಬಾಲಪ್ರವಾಲಪ್ರತಿಮರುಚಿರಹಃಪಾದಪಪ್ರಾಕ್ಪ್ರರೋಹಃ ||

—ಸೂರ್ಯಶತಕ ೩೪.

ಪ್ರಪಂಚವೆಂಬ ನೂತನೋದ್ಯಾನದ ಪುರೋವೃದ್ಧಿಯಲ್ಲಿ ಅತ್ಯಾಸಕ್ತಿಗೊಂಡು ಯಾಮಿನೀ ಎಂಬ ಸುಂದರಿಯು ಚಂದ್ರನೆಂಬ ಪಾತ್ರೆಯಲ್ಲಿನ ಅಮೃತದಿಂದ ಉದಯಶಿಖರವೆಂಬ ಪಾತಿಯಲ್ಲಿ ಬೆಳೆಸಿದ ಎಳೆಯ ಚಿಗುರಿನಂತೆ ಮನೋಹರವಾಗಿ ಕಾಣುವ ದಿನವೆಂಬ ಗಿಡದ ಪ್ರಥಮಾಂಕುರದಂತೆ ಕಣ್ಗೊಳಿಸುವ ಸೂರ್ಯಕಿರಣವು ನಿಮಗೆ ಮಂಗಳವನ್ನುಂಟುಮಾಡಲಿ.

ಶ್ರೀಹರ್ಷನವಿಚಾರವಾಗಿ ಮಯೂರನು ಹೇಳಿರುವ ಶ್ಲೋಕ:—

ಭೂಪಾಲಾಃ ಶಶಿಭಾಸ್ಕರಾನ್ವಯಭುವಃ ಕೇನಾಮ ನಾಸಾದಿತಾ
ಭರ್ತಾರಂ ಪುನರೇಕಮೇವ ಹಿ ಭುವಸ್ತ್ವಾಂ ದೇವ ಮನ್ಯಾಮಹೇ |
ಏನಾಂ ಸಂಪರಿಮೃಶ್ಯ ಕುಂತಲಮಥಾಕೃಷ್ಯ ವ್ಯುದಸ್ಯಾಯತಂ
ಚೋಲಂ ಪ್ರಾಪ್ಯ ಚ ಮಧ್ಯದೇಶಮಧುನಾ ಕಾಂಚ್ಯಾಂ ಕರಃ ಪಾತಿತಃ ||

ಎಷ್ಟೋ ಜನ ಸೂರ್ಯಚಂದ್ರವಂಶದ ರಾಜರು ಆಳಿಹೋದರೂ ಅವರನ್ನು ನಾನು ಭೂಪತಿಗಳೆಂದು ಹೇಳುವುದಿಲ್ಲ. ನಿನ್ನೊಬ್ಬನನ್ನೇ ಭೂಪತಿಯೆಂದು ಹೇಳುವೆನು. ಏಕೆಂದರೆ ನೀನು ಅವಳ ಶರೀರವನ್ನು ಸ್ಪರ್ಶಿಸಿ ಮುಂಗುರುಳುಗಳನ್ನು ನೇವರಿಸಿ ಉತ್ತರೀಯವನ್ನು ದೂರತೆಗೆದೊಗೆದು ಮಧ್ಯಪ್ರದೇಶವನ್ನು ಹೊಂದಿ ಕೈಯನ್ನು ಈಗ ಕಾಂಚಿಯ (ಒಡ್ಯಾಣದ) ಮೇಲೆ ಹಾಕಿರುವೆ ಎಂದರೆ ನೀನು ಅಂಗದೇಶವನ್ನು ಹಿಡಿದು ಕುಂತಲವನ್ನು ಸ್ವಾಧೀನಪಡಿಸಿಕೊಂಡು ಜಯಿಸಲಸಾಧ್ಯರೂ ಅವಿವೇಕಿಗಳೂ ಆದ ಚೋಳರನ್ನಟ್ಟಿ ಚದುರಿಸಿ ಮಧ್ಯದೇಶವನ್ನಾಕ್ರಮಿಸಿ ಈಗ ನಿನ್ನ ಕೈಗಳನ್ನು ಕಾಂಚಿದೇಶದ ಮೇಲೆ ಊರಿರುವೆ. *



* ಹರ್ಷನು ದಕ್ಷಿಣದೇಶಕ್ಕೆ ದಂಡೆತ್ತಿ ಬಂದು ಚೋಳ ಮತ್ತು ಕಂಚಿಗಳನ್ನೊಳಗೊಂಡಿರುವ ದಾಕ್ಷಿಣಾತ್ಯದೇಶಗಳನ್ನು ಮುತ್ತುವುದಕ್ಕೆ ಮುಂಚೆ ದಕ್ಷಿಣದೇಶದೊಡೆಯನಾದ ಎರಡನೆಯ ಪುಲುಕೇಶಿಯಿಂದ ಸೋಲಿಸಲ್ಪಟ್ಟನು. ಮೇಲಿನ ಶ್ಲೋಕಾಭಿಪ್ರಾಯವನ್ನು ನೋಡಿದರೆ ಹರ್ಷನು ದಕ್ಷಿಣಕ್ಕೆ ದಂಡೆತ್ತಿ ಹೋಗುವನೆಂಬುದನ್ನು ಮುಂದಾಗಿ ತಿಳಿದುಹೇಳಿದುದಾಗಿ ಕಾಣಬರುತ್ತೆ.

## ಕುಮಾರದಾಸ

ಇವನನ್ನು ಭಟ್ಟಕುಮಾರ, ಕುಮಾರಭಟ್ಟ, ಶ್ರೀಕುಮಾರ, ಕುಮಾರ ದತ್ತ, **ಕುಮಾರದಾಸ** ಕೆಲವು ಸಮಯಗಳಲ್ಲಿ ನಾಥಕುಮಾರ ಎಂದು ಮೊದ ಲಾಗಿ ಕರೆಯುವರು. 'ರಾಮಾಭಿಷೇಕ'ವೆಂಬ ಗ್ರಂಥದ ೨೫ ನೆಯ ಸರ್ಗದ ಕೊನೆಯ ಶ್ಲೋಕದಲ್ಲಿ ಕುಮಾರಪರಿಚಾರಕನೆಂಬ ಹೆಸರೂ ಕಂಡು ಬರು ವುದು.

> **ಕೃತಜ್ಞ ಇತಿ ಮಾತುಲದ್ವಿತಯಯತ್ನಸಾನಾಥ್ಯತೋ**
> **ಮಹಾರ್ಥಮಸುರದ್ವಿಷೋ ವ್ಯರಚಯನ್ಮಹಾರ್ಥಂ ಕವಿಃ ।**
> **"ಕುಮಾರಪರಿಚಾರಕಃ" ಸಫಲಹಾರ್ದ್ರಸಿದ್ಧಿಃ ಸುಧೀಃ**
> **ಶ್ರುತೋ ಜಗತಿ 'ಜಾನಕೀಹರಣಕಾವ್ಯ'ಮೇತನ್ಮಹತ್ ॥**
>
> **—ರಾಮಾಭಿಷೇಕ.**

ಮೇಲೆ ಹೇಳಿದ ಶ್ರೀ, ಭಟ್ಟ, ನಾಥ, ದಾಸ, ದತ್ತ ಇವೇ ಮೊದಲಾದ ವಿಶೇಷಣಗಳನ್ನು ತೆಗೆದುಹಾಕಿದರೆ ಮುಖ್ಯವಾದ **ಕುಮಾರ** ಶಬ್ದವು ಎಲ್ಲದರ ಲ್ಲಿಯೂ ದೊರಕುತ್ತದೆ. ಈ ಹೆಸರಿಗೆ ಸಂಬಂಧಿಸಿದ ಶ್ಲೋಕಗಳು ಸೂಕ್ತಿಮು ಕ್ತಾವಳಿ, ಸುಭಾಷಿತಾರ್ಣವ, ಸುಭಾಷಿತಕಲ್ಪದ್ರುಮ, ಶ್ರೀಧರಸೇನನ ಸದು ಕ್ತಿಕರ್ಣಾಮೃತ, ಶಾರ್ಙ್ಗಧರಪದ್ಧತಿ, ಸೂಕ್ತ್ಯಾವಳಿ ಮೊದಲಾದುವುಗಳಲ್ಲಿ ದೊರೆ ಯುತ್ತವೆ. ಇವನು ಸಿಂಹಳದ್ವೀಪದವನು.

'**ಪೂಜಾವಳಿ**'ಎಂಬ ಸಿಂಹಳೀಯಗ್ರಂಥದಲ್ಲಿ ಕುಮಾರದಾಸನು ಮುದ್ಗಲಾ ಯನ ಅಥವಾ ಮೊಗ್ಗಲನಮಗನೆಂದು ಹೇಳಲ್ಪಟ್ಟಿದೆ. ಇವನು ಬೌದ್ಧಮತ ದವನು ಎಂಬುದು ಕಾವ್ಯಾರಂಭದಲ್ಲಿ "ಓಂ ನಮಃ ಸರ್ವಜ್ಞಾಯ" ಎಂದು ಹೇಳಿರುವುದರಿಂದ ವ್ಯಕ್ತವಾಗುತ್ತದೆ. ಇದು ಹೊರತು ಇವನ ಕುಲಗೋ ತ್ರಗಳಾವುವೆಂಬುದು ತಿಳಿಯದು.

**ಕಾಲ—** ಸುಮಾರು ಕ್ರಿ. ಶ. ೧೩ ನೆಯ ಶತಮಾನದ ಉತ್ತರಾರ್ಧದಲ್ಲಿ ಬರೆಯಲ್ಪಟ್ಟಿರುವ **ಪೂಜಾವಳಿ** ಎಂಬ ಗ್ರಂಥದಲ್ಲಿ ಕುಮಾರದಾಸನೆಂಬ ಹೆಸ ರಿನ ರಾಜನೊಬ್ಬನು ಸಿಂಹಳವನ್ನು ಕ್ರಿ. ಶ. ೬ ನೆಯ ಶತಮಾನದ ಮಧ್ಯಕಾಲ ದಲ್ಲಿ ಆಳುತ್ತಿದ್ದಹಾಗೂ ಇವನಿಗೂ ಮಹಾಕವಿಕಾಳಿದಾಸನಿಗೂ ಅತ್ಯಂತ ಮೈತ್ರಿಯು ಇದ್ದಹಾಗೂ ವೇಶ್ಯಾನುರಕ್ತನಾದ ಕುಮಾರದಾಸನು (ನಮ್ಮ ಕವಿಯಲ್ಲ.) ಒಂದಾನೊಂದುದಿವಸ—

> **ಕಮಲೇ ಕಮಲೋತ್ಪತ್ತಿಃ ಶ್ರೂಯತೇ ನ ಚ ದೃಶ್ಯತೇ ।**

ಎಂಬ ಶ್ಲೋಕಾರ್ಧವನ್ನು ಗೋಡೆಯ ಮೇಲೆ ಬರೆದು ಈ ಸಮಸ್ಯಾಪೂರ್ಣ ಮಾಡಿದವರಿಗೆ ಬಹುಧನವನ್ನು ಕೊಡುವುದಾಗಿ ಸಾರಿಸಿದಂತೆಯೂ ಇದನ್ನು

ಕಾಳಿದಾಸನು ಕೇಳಿ ಕುಮಾರದಾಸನನ್ನು ನೋಡಲೆಳಸಿ ಸಿಂಹಳದ್ವೀಪಕ್ಕೆ ಬಂದು ವೇಶ್ಯಾಗೃಹಕ್ಕೆ ಹೋಗಿ—

ಬಾಲೇ! ತವ ಮುಖಾಂಭೋಜೇ ದೃಷ್ಟಮಿಂದೀವರದ್ವಯಂ ।

ಎಂದು ಸಮಸ್ಯಾಪೂರ್ತಿಯನ್ನು ಮಾಡಿಕೊಟ್ಟಂತೆಯೂ ಕಾಳಿದಾಸನು ಬದುಕಿದ್ದರೆ ಧನಲಾಭವು ತನಗೆ ತಪ್ಪಬಹುದೆಂಬಾಶಂಕೆಯಿಂದ ವೇಶ್ಯೆಯು ಕಾಳಿದಾಸನನ್ನು ಗೋಪ್ಯವಾಗಿ ಕೊಲ್ಲಿಸಿದಂತೆಯೂ ಇದನ್ನು ತಿಳಿದು ಕುಮಾರದಾಸನು ತನ್ನ ಗೆಳೆಯನಾದ ಕಾಳಿದಾಸನ ಚಿತಿಯಮೇಲೆ ತಾನೂ ಬಿದ್ದು ಆತ್ಮತ್ಯಾಗ ಮಾಡಿಕೊಂಡಂತೆಯೂ ಹೇಳಲ್ಪಟ್ಟಿದೆ.*

(೨) ಸುಮಾರು ಕ್ರಿ. ಶ. ೧೬ ನೆಯ ಶತಮಾನದಲ್ಲಿ ಬರೆಯಲ್ಪಟ್ಟುದಾಗಿರುವ "ಪೆರಂಕುಂಬಾಸಿರತ" ವೆಂಬಸಿಂಹಳೀಯಗ್ರಂಥದಲ್ಲಿನ —

ಏಜರ ಕಿವಿಯರ ಪಿನಿನ್ ಜಾನಕಿಹರಣಏ ಮಹಕವ್ ಬೇಂದಿ ।
ಕುಮರದಸ್ ರದ ಕಾಲಿದಸ್ ನಂ ಕಿವಿಂದು ಹಟ ಸಿಯ ದಿವಿಹೀದಿ ॥

ಎಂಬ ಶ್ಲೋಕದಿಂದ ಕುಮಾರದಾಸನು ಜಾನಕೀಹರಣವೇ ಮೊದಲಾದ ಕಾವ್ಯಗಳನ್ನು ಬರೆದು ತನ್ನ ಸ್ನೇಹಿತನಾದ ಕಾಳಿದಾಸನ ಮೃತಿಗಾಗಿ ದುಃಖಿಸಿ ಆತ್ಮತ್ಯಾಗವನ್ನು ಮಾಡಿಕೊಂಡನೆಂಬುದು ವ್ಯಕ್ತವಾಗುವುದು.$

(೩) ಸಿಂಹಳೀಯಕಥೆಗಳಲ್ಲಿ ಈ ಕಾರ್ಯವು ಮಾತರ ಅಥವಾ ಮಹಾತೀರ್ಥವೆಂಬ ಸ್ಥಳದಲ್ಲಿ ನಡೆಯಿತೆಂದೂ ರಾಜನ ಐವರು ರಾಣಿಯರೂ ಕೂಡ ಚಿತಾರೋಹಣಮಾಡಿದರೆಂದೂ ಆ ಸ್ಥಳಕ್ಕೆ 'ಹತಬೋಧಿವತ್ತ' ಅಥವಾ "ಸಪ್ತಬೋಧಿವಟ"ವೆನ್ನುವುದಾಗಿಯೂ ಹೇಳಲ್ಪಟ್ಟಿದೆ. †

(೪) ಬೌದ್ಧಮತಗ್ರಂಥವಾದ ಮಹಾವಂಶದಲ್ಲಿ ಕುಮಾರದಾಸನೆಂಬವನು ಮಹಾಕವಿಯಾಗಿದ್ದುದಾಗಿ ಹೇಳಲ್ಪಟ್ಟಿರುವುದಾಗಿ ಕೆಲವರು ಹೇಳುವರು. ಇದರಲ್ಲಿ ಕುಮಾರದಾಸನೆಂಬ ಹೆಸರಿನವನು ರಾಜನೆಂದಾಗಲಿ ಅಥವಾ ಜಾನಕೀಹರಣಕಾವ್ಯಕಾರನೆಂದಾಗಲಿ ಎಲ್ಲಿಯೂ ಹೇಳಿರುವುದಿಲ್ಲ. ಕುಮಾರಧಾತುಸೇನನೆಂಬುವನ ವಿಚಾರವಾಗಿ ಬಹು ಅಗ್ಗಳಿಕೆಯಿಂದ ಹೇಳಲ್ಪಟ್ಟಿರು

---

* ಇದೇ ಕಥೆಯನ್ನು ಧಾರಾನಗರದ ಭೋಜರಾಜನಿಗೂ ಅನ್ವಯಿಸುವರು.

$ Journal of the Asiatic Society of Bengal. 1893 *Dharmarama's* preface to his Sinhalese Edition P. 6.

† *Kumaradasa* and his place in Sanskrit Literature. by G. R. Nandargikar. P. 6.

ವುದು. ಇವನೇ ಕುಮಾರದಾಸನಾಗಿರಬಹುದೇ? ಇರದು. ಏಕೆಂದರೆ— ಕುಮಾರಧಾತುಸೇನನನ್ನು ಹೊಗಳಿ ಬರೆದವನು ಕುಮಾರಧಾತುಸೇನನು ಮಹಾಕವಿಯೆಂದೂ ಜಾನಕೀಹರಣ ಕರ್ತನೆಂದೂ ಹೇಳಬಹುದಾಗಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಆದುದರಿಂದ ಮಹಾವಂಶದಲ್ಲಿ ಹೇಳಲ್ಪಟ್ಟಿರುವ ಕುಮಾರಧಾತುಸೇನನೂ ಜಾನಕೀಹರಣಕರ್ತನಾದ ಕುಮಾರದಾಸನೂ ಭಿನ್ನ ಭಿನ್ನವ್ಯಕ್ತಿಗಳೆಂಬುದು ಸ್ಪಷ್ಟವಾಗುವುದು. ಸುಮಾರು ಕ್ರಿ. ಶ. ೧೪ನೆಯ ಶತಮಾನದಲ್ಲಿ ದ್ರಾವಿಡರಾಜರು ಸಿಂಹಳವನ್ನು ಜಯಿಸಿ ಆಳುತ್ತಿರುವಾಗ ಅಲ್ಲಿಯ ಸಂಸ್ಕೃತ ಮತ್ತು ಪಾಲಿಭಾಷೆಯ ಪ್ರಾಚೀನಪುಸ್ತಕಗಳನ್ನು ನಾಶಗೊಳಿಸಿದರೆಂದೂ ಈಗ ಇರುವ ಮತಗ್ರಂಥಗಳೇ ಮೊದಲಾದುವು ದ್ರಾವಿಡರಾಜರು ಅವನತಿಯನ್ನು ಹೊಂದಿದನಂತರ ಬರ್ಮಾದೇಶದಿಂದ ತರಲ್ಪಟ್ಟುವೆಂದೂ ಪಂಡಿತ ಹರಿಮೋಹನವಿದ್ಯಾಭೂಷಣರವರು ಹೇಳುವರು.* ಈ ಸಮಯದಲ್ಲಿಯೇ ಕುಮಾರದಾಸನ ಗ್ರಂಥಗಳೂ ನಾಶವಾಗಿಹೋಗಿರಬೇಕಾಗಿ ಗೊತ್ತಾಗುವುದು.

(೫) ಪ್ರೊ. ಯಂ. ಕೃಷ್ಣಮಾಚಾರ್ಯರವರು ಕ್ರಿ. ಶ. ೬ನೆಯ ಶತಮಾನದಲ್ಲಿ ಕುಮಾರದಾಸನೆಂಬ ರಾಜನು ಸಿಂಹಳದ್ವೀಪದಲ್ಲಿ ಆಳಿದುದಾಗಿಯೂ ಅವನು ಜಾನಕೀಹರಣಕರ್ತನೆಂದೂ ಮೌದ್ಗಲ್ಯಾಯನನ ಮಗನೆಂದೂ ಹೇಳುವರು. ‡ ಇತರ ಗ್ರಂಥಾಧಾರಗಳಿಂದ ಸಮರ್ಥಿಸಿರುವುದಿಲ್ಲ.

(೬) ಡಾ. ಕೀತರವರು ಕ್ರಿ. ಶ. ೬ನೆಯ ಶತಮಾನ(ಕ್ರಿ. ಶ. ೫೧೭--೨೬)ದಲ್ಲಿ ಕುಮಾರದಾಸನೆಂಬ ಹೆಸರಿನವನು ಸಿಂಹಳದ್ವೀಪದಲ್ಲಿ ರಾಜನಾಗಿದ್ದನೆಂಬುದು ಸುಳ್ಳೆಂದೂ ಕಲ್ಪನೆಯೆಂದೂ ಹೇಳುವರು. †

(೭) ಪಂಡಿತ ತ್ರ್ಯಂಬಕಗುರುನಾಥಕಾಳೆಯವರು ಕ್ರಿ. ಶ. ೧೩೦ರ ಸುಮಾರಿನಲ್ಲಿ ಕುಮಾರದಾಸನೆಂಬೊಬ್ಬರಾಜನು ಸಿಂಹಳದ್ವೀಪದಲ್ಲಿ ಆಳಿದನೆಂದೂ ಅವನು ಜಾನಕೀಹರಣಕರ್ತನು ಹೌದೋ ಅಲ್ಲವೋ ಎಂದು ಶಂಕಿತರಾಗಿರುವರು. $

(೮) ಪಂಡಿತ ರಾಮನರೇಶತ್ರಿಪಾಠಿಯವರು ಕುಮಾರದಾಸನೆಂಬವನು ಜಾನಕೀಹರಣಗ್ರಂಥಕರ್ತನೆಂದೂ ಇದು ಕಾಳಿದಾಸನ ಕಾವ್ಯಗಳಿಗೆ ಸರಿಗಟ್ಟು

* Journal of the Asiatic Society of Bengal, 1893.
‡ History of classical Sanskrit Literature P.39. [P. 215.
† Classical Sanskrit Literature P. 54.
$ ಮರಾಠೀ ಸಂಸ್ಕೃತಕವಿಚರಿತ ಪು. ೬೧.

ವುದೆಂದೂ ಮಹಾಕವಿಯಾದ ರಾಜಶೇಖರನು ಇವನ ವಿಚಾರವಾಗಿ—

> ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ ।
> ಕವಿಃ ಕುಮಾರದಾಸೋ ವಾ ರಾವಣೋ ವಾ ಯದಿಕ್ಷಮಃ ॥

ಎಂದು ಹೊಗಳಿರುವನೆಂದೂ ಹೇಳಿ ಕೆಲವರು ಕುಮಾರದಾಸನೆಂಬವನು ಸಿಂಹಳದ್ವೀಪದ ರಾಜನಾಗಿದ್ದನೆಂತಲೂ ಅವನು ಎರಡನೆಯ ಅಥವಾ ಮೂರನೆಯ ಕಾಳಿದಾಸನ ಮಿತ್ರನಾಗಿರಬಹುದೆಂತಲೂ ಹೇಳುವದಾಗಿ ಒಕ್ಕಣಿಸಿರುವರು.¶

ಕುಮಾರದಾಸನೆಂಬ ರಾಜನ ಗೆಳೆಯನಾದ ಕಾಳಿದಾಸನ ವಿಚಾರವಾಗಿ 'ಪೂಜಾವಳಿ' ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು ಚಾರಿತ್ರಕದೃಷ್ಟಿಯಿಂದ ವಿಶ್ವಸನೀಯವಾಗಿ ತೋರುವುದಿಲ್ಲ. ಕಾಳಿದಾಸನಾಮಕರನೇಕರು ಭಿನ್ನ ಭಿನ್ನ ಕಾಲಗಳಲ್ಲಿದ್ದುದಾಗಿ ಸಂಸ್ಕೃತವಾಙ್ಮಯದಲ್ಲಿ ದೊರೆಯುವುದು. ರಘುವಂಶಾದಿ ಕಾವ್ಯಪ್ರಣೇತೃವಾದ ಕಾಳಿದಾಸನಿಗೂ ಜಾನಕೀಹರಣಪ್ರಣೇತೃವಾದ ಕುಮಾರದಾಸನಿಗೂ ಸುಮಾರು ೬--೭ ಶತಮಾನಗಳ ಅಂತರವಿರುವುದು. ಋತುಸಂಹಾರಾದಿ ಗ್ರಂಥಕಾರನಾದ ಕಾಳಿದಾಸನು ಕ್ರಿ. ಶ. ೬ ನೆಯ ಶತಮಾನದವನು. ಇವನೇ ಕುಮಾರದಾಸನ ಗೆಳೆಯನಾಗಿರಬಹುದೆಂದು ಹೇಳುವುದಾದರೆ ಜನಜನಿತಕಥೆಯೇ ಹೊರತು ಹಾಗೆ ಹೇಳಲು ಆಧಾರಗಳು ದೊರೆಯವು.

"ಪೆರಕುಂಬಾಸಿರತ"ದಲ್ಲಿ ಜಾನಕೀಹರಣಕರ್ತನಾದ ಕುಮಾರದಾಸನಿಗೂ ಕಾಳಿದಾಸನಿಗೂ (ಯಾವ ಕಾಳಿದಾಸ?) ಮೈತ್ರಿಯನ್ನು ಹೇಳಿರುವುದು. ಪೂಜಾವಳಿ ಗ್ರಂಥದಲ್ಲಿ ಕುಮಾರದಾಸನೆಂಬವನು ರಾಜನೆಂದು ಹೇಳಲ್ಪಟ್ಟಿರುವುದು. ಪೆರಕುಂಬಾಸಿರತದಲ್ಲಿ ಕುಮಾರದಾಸನು ಕವಿಯೆಂದಿರುವುದು. ಇವೆರಡೂ ಸಿಂಹಳೀಯಗ್ರಂಥಗಳಾಗಿದ್ದು ಪರಸ್ಪರ ವ್ಯತ್ಯಾಸ ತೋರುವುವಾದುದರಿಂದ ಅಸಮಂಜಸವಾಗಿರುವುದು. ಒಂದು ವೇಳೆ ಕುಮಾರದಾಸನೆಂಬವನು ರಾಜನಾಗಿಯೂ ಮಹಾಕವಿಯಾಗಿಯೂ ಇರಕೂಡದೇಕೆಂಬ ಸಂಶಯವು ತೋರಬಹುದು, ಆದರೆ ಹಾಗೆ ಹೇಳುವ ಚಾರಿತ್ರಕಗ್ರಂಥಗಳಾವುವೂ ಇದುವರೆಗೆ ದೊರೆತಿರುವುದಿಲ್ಲ. ಚೈನಾದೇಶದ ಯಾತ್ರಿಕನಾದ ಹುಯನ್‌ತ್ಸಾಂಗನು ಇಂಡಿಯಾದೇಶಕ್ಕೆ ಬಂದು ತನಗೆ ತೋರಿದ ಎಲ್ಲಾ ವಿಚಾರಗಗಳನ್ನೂ ಗ್ರಂಥಸ್ಥಮಾಡಿರುವನು. ಅವನು ಬರೆದಿರುವುದರಲ್ಲಿ ಎಲ್ಲಿಯೂ ಕುಮಾರದಾಸನ ವಿಚಾರವನ್ನು ಹೇಳಿರುವುದಿಲ್ಲ. ಇದನ್ನು ನೋಡಿದರೆ ಹುಯನ್‌ತ್ಸಾಂಗನು ಭಾರತಪ್ರವಾಸವನ್ನು ಮುಗಿಸಿಕೊಂಡು ತನ್ನ ರಾಜ್ಯಕ್ಕೆ

¶ ಕವಿತಾಕೌಮುದೀ (ಹಿಂದೀ) ಪು. ೬೫.

ಹೊರಟುಹೋದನಂತರ ಕುಮಾರದಾಸನ ವಿಚಾರವು ಭಾರತಭೂಮಿಯಲ್ಲಿ ಹರಡಿರಬೇಕೆಂದು ತೋರುವುದು. ಹುಯನ್‌ತ್ಸಾಂಗನು ಕ್ರಿ. ಶ. ೬೪೫ರಲ್ಲಿ ಹಿಂದಿರುಗಿದುದಾಗಿ ಚರಿತ್ರೆಯು ಹೇಳುತ್ತದೆ.

ಕ್ರಿ. ಶ. ೮ನೆಯ ಶತಮಾನದವನಾದ ವಾಮನನು ಇವನ ಜಾನಕೀಹರಣದ ಶ್ಲೋಕಗಳನ್ನು ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿ ಉದಹರಿಸಿಕೊಂಡಿರುವುದರಿಂದ ಕುಮಾರದಾಸನು ವಾಮನನಿಗಿಂತಲೂ ಪ್ರಾಚೀನನಾಗಿರಬೇಕು. ಎಂದರೆ ಕುಮಾರದಾಸನು ಕ್ರಿ. ಶ. ೭ನೆಯ ಶತಮಾನದ ಉತ್ತರಾರ್ಧದವನೆಂದು ಹೇಳಬೇಕಾಗುವುದು.

ಇವನು "**ಜಾನಕೀಹರಣ**"ವೆಂಬ ಮಹಾಕಾವ್ಯವನ್ನು ಬರೆದಿರುವನು. ಇದರಲ್ಲಿ ೨೫ ಸರ್ಗಗಳಿರುವುವಾದರೂ ಕೊನೆಯ ಹತ್ತು ಸರ್ಗಗಳು ಉಪಲಬ್ಧವಿಲ್ಲವೆಂದೂ ಪ್ರಕೃತ ದೊರೆತಿರುವುದಾದ ಹದಿನೈದು ಸರ್ಗಗಳ ಪೈಕಿ ಹದಿನೈದನೆಯ ಸರ್ಗವು ಅಪೂರ್ಣವಾಗಿರುವುದೆಂದೂ ತಿಳಿಯಬರುತ್ತದೆ. ಪ್ರಕೃತ ಅಚ್ಚಾಗಿ ನಮಗೆ ದೊರೆತಿರುವ 'ಜಾನಕೀಹರಣಕಾವ್ಯ'ದಲ್ಲಿ ಹತ್ತು ಸರ್ಗಗಳು ಮಾತ್ರವಿರುವುವು. ಪ್ರತಿ ಸರ್ಗದ ಕೊನೆಯಲ್ಲಿ—

"ಇತಿ ಜಾನಕೀಹರಣೇ ಮಹಾಕಾವ್ಯೇ ಸಿಂಹಳಕವೇರತಿಶಯ
ಭೂತಸ್ಯ ಕುಮಾರದಾಸಸ್ಯ ಕೃತೌ"

ಎಂದಿರುವುದು. ಕಥಾಭಾಗವು ವಾಲ್ಮೀಕಿರಾಮಾಯಣದ ಮೂಲಕಥೆಯನ್ನು ಬಹುತರ ಅನುಸರಿಸಲ್ಪಟ್ಟು ಕವಿಸಮಯಕ್ಕೆ ತಕ್ಕಂತೆ ಅಲ್ಲಲ್ಲಿ ಕೊಂಚ ಮಾರ್ಪಡಿಸಿ ರಾಮನು ಅರಣ್ಯದಲ್ಲಿ ಪಂಚವಟಿಯಲ್ಲಿರುತ್ತಿದ್ದಾಗ ರಾವಣನು ಆಜೀವಕವೇಷದಿಂದ ಜಾನಕೀಹರಣವನ್ನು ಮಾಡಿದವರೆಗೆ ಬರೆಯಲ್ಪಟ್ಟಿದೆ.

ರಾಮಾಭಿಷೇಕವೆಂಬ ಗ್ರಂಥದ ೨೫ನೆಯ ಸರ್ಗದ ಕೊನೆಯ ಶ್ಲೋಕದಲ್ಲಿ ತನ್ನನ್ನು ಕುಮಾರಪರಿಚಾರಕನೆಂದು ವಿಶೇಷಿಸಿ ಹೇಳಿಕೊಂಡಿರುವುದರಿಂದ ರಾಮಾಭಿಷೇಕವೆಂಬ ಗ್ರಂಥವನ್ನು ಇವನೇ ಬರೆದಿರಬಹುದೆಂಬ ಧ್ವನಿಯು ತೋರುತ್ತದೆ. ಈ ಗ್ರಂಥವು ಯಾವುದೆಂಬುದು ತಿಳಿಯದು. ಕುಮಾರದಾಸನು ಜಾನಕೀಹರಣಕಾವ್ಯವನ್ನು ದುಃಖಾಂತವಾಗಿ ಮುಗಿಸಿದುದಾಗಿ ಭಾವಿಸಿ ರಾಮಾಭಿಷೇಕವೆಂಬ ಮತ್ತೊಂದು ಗ್ರಂಥವನ್ನು ಬರೆದು ಮಂಗಳಾಂತವಾಗಿ ಮುಗಿಸಿರಬಹುದೆಂಬುದಾಗಿಯೂ ಧ್ವನಿ ಕೊಡುತ್ತದೆ. ಕಾವ್ಯವು ದೊರೆಯದೆ ಇರುವುದರಿಂದ ಯಾವುದನ್ನೂ ನಿಶ್ಚಯಿಸಿ ಹೇಳಲಾಗುವುದಿಲ್ಲ.

ಜಾನಕೀಹರಣದಲ್ಲಿ ಮೊದಲನೆಯ ಸರ್ಗದಲ್ಲಿನ ಅಯೋಧ್ಯಾನಗರವರ್ಣನೆ (೧--೧೧) ಶ್ರಾವಣನೆಂಬ ಮುನಿಕುಮಾರನ ಹೃದಯದ್ರಾವಕ ಭಾಷಣ (೬೫--೯೦) ಮೂರನೆಯ ಸರ್ಗದ ವಸಂತವರ್ಣನ (೧--೧೩) ಜಲಕೇಳಿವರ್ಣನ (೧೪--೨೪) ಇವೇ ಮೊದಲಾದುವು ಎಂಟನೆಯ ಸರ್ಗದ ಸೂರ್ಯಾಸ್ತವರ್ಣನ, ಚಂದ್ರೋದಯವರ್ಣನ, ರಾತ್ರಿವರ್ಣನಗಳು (೫೫--೯೨) ಅತ್ಯಂತ ಸುಂದರ ವಾಗಿರುವುವು.

ಇದರ ಶೈಲಿಯು ಭಾರವಿಯ ಕಿರಾತಾರ್ಜುನೀಯ, ಮಾಘ ಕವಿಯ ಶಿಶುಪಾಲವಧೆ ಇವುಗಳನ್ನು ಹೋಲುವುದಾಗಿದೆ. ಕುಮಾರದಾಸನು ಮಹಾ ಕವಿಯಾಗಿದ್ದನೆಂಬುದು ರಾಜಶೇಖರಕವಿಯ ಮತ್ತು ಜಲ್ಹಣನಸೂಕ್ತಿಮು ಕ್ತಾವಳಿಯಲ್ಲಿ ಹೇಳಿರುವ—

**ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ ।**
**ಕವಿಃ ಕುಮಾರದಾಸಶ್ಚ ರಾವಣಶ್ಚ ಯದಿ ಕ್ಷಮಃ ॥**

ಎಂಬ ಶ್ಲೋಕದಿಂದ ವ್ಯಕ್ತವಾಗುತ್ತದೆ. ಕಿರಾತಾರ್ಜುನೀಯಾದಿ ಕಾವ್ಯಗ ಳಲ್ಲಿರುವಂತೆ ಯಮಕ ಮತ್ತು ಚಿತ್ರಗಳು ಇದರಲ್ಲಿಯೂ ಕಂಡುಬರುವುವು. ಇವನ ಕಾವ್ಯವು ಗೌಡೀಶೈಲಿಯಲ್ಲಿ ಬರೆಯಲ್ಪಟ್ಟಿರುವುದು. ಗೌಡೀಶೈಲಿಯ ಲ್ಲಿರುವ ವಿಕಟಾಕ್ಷರಬಂಧಗಳು ಇದರಲ್ಲಿ ಹೆಚ್ಚಾಗಿರುವಂತೆ ಕಂಡುಬರುವು ದಿಲ್ಲ. ಇವನ ಕಾವ್ಯದಲ್ಲಿ ಪ್ರಸಾದಗುಣವು ಮುಖ್ಯವಾದುದಾಗಿರುವುದು. ಇದರಲ್ಲಿ ಕೆಲವು ವರ್ಣನೆಗಳು ಸ್ವಾಭಾವಿಕ ವರ್ಣನೆಯನ್ನು ಮೀರಿರುವಂತೆ ತೋರುವುದು. ಇದಕ್ಕೆ ಮೊದಲನೆಯ ಸರ್ಗದ ಅಯೋಧ್ಯೆಯ ವರ್ಣನೆಯೂ ಆರನೆಯ ಸರ್ಗದ ಮಿಥಿಲಾನಗರ ವರ್ಣನೆಯೂ ರಾಮರಾಕ್ಷಸರ ಯುದ್ಧ ವರ್ಣನೆಯೂ ನಿದರ್ಶನವಾಗಿರುವುವು.

ಜಾನಕೀಹರಣಕಾವ್ಯದಲ್ಲಿ—

**ಸಪದಿ ಪಂಕ್ತಿವಿಹಂಗಮನಾಮಭೃ**
**ತ್ತನಯಸಂವಲಿತಂ ಬಹುಶಾಲಿನಾ ।**
**ವಿಪುಲಪರ್ವತವರ್ಷಿಶಿತೈಃ ಶರೈಃ**
**ಪ್ಲವಗಸೈನ್ಯಮುಲೂಕಜಿತಾ ಜಿತಂ ॥**

ಎಂಬ ಶ್ಲೋಕವನ್ನು ವಾಮನನು ತನ್ನ ಕಾವ್ಯಾಲಂಕಾರಸೂತ್ರವೃತ್ತಿಯಲ್ಲಿ—

"ಕಲ್ಪಿತಾರ್ಥಂ ನೇಯಾರ್ಥಂ"

ಎಂಬ ೧೩ನೆಯ ಸೂತ್ರಕ್ಕೆ ಉದಹರಿಸಿಕೊಂಡಿರುವನು.

ಮಹಾಕವಿಯಾದ ಕ್ಷೇಮೇಂದ್ರನು ತನ್ನ ಔಚಿತ್ಯವಿಚಾರಚರ್ಚಾ ಎಂಬ ಗ್ರಂಥದಲ್ಲಿ—

ಅಯಿ! ವಿಜಹೀಹಿ ದೃಢೋಪಗೂಹನಂ
ತ್ಯಜ ನವಸಂಗಮಭೀರು ವಲ್ಲಭೇ ।
ಅರುಣಕರೋದ್ಗಮ ಏಷ ವರ್ತತೇ
ವರತನು ಸಂಪ್ರವದಂತಿ ಕುಕ್ಕುಟಾಃ ॥

ಎಂಬ ಶ್ಲೋಕವು ಕುಮಾರದಾಸನದೆಂದು ಹೇಳಿರುವನು. ಇದೇ ಶ್ಲೋಕವು ವರ್ಧಮಾನನ ಗಣರತ್ನಮಹೋದಧಿಯಲ್ಲಿಯೂ ಭೋಜನ ಸರಸ್ವತೀಕಂಠಾಭರಣದಲ್ಲಿಯೂ ಉದಹರಿಸಲ್ಪಟ್ಟಿದೆ.

ರಾಯಮುಕುಟನು ಬರೆದಿರುವ ಅಮರಕೋಶವ್ಯಾಖ್ಯಾನವಾದ "ಪದಚಂದ್ರಿಕಾ" ಎಂಬ ಗ್ರಂಥದಲ್ಲಿ ಜಾನಕೀಹರಣದ ಅನೇಕ ಉದಾಹರಣೆಗಳು ದೊರೆಯುವುವು. ಪದಚಂದ್ರಿಕೆಯು ಕ್ರಿ. ಶ. ೧೫ನೆಯ ಶತಮಾನದಲ್ಲಿ ಬರೆಯಲ್ಪಟ್ಟು ಕ್ರಿ. ಶ. ೧೫–೧೬ನೆಯ ಶತಮಾನಗಳಲ್ಲಿ ಜಾನಕೀಹರಣವು ಬಹಳ ಪ್ರಚಾರದಲ್ಲಿದ್ದಿರಬೇಕೆಂದೂ ತಿಳಿಯಬರುತ್ತದೆ.

ಜಾನಕೀಹರಣದ ಕೆಲವು ಉದಾಹರಣೆಗಳು—

ಶಬ್ದವೇಧಶಾಸ್ತ್ರದಲ್ಲಿ ವಿಚಕ್ಷಣನಾದ ದಶರಥಮಹಾರಾಜನು ಬೇಟೆಗೆ ಹೋಗಿ ಕಾಡಿನಲ್ಲಿ ಋಷಿಪುತ್ರನು ನೀರು ತುಂಬುತ್ತಿದ್ದಾಗ ಕೇಳಬಂದ ಗುಡುಗುಡುಶಬ್ದವನ್ನು ಕೇಳಿ ಆನೆಯೆಂದರಿತು ಬಾಣಪ್ರಯೋಗ ಮಾಡಲು ಅದು ಆ ಋಷಿಕುಮಾರನಿಗೆ ತಗುಲಿದಾಗ ಉಂಟಾದ ಆಕ್ರಂದನ ಶಬ್ದವನ್ನು ಕೇಳಿ ಅಲ್ಲಿಗೆ ಹೋಗಿ ನೋಡಿದಾಗ ಋಷಿಪುತ್ರನು ಹೇಳುವುದು—

ಎಲೈ! ಧನುರ್ಧಾರಿ!!

ತ್ವಯಾ ತ್ವನಾಥಸ್ಯ ವಿಚಕ್ಷುಷಃ ಕಿಂ
ಭಗ್ನೋಽಯಮಾಲಂಬನದಂಡ ಏಕಃ ।
ವನೇ ಜರಾವೇಶಜಡೀಕೃತಸ್ಯ
ಗುರುದ್ವಯಸ್ಯ ವ್ರತಜೀರ್ಣಮೂರ್ತೇಃ ॥ ೧—೭೭ ॥

ವ್ರತೋಪವಾಸಾದಿ ಕರ್ಮನಿಷ್ಠೆಯಿಂದ ಗಳಿತಶರೀರಿಗಳಾಗಿಯೂ, ವಾರ್ಧಿಕ್ಯಾತಿಶಯದಿಂದ ವಿಕಲೇಂದ್ರಿಯಗಳುಳ್ಳವರಾಗಿಯೂ, ದೃಷ್ಟಿವಿಹೀನರಾಗಿಯೂ, ಅಸಹಾಯರಾಗಿಯೂ, ಪರಮಪೂಜ್ಯರಾಗಿಯೂ ಇರುವ ತಾಯಿತಂದೆಗಳ ಏಕಮಾತ್ರಾವಲಂಬನ ದಂಡದಂತಿರುವ ನನ್ನ ಮೇಲೆ ಬಾಣಪ್ರಯೋಗವನ್ನೇಕೆ ಮಾಡಿರುವೆ?

ವನೇಷು ವಾಸೋ ಮೃಗಯೂಥಮಧ್ಯೇ
ಕ್ರಿಯಾ ಚ ವೃದ್ಧಾಂಧಜನಸ್ಯ ಪೋಷಃ ।
ವೃತ್ತಿಶ್ಚ ವನ್ಯಂ ಫಲಮೇಷು ದೋಷಃ
ಸಂಭಾವಿತಃ ಕೋ ಮಯಿ ಘಾತಹೇತುಃ? ॥ ೧—೭೮ ॥

ಅರಣ್ಯದಲ್ಲಿ ವನ್ಯಪಶುಗಳ ಮಧ್ಯದಲ್ಲಿ ವಾಸಮಾಡಿಕೊಂಡು ವೃದ್ಧರಾದ ಅಂಧಕರಾದ ತಾಯಿತಂದೆಗಳನ್ನು ಪೋಷಿಸುತ್ತ ಇಲ್ಲಿ ದೊರಕುವುವಾದ ಹಣ್ಣುಹಂಪಲುಗಳಿಂದ ತಣಿಸುತ್ತಿದ್ದ ನನ್ನಲ್ಲಿ ಯಾವ ತಪ್ಪನ್ನಾರೋಪಿಸಿ ಹೀಗೆ ಶರಸಂಧಾನವನ್ನು ಮಾಡಿರುವೆ?

ತರುತ್ವಚೋಽಯಂ ಕಠಿನಾ ವಸಾನೋ
ವರ್ಷೇಷು ಶೀತೋಷ್ಣನಿಪೀತಸಾರಃ ।
ಅಸ್ವಾದುವನ್ಯಾಶನಜೀರ್ಣಶಕ್ತಿಃ
ಪಾತ್ರಂ ಕೃಪಾಯಾಸ್ತವ ವಧ್ಯಭೂತಃ ॥ ೧—೮೦ ॥

ಅರಣ್ಯದಲ್ಲಿನ ಮರಗಳ ಗಡುಸಾದ ತೊಗಟೆಯಿಂದ ಮಾಡಲ್ಪಟ್ಟ ವಸ್ತ್ರಗಳನ್ನು ಹೊದೆದು ಅಲ್ಲಿನ ವರ್ಷಾತಪಗಳಿಗೆ ಸಿಲ್ಕಿ ಕೃಶನಾಗಿ ಅರುಚಿಯಾದ ವನ್ಯಾಹಾರದಿಂದ ಶಕ್ತಿಗುಂದಿದ ನಾನು ಕೃಪೆಗೆ ಪಾತ್ರನಾಗದೆ ವಧೆಗೆ ಗುರಿಯಾದುದು ಹೇಗೆ?

ಜೀರ್ಣೋ ಜತುನ್ಯಾಸನಿರುದ್ಧರಂಧ್ರಃ
ಕುಂಭಶ್ಚ ಮೌಂಜೀತರುವಲ್ಕಲಶ್ಚ ।
ಏತೇಷು ಯನ್ಮಾಂ ವಿನಿಹತ್ಯ ಗಮ್ಯಂ
ತದ್ಗೃಹ್ಯತಾಮಸ್ತು ಭವಾನ್ ಕೃತಾರ್ಥಃ ॥ ೧—೮೧ ॥

ಏನೈ! ನನ್ನಲ್ಲಿರುವ ಈ ಘಟವು (ಮಣ್ಣಿನ ಗಡಿಗೆ) ಹಳೆಯದಾದುದರಿಂದ ಅನೇಕ ಛಿದ್ರಗಳಿಂದ ಕೂಡಿದುದಾಗಿ ಅರಗಿನಿಂದ ಮುಚ್ಚಿ ಸೋರದಂತೆ ಮಾಡಲ್ಪಟ್ಟಿದೆ. ನನ್ನ ಉಡುಪುಗಳಾದರೋ ವಲ್ಕಲಗಳಿಂದ (ಮರದನಾರಿನಿಂದ) ಮಾಡಲ್ಪಟ್ಟಿರುವುವು. ನನ್ನ ಕಟಿಬಂಧವಾದರೋ ನೊಜೀಹುಲ್ಲಿನದು. ಇವುಗಳೇ ನನ್ನ ಆಸ್ತಿಗಳು. ನನ್ನನ್ನು ಕೊಂದಬಳಿಕ ಲಭ್ಯವಾಗುವ ಈ ವಸ್ತುಗಳಲ್ಲಿ ನಿನಗಾವುದು ಪ್ರಿಯವಾದುದೋ ಅದನ್ನೀಗಲೇ ತೆಗೆದುಕೊಂಡು ಕೃತಾರ್ಥನಾಗು.

ಸೀತಾಪರಿಣಯಾನಂತರ ದಶರಥನು ತನ್ನ ಮಕ್ಕಳೊಡನೆಯೂ ಸೊಸೆಯರೊಡನೆಯೂ ಮಿಥಿಲೆಯನ್ನು ಬಿಟ್ಟು ಅಯೋಧ್ಯೆಗೆ ಹಿಂದಿರುಗುವಾಗ ಜನಕರಾಜನು ಮಗಳಿಗೆ ಹೇಳಿದ ಬುದ್ಧಿವಾದ—

* ಸ್ತ್ರಿಯೋ ನ ಪುಂಸಾಂ ಉದಯಸ್ಯ ಸಾಧನಂ
ತ ಏವ ತದ್ಧಾಮವಿಭೂತಿಹೇತವಃ ।

* ಇದೇ ಅಭಿಪ್ರಾಯದ ಒಂದು ಶ್ಲೋಕವು ಕುಮಾರಸಂಭವದಲ್ಲಿ ಕಂಡುಬರುವುದು—

ಶಶಿನಾ ಸಹ ಯಾತಿ ಕೌಮುದೀ
ಸಹ ಮೇಘೇನ ತಡಿತ್ಪ್ರಲೀಯತೇ ।

ತಡಿದ್ವಿಯುಕ್ತೋಽಪಿ ಘನಃಪ್ರಜೃಂಭತೇ
ವಿನಾ ನ ಮೇಘಂ ವಿಲಸಂತಿ ವಿದ್ಯುತಃ ॥ ೯—೫ ॥

ಎಲೌ ಜಾನಕಿ!

ಸ್ತ್ರೀಯರು ಪುರುಷರ ಉತ್ಕರ್ಷತೆಗೆ ಸಾಧನರಲ್ಲ. ಆದರೆ ಸ್ತ್ರೀಯರ ಅಭ್ಯುದಯಕ್ಕೆ ಪುರುಷರೇ ಕಾರಣರು. ಹೇಗೆಂದರೆ—ಮಿಂಚಿಲ್ಲದಿದ್ದರೂ ಮೇಘವು ಗುಡುಗುಟ್ಟುವುದು. ಆದರೆ ಮಿಂಚುಗಳು ಗುಡುಗಿಲ್ಲದೆ ಮಿಂಚವು.

ಗತಾಪಿ ಭರ್ತ್ರೇ ಪರಿಕೋಪಮಾಯತಂ
ಗಿರಃ ಕೃಥಾ ಮಾ ಪರುಷಾರ್ಥದೀಪನೀಃ । †
ಕುಲಸ್ತ್ರಿಯೋ ಭರ್ತೃಜನಸ್ಯ ಭರ್ತ್ಸನೇ
ಪರಂ ಹಿ ಮೌನಂ ಪ್ರವದಂತಿ ಸಾಧನಂ ॥ ೯—೬ ॥

ಎಲೌ! ನೀನು ಒಂದು ವೇಳೆ ನಿನ್ನ ಗಂಡನಲ್ಲಿ ಕೋಪಗೊಳ್ಳುವಳಾದರೆ ಪರುಷವಾಕ್ಯಗಳನ್ನಾಡದಿರು. ಅಥವಾ ಒಂದುವೇಳೆ ಗಂಡನನ್ನು ಭರ್ತ್ಸನ ಮಾಡಬೇಕಾದರೆ ಮೌನವೇ ಸರ್ವೋತ್ತಮವಾದ ಸಾಧನವೆಂದು ಕುಲಸ್ತ್ರೀಯರು ಹೇಳುವರು.

ಪತಿವ್ರತಾ ವಶ್ಯಮವಶ್ಯಮಂಗನಾ
ಕರೋತಿ ಶೀಲೇನ ಗುಣಸ್ಪೃಹಂ ಪತಿಂ ।
ವಿನಷ್ಟಚಾರಿತ್ರಗುಣಾ ಗುಣೈಷಿಣಃ
ಪರಾಭವಂ ಭರ್ತುರುಪೈತಿ ದುಸ್ತರಂ ॥ ೯—೭ ॥

ಪತಿವ್ರತೆಯಾದವಳು ತನ್ನ ಸೌಶೀಲ್ಯದಿಂದ ಗಂಡನನ್ನು ಅಧೀನನನ್ನಾಗಿ ಮಾಡಿಕೊಳ್ಳುವಳು. ಕುಶೀಲಳು ಗಂಡನಿಂದ ಅಪಾರವಾದ ಅವಮಾನವನ್ನೇ ಹೊಂದುವಳು.

ಅಲಂ ತ್ವಯಿ ವ್ಯಾಹೃತಿವಿಸ್ತರೇಣ ಮೇ
ಕುರುಷ್ವ ತದ್ಯಚ್ಚರಿತಂ ತ್ವದಾಶ್ರಯಂ ।
ಶ್ರುತಿಂ ಪ್ರಯಾತಂ ಜರಸೈವ ಜರ್ಜರಂ
ಸಹಸ್ರಧೇದಂ ಹೃದಯಂ ನ ದಾರಯೇತ್ ॥ ೯—೮ ॥

ಮಗಳೆ! ನಾನು ನಿನಗೆ ಹೆಚ್ಚಿಗೆ ಹೇಳಬೇಕಾದುದಿರುವುದಿಲ್ಲ. ವೃದ್ಧಾಪ್ಯದಿಂದ ಕಂಗಾಲಾಗಿರುವ ನನ್ನ ಕಿವಿಯಲ್ಲಿ ನಿನ್ನ ವಿಚಾರವಾಗಿ ಯಾವ ವಿಧ

ಪ್ರಮದಾಃ ಪತಿವರ್ತ್ಮಗಾ ಇತಿ
ಪ್ರತಿಪನ್ನಂ ಹಿ ವಿಚೇತನೈರಪಿ ॥ ೪—೩೩ ॥

† ಭರ್ತರ್ವಿಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ ॥ ೪—೧೮ ॥

—ಶಾಕುಂತಲ ನಾಟಕ

ವಾದ ಅಸದ್ವಾರ್ತೆಯು ಬಿದ್ದು ನನ್ನೆದೆಯೊಡೆದು ದುಃಖಿಸದ ಹಾಗೆ ಯಾವಾಗಲೂ ನೀನು ಸಚ್ಚರಿತಾಶ್ರಯಳಾಗಿರು.

ಅಯಂ ತ್ವದೇಕಶ್ರವಣೋ ಮನೋರಥೋ
ವೃಥಾದ್ಯ ದೈವಾದಪಿ ನಾಮ ನೋ ಭವೇತ್ ।
ಇತಿ ಪ್ರವಕ್ತುರ್ಜರತೋ ನಿರಾಸಿರೇ
† ನಿಗೃಹ್ಯ ಕಂಠಂ ವಚನಾನಿ ಮನ್ಯುನಾ ॥ ೯—೯ ॥

ಎಲೌ! ಸೀತೆ! ಇದುವರೆಗೆ ನಿನಗೆ ನಾನು ಹೇಳಿದ ಬುದ್ಧಿವಾದಗಳು ದೈವಾನುಗ್ರಹದಿಂದ ನಿಷ್ಫಲವಾಗಲಾರವಷ್ಟೆ? ಎಂದು ಹೇಳುವ ವೃದ್ಧನ ಕಂಠವನ್ನು ಮಾತುಗಳು ಕೋಪಗೊಂಡು ಹಿಡಿದು ನಿಂತುವು. (ದುಃಖದಿಂದ ಮುಂದೆ ಮಾತು ಹೊರಡಲಿಲ್ಲವೆಂದು ತಾತ್ಪರ್ಯವು.)



## ಭಟ್ಟಿ

ಇವನು ವಲಭೀಪುರದವನು. ಶ್ರೀಸ್ವಾಮಿಯೆಂಬವನ ಮಗನು, ಬ್ರಾಹ್ಮಣನು, ವ್ಯಾಕರಣ ಪಂಡಿತನು. ಇವನು "ರಾವಣ ವಧೆ" ‡ (ಭಟ್ಟಿಕಾವ್ಯ)ಎಂಬ ಮಹಾಕಾವ್ಯವನ್ನು ವಲಭಿಯ ರಾಜನಾದ ಶ್ರೀಧರಸೇನನ ಆಶ್ರಯದಲ್ಲಿ ಬರೆದುದಾಗಿ ಕಾವ್ಯಾಂತ್ಯದಲ್ಲಿ ಕಂಡುಬರುವ—

ಇತಿ ವಲಭೀವಾಸ್ತವ್ಯಸ್ಯ ಶ್ರೀ ಸ್ವಾಮಿಸೂನೋರ್ಭಟ್ಟ ಮಹಾ
ಬ್ರಾಹ್ಮಣಸ್ಯ ಮಹಾವೈಯಾಕರಣಸ್ಯ ಕೃತೌ ರಾವಣವಧೇ....

ಎಂಬುದರಿಂದಲೂ

ಕಾವ್ಯಮಿದಂ ವಿಹಿತಂ ಮಯಾ ವಲಭ್ಯಾಂ
ಶ್ರೀಧರಸೇನನರೇಂದ್ರಪಾಲಿತಾಯಾಂ ।
ಕೀರ್ತಿರತೋ ಭವತಾತ್ ನೃಪಸ್ಯ ತಸ್ಯ
ಪ್ರೇಮಕರಃ ಕ್ಷಿತಿಪೋ ಯತಃ ಪ್ರಜಾನಾಂ ॥

ಎಂಬ ಶ್ಲೋಕದಿಂದಲೂ ವ್ಯಕ್ತವಾಗುವುದು.

---

† ಕಂಠಃ ಸ್ತಂಭಿತಬಾಷ್ಪವೃತ್ತಿಕಲುಷಶ್ಚಿಂತಾಜಡಂ ದರ್ಶನಂ ॥
—ಶಾಕುಂತಲಾ ॥ ೪—೬ ॥

‡ ಇದನ್ನು ಭಟ್ಟಿಯು ಬರೆದನಾದುದರಿಂದ ಭಟ್ಟಿಕಾವ್ಯವೆಂದು ಹೇಳುವ ವಾಡಿಕೆಯಾದುದು.

ಈ ಶ್ಲೋಕದ ಪ್ರಕಾರ ವಲಭಿಯನ್ನು ಶ್ರೀಧರಸೇನನೆಂಬ ರಾಜನು ಆಳಿದುದಾಗಿ ಸ್ಪಷ್ಟಪಡುವುದು. ಆದರೆ ಈ ಕಾವ್ಯ ವ್ಯಾಖ್ಯಾನಕಾರನಾದ ಜಯಮಂಗಳನು ಈ ಶ್ಲೋಕಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ—

"ಮಯೇದಂ ಕಾವ್ಯಂ ವಿಹಿತಂ–ಕೃತಂ **ಶ್ರೀಧರಸೂನುನಾ ನರೇಂದ್ರನಾಮ್ನಾ** ನೃಪೇಣ ಪಾಲಿತಾಯಾಂ-ರಕ್ಷಿತಾಯಾಂ ವಲಭ್ಯಾಂ–ವಲಭೀನಾಮಪುರ್ಯಾಂ ಅತ ಏವ ಕಾವ್ಯವಿಧಾನಾಯ ಯಾಕೀರ್ತಿಃ ಸಾ ತಸ್ಯೈವ ರಾಜ್ಞೋ ಭವತಾತ್"

ಎಂದು ಹೇಳಿರುವನು. †

ಇದರಿಂದ ಶ್ರೀಧರನ ಮಗನಾದ ನರೇಂದ್ರನೆಂಬ ರಾಜನು ವಲಭಿಯನ್ನು ಆಳಿದುದಾಗಿ ಹೇಳಿದಂತಾಯಿತು. ಹೀಗಾಗಿ ಶ್ಲೋಕಾರ್ಥವೂ ವ್ಯಾಖ್ಯಾನಾಭಿಪ್ರಾಯವೂ ಭಿನ್ನವಿಸುವುದು. ವಲಭಿಯರಾಜನು ಶ್ಲೋಕದಲ್ಲಿ ಹೇಳಿರುವಂತೆ ಶ್ರೀಧರಸೇನನೋ ಅಥವಾ ವ್ಯಾಖ್ಯಾನದಲ್ಲಿರುವಂತೆ ಶ್ರೀಧರನ ಮಗ ನರೆಂದ್ರನೋ ಯಾರೆಂಬ ವಿಚಾರದಲ್ಲಿ ಸಂಶಯವು ತೋರುವುದು. ಈ ವಿಚಾರದಲ್ಲಿ—

(೧) ಪ್ರೊ. ಮ್ಯಾಕಡಾನಲ್ಲರವರು ವಲಭಿಯಲ್ಲಿ ಶ್ರೀಧರಸೇನರಾಜನ ಆಶ್ರಯದಲ್ಲಿ ಸುಮಾರು ಕ್ರಿ. ಶ. ೭ ನೆಯ ಶತಮಾನದಲ್ಲಿ ಭಟ್ಟಿಕಾವ್ಯವು ಬರೆಯಲ್ಪಟ್ಟುದಾಗಿಯೂ ‡

(೨) ಪ್ರೊ. ಯಂ. ಕೃಷ್ಣಮಾಚಾರ್ಯರವರು ವಲಭಿಯಲ್ಲಾಳಿದ ನಾಲ್ಕನೆಯ ಶ್ರೀಧರಸೇನನ ಆಶ್ರಯದಲ್ಲಿ ಕವಿಯು ಈ ಕಾವ್ಯವನ್ನು ಬರೆದುದಾಗಿಯೂ ಇವನು ಕ್ರಿ. ಶ. ೬೪೧–೬೫೧ ರ ವರೆಗೆ ಇದ್ದುದಾಗಿಯೂ ಈ ರಾಜನಿಗೆ ಮಹಾರಾಜಾಧಿರಾಜನೆಂಬ ಬಿರುದು ಇದ್ದುದಾಗಿಯೂ ¶

(೩) ಪ್ರೊ. ವೀಬರವರು– ವಲಭಿಯಲ್ಲಿ ಶ್ರೀಧರಸೇನನ ಆಶ್ರಯದಲ್ಲಿ ಸುಮಾರು ಕ್ರಿ. ಶ. ೬ ಅಥವಾ ೭ ನೆಯ ಶತಮಾನದಲ್ಲಿ ೨೨ ಸರ್ಗಗಳುಳ್ಳ ಭಟ್ಟಿಕಾವ್ಯವು ರಚಿಸಲ್ಪಟ್ಟಿತೆಂದೂ *

(೪) ಡಾ. ಕೀತರವರು-ವಲಭಿಯಲ್ಲಿ ಕ್ರಿ. ಶ. ೭ ನೆಯ ಶತಮಾನದ ಮಧ್ಯ

† *Bhattikavya Nirnayasagara* Edition P.

‡ Prof. Macdonell's History of Sanskrit Literature [P.329

¶ History of Classic Sanskrit Literature P. 39.

* History of Indian Literature P. 196. Foot Note.

ದಲ್ಲಿ ಶ್ರೀಧರಸೇನನ ಆಶ್ರಯದಲ್ಲಿ ಭಟ್ಟಿಕಾವ್ಯವು ಬರೆಯಲ್ಪಟ್ಟುದಾಗಿಯೂ §

(೫) ಪ್ರೊ. ತರಣೀಚರಣ ಚೌಧುರಿಯವರು- ಭಟ್ಟಿಕಾವ್ಯವು ಸುಮಾರು ಕ್ರಿ. ೭ ನೆಯ ಶತಮಾನದಲ್ಲಿ ಬರೆಯಲ್ಪಟ್ಟಿತೆಂದೂ† ಹೇಳುವರು.

ಇವರೆಲ್ಲರೂ ಏಕಕಂಠದಿಂದ "ಶ್ರೀಧರಸೇನ"ನೆಂದು ಹೇಳಿರುವರೇ ಹೊರತು 'ಶ್ರೀಧರಸೂನು ನರೇಂದ್ರ'ನೆಂದು ಯಾರೂ ಹೇಳಿರುವುದಿಲ್ಲ. ವ್ಯಾಖ್ಯಾನಕಾರನು ತಪ್ಪು ಬರೆದಿರಬಹುದೆಂಬ ಶಂಕೆಯುಂಟಾದರೆ ವ್ಯಾಖ್ಯಾನವನ್ನು ಬರೆಯುವವನು ಮೂಲದಲ್ಲಿರುವುದಕ್ಕೆ ವ್ಯಾಖ್ಯಾನವನ್ನು ಬರೆಯಬೇಕೇ ಹೊರತು ಮತ್ತೆ ಬೇರೆಯಿಲ್ಲ. ಆದುದರಿಂದ ವ್ಯಾಖ್ಯಾನಕ್ಕೆ ಸರಿಯಾಗಿ ಮೂಲವನ್ನು ತಿದ್ದುವಿಕೆಯು ಸಾಧುವಾದುದಲ್ಲ. ಇದಕ್ಕೆ ವ್ಯತಿರೇಕವಾದ ಚರಿತ್ರಾಧಾರಗಳು ಸಿಗುವವರೆಗೂ ಭಟ್ಟಿಯ ಆಶ್ರಯದಾತನು ಶ್ರೀಧರಸೇನನೆಂದೇ ಹೇಳಬೇಕಾಗಿದೆ.

**ಕಾಲ:—** ಮೇಲೆ ಹೇಳಿದ ಸುಪ್ರಸಿದ್ಧ ಚಾರಿತ್ರಕರೆಲ್ಲರೂ ಭಟ್ಟಿಯು ಕ್ರಿ. ಶ. ೭ ನೆಯ ಶತಮಾನದವನಾಗಿರಬೇಕೆಂದೂ ಇವನ ಆಶ್ರಯದಾತನಾದ ನಾಲ್ಕನೆಯ ಶ್ರೀಧರಸೇನನು ಕ್ರಿ. ಶ. ೬೪೧ ರಿಂದ ೬೫೧ರ ವರೆಗೆ ಆಳಿದನೆಂದೂ ಹೇಳಿರುವುದರಿಂದ ಭಟ್ಟಿಯು ಕ್ರಿ. ಶ. ೭ ನೆಯ ಶತಮಾನದಲ್ಲಿದ್ದನೆಂಬುದು ಸ್ಪಷ್ಟವಾಗುವುದು.

ಕವಿಯು ರಾಮಾಯಣದ ಕಥಾಭಾಗವನ್ನು ತೆಗೆದುಕೊಂಡು ರಾವಣವಧೆಗೆ ಬೇಕಾದ ರಾಮಾವತಾರ ಮೊದಲಾದುವನ್ನು ವಸ್ತುವಾಗಿಟ್ಟುಕೊಂಡು ೨೨ ಸರ್ಗಗಳುಳ್ಳ ಕಾವ್ಯವನ್ನು ಬರೆದು **ರಾವಣವಧೆ** ಎಂದು ಕರೆದಿರುವನು. ವ್ಯಾಕರಣವಿಷಯದ ಈ ಗ್ರಂಥವು ಹೇಗೆ ಪಂಡಿತ ಮಾನ್ಯವೋ ಹಾಗೆಯೇ ಕಾವ್ಯಮರ್ಯಾದೆಯಲ್ಲಿಯೂ ಅದ್ವಿತೀಯವಾಗಿರುವುದು. ಶೈಲಿಯು ಅತ್ಯಂತ ಪ್ರೌಢವಾದುದು. ಬ್ರಾಹ್ಮಣಕುಲಾವತಂಸನಾದ ವೈಯಾಕರಣನಾದ ಭಟ್ಟಿಯು ಬರೆದುದು. ಗ್ರಂಥವು ಪಂಡಿತಮಾನ್ಯವೂ ರಸಿಕರಂಜಕವೂ ಆದುದು. ಕವಿತಾಧೋರಣೆಯು ರಸಭೂಯಿಷ್ಠವಾದುದಾಗಿರುವುದರಿಂದ ಈ ಕಾವ್ಯವು ಕಲಾಚತುರರ ಮೂಲಾಧಾರ, ವೈಯ್ಯಾಕರಣರ ಕೈಗನ್ನಡಿ, ನವರಸಗಳ ಭಾಂಡಾಗಾರವೆಂದರೆ ಅತ್ಯುಕ್ತಿಯಾಗದು.

§ Classical Sanskrit Literature P. 53.
† History of Sanskrit Literature P. 100.

ಕವಿಯು ತನ್ನ ಗ್ರಂಥದಲ್ಲಿ ಲಕ್ಷ್ಯಲಕ್ಷಣಗಳನ್ನು ಒಂದೇ ಕಡೆ ಬರೆದು ತೋರಿಸಬೇಕೆಂಬಾಸ್ಥೆಯಿಂದ ಇದನ್ನು ಬರೆದಿರುವುದಾಗಿ ತೋರುತ್ತದೆ. ರಾಮಾವತಾರವನ್ನು ಮೊದಲು ಮಾಡಿಕೊಂಡು ರಾವಣವಧಾನಂತರ ಅಯೋಧ್ಯಾಪ್ರತ್ಯಾಗಮನದ ವರೆಗಿನ ರಾಮಚರಿತೆಯನ್ನು ಬರೆದು ಗ್ರಂಥ ಸಮಾಪ್ತಿಯನ್ನು ಮಾಡಿರುವನು. ಇದರಲ್ಲಿ ಶಬ್ದಲಕ್ಷಣ ಕಾವ್ಯಲಕ್ಷಣವೆಂದು ಹೇಳಿ, ಪ್ರಕೀರ್ಣಾಧಿಕಾರ ತಿಙಂತಕಾಂಡಗಳು ಮೊದಲನೆಯದಾದ ಶಬ್ದಲಕ್ಷಣಕ್ಕೆ ಸೇರಿದುವೆಂದೂ ಪ್ರಸನ್ನಕಾಂಡವು ಕಾವ್ಯಲಕ್ಷಣಕ್ಕೆ ಸೇರಿದುದೆಂದೂ ಹೇಳಿ ಬಹುವಿಧ ಲಕ್ಷಣೋದಾಹರಣೆಗಳಿಂದ ವ್ಯವಹರಿಸಿರುವನು.

ಇದರಲ್ಲಿ ರಾಮಜನನದಿಂದ ಸೀತಾಹರಣದ ವರೆಗಿನ ೫ ಸರ್ಗಗಳು ಪ್ರಕೀರ್ಣಕಾಂಡಕ್ಕೆ ಸೇರಿದುವು.

ಸುಗ್ರೀವಾಭಿಷೇಕದಿಂದ ಮಾರುತಿಸಂಯಮದ ವರೆಗಿನ ಆರರಿಂದ ಒಂಭತ್ತು ಸರ್ಗಗಳು ಅಧಿಕಾರಕಾಂಡಕ್ಕೆ ಸೇರಿದುವು.

ಸೀತಾಭಿಜ್ಞಾನದರ್ಶನದಿಂದ ಸೇತುಬಂಧದ ವರೆಗಿನ ಹತ್ತರಿಂದ ಹದಿಮೂರನೆಯ ಸರ್ಗಗಳು ಪ್ರಸನ್ನಕಾಂಡಕ್ಕೆ ಸೇರಿದುವು.

ಸೇತುಬಂಧ ಮೊದಲು ಅಯೋಧ್ಯಾ ಪ್ರತ್ಯಾಗಮನದ ವರೆಗಿನ ಹದಿನಾಲ್ಕರಿಂದ ಇಪ್ಪತ್ತೆರಡು ಸರ್ಗಗಳ ಪೂರ್ತಿಯಾಗಿ ತಿಙಂತಕಾಂಡಕ್ಕೆ ಸೇರಿದುವು.

ಪ್ರಸನ್ನಕಾಂಡದಲ್ಲಿ (೧) ಅಲಂಕಾರದರ್ಶನ (ಶಬ್ದಾಲಂಕಾರ, ಅರ್ಥಾಲಂಕಾರ) (೨) ಮಾಧುರ್ಯಪ್ರದರ್ಶನ (೩) ಭಾವಿತತ್ವ (೪) ಭಾಷಾಸಮಾವೇಶಗಳೆಂಬ ನಾಲ್ಕುಪರಿಚ್ಛೇದಗಳು ಪಂಡಿತರು ಮೂಸಿಸುವಂತೆ, ರಸಿಕರು ತಲೆದೂಗುವಂತೆ, ಲಕ್ಷಣಸಂಪ್ರದಾಯವನ್ನು ವಿಾರದಂತೆ, ಹೃದಯಂಗಮವಾಗಿರುವಂತೆ ವರ್ಣಿಸಲ್ಪಟ್ಟಿರುವುವು.

ಇವನ ಗ್ರಂಥದ ಮಾದರಿಯ ಶ್ಲೋಕಗಳನ್ನು ಇಲ್ಲಿ ಉದಹರಿಸುವೆವು—

ಹಿರಣ್ಮಯೀ ಸಾಲಲತೇವ ಜಂಗಮಾ
ಚ್ಯುತಾ ದಿವಃ ಸ್ಥಾಸ್ನುರಿವಾಚಿರಪ್ರಭಾ ।
ಶಶಾಂಕಕಾಂತೇರಧಿದೇವತಾಕೃತಿಃ
ಸುತಾ ದದೇ ತಸ್ಯ ಸುತಾಯ ಮೈಥಿಲೀ ॥ ೨—೪೭ ॥

ಸಂಚರಿಸುತ್ತಿರುವ ಸುವರ್ಣಲತೆಯಂತೆ ಹೇಮಾಂಗಿನಿಯೂ, ಗಗನದ ಮೇಘಮಾಲೆಗಳಿಂದ ಜಾರಿ ಭೂಮಿಯಲ್ಲಿ ಬಿದ್ದು ಚಂಚಲವಿಲ್ಲದೆ ಸ್ಥಿರವಾಗಿರುವ

ವಿದ್ಯುಲ್ಲತೆಯಂತೆಯೂ ವಿಶ್ವಮೋಹನನಾದ ಚಂದ್ರನ(ಶೀತಕಿರಣನ)ಸರ್ವಸ್ವಾಧಿಷ್ಠಾತ್ರಿಯಂತೆಯೂ ಇರುವ ಸೀತೆಯನ್ನು ರಾಜರ್ಷಿಯಾದ ಜನಕನು ಶ್ರೀರಾಮಚಂದ್ರನಿಗೆ ಧಾರೆಯನ್ನೆರೆದನು.

> ದೂರಂ ಸಮಾರುಹ್ಯ ದಿವಃ ಪತಂತಂ
> ಭೃಗೋರಿವೇಂದುಂ ವಿಹಿತೋಪಕಾರಂ ।
> ಬದ್ಧಾನುರಾಗೋಽನುಪಪಾತ ತೂರ್ಣಂ
> ತಾರಾಗಣಃ ಸಂಭೃತಶುಭ್ರಕೀರ್ತಿಃ ॥ ೧೧—೨ ॥

ತನ್ನ ತೇಜಃಪುಂಜದಿಂದ ಈ ವಿಶ್ವವನ್ನೇ ಸೊಗಮಯವನ್ನಾಗಿ ಮಾಡುತ್ತಿದ್ದ ಕುಮುದಿನೀನಾಥನು ಅಸ್ತಶಿಖರದಿಂದ ಕೆಳಗೆ ಬೀಳುತ್ತಿರುವುದನ್ನು ಕಂಡು ತಾರಾಮಂಡಲವು ಎಂತಹ ಕಷ್ಟಕಾಲದಲ್ಲಿಯೂ ತನ್ನನ್ನೆಡೆಬಿಡದೆ ಅನುವರ್ತಿಸುತ್ತಿರುವ ಸ್ವಾಮಿಭಕ್ತನಂತೆ ತಾವೂ ಚಂದ್ರನನ್ನು ಹಿಂಬಾಲಿಸುತ್ತಿದ್ದುವು.

> ಶಶಾಂಕನಾಥಾಪಗಮೇನ ಧೂಮ್ರಾಂ
> ಮೂರ್ಛಾಪರೀತಾಮಿವ ನಿರ್ವಿವೇಕಾಂ ।
> ತತಃ ಸಖೀವ ಪ್ರಥಿತಾನುರಾಗಾ
> ಪ್ರಾಬೋಧಯತ್ ದ್ಯಾಂ ಮಧುರಾರುಣಾ ಶ್ರೀಃ ॥ ೧೧—೬ ॥

ಪ್ರಾಣೇಶ್ವರನ ವಿಯೋಗದಿಂದ ಕಶ್ಮಲೆಯಾಗಿಯೂ, ಮೂರ್ಛಿತಳಾದವಳಂತೆ ವಿವೇಕಹೀನೆಯಾಗಿಯೂ, ಇದ್ದ ಗಗನಾಂಗನೆಯನ್ನು ಸ್ನೇಹಮಯಿಯಾದ ಅರುಣದ ಸಿರಿಯು ಎಚ್ಚರಗೊಳಿಸಿದಳು.

---

## ಮಹೇಂದ್ರವಿಕ್ರಮವರ್ಮ

ಇವನು ಪಲ್ಲವರಾಜವಂಶೀಯನೆಂಬುದೂ ಸಿಂಹವಿಷ್ಣುವರ್ಮನ ಮಗನೆಂಬುದೂ—

> "ಪಲ್ಲವಕುಲಧರಣೀಮಂಡಲಕುಲಪರ್ವತಸ್ಯ ಸರ್ವನಯವಿಜಿತಸಪ್ತಸಾಮಂತಮಂಡಲಸ್ಯ ಆಖಂಡಲಸಮಪರಾಕ್ರಮಶ್ರಿಯಃ ಶ್ರೀಮಹಿಮಾನುರೂಪದಾನವಿಭೂತಿಪರಿಭೂತರಾಜರಾಜಸ್ಯ ಶ್ರೀಸಿಂಹವಿಷ್ಣುವರ್ಮಣಃ ಪುತ್ರಃ ಶತ್ರುಷಡ್ವರ್ಗನಿಗ್ರಹಪರಃ ಪರಹಿತಪರತಂತ್ರತಯಾ ಮಹಾಭೂತಸಧರ್ಮಾ ಮಹಾರಾಜಃ **ಶ್ರೀಮಹೇಂದ್ರವಿಕ್ರಮವರ್ಮಾ** ನಾಮ–"

ಎಂದು ಇವನು ಬರೆದಿರುವ ಪ್ರಹಸನದ ಸ್ಥಾಪನದಿಂದ ತಿಳಿಯಬರುತ್ತದೆ.

ಈ ಮಹೇಂದ್ರವಿಕ್ರಮನೆಂಬವನೇ ಮೊದಲನೆಯ ಮಹೇಂದ್ರವರ್ಮ ನೆಂದೂ, ಕ್ರಿ. ಶ. ೫೭೫ ರಿಂದ ೬೦೦ ರ ವರೆಗೆ ಆಳಿದ ಪಲ್ಲವರಾಜನಾದ ಸಿಂಹ ವಿಷ್ಣುವಿನ ಮಗನೆಂದೂ ಇವನಿಗೆ ಅನೇಕ ಬಿರುದುಗಳಿದ್ದವೆಂದೂ ಶಾಸನಗಳಿಂದ ತಿಳಿಯಬರುತ್ತದೆ.

ಮಹೇಂದ್ರವಾಡಿ ಶಾಸನದಲ್ಲಿ ಗುಣಭಾರನೆಂಬವನು "ಮುರಾರಿಗೃಹ" ವೆಂಬ ಗುಹಾಂತರದೇವಾಲಯವನ್ನು ಕಟ್ಟಿಸಿದಂತೆಯೂ, ವಲ್ಲಂಶಾಸನದಿಂದ ಗುಣಭಾರನೆಂಬವನಿಗೆ ಮಹೇಂದ್ರಪೋತರಾಯನೆಂದು ಹೆಸರಿದ್ದಂತೆಯೂ ತಿಳಿಯಬರುತ್ತದೆ. ತಿರುಚನಾಪಳ್ಳಿಯ ಗುಹಾಂತರ್ಗತ ಶಾಸನಗಳಿಂದ ಗುಣ ಭಾರನು ಪಲ್ಲವರಾಜನೆಂದೂ ಇವನಿಗೆ ಶತ್ರುಮಲ್ಲನೆಂಬ ಬಿರುದು ಇದ್ದಂತೆ ತಿಳಿಯಬರುತ್ತದೆ. ಇದಲ್ಲದೆ ತಿರುಚನಾಪಳ್ಳಿಯ ಗುಹಾಂತರ್ಗತ ಶಾಸನ ಗಳ ಲೇಖನದಿಂದ ಗುಣಭಾರನಿಗೆ ಮಹೇಂದ್ರವಿಕ್ರಮ, ಮತ್ತವಿಲಾಸ ಮತ್ತು ಅವನೀಭಾಜನನೆಂಬ ಬಿರುದುಗಳಿದ್ದುದಾಗಿ ಗೊತ್ತಾಗುತ್ತದೆ. *

ಇವುಗಳೆಲ್ಲದರ ಪರಿಶೀಲನೆಯಿಂದ ಇವನ ಹೆಸರು ಮಹೇಂದ್ರ ವಿಕ್ರಮನೆಂದೂ ಉಳಿದುವುಗಳೆಲ್ಲವೂ ಇವನ ಬಿರುದಾವಳಿಗಳೆಂದೂ ಹೇಳಿ ದಂತಾಗುವುದು. ಮಹೇಂದ್ರ ಎಂಬುದು ಮಹೇಂದ್ರವಿಕ್ರಮನೆಂಬುದರ ಸಂಕುಚಿತರೂಪವೆಂದು ತೋರುವುದು. ಶತ್ರುನಿಗ್ರಹದಲ್ಲಿ ಇವನು ದಕ್ಷನಾ ಗಿದ್ದುದರಿಂದ ಇವನಿಗೆ ಶತ್ರುಮಲ್ಲನೆಂದು ಹೇಳಿದ ಹಾಗೆ ತೋರುತ್ತದೆ. ಇದು ಈ ರೂಪಕದ ಅಂತ್ಯಶ್ಲೋಕದ—

'ರಾಜನ್ವಾನಸ್ತು ಶಕ್ತಿಪ್ರಶಮಿತರಿಪುಣಾ ಶತ್ರುಮಲ್ಲೇನ ಲೋಕಃ'

ಎಂಬ ನಾಲ್ಕನೆಯ ಪಾದದಿಂದ ವ್ಯಕ್ತವಾಗುತ್ತದೆ. ಗುಣಭಾರ, ಮತ್ತ ವಿಲಾಸವೆಂಬುದು ಸ್ಥಾಪನದಲ್ಲಿಯೂ 'ಯೌವನಗುಣಭಾರ, ಮತ್ತು ಮತ್ತವಿ ಲಾಸ'ನೆಂಬುದು ನಟಿಯ ಹೇಳಿಕೆಯಿಂದ ಗೊತ್ತಾಗುವುದು. ಅವನೀಭಾಜನ ನೆಂಬುದು ಈ ಪ್ರಹಸನದ ಮಂಗಳಶ್ಲೋಕದ ನಾಲ್ಕನೆಯ ಪಾದವಾದ—

'ಸವ್ಯಾಪ್ತಾವನಿಭಾಜನಂ ದಿಶತು ವೋ ದಿವ್ಯಃ ಕಪಾಲೀ ಯಶಃ'

ಎಂಬುದರಿಂದ ತಿಳಿಯಬರುವದು. ಇವನು ಸಕಲ ಕಲ್ಯಾಣಗುಣಾಶ್ರಯನಾಗಿ ದ್ದುದರಿಂದ ಇವನನ್ನು ಗುಣಭಾರನೆಂದು ಕರೆಯುವದಾಗಿ—

ಪ್ರಜ್ಞಾದಾನದಯಾನುಭಾವಧೃತಯಃ ಕಾಂತಿಃ ಕಲಾಕೌಶಲಂ
ಸತ್ಯಂ ಶೌರ್ಯಮನಾಯತಾ ವಿನಯ ಇತ್ಯೇವಂ ಪ್ರಕಾರಾ ಗುಣಾಃ ||
ಅಪ್ರಾಪ್ತಸ್ಥಿತಯಃ ಸಮೇತ್ಯ ಶರಣಂ ಯಾತಾ ಯಮೇಕಂ ಕಲೌ
ಕಲ್ಪಾಂತೇ ಜಗದಾದಿಮಾದಿಪುರುಷಂ ಸರ್ಗಪ್ರಭೇದಾ ಇವ || ೩ ||

* Epigraphica Indica. Vol. IV P. 152.

ಎಂಬ ಈ ರೂಪಕದ ಮೂಲಸೆಯು ಶ್ಲೋಕದಿಂದ ತಿಳಿಯುಬರುತ್ತದೆ. ಇದರಲ್ಲಿ 'ಅವನೀಭಾಜನ' ಎಂಬ ಪದಪ್ರಯೋಗದಿಂದ ನಾಟಕದ ಪಾತ್ರವನ್ನು ಕೊಡು ವಿಕೆ ಎಂಬ ಕಥಾತತ್ತ್ವವನ್ನೂ ಮತ್ತ್ವವಿಲಾಸವೆಂಬುದು ತನ್ನ ಬಿರುದಾವಳಿಯುಲ್ಲದೆ ಈ ರೂಪಕದ ಹೆಸರನ್ನೂ ಹೇಳುವುದಾಗಿದೆ. ಇವನು ಕ್ರಿ. ಶ. ೭ ನೆಯ ಶತಮಾನದಲ್ಲಿ ಕಾಂಚಿಯುಲ್ಲಿ ಆಳುತ್ತಿದ್ದನು.

ಇವನು ಬರೆದಿರುವ ರೂಪಕಕ್ಕೆ 'ಮತ್ತ್ವವಿಲಾಸ'ವೆಂದು ಹೆಸರು. ಇದು ರೂಪಕಭೇದವಾದ ಪ್ರಹಸನಜಾತಿಗೆ ಸೇರಿದುದು. ಹಾಸ್ಯರಸಪ್ರಧಾನವಾದು ದಾಗಿರುವುದು.

ಕಾಪಾಲಿಯೋರ್ವನು ಪತ್ನಿಯೊಡನೆ, ಕುಡಿದ ಮತ್ತತೆಯುಲ್ಲಿ ತನ್ನ ಬಳಿಯು ಲ್ಲಿದ್ದ ಕಮಂಡಲ(ಭಿಕ್ಷಾಪಾತ್ರ)ವನ್ನು ನಾಯಿಯು ತೆಗೆದುಕೊಂಡು ಹೋ ದುದು ತಿಳಿಯದೆ ಧರ್ಮಬಾಹಿರನಾದ ಶಾಕ್ಯಭಿಕ್ಷುವು (ಬೌದ್ಧಸನ್ಯಾಸಿ) ಕದ್ದು ತೆಗೆದುಕೊಂಡು ಹೋಗಿರಬೇಕಾಗಿ ಭಾವಿಸಿ ಅವನೊಡನೆ ಜಗಳವಾ ಡುವುದು, ಇದರ ತೀರ್ಪಿಗಾಗಿ ಆಚಾರವಿಹೀನನಾದ ಪಾಶುಪತನೊಬ್ಬನ ನ್ನಾಶ್ರಯಿಸುವುದು, ಕೊನೆಗೆ ಕಮಂಡಲವು ಉನ್ಮತ್ತನೊಬ್ಬನ ಬಳಿ ತಾನಾಗಿ ದೊರೆಯುವುದು, ಇವೇ ಮೊದಲಾದುವುಗಳನ್ನು ಮುಖ್ಯ ಕಥಾವಸ್ತುವ ನ್ನಾಗಿ ಮಾಡಿಕೊಂಡು ಬರೆಯಲ್ಪಟ್ಟಿರುವುದು. ಇದರಲ್ಲಿನ ಕೆಲವನ್ನು ಬರೆದು ಹೇಳುವುದು ಹೆಚ್ಚಾಗದು. ಕಾಪಾಲಿಯು (ದೇವಸೋಮಾಲಿಂಗನದಿಂದ ಹರ್ಷಿತನಾಗಿ)—

ಧೃರ್ಣ! ಧೃರ್ಣ! ನಮಃ ಶಿವಾಯ ಎನ್ನುತ್ತ—

ಪೇಯಾ ಸುರಾ ಪ್ರಿಯತಮಾಮುಖಮೀಕ್ಷಿತವ್ಯಂ
　ಗ್ರಾಹ್ಯಃ ಸ್ವಭಾವಲಲಿತೋ ವಿಕೃತಶ್ಚ ವೇಷಃ |
ಯೇನೇದಮೀದೃಶಮದೃಶ್ಯತ ಮೋಕ್ಷವರ್ತ್ಮ
　ದೀರ್ಘಾಯುರಸ್ತು ಭಗವಾನ್ ಸ ಪಿನಾಕಪಾಣಿಃ || ೭ ||

ಪ್ರಿಯೆ! ಸುರೆಯನ್ನು ಸೇವಿಸತಕ್ಕುದು; ಪ್ರಿಯತಮೆಯ ಮುಖವನ್ನು ನೋಡತಕ್ಕುದು; (ಎಂದರೆ ಸುಂದರಿಯೊಡನೆ ಬಾಳತಕ್ಕುದು ಅಥವಾ ವಿಷಯ ಲಂಪಟನಾಗಿರತಕ್ಕುದೆಂದಾಶಯವು) ಸ್ವಭಾವಕ್ಕೆ ತಕ್ಕಂತೆ ಸುಂದರವಾದ ವೇಷವು ವಿಕಾರವಾದುದಾದರೂ ಪರಿಗ್ರಹಿಸತಕ್ಕುದು. ಈ ಮೂರೇ ಮೋಕ್ಷ ಮಾರ್ಗಗಳು. ಇಂತಹ ಅನ್ಯಾದೃಶವಾದ ಮಾರ್ಗವನ್ನು ಕಂಡು ಹಿಡಿದು ತೋರಿಸಿದಭಗವಂತನಾದ ಪಿನಾಕಪಾಣಿಯು ದೀರ್ಘಾಯುವಾಗಿರಲಿ.

ಸುರಾಶಾಲೆ (ಹೆಂಡದ ಅಂಗಡಿ)ಯು ಯಜ್ಞಶಾಲೆಗೆ ಹೋಲಿಸಲ್ಪಟ್ಟಿರುವುದು.

**ಕಾಪಾಲೀ:**— ಪ್ರಿಯೆ!

ಪಶ್ಯ! ಪಶ್ಯ! ಏಷ ಸುರಾಪಣೋ ಯಜ್ಞವಾಟವಿಭೂತಿಮನುಕರೋತಿ. ಅತ್ರ ಹಿ ಧ್ವಜಸ್ತಂಭೋ ಯೂಪಃ, । ಸುರಾ ಸೋಮಃ, । ಶೌಂಡಾ ಋತ್ವಿಜಃ, । ಚಷಕಾಶ್ಚಮಸಾಃ, । ಶೂಲ್ಯಮಾಂಸಪ್ರಭೃತಯ ಉಪದಂಶಾ ಹವಿರ್ವಿಶೇಷಾಃ, । ಮತ್ತವಚನಾನಿ ಯಜೂಂಷಿ, । ಗೀತಾನಿ ಸಾಮಾನಿ, । ಉದಂಕಾಃ ಸ್ರುವಾಃ, । ತರ್ಷೋಽಗ್ನಿಃ, । ಸುರಾಪಣಾಧಿಪತಿರ್ಯಜಮಾನಃ ।

ಪ್ರಿಯೆ! ನೋಡು! ನೋಡು! ಇಲ್ಲಿ ಯೂಪವೇ ಧ್ವಜಸ್ತಂಭ, ಸುರೆಯೇ ಸೋಮರಸ, ಈಡಿಗರೇ ಋತ್ವಿಜರು, ಮಡಕೆಗಳೇ ಚಮಸಗಳು, ಪಕ್ವವಾದ ಮಾಂಸ ಮೊದಲಾದುವೇ ಇಲ್ಲಿಯ ಹವಿರ್ವಿಶೇಷಗಳು, ಮತ್ತತೆಯಿಂದಾಲಾಪಿಸುವುದೇ ಯಜುರ್ವೇದಮಂತ್ರಗಳು, ಮನಬಂದಂತೆ ಸ್ಮೃತಿವಿಭ್ರಮದ ಹಾಡುಗಾರಿಕೆಯೇ ಸಾಮಗಾನಗಳು, ಚರ್ಮದ ಚೀಲಗಳೇ ಸ್ರುವಗಳು, ಕುಡಿಯಬೇಕೆಂಬ ದಾಹವೇ ಅಗ್ನಿ, ಅಂಗಡಿಯ ಮಾಲೀಕನೇ ಯಜಮಾನನಾಗಿರುವನು.

**ಮಿಥ್ಯಾ ತ್ರಿಲೋಚನವಿಲೋಚನಪಾವಕೇನ**
**ಭಸ್ಮೀಕೃತಾಂ ಮದನಮೂರ್ತಿಮುದಾಹರಂತಿ ।**
**ಸ್ನೇಹಾತ್ಮಿಕಾ ತದಭಿತಾಪವಶಾದ್ವಿಮುಕ್ತಾ**
**ಸೇಯಂ ಪ್ರಿಯೇ! ಮದಯತಿ ಪ್ರಸಭಂ ಮನಾಂಸಿ ॥ ೧೦ ॥**

ಪ್ರಿಯೆ! ದೇವಸೋಮೆ! ಲೋಕಸುಂದರನಾದ ಮನ್ಮಥನು ಈಶ್ವರನ ಫಾಲನೇತ್ರದಿಂದ ದಗ್ಧನಾಗಿ ಹೋದನೆಂಬುದಾಗಿ ಎಲ್ಲರೂ ಸುಳ್ಳುಹೇಳುವರು. ಆದರೆ ಹಾಗಲ್ಲ— ಸ್ನೇಹಾತ್ಮಕ (ಜಿಡ್ಡು)ನಾದ ಮದನನು ಈಶ್ವರನ ಫಾಲನೇತ್ರಾಗ್ನಿಯಿಂದ ಕರಗಿ ಕರಗಿ ಈ ರೀತಿ ಮನಮೋಹಕವಾದ ವಾರುಣಿಯ ರೂಪನ್ನು ಹೊಂದಿರಬೇಕಾಗಿ ನನಗೆ ತೋರುವುದು.

ಇಂತಹುಗಳನ್ನೊಳಗೊಂಡಿರುವ ಈ ಪ್ರಹಸನವನ್ನು ಓದುವುದರಿಂದ ಆಗಣಕಾಲದ ಸಾಮಾಜಿಕ ನೈತಿಕ ವಿಷಯಗಳನ್ನು ತಿಳಿಯಬಹುದಾಗಿದೆ. ಸಮಾಜವು ನೈತಿಕಪರಿಶುದ್ಧತೆಯಿಂದ ದೂರವಾಗಿಯೂ ಭಿನ್ನಭಿನ್ನಮತಕಲ್ಪನೆಗಳಿಂದ ಬಾಹ್ಯಾಡಂಬರಮಗ್ನರಾಗಿ ಸದಾಚಾರಸಂಪನ್ನರೆಂದು ನಟಿಸುತ್ತಾ ಕುಟಿಲಪ್ರವರ್ತನೆಯಿಂದ ವಿಧರ್ಮಿಗಳಾಗಿ ಮಧುಪರ್ಕ, ಸಂಪರ್ಕ, ಮೋಸ, ವಂಚನೆ

ಸುಳ್ಳುಗಳಿಂದ ಮತ್ತರಾದ ಪಾಷಂಡಿಗಳಿಂದಲೂ ಬೌದ್ಧಭಿಕ್ಷುಗಳಿಂದಲೂ ಶಕ್ತಿಪೂಜಾಪರರಾದ ಶಾಕ್ತೇಯರಿಂದಲೂ ತುಂಬಿ ನೀತಿಹ್ರಾಸವೂ ಧರ್ಮ ನೈರಾಶ್ಯವೂ ಆಗಿದ್ದುದಾಗಿ ಗ್ರಂಥಪರಿಶೀಲನದಿಂದ ಕಂಡುಬರುತ್ತದೆ.

ಹೀಗೆ ಧರ್ಮಕಂಟಕರಾಗಿ ಭಿನ್ನಭಿನ್ನಮತಗಳ ಹೆಸರನ್ನಿಟ್ಟುಕೊಂಡು ಸದ್ಬೋಧಸಾರವನ್ನರಿಯದೆ ಕುಲಕ್ರಮಾಗತ ಸದಾಚಾರವನ್ನು ದೂರಮಾಡಿ ನೂತನನೂತನವಾದ ದುರಾಚಾರಗಳನ್ನು ಮಾತ್ರವೇ ಅನುಷ್ಠಿಸುತ್ತಿರುವವರ ಅಂಧಪ್ರಾಯವಾಗಿರುವ ಜ್ಞಾನಚಕ್ಷುಸ್ಸನ್ನು ಬಿಡಿಸಿ ತೋರಿಸಲಾರದೆ ಚರ್ಮಚಕ್ಷುಗಳಿಗಾದರೂ ಆಡಿತೋರಿಸುವುದರ ಮೂಲಕ ನೀತಿಬದ್ಧರನ್ನಾಗಿ ಮಾಡಬೇಕೆಂಬುದು ಕವಿಯ ಮುಖ್ಯಾಶಯವಾಗಿರುವುದಾಗಿ ಸ್ಪಷ್ಟವಾಗುತ್ತದೆ.

ಇದಲ್ಲದೆ ಇದೇವಿಷಯವನ್ನು ಕುರಿತು ಕವಿಯು ಭರತವಾಕ್ಯದಲ್ಲಿ ಸಮರ್ಥಿಸಿರುವ ಹಾಗೆ ಧ್ವನಿಕೊಡುವುದು.

> ಶಶ್ವದ್ಭೂತ್ಯೈ ಪ್ರಜಾನಾಂ ವಹತು ವಿಧಿಹುತಾಮಾಹುತಿಂ ಜಾತವೇದಾ
> ವೇದಾರ್ಥ ವಿಪ್ರಾ ಭಜಂತಾಂ ಸುರಭಿದುಹಿತರೋ ಭೂರಿದೇಹಾ ಭವಂತು ।
> ಉದ್ಯುಕ್ತಾಃ ಸ್ವೇಷು ಧರ್ಮೇಷ್ವಯಮಪಿ ವಿಗತವ್ಯಾಪದಾಚಂದ್ರತಾರಂ
> ರಾಜನ್ವಾನಸ್ತು ಶಕ್ತಿಪ್ರಶಮಿತರಿಪುಣಾ ಶತ್ರುಮಲ್ಲೇನ ಲೋಕಃ ॥ ೨೪ ॥

ಕವಿಯ ಕಾಲದ ಕಾಂಚೀಪುರವರ್ಣನವು ಹೀಗಿರುವುದು—

> ಅನತಿಶಯಮನಂತಂ ಸೌಖ್ಯಮಪ್ರತ್ಯನೀಕಂ
> ಸಮಧಿಗತಸುತತ್ತ್ವಾ ಮೇನಿರೇ ಯನ್ಮುನೀಂದ್ರಾಃ ।
> ತದಿಹ ನಿರವಶೇಷಂ ದೃಷ್ಟಮೇತತ್ತು ಚಿತ್ರಂ
> ಯದುತ ಕರಣಭೋಗ್ಯಂ ಕಾಮಭೋಗಾತ್ಮಕಂ ಚ ॥ ೯ ॥



# ಎಂಟನೆಯ ಶತಮಾನ

## ಭಟ್ಟ ಭವಭೂತಿ

"ಶ್ರೀಕಂಠ" ಎಂಬುದು ಇವನ ನಿಜವಾದ ಹೆಸರು.‡ ಇವನು ನ್ಯಾಯ ವ್ಯಾಕರಣ ವೇದಾಂತಾದಿ ಶಾಸ್ತ್ರಗಳಲ್ಲಿ ಪಾರಂಗತರಾಗಿಯೂ ಬ್ರಹ್ಮವಿದ್ಯಾರತರಾಗಿಯೂ ಇದ್ದ ಒಂದು ಬ್ರಾಹ್ಮಣಕುಟುಂಬದಲ್ಲಿ ಜನ್ಮಗ್ರಹಣಮಾಡಿದನು. ಇವರಿಗೆ ಉದುಂಬರರೆಂದೂ ಹೆಸರು. ಇವನ ತಾಯಿಯ ಹೆಸರು ಜತುಕರ್ಣಿ, ತಂದೆಯ ಹೆಸರು ನೀಲಕಂಠ, ಅಜ್ಜನ ಹೆಸರು ಭಟ್ಟಗೋಪಾಲ, ಗುರುವಿನ ಹೆಸರು ಜ್ಞಾನನಿಧಿ. ಇವನು ಕಾಶ್ಯಪಗೋತ್ರ ಆಪಸ್ತಂಭ ಸೂತ್ರದವನು.

ತಪಸ್ವೀ ಕಾಂ ಗತೋಽವಸ್ಥಾಂ ಇತಿ ಸ್ಮೇರಾನನಾವಿವ ।
ಗಿರಿಜಾಯಾಃ ಸ್ತನೌ ವಂದೇ ಭವಭೂತಿಸಿತಾನನೌ ॥

ಎಂದು ಪಾರ್ವತಿಯನ್ನೂ—

. . . . . ಸಾಂಬಾ ಪುನಾತು ಭವಭೂತಿಪವಿತ್ರಮೂರ್ತಿಃ ॥

ಎಂದು ಈಶ್ವರನನ್ನೂ ಸ್ತುತಿಸಿದನಾದುದರಿಂದ ಇವನನ್ನು **ಭವಭೂತಿ** ಯೆಂದೂ—

"ವಶ್ಯವಾಚಃ ಕವೇರ್ವಾಕ್ಯಂ"

ಎಂದು ಸ್ವಾಧೀನವಾಕ್ಪ್ರವೃತ್ತಿಯುಳ್ಳವನಾದುದರಿಂದ "ವಶ್ಯವಾಕ್ ಕವಿ" * ಎಂದೂ—

ವ್ಯಾಕರಣನ್ಯಾಯಮೀಮಾಂಸಾಪರಿಜ್ಞಾತನಾದುದರಿಂದ "ಪದವಾಕ್ಯಪ್ರಮಾಣಜ್ಞ"† ಎಂದೂ—

ಚತುಶ್ಶಾಸ್ತ್ರಾಭಿಜ್ಞನಾದುದರಿಂದ ಭಟ್ಟನೆಂದೂ ಕರೆದುದಾಗಿ ತಿಳಿಯ ಬರುತ್ತದೆ.

ಇವನು ದಾಕ್ಷಿಣಾತ್ಯನು. ವಿದರ್ಭದೇಶಕ್ಕೆ ಸೇರಿದ "ಪದ್ಮಪುರ"ಎಂಬ ನಗರವು ಇವನ ಜನ್ಮಭೂಮಿಯು. ಇವನ ವಿಚಾರವಾಗಿ ಮೆ॥ ತೆಲಂಗರವರು ಹೀಗೆ ಒಕ್ಕಣಿಸಿರುವರು.

‡ Introduction to *Malatimadhava* by M. R. Telang P. 1

* ಮಹಾವೀರಚರಿತ. ಪುಟ ೭.

† ಉತ್ತರರಾಮಚರಿತ. ಪುಟ ೯.

"ಅಸ್ತಿ ದಕ್ಷಿಣಾಪಥೇ ವಿದರ್ಭೇಷು ಪದ್ಮಪುರಂ ನಾಮ ನಗರಂ। ತತ್ರಕೇಚಿತ್ತೈತ್ತಿರೀಯಾಃ ಕಾಶ್ಯಪಾ ಉದುಂಬರೋಪಾಭಿಧಾನಾ ಬ್ರಹ್ಮವಾದಿನೋ ದ್ವಿಜಾ ವಸಂತಿ ಸ್ಮ । ತೇಷಾಂ ವಂಶೇ ಮಹಾ ಕವಿರ್ನಾಮ ಕಶ್ಚಿದ್ವಾಜಪೇಯಯಾಜೀ ವಿಪ್ರೋ ಬಭೂವ । ಅಸ್ಮಾತ್ಪಂಚಮಃ ಪುರುಷೋ **ಭವಭೂತಿಃ**।ಭವಭೂತೇಃ ಪಿತಾ ನೀಲಕಂಠಃ, ಜನನೀ ಜತುಕರ್ಣೀ, ಪಿತಾಮಹೋ ಭಟ್ಟಗೋಪಾಲಃ, ಗುರುಶ್ಚ ಜ್ಞಾನನಿಧಿಃ।ಅಧೀತವಾನಯಂ ತರ್ಕವ್ಯಾಕರಣ ಪೂರ್ವೋತ್ತರ ಮೀಮಾಂಸಾದೀನಿ ಶಾಸ್ತ್ರಾಣಿ।ಅಸ್ಯ ಪಿತೃಕೃತಂ ನಾಮ 'ಶ್ರೀಕಂಠ' ಇತಿ।

> ತಪಸ್ವೀ ಕಾಂ ಗತೋ ವಸ್ಥಾಂ . . . .
> . . . . . . ಭವಭೂತಿಸಿತಾನನೌ ||

ಇತಿ ಪದ್ಯಕರಣೋತ್ತರಂ ತಸ್ಯೈವ 'ಭವಭೂತಿ'ರಿತಿ ನಾಮಾಂತರಂ ಜಾತಂ।ಅನೇನೈವ ಚ ನಾಮ್ನಾಯಂ ಕವಿಲೋಕೇ ಪ್ರಸಿದ್ಧೋ ಬಭೂವೇತಿ।

ಎಂದು ಮಾಲತೀಮಾಧವದಲ್ಲಿಯೂ—

"…. …. …. ಶ್ರೀಕಂಠಪದಲಾಂಛನಃ ಪದವಾಕ್ಯಪ್ರಮಾಣಜ್ಞೋ 'ಭವಭೂತಿ'ರ್ನಾಮ …. …. …. ।"

> ವಶ್ಯವಾಚಃ ಕವೇರ್ವಾಕ್ಯಂ ಸಾ ಚ ರಾಮಾಶ್ರಯಾ ಕಥಾ ।
> ಲಬ್ಧಶ್ಚ ವಾಕ್ಯನಿಸ್ಯಂದನಿಷ್ಪೇಷನಿಕಷೋ ಜನಃ ||

ಎಂದು ಮಹಾವೀರಚರಿತದಲ್ಲಿಯೂ—

"ಅಸ್ತಿ ಖಲು ತತ್ರ ಭವಾನ್ಕಾಶ್ಯಪಃ ಶ್ರೀಕಂಠಪದಲಾಂಛನಃ…. …. …. …. ಜತುಕರ್ಣೀಪುತ್ರಃ।"

ಎಂದು ಉತ್ತರರಾಮಚರಿತ್ರೆಯಲ್ಲಿಯೂ ಹೇಳಲ್ಪಟ್ಟಿರುವುದು. ಅಲ್ಲದೆ—

ಮಾಲತೀಮಾಧವದ ಸೂತ್ರಧಾರನ ಹೇಳಿಕೆಯಲ್ಲಿಯೂ ಕೂಡ—

"ತದಾಮುಷ್ಯಾಯಣಸ್ಯ ತತ್ರಭವತಃ …. …. …. …. ಭಟ್ಟಶ್ರೀಕಂಠಪದಲಾಂಛನೋ 'ಭವಭೂತಿ'ರ್ನಾಮ…. ….।"

ಎಂಬುದು ಕಂಡುಬರುವುದು.

ಪಂಡಿತ ಎಂ. ಆರ್. ಕಾಳೆಯವರು ಬರೆದಿರುವ ಭೂಮಿಕೆಯಲ್ಲಿ—
"ದಕ್ಷಿಣಾಪಥೇ ವಿದರ್ಭೇಷು …. …. …. …. ಪಿತೃಕೃತಂ

ಶ್ರೀಕಂಠ ಇತಿ ನಾಮ ಬಿಭ್ರದಪ್ಯಯಂ ಕೇಷಾಂ ಚಿಸ್ಮೃತೇನ....।''
ಎಂದು ಹೇಳಿ ಮುಗಿಸಿರುವರಲ್ಲದೆ ವ್ಯಾಖ್ಯಾನದಲ್ಲಿ*—

''ಭಟ್ಟಃ ಶ್ರೀಕಂಠಪದಲಾಂಛನೋ 'ಭವಭೂತಿ'ರ್ನಾಮ।''

ಎಂಬುದಕ್ಕೆ—

''ಭಟ್ಟಃ--ಚತುಶ್ಶಾಸ್ತ್ರಾಭಿಜ್ಞಃ, ಶ್ರೀಃ--ಸರಸ್ವತೀ ಕಂಠೇ ಯಸ್ಯ ಸಃ =ಶ್ರೀಕಂಠಃ।ತದ್ವಾಚಕಂ ಪದಂ ಲಾಂಛನಂ--ಚಿಹ್ನಂ ಯಸ್ಯ ಸಃ= ತನ್ನಾಮ್ನಾ ಶ್ರೀಕಂಠಃ।''

ಎಂದು ಹೇಳಿರುವರು.

ಮತ್ತೊಂದು ವ್ಯಾಖ್ಯಾನದಲ್ಲಿ—

''ಶ್ರೀಕಂಠಪದಲಾಂಛನಃ''ಎಂಬುದಕ್ಕೆ– ಶ್ರೀಕಂಠಪದಲಾಂಛನಂ--ನಾಮ ಯಸ್ಯ ಸಃ। **'ಲಾಂಛನಂ ನಾಮ ಲಕ್ಷ್ಮಣೋಃ' ಇತಿ ರತ್ನಮಾಲಾ।** ಪಿತೃಕೃತನಾಮೇದಂ।''† ಎಂದೂ

ಮತ್ತೊಂದರಲ್ಲಿ— ಶ್ರೀಕಂಠ ಪದಲಾಂಛನಃ ಎಂಬುದಕ್ಕೆ—

''ಶ್ರೀಕಂಠ ಇತಿ ಪದಂ--ಶಬ್ದಃ ಲಾಂಛನಂ ಯಸ್ಯ ಸಃ ತಥೋಕ್ತಃ =ಶ್ರೀಕಂಠನಾಮಕ ಇತ್ಯರ್ಥಃ। ಇತಿ ಪೈತೃಕಂ ನಾಮಧೇಯ ಮಿದಂ।''

ಎಂದು ಹೇಳಲ್ಪಟ್ಟಿರುವುದು.$

ಮಹಾವ್ಯಾಖ್ಯಾತೃವಾದ ಜಗದ್ಧರನು 'ಶ್ರೀಕಂಠ'ಶಬ್ದವು ಭವಭೂತಿಯ ಪಾಂಡಿತ್ಯಕ್ಕಾಗಿ ದೊರೆತ ಬಿರುದೆಂದು ಅಭಿಪ್ರಾಯಪಟ್ಟಿರುವನು. ಇದನ್ನು ಪಂಡಿತಕಾಳೆಯವರು ಅನುಮೋದಿಸಿರುವರು.

ಉಳಿದ ವ್ಯಾಖ್ಯಾತೃಗಳೆಲ್ಲರೂ ಭವಭೂತಿಯ ನಿಜವಾದ ಹೆಸರು 'ಶ್ರೀಕಂಠ'ನೆಂದು ಹೇಳಿರುವುದರಿಂದಲೂ ಮೆ॥ ತೆಲಂಗರವರು ಬರೆದಿರುವ ಮಾಲತೀಮಾಧವದ ಭೂಮಿಕೆಯಲ್ಲಿ 'ಶ್ರೀಕಂಠ'ನೆಂಬ ಹೆಸರು ತಾಯಿತಂದೆಗ ಳಿಟ್ಟುದೆಂದು ಸ್ಪಷ್ಟಪಡಿಸಿರುವುದರಿಂದಲೂ ತನ್ನ ವಿದ್ಯಾವೈದುಷ್ಯದಿಂದ ಸಮ್ಮಾ ನಿತಪದವಿಯ ಪಟಾಟೋಪದಲ್ಲಿ 'ಶ್ರೀಕಂಠ'ನೆಂಬ ನಿಜವಾದ ಹೆಸರು ಲುಪ್ತ ವಾಗಿ ''**ಭವಭೂತಿ**''ಯೆಂಬ ಹೆಸರಿನಿಂದಲೇ ಕವಿಯು ಪ್ರಸಿದ್ಧನಾದುದಾಗಿ ಸ್ಪಷ್ಟವಾಗುತ್ತದೆ.

* ಮೆ। ಕಾಳೆಯವರ ಮಾಲತೀಮಾಧವ ಪುಟ ೮. & English Intro, P. 6.
† ಮಹಾವೀರಚರಿತ ವ್ಯಾಖ್ಯಾನ ಪುಟ ೮
$ ಉತ್ತರರಾಮಚರಿತ ವ್ಯಾಖ್ಯಾನ ಪುಟ ೯.

ಮಹಾಕವಿಭವಭೂತಿಯು ವಿದರ್ಭದೇಶದ ಪದ್ಮಪುರವೆಂಬ ನಗರದವ ನೆಂದು ಮೊದಲೇ ಹೇಳಿದೆ. ಪದ್ಮಪುರವನ್ನು ಪದ್ಮಾವತಿಯೆಂದೂ ಪಾಟಲೀಪುತ್ರ ವೆಂದೂ ಕೆಲವರು ಹೇಳುವರು. ಪಾಟಲೀಪುತ್ರವೆಂಬ ಹೆಸರು ಪುರಾಣ ಗ್ರಂಥಗಳಲ್ಲೆಲ್ಲೂ ಇರುವಂತೆ ತೋರುವುದಿಲ್ಲ. ಇದೇ ಪಾಟಲೀಪುತ್ರವನ್ನೇ ಪದ್ಮಾವತಿಯೆಂದು ಕರೆಯುತ್ತಿದ್ದುದಾಗಿ ಗ್ರಂಥಾಂತರಗಳಿಂದ ತಿಳಿಯಬರು ತ್ತದೆ. $ ಮಾಲತೀಮಾಧವದಲ್ಲಿ ಉಜ್ಜಯಿನಿಯ ವಿಚಾರವು ಹೇಳಲ್ಪಟ್ಟಿರು ವುದು. ಆದುದರಿಂದ ಪದ್ಮಪುರವು ಉಜ್ಜಯಿನಿ ಎಂಬುದರ ನಾಮಾಂತರವಿರ ಬಹುದಾಗಿ ತೋರುತ್ತದೆ. ಯಶೋವರ್ಮನು ಕಾನ್ಯಕುಬ್ಜ ಮತ್ತು ಉಜ್ಜ ಯಿನಿಗೆ ರಾಜನಾಗಿದ್ದುದಾಗಿ † ಹೇಳಲ್ಪಟ್ಟಿರುವುದರಿಂದಲೂ ಉಜ್ಜಯಿನಿಯಲ್ಲಿ ಮಹಾ ಪ್ರಸಿದ್ಧನಾದ ಕಾಲಪ್ರಿಯಾನಾಥನ ದೇವಾಲಯವಿದ್ದುದಾಗಿ ಕಂಡು ಬರುವುದರಿಂದಲೂ ಮಹಾಕವಿಯಾದ ಬಾಣನು ತಾನು ಬರೆದಿರುವ ಕಾದಂಬರಿ ಯಲ್ಲಿ ಈ ದೇವಾಲಯವು ಉಜ್ಜಯಿನಿಗೆ ಅಲಂಕಾರವಾಗಿರುವುದಾಗಿ—

> "ಮಹಾಕಾಲಾಭಿಧಾನೇನ.......... ಅವಂತಿಷೂಜ್ಜಯಿನೀ
> ನಾಮನಗರೀ"

ಎಂದು ಹೇಳಿರುವುದರಿಂದಲೂ ಭವಭೂತಿಯು ತನ್ನ ಪ್ರತಿಯೊಂದು ಗ್ರಂಥ ದಲ್ಲಿಯೂ—

> "ಮಾರಿಷ! ಸುವಿಹಿತಾನಿ ರಂಗಮಂಗಳಾನಿ ಸನ್ನಿಪತಿತಶ್ಚ ಭಗ
> ವತಃ ಕಾಲಪ್ರಿಯಾನಾಥಸ್ಯ ಯಾತ್ರಾಪ್ರಸಂಗೇನ

ಎಂದೂ—

> "ಭಗವತಃ ಕಾಲಪ್ರಿಯಾನಾಥಸ್ಯ ಯಾತ್ರಾಯಾಂ"*

ಎಂದೂ —

> "ಅಲಮತಿವಿಸ್ತರೇಣ ಅದ್ಯ ಖಲು ಭಗವತಃ ಕಾಲಪ್ರಿಯಾನಾಥಸ್ಯ
> ಯಾತ್ರಾಯಾಂ.........."

ಎಂದೂ ಹೇಳಲ್ಪಟ್ಟಿರುವುದರಿಂದ ಭವಭೂತಿಯು ಹೇಳುವ ಪದ್ಮಪುರವು ಉಜ್ಜಯಿನಿಯಾಗಿರಬೇಕೆಂತಲೂ ಬಾಣನ ಕಾಲಕ್ಕೆ ಉಜ್ಜಯಿನಿಯು ಅವಂತಿ

---

$ Asiatic Researches Vol. IX

† Vincent Smith's Early History of India P. 378.

ದೇಶಕ್ಕೆ ಸೇರಿದುದಾಗಿರಬೇಕೆಂದೂ ಭವಭೂತಿಯ ಕಾಲಕ್ಕೆ ವಿದರ್ಭದೇಶಕ್ಕೆ ಸೇರಿದುದಾಗಿರಬೇಕೆಂದೂ ಬೋಧೆಯಾಗುತ್ತದೆ. ಪ್ರೊ. ಮ್ಯಾಕಡಾನಲ್ಲರವರು ಮಹಾಕವಿಭವಭೂತಿಯು ವಿದರ್ಭನಗರ(ಈಗಣ ಬೀರಾರು)ದವನೆಂದೂ ಬಹುಕಾಲ ಉಜ್ಜಯಿನಿಯಲ್ಲಿ ಇದ್ದನೆಂದೂ ಹೇಳಿರುವರು. ¶ ಈ ಕಾರಣಗಳಿಂದ ಭವಭೂತಿಯು ಉಜ್ಜಯಿನಿಯವನೆಂಬುದು ಸ್ಪಷ್ಟವಾಗುವುದಲ್ಲದೆ ಪದ್ಮಪುರ ಅಥವಾ ಪದ್ಮಪಟಿಯೆಂಬುದು ಉಜ್ಜಯಿನಿಯೆಂಬುದೂ ಸ್ಪಷ್ಟವಾಗುವುದು.

**ಕಾಲ:**— ಶ್ರೀಹರ್ಷವರ್ಧನ (ಎರಡನೆಯ ಶಿಲಾದಿತ್ಯ)ನ ತರುವಾಯ ಕೆನೂಜದಲ್ಲಿ ಆಳಿದವರಲ್ಲ ಯಶೋವರ್ಮನು ಮುಖ್ಯನು. ಇವನು ಕ್ರಿ. ಶ. ೬೯೩ ರಿಂದ ೭೨೯ ರ ವರೆಗೆ ರಾಜ್ಯಭಾರಮಾಡಿದುದಾಗಿಯೂ ಹರ್ಷಚರಿತವನ್ನು ಬರೆದ ಬಾಣನು ಪೂರ್ವಕವಿಗಳನ್ನು ವಿಮರ್ಶಿಸಿ ಹೇಳುವಾಗ ಭವಭೂತಿಯ ಹೆಸರನ್ನು ಹೇಳದಿರುವುದರಿಂದ ಭವಭೂತಿಯು ಬಾಣನ ಈಚಿನವನೆಂದೂ ಪ್ರೊ. ಯಂ. ಕೃಷ್ಣಮಾಚಾರ್ಯರು ಹೇಳುವರು. *

ಯಶೋವರ್ಮನು ಕ್ರಿ. ಶ. ೭೩೧ ರಲ್ಲಿ ಚೀನಾದೇಶಕ್ಕೆ ರಾಯಭಾರಿಯೊಬ್ಬನನ್ನು ಕಳುಹಿಸಿದಂತೆಯೂ ಇದಾದ ೯–೧೦ ವರ್ಷಗಳನಂತರ ಕಾಶ್ಮೀರದ ಲಲಿತಾದಿತ್ಯಮುಕ್ತಾಪೀಡನಿಂದ ಯುದ್ಧದಲ್ಲಿ ಸೋಲಿಸಲ್ಪಟ್ಟುದಾಗಿಯೂ ಯಶೋವರ್ಮನು ಮಹಾಕವಿಭವಭೂತಿಗೆ ಆಶ್ರಯದಾತನಾಗಿದ್ದುದಾಗಿಯೂ ಪ್ರೊ. ವಿನ್‌ಸೆನ್‌ಟುಸ್ಮಿತ್ತರವರು ಹೇಳುವರು.

**ಕವಿರ್ವಾಕ್ಪತಿ ರಾಜ ಶ್ರೀ ಭವಭೂತ್ಯಾದಿ ಸೇವಿತಃ |**
**ಜಿತೋ ಯಯೌ ಯಶೋವರ್ಮ ತದ್ಗುಣಸ್ತುತಿವಂದಿತಾಂ ||**

ಎಂಬ ರಾಜತರಂಗಿಣಿಯ ಶ್ಲೋಕದಿಂದ ಕಾಶ್ಮೀರದಲ್ಲಿ ಆಳುತ್ತಿದ್ದ ಲಲಿತಾದಿತ್ಯನು ಉಜ್ಜಯಿನಿ ಮತ್ತು ಕಾನ್ಯಕುಬ್ಜ(ಕೆನೂಜ್)ಗಳ ಪ್ರಭುವಾದ ಯಶೋವರ್ಮನನ್ನು ಜಯಿಸಿ ಅವನ ಆಸ್ಥಾನಕವಿಯಾದ ಭವಭೂತಿಯನ್ನು ತನ್ನೊಡನೆ ಕರೆದುಕೊಂಡು ಹೋದುದಾಗಿ ತಿಳಿಯಬರುತ್ತದೆ. ಲಲಿತಾದಿತ್ಯನ ಕಾಲವನ್ನು ರಾಜತರಂಗಿಣಿಯಲ್ಲಿ ಹೇಳಿರುವಂತೆ ನೋಡಿದರೆ ಯಶೋವರ್ಮನು ಕ್ರಿ. ಶ. ೭೩೧ರ ವರೆಗೆ ಉಜ್ಜಯಿನಿಯಲ್ಲಾಳಿದುದಾಗಿ ಕಂಡುಬರುತ್ತದೆ. ಇದಲ್ಲದೆ ಕ್ರಿ. ಶ. ೮ ನೆಯ ಶತಮಾನದವನಾದ ವಾಮನನು ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿ ಮಹಾವೀರಚರಿತದ ಶ್ಲೋಕಗಳನ್ನುದಹರಿಸಿಕೊಂಡಿರುವನು.

¶ Macdonell's History of Sanskrit Literature P. 362–
§ The History of Classical Sanskrit Literature P. 87.

ಭವಭೂತಿಯು ಕುಮಾರಿಲಭಟ್ಟನ ಶಿಷ್ಯನಾಗಿದ್ದನೆಂದು ಪಂಡಿತ ತ್ರಿಪಾಠಿಯವರು ಹೇಳುವರು. *

ಕುಮಾರಿಲಭಟ್ಟನ ಕಾಲವು ಕ್ರಿ. ಶ. ೮ ನೆಯ ಶತಮಾನದ ಪೂರ್ವಾರ್ಧವೆಂದು ತಿಳಿಯಬರುತ್ತಿದೆ.

ಈ ಕಾರಣಗಳಿಂದ ಭವಭೂತಿಯು ಕ್ರಿ. ಶ. ೮ ನೆಯ ಶತಮಾನದ ಪೂರ್ವಾರ್ಧದಲ್ಲಿದ್ದನೆಂಬುದು ಸ್ಪಷ್ಟವಾಗುವುದು.

ಭವಭೂತಿಯ ಕಾಲದ ರಾಜ್ಯಸ್ಥಿತಿ:—

ರಾಜ್ಯಭಾರವು ನಿರಂಕುಶವಾಗಿದ್ದಿತು. ಬಲಿಷ್ಠನಾದ ಯಾವನಾದರೂ ರಾಜ್ಯವನ್ನಾಳಬಹುದಾಗಿದ್ದಿತು. ಯಾರಿಗೆ ಯಾವಾಗ ಏನು ತೊಂದರೆಯಾಗುವುದೋ ಎಂಬ ಭೀತಿಯು ರಾಜನು ಮೊದಲುಗೊಂಡು ಎಲ್ಲರಲ್ಲಿಯೂ ಇರುತ್ತಿತ್ತು. ಎಲ್ಲರೂ ರಾಜನ ಮತ್ತು ರಾಜಪರಿವಾರದ ಸಾದರಾನುಗ್ರಹವನ್ನು ಪಡೆಯಲಾಶಿಸುತ್ತಿದ್ದರು. ಬಲಿಷ್ಠರಾದ ಪರರಾಜರಾರಾದರೂ ದಂಡೆತ್ತಿ ಬಂದರೆ ಅವರನ್ನೆದುರಿಸಿ ದೇಶವನ್ನು ರಕ್ಷಿಸಿಕೊಳ್ಳುವುದಕ್ಕೆ ಸಾಕಾದಷ್ಟು ಸೈನ್ಯವಿರುತ್ತಿರಲಿಲ್ಲ. ಆದರೆ ಈಗಣ ಹಾಗೆ ಪುರರಕ್ಷಕರು (Police) ಇದ್ದುದಾಗಿ ತಿಳಿಯಬರುತ್ತದೆ. (ಮಾಲತೀಮಾಧವ ೮ ನೆಯ ಅಂಕವನ್ನು ನೋಡಿ) ಇವರು ರಾತ್ರಿಯ ಕಾಲದಲ್ಲಿ ನಗರರಕ್ಷಕರಾಗಿರುತ್ತಿದ್ದರು. ದೇಶರಕ್ಷಣವು ಪಟ್ಟಣಿಗರ ವಶವಾಗಿರುತ್ತಿದ್ದಿತು.

ಅರಸುತನವು ವಂಶಪಾರಂಪರ್ಯವಾಗಿದ್ದಿತು. ರಾಜಪರಿವಾರದವರೂ ಅಧಿಕಾರಿಗಳೂ ಮತ್ತು ಇತರರೂ ತಾವು ಶಾಸ್ತ್ರೋಕ್ತಧರ್ಮಾಚರಣೆಯುಳ್ಳರುವವರೆಂದೂ ನೈಷ್ಠಿಕಕರ್ಮಠರೆಂದೂ ಜನರಿಗೆ ತೋರ್ಪಡಿಸಿಕೊಳ್ಳುತ್ತ ಬಾಹ್ಯಾಡಂಬರಮಗ್ನರಾಗಿ ತಾವು ಆಚರಿಸುವ ಅನೇಕ ಕ್ರೂರಕೃತ್ಯಗಳನ್ನು ಮರೆಮಾಚಿಕೊಳ್ಳುತ್ತಿದ್ದರು. ಶಾಸ್ತ್ರಾನುಷ್ಠಾನಗಳ ನೆಪಮಾತ್ರದಲ್ಲಿ ಅನೇಕ ದುಷ್ಕಾರ್ಯಗಳು ಸಂಗೋಪನ ಮಾಡಲ್ಪಡುತ್ತಿದ್ದುವು. ತ್ಯಕ್ತಸಂಸಾರಳಾಗಿ ಶಾಂತನಿಲಯಗಳಾದ ಬುದ್ಧವಿಹಾರಗಳಲ್ಲಿ ವೀತರಾಗಳೆಂದಿದ್ದ ಸನ್ಯಾಸಿನಿಯು ಪ್ರಣಯಸಂಚಿನಲ್ಲಾಸಕ್ತಳಾಗಿದ್ದಳೆಂಬುದು ಮಾಲತೀಮಾಧವನಾಟಕದಿಂದ ತಿಳಿಯಬಹುದಾಗಿದೆ. ಯೂರೋಪುಖಂಡದ ಶರಣ್ಯಾಲಯಗಳ ವಿಚಾರವಾಗಿ ಮಧ್ಯಕಾಲದ(Middle ages) ಚರಿತೆಗಳನ್ನೋದಿನೋಡಿದರೆ ಎಂತಹ ಅಮಾನುಷಕಾರ್ಯಗಳು ನಡೆದಿರುವುವೆಂಬುದು ತಿಳಿಯುವುದು. ರಾಜರಾದವರು

* ಕವಿತಾಕೌಮುದೀ ಪುಟ. ೧೯೨—೧೯೩.

ಪಾಲನವನ್ನು ಮಂತ್ರಿಗಳ ವಶಕ್ಕೊಪ್ಪಿಸಿ ತಾವು ಹರ್ಮ್ಯಾಗ್ರಗಳಲ್ಲಿ ಸೇರಿ ಸುರ ಸುಂದರಿಯರಾದ ಕಾಮಿನಿಯರ ಕಾಮಪಾಶದಲ್ಲಿ ಗ್ರಥಿತರಾಗಿರುತ್ತಿದ್ದರು. ಉದ್ಯಾನಗಳು ತರುಣತರುಣಿಯರ ವಿಹಾರಸ್ಥಳಗಳಾಗಿದ್ದುವು. ಕಾಡುಮೃಗ ಗಳನ್ನು ಹಿಡಿದು ಅವನ್ನು ಪಳಗಿಸಿ ವಿಲಾಸಕ್ಕಾಗಿ ಬೋನಿನಲ್ಲಿಟ್ಟುಕೊಳ್ಳುವ ವಾಡಿಕೆಯು ಇದ್ದಿತು. ಬೌದ್ಧರೂ ಬ್ರಾಹ್ಮಣರೂ ಅನ್ಯೋನ್ಯವಾಗಿರುತ್ತಿದ್ದರು. ದೊಡ್ಡ ದೊಡ್ಡ ಅಧಿಕಾರಿಗಳು ಬೌದ್ಧವಿಹಾರಗಳಿಗೆ ಹೋಗಿ ಅಲ್ಲಿ ವಿದ್ಯಾ ಮುಂಡಿತರಾದ ಶ್ರಮಣಕರನ್ನು ಮನ್ನಿಸುತ್ತಿದ್ದರು. ಇಂತಹ ವಿಹಾರಗಳು ಆಗಣ ವಿದ್ಯಾಶಾಲೆಗಳಾಗಿದ್ದು ರಾಜರೂ ಮಂತ್ರಿಗಳೂ ಮತ್ತು ಬೇಕಾದವ ರೆಲ್ಲರೂ ಪುಂಸ್ತ್ರೀಭೇದವನ್ನೆಣಿಸದೆ ತಮ್ಮ ತಮ್ಮ ಪುತ್ರಪುತ್ರಿಯರನ್ನು ವಿದ್ಯಾ ಭ್ಯಾಸದ ಸಲುವಾಗಿ ಕಳುಹಿಸಿಕೊಡುವ ಪದ್ಧತಿಯಿದ್ದಿತು. ಮಾಲತೀಮಾಧ ವದ ನಾಯಕ-ನಾಯಕಿಯರ ತಂದೆಯರಿಬ್ಬರೂ ಬೇರೆ ಬೇರೆ ರಾಜ್ಯದ ಮಂತ್ರಿ ಗಳಾಗಿದ್ದರು. ಇವರೀರ್ವರೂ ಕಥೆಯಲ್ಲಿ ಕಂಡುಬರುವ ಕಾಮಂದಕಿಯೊಡನೆ ಬೌದ್ಧವಿಹಾರದಲ್ಲಿಯೇ ವ್ಯಾಸಂಗವನ್ನು ಮಾಡಿದವರು. ಅನೇಕ ಸಂದರ್ಭ ಗಳಲ್ಲಿ ಈ ಸನ್ಯಾಸಿನಿಯರೇ ಮುಂದಾಳುಗಳಾಗಿ ನಿಂತು ತರುಣ ತರುಣಿಯರ ಪ್ರಣಯ ಸಂಬಂಧಗಳನ್ನು ನಡೆಯಿಸುವ ವಾಡಿಕೆಯು ಆಗ ಪ್ರಚಾರದಲ್ಲಿದ್ದು ದಾಗಿ ತಿಳಿಯುವುದು. ಪ್ರತಿ ವರ್ಷದ ವಸಂತರ್ತುವಿನಲ್ಲಿ ವಸಂತಮಿತ್ರನಾದ ಕಾಮನ ಪೂಜೆಯನ್ನು ನಡೆಯಿಸುವ ವಾಡಿಕೆ ಇದ್ದಿತು. ಇದಕ್ಕೆ ಸರ್ವರೂ ಸುಹೃತ್ತ್ವದಿಂದ ಸೇರುತ್ತಿದ್ದರು. ಶಕುನಶಾಸ್ತ್ರ, ಅಂಗಶಾಸ್ತ್ರಗಳಲ್ಲಿ ಹೆಚ್ಚು ನಂಬಿಕೆಯಿದ್ದ ಆಗಣ ಜನರು ಪುರುಷರ ಎಡಗಣ್ಣು, ಬಲಗಣ್ಣು ಅದು ರುವಿಕೆಯಿಂದ ತಮ್ಮ ಮುಂದಣ ಘಟನಾವಳಿಗಳನ್ನು ಗೊತ್ತುಮಾಡಿ ಕೊಳ್ಳುತ್ತಿದ್ದರು. ಹೆಂಗಸರು ಆನೆಯಮೇಲೆ ಕುಳಿತು ಗಂಡಸರೊಡನೆ ಬೀದಿ ಯಲ್ಲಿ ಸವಾರಿಮಾಡುವ ವಾಡಿಕೆಯು ಇದ್ದಿತು. ಸ್ತ್ರೀವಿದ್ಯಾಭ್ಯಾಸವು ಅತ್ಯಂತೋಚ್ಛ್ರಾಯಸ್ಥಿತಿಯಲ್ಲಿದ್ದಿತು. ಹೆಂಗಸರು ಗಂಡಸರೊಂದಿಗೆ ಸಂಸ್ಕೃ ತದಲ್ಲಿ ಮಾತನಾಡುವುದು ಅಲ್ಲಲ್ಲಿ ಕಂಡುಬರುವುದರಿಂದ ಪ್ರೌಢವಿದ್ಯಾಶಿಕ್ಷ ಣವು ಗಂಡಸರಂತೆ ಹೆಂಗಸರಿಗೂ ದೊರೆಯುತ್ತಿದ್ದುದಾಗಿ ತೋರುತ್ತದೆ. ಅವಿ ದ್ಯಾವತಿಯರಾದ ಹೆಂಗಳೆಯರು ಪ್ರಾಕೃತದಲ್ಲಿ ಮಾತನಾಡುತ್ತಿದ್ದರು. ಪರಸ್ಪರ ಪ್ರಣಯಲೇಖನಗಳನ್ನು ಬರೆಯುವಿಕೆಯು ರೂಢಿಯಲ್ಲಿದ್ದಿತು. ಜನರು ಚಿತ್ರಗ ಳನ್ನು ಬರೆಯುವುದರಲ್ಲಿಯೂ ಬಣ್ಣಹಾಕುವುದರಲ್ಲಿಯೂ ನಕಾಸು ಕೆಲಸಮಾ ಡುವುದರಲ್ಲಿಯೂ ನಿಪುಣತೆಯನ್ನು ಪಡೆದಿದ್ದರು. ಸಂಗೀತಶಾಸ್ತ್ರಾಭ್ಯಾಸದಲ್ಲಿ ಈರ್ವರೂ ಶಿಕ್ಷಣವನ್ನು ಹೊಂದುತ್ತಿದ್ದರು. ಇತರವರ್ಣದ ಸ್ತ್ರೀಪುರುಷರು

ಪ್ರಾಯಸಮರ್ಥರಾದನಂತರ ಒಬ್ಬರನ್ನೊಬ್ಬರು ನೋಡಿ ಮೆಚ್ಚಿ ವಿವಾಹಕ್ಕೆ ಸಮ್ಮತಿಸುವುದು ವಾಡಿಕೆಯಲ್ಲಿದ್ದುದಾಗಿ ತಿಳಿಯಬರುತ್ತದೆ. ಮಾಲತೀ ಮಾಧವದಲ್ಲಿ ಮಾಲತಿಯು ಮಾಧವನನ್ನು ವಿವಾಹವಾದಾಗ ೨೫ ವರ್ಷ ವಯಸ್ಸಿನವಳಾಗಿರಬೇಕೆಂತ ಬೋಧೆಯಾಗುತ್ತದೆ. ಹೇಗೆಂದರೆ, ಕಥೆಯಲ್ಲಿ ಮಾಲತಿಯು ಚಾಮುಂಡಿಗೆ ಬಲಿಕೊಡುವುದಕ್ಕಾಗಿ ಒಯ್ಯಲ್ಪಟ್ಟಿರುವಳು. ಕಾಳಿಕಾಪುರಾಣದ ರುಧಿರಾಧ್ಯಾಯದಲ್ಲಿ* ಚಾಮುಂಡಿಗೆ ಬಲಿಕೊಡುವುದು ಎಮ್ಮೆಯಾದರೆ ಐದು ವರ್ಷಗಳ ವಯಸ್ಸಿನದಾಗಿರಬೇಕೆಂದೂ, ಮನುಷ್ಯರಾದರೆ ೨೫ ವರ್ಷಗಳ ವಯಸ್ಸಿಗೆ ಕಡಿಮೆಯಾಗಿರಕೂಡದೆಂದೂ ಹೇಳಲ್ಪಟ್ಟಿದೆ. ಇದರಿಂದ ಮಾಲತಿಯು ೨೫ವರ್ಷದವಳಾಗಿರಬೇಕೆಂಬುದು ಸ್ಪಷ್ಟವಾಗುವುದು. ಆಪಸ್ತಂಬಸೂತ್ರದಂತೆ ಮಾಲತೀ-ಮಾಧವರ ವಿವಾಹವು ಪ್ರಾಪ್ತವಯಸ್ಸಾದ ನಂತರವೇ ನಡೆದಿರಬೇಕೆಂದು ಬೋಧೆಯಾಗುತ್ತದೆ. ಕವಿಯು ಆಪಸ್ತಂಬ ಸೂತ್ರಾಧ್ಯಾಯಿಯಾಗಿರುವುದರಿಂದ ತನ್ನ ಕಥೆಯಲ್ಲಿಯೂ ಕೂಡ ಆಪಸ್ತಂಬ ಸೂತ್ರದ—

> "ಏತದಹರ್ವಿಜಾನೀಯಾದಹರ್ಭಾರ್ಯಾಮಾಪಹತೇ । ತ್ರಿರಾತ್ರ
> ಮುಭಯೋರಧಶ್ಶಯ್ಯಾ ಬ್ರಹ್ಮಚರ್ಯಕ್ಷಾರಲವಣವರ್ಜನಂಚ ।
>
> ಆಪಸ್ತಂಬಗೃಹ್ಯಸೂತ್ರ ೭—೮.

ಎಂಬುದನ್ನು ಅಕ್ಷರಶಃ ಅನುಸರಿಸಿರುವನು.

ಶ್ಮಶಾನವು ನರಮಾಂಸಭಕ್ಷಕಗಳಾದ ಪಿಶಾಚಗಳಿಂದಾವೃತವಾಗಿರುವುದೆಂದು ಆಗಣ ಜನರು ನಂಬಿಕೊಂಡಿದ್ದರು. ದಯಾಶೂನ್ಯರಾದ ಪಾಷಂಡಿಗಳು ಮಾನುಷಶಕ್ತಿಗೆ ಮೀರಿದ ವರಗಳನ್ನು ಪಡೆಯಬೇಕೆಂದೆಣಿಸಿ ಕಾಳಿಗೆ ಮನುಷ್ಯ ಬಲಿಯನ್ನು ಕೊಡುತ್ತಿದ್ದರು. ಆಗಣ ಜನರಿಗೆ ತಮ್ಮ ಮನೋರಥವು ಕೈಗೂಡದಿದ್ದರೆ ಮನುಷ್ಯರಿಗೆ ಮುಖವನ್ನು ತೋರಿಸದೆ ರಾತ್ರಿಹಗಲು ಶ್ಮಶಾನವಾಸ ಮಾಡುತ್ತ ಶ್ಮಶಾನದಲ್ಲಿ ಹೆಣದ ಮಾಂಸವನ್ನು ತೋರಿಸಿ ಪಿಶಾಚಗಳನ್ನು ಬರಮಾಡಿಕೊಂಡು ಅವುಗಳ ಮೂಲಕ ಕ್ರಿಯಾಸಿದ್ಧಿಯನ್ನು ಹೊಂದಬಹುದೆಂಬ ಭರವಸೆಯಾಗಿದ್ದಿತು. (ಮಾಲತೀಮಾಧವದ ಕಥಾನಾಯಕನಾದ ಮಾಧವನು ಮಾಲತಿಯು ತನಗೆ ದೊರಕುವುದಿಲ್ಲವೆಂದು ತಿಳಿದು ನಿರಾಶನಾಗಿ ಶ್ಮಶಾನಕ್ಕೆ ಹೋಗಿ ಅಲ್ಲಿರುವ ಪಿಶಾಚಗಳನ್ನು ಬರಮಾಡಿಕೊಂಡು ಮಹಾಮಾಂಸವನ್ನು ತೋರಲನುವಾದನೆಂದು ಮಾಲತೀಮಾಧವದ ೫ನೆಯ ಅಂಕದಲ್ಲಿ ಕಂಡುಬರುತ್ತದೆ.)

---

* Asiatic Researches Vol. IX.

ಇದರಿಂದ ಇಲ್ಲದ ಸಲ್ಲದ ಪದಾರ್ಥಗಳಲ್ಲಿಯೂ ರೂಪಗಳಲ್ಲಿಯೂ ಜನರಿಗೆ ನಂಬುಗೆಯನ್ನು ಹುಟ್ಟಿಸಿ ತಾವು ಮಹಾಕರ್ಮಕರರೆಂದು ಜನಗಳಿಗೆ ತೋರ್ಪಡಿಸಿಕೊಳ್ಳುವ ನೆಪದಲ್ಲಿ ಅತ್ಯಂತ ಹೇಯವಾದ ಕೃತ್ಯಗಳನ್ನಾಚರಿಸಿದರೂ ಅದು ಸಾಧುವಾದುದೆಂದೂ, ಪ್ರಶಸ್ತವಾದುದೆಂದೂ, ಕಾರ್ಯಸಿದ್ಧಿಯಾಗುವುದೆಂದೂ ತೋರಿಸುತ್ತಾ ನಂಬಿದವರಿಗೆ ಮೋಸಮಾಡಿ ಭೀತಿಯನ್ನು ಹುಟ್ಟಿಸಿ ಹೊಟ್ಟೆಯನ್ನು ಹೊರೆಯುತ್ತಿದ್ದರೆಂದೂ ಆಗಣ ಜನರು ಎಂತಹ ಕ್ರೂರಕೃತ್ಯಕ್ಕೂ ಹಿಂದೆಗೆಯುತ್ತಿರಲಿಲ್ಲವೆಂದೂ ತಿಳಿಯಬಹುದಾಗಿದೆ. ಆಗಣ ಕಾಲದಲ್ಲಿ ಸ್ತ್ರೀಪುರುಷರಿಬ್ಬರೂ ಎಲ್ಲಾ ವಿಧವಾದ ಯೋಗಾಭ್ಯಾಸವನ್ನಾಚರಿಸಿ ಅಮಾನುಷ ಶಕ್ತಿಯನ್ನು ( Supernatural power ) ಹೊಂದುತ್ತಿದ್ದರೆಂದೂ ಇಂತಹ ಶಕ್ತಿಯು ತನಗೂ ಇದ್ದಿತೆಂದೂ ಗ್ರಂಥಕಾರನು ಐದನೆಯ ಅಂಕಾರಂಭದಲ್ಲಿ ಹೇಳಿಕೊಂಡಿರುವನು. ಲಿಂಗಪೂಜೆಯೂ ಮತ್ತು ಶಕ್ತಿಪೂಜೆಯೂ ಹೆಚ್ಚಾಗಿದ್ದುವು. ಮನುಷ್ಯನಿಗೆ ಗ್ರಹಚಾರದೋಷದಿಂದ ಒದಗಬಹುದಾದ ದುಃಖನಿವಾರಣೋಪಾಯವು ತೋರದೆ ಹೋದರೆ ಬೆಂಕಿಯಲ್ಲಿ ಬಿದ್ದು ಆತ್ಮಹತ್ಯವನ್ನು ಮಾಡಿಕೊಳ್ಳುವುದು ಆರ್ಷೇಯವಾದ ವಾಡಿಕೆಯಾಗಿತ್ತೆಂದು ತೋರುತ್ತದೆ. ಈವಿಚಾರವಾದ ಅನೇಕೋದಾಹರಣೆಗಳು ಮಹಾಭಾರತಾದಿ ಗ್ರಂಥಗಳಲ್ಲಿ ದೊರೆಯುತ್ತವೆ. ಮಾಲತೀಮಾಧವದಲ್ಲಿಯೂ ಕೂಡ ಮಾಲತಿಯ ತಂದೆಯಾದ ಭೂರಿವಸುವು ಮಾಲತಿಯು ಪುನಃ ದೊರಕಳೆಂದು ಹತಾಶನಾಗಿ ಅಗ್ನಿಪ್ರವೇಶವನ್ನು ಮಾಡಲು ಸಿದ್ಧನಾದನೆಂಬುದು ಹತ್ತನೆಯ ಅಂಕವನ್ನೋದುವುದರಿಂದ ಗೊತ್ತಾಗುವುದು. ಇದಲ್ಲದೆ, ಬೆಟ್ಟದಿಂದ ಕೆಳಕ್ಕುರುಳುವ ಮತ್ತೊಂದು ವಿಧವಾದ ಆತ್ಮಹತ್ಯೆಯು ಪ್ರಚಾರದಲ್ಲಿದ್ದಿತೆಂದೂ ಅದು ಪದ್ಮಾವತಿಯಲ್ಲಿಯೇ ನಡೆದುದಾಗಿಯೂ ತಿಳಿಯಬರುತ್ತದೆ. (ಕಾಮಂದಕಿಯು ತನ್ನ ಗೆಳತಿಯಾದ ಮಾಲತಿಯು ದೊರಕಳೆಂದು ತಿಳಿದಾಗ ಬಹು ಎತ್ತರವಾದ ಪರ್ವತಶಿಖರದಿಂದ ಕೆಳಗೆಬಿದ್ದುರುಳುವಷ್ಟರಲ್ಲಿಯೇ ಅದೃಷ್ಟವಶದಿಂದ ಮಾಲತಿಯು ಬದುಕಿರುವಳೆಂದು ತಿಳಿದು ಆತ್ಮಹತ್ಯದಿಂದ ಪರಾಙ್ಮುಖಳಾದಳು.)

ಭವಭೂತಿಯು—

> ಸರ್ವಥಾ ವ್ಯವಹರ್ತವ್ಯಂ ಕುತೋ ಹ್ಯವಚನೀಯತಾ ।
> ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ ॥

ಎಂದು ಹೇಳಿರುವುದರಿಂದ ತನಗಿಂತಲೂ ಪ್ರಾಚೀನಮಹಾಕವಿಗಳ ಕಾಲದಲ್ಲಿದ್ದ ಹಾಗೆ ತಕ್ಕ ಮರ್ಯಾದೆಗಳು ತನ್ನ ಕಾಲದಲ್ಲಿರಲಿಲ್ಲವೆಂತಲೂ ಜನರು ನಿಷ್ಕಾರಣವಾಗಿ ಇತರರನ್ನು ದ್ವೇಷಿಸುವಷ್ಟು ಅಸೂಯಾಪರರಾಗಿದ್ದರೆಂದೂ ದುರಾತ್ಮ

ರಾದವರು ಪತಿವ್ರತೆಯರನ್ನು ಮನಬಂದಂತೆ ದೂಷಿಸಿ ಅವಹೇಳನಮಾಡುತ್ತಿದ್ದರೆಂದೂ ಗೊತ್ತಾಗುವುದು.

ಲೋಕೇ ನಿತ್ಯಪ್ರಮೋದಂ ವಿದಧತು ಕವಯಃ ಶ್ಲೋಕಮಾತ್ರಪ್ರಸಾದಂ
ಸಂಖ್ಯಾವಂತೋಽಪಿ ಭೂಮ್ನಾ ಪರಕೃತಿಷು ಮುದಂ ಸಂಪ್ರಧಾರ್ಯ ಪ್ರಯಾಂತು ॥

ಎಂದು ಮಹಾವೀರಚರಿತಾಂತ್ಯದಲ್ಲಿ ಹೇಳಿರುವ ಭರತವಾಕ್ಯದಿಂದ ಆಗಣ ಕಾಲದ ಪಂಡಿತರು ಪರೋತ್ಕರ್ಷಸಹನವಿಲ್ಲದೆ ಇತರರ ಗ್ರಂಥಗಳಲ್ಲಿ ದೋಷಾರೋಪಣೆಯನ್ನು ಮಾಡುವುದು ವಾಡಿಕೆಯಾಗಿತ್ತೆಂತಲೂ ಬೋಧೆಯಾಗುವುದು.

ಇವನು! **ಮಾಲತೀಮಾಧವ, ಮಹಾವೀರಚರಿತೆ, ಉತ್ತರರಾಮಚರಿತೆ** ಎಂಬ ಮೂರು ನಾಟಕಗಳನ್ನು ಬರೆದಿರುವನು. ಇದಲ್ಲದೆ ಇವನದೆಂದು ಹೇಳುವ—

ನಿರವದ್ಯಾನಿ ಪದ್ಯಾನಿ ಯದಿ ನಾಟ್ಯಸ್ಯ ಕಾ ಕ್ಷತಿಃ ।
ಭಿಕ್ಷುಕಕ್ಷಾವಿನಿಕ್ಷಿಪ್ತಃ ಕಿಮಿಕ್ಷುರ್ನೀರಸೋ ಭವೇತ್ ॥

ಎಂಬ ಶ್ಲೋಕವು ಶಾರ್ಙ್ಗಧರಪದ್ಧತಿಯಲ್ಲಿಯೂ—

ಅಳಿಪಟಲೈರನುಯಾತಾಂ
ಸಹೃದಯಹೃದಯಜ್ವರಂ ವಿಲುಂಪಂತೀಂ ।
ಮೃಗಮದಪರಿಮಳಲಹರೀಂ
ಸಮೀರ ಕಿಂ ಪಾಮರೇಷು ರೇ ಕಿರಸಿ ॥
—ರಸಿಕಜೀವನ ೩—೨೨

ಕಿಂ ಚಂದ್ರಮಾಃ ಪ್ರತ್ಯುಪಕಾರಲಿಪ್ಸಯಾ
ಕರೋತಿ ಗೋಭಿಃ ಕುಮುದಾವಬೋಧನಂ ।
ಸ್ವಭಾವ ಏವೋನ್ನತಚೇತಸಾಂ ಸತಾಂ
ಪರೋಪಕಾರವ್ಯಸನಂ ಹಿ ಜೀವಿತಂ ॥ ಪ್ರ ೩—೧೫ ॥

ಎಂಬ ಶ್ಲೋಕಗಳು ಗದಾಧರನ ರಸಿಕಜೀವನದಲ್ಲಿಯೂ ಕಂಡುಬರುವುದರಿಂದ ಭವಭೂತಿಯು ಈ ನಾಟಕಗಳಲ್ಲದೆ ಮತ್ತಾವುದಾದರೂ ಬೇರೆ ಕಾವ್ಯವನ್ನು ಬರೆದಿರಬಹುದೋ ಏನೋ ಎಂಬ ಶಂಕೆಯು ತೋರುವುದು. ಆದರೆ ಈ ಶ್ಲೋಕಾಧಾರಗಳಿಂದ ಮಾತ್ರವೇ ನಿಶ್ಚಯಿಸಲಾಗುವುದಿಲ್ಲ.

ಕಥೆಯನ್ನು ಬೇಕುಬೇಕಾದಹಾಗೆ ಮಾರ್ಪಡಿಸಿಹೇಳಲು ಕವಿಗಳು ಸರ್ವಸ್ವತಂತ್ರರಾದುದರಿಂದ ಭವಭೂತಿಯು ಮಹಾವೀರಚರಿತೆ ಮತ್ತು ಉತ್ತರರಾಮಚರಿತೆ ಇವುಗಳನ್ನು ಕೊಂಚ ಮಾರ್ಪಡಿಸಿ ಬರೆದಿರುವನು. ಈ ಮೂರು ನಾಟಕಗಳಲ್ಲಿಯೂ ಕವಿಯು ತನ್ನ ಹೆಸರನ್ನು ಹೇಳಿಕೊಂಡಿರುವುದರಿಂದ ಇವನೇ ಬರೆದವನೆಂಬುದು ಸ್ಪಷ್ಟಪಡುವುದು. ಮಾಲತೀಮಾಧವದಲ್ಲಿ ಕಾಪಾ

ಲಿಕನ ಪಾತ್ರವನ್ನು ಸೇರಿಸಿ ಕಥೆಯನ್ನು ಸಾಗಿಸಿರುವುದಲ್ಲದೆ ನಾಟಕಗಳಲ್ಲಿ ಪಾತ್ರಗಳ ಸ್ವಾಭಾವಿಕಚಿತ್ರಗಳನ್ನು ಸ್ಪಷ್ಟರೀತಿಯಿಂದ ಹೇಳಿರುವನು. ಮಾಧವ ಮಕರಂದನ ಸ್ನೇಹ ಮತ್ತು ಶೂರತ್ವ, ಮಾಲತಿಯ ಗಂಭೀರಸ್ವಭಾವ ಮತ್ತು ಕುಲಾಭಿಮಾನ, ಲವಂಗಿಕಾ, ಬುದ್ಧರಕ್ಷಿತಾ, ಅವಲೋಕಿತೆಯರ ಭಾಷಣ ಪಟುತ್ವ, ಕಾಮಂದಕಿಯ ಪ್ರೌಢತರಚಾತುರ್ಯ, ಅಘೋರಘಂಟ ಮತ್ತು ಕಪಾಲಕುಂಡಲೆಯರ ಕ್ರೂರತ್ವ, ಇವುಗಳನ್ನು ಕವಿಯು ಬಹುಚತುರತೆಯಿಂದ ವರ್ಣಿಸಿರುವನು. ಇವುಗಳಲ್ಲದೆ—

ಮೊದಲನೆಯ ಅಂಕದಲ್ಲಿ ಮದನೋದ್ಯಾನದಲ್ಲಿ ಮಾಲತೀ-ಮಾಧವರ ಪರಸ್ಪರಾವಲೋಕನದಿಂದ ಉಂಟಾದ ಕಾಮವಿಕಾರವನ್ನು ಮಾಧವನು ತನ್ನ ಗೆಳೆಯನಾದ ಮಕರಂದನೊಡನೆ ಹೇಳುವ ವಿಚಾರವೂ, ಆರನೆಯ ಅಂಕದಲ್ಲಿ ವಿರಹರುದ್ಧಕಂಠಿಯಾದ ಮಾಲತಿಯು ಲವಂಗಿಕೆಯೊಡನೆ ಮಾಧವನ ವಿರಹದಿಂದಾದ ಸಂತಾಪವನ್ನು ಸೂಚಿಸುತ್ತಿರುವಾಗ ಲವಂಗಿಕೆಯಿಂದ ಸಂಜ್ಞೆಮಾಡಲ್ಪಟ್ಟು ಎದುರಿಗೆ ಬಂದು ನಿಂತಿರುವ ಮಾಧವನನ್ನು ನೋಡಿ ಲವಂಗಿಕೆಯೆಂಬ ಭ್ರಾಂತಿಯಿಂದ ತಕ್ಕೈಸಿ ಅನಂತರ ಮಾಧವನೆಂದು ತಿಳಿದು ಲಜ್ಜಾಸಹಿತಳಾದುದೂ ಸರಸವಾಗಿರುವುದು. ಐದನೆಯ ಅಂಕದಲ್ಲಿ ಭಯೋತ್ಪಾದಕ ಪ್ರಸಂಗವಿರುವುದು. ಅದ್ಭುತ, ವೀರ, ಕರುಣ ಈ ರಸಗಳನ್ನು ಬೇರೆ ಬೇರೆಯಾಗಿಯೂ ಕೆಲವು ಕಡೆ ಒಂದರಲ್ಲಿಯೇ ಈ ಮೂರು ರಸಗಳನ್ನೂ ಹೇಳಿ ತೋರಿಸಿರುವುದು ಕವಿತಾಚಾತುರ್ಯವಾಗಿದೆ. ಶೃಂಗಾರರಸವು ಶುದ್ಧವಾದುದಾಗಿ ಇರುವುದು. ಮಾಲತಿಯ ವಿವಾಹವು ಮಾಧವನನ್ನು ಬಿಟ್ಟು ನಂದನನೊಡನೆ ಆಗುವುದೆಂಬ ಸಮಾಚಾರವನ್ನು ಕೇಳಿದ ಮಾಧವನಿಗೆ ಉಂಟಾದ ನೈರಾಶ್ಯಸ್ಥಿತಿ, ಕಪಾಲಕುಂಡಲೆಯು ಮಾಲತಿಯನ್ನು ಎತ್ತಿಕೊಂಡು ಹೋದಾಗ ಆ . . ಮಾಲತಿಯ ಸ್ಥಿತಿ, ಮಾಧವನ ದುಃ[illegible]ದುಃಖಸ್ಥಿತಿ ಇವುಗಳನ್ನು ಬಹೂತ್ಕೃಷ್ಟರೀತಿಯಿಂದ [illegible] ಈ ನಾಟಕದಲ್ಲಿ ಪ್ರಖ್ಯಾತೋ[illegible]ಹರಣವಾಗಿರುವುದು. ಮಾಲತಿಯ [illegible]ವೆಂದು ತಿಳಿದು [illegible]ನದಲ್ಲಿ [illegible]ಾಗ ಪಿಶಾಚಚೇಷ್ಟೆಯನ್ನು ವರ್ಣಿಸಿರುವುದು ಅತ್ಯಂತ ಭಯಂಕರವಾಗಿರುವುದು. ಇದಲ್ಲದೆ ಅಲ್ಲಲ್ಲಿ ಸಂದರ್ಭಾನುಸಾರ ಬೇಕಾದ ಭವ್ಯತಮವಾದ ವರ್ಣನೆಗಳೂ ಇರುವುವು. ಅದ[illegible]ಲ್ಲಿಯೂ ೯ ನೆಯ ಅಂಕದಲ್ಲಿ ಸೌದಾಮಿನಿಯು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ ಪದ್ಮಾವತಿಯ ಹತ್ತಿರವಿರುವ ವನಶ್ರೀವರ್ಣನೆಯು ಅತ್ಯಂತ ಸುಂದರವಾಗಿಯೂ ಮನೋಹರವಾಗಿಯೂ ಇರುವುದು.

ಭವಭೂತಿಯ ಶೈಲಿಗೂ ಕಾಳಿದಾಸನ ಶೈಲಿಗೂ ಎಷ್ಟೋ ವ್ಯತ್ಯಾಸವು ಕಂಡುಬರುವುದು. ಕಾಳಿದಾಸನ ಶೈಲಿಯು ಸರಳವಾಗಿಯೂ ಉಚಿತವಾದ ಸ್ವಭಾವವರ್ಣನೆಗಳಿಂದ ಕೂಡಿ ಸಾಮಾನ್ಯರಿಗೂ ಕೂಡ ಸುಲಭವಾಗಿ ತಿಳಿಯು ವಂತೆ ಸಮಾಸಾಡಂಬರಗಳಿಲ್ಲದೆ ರಮಣೀಯವಾಗಿರುವುದು. ಕಾಳಿದಾಸನು ದೊಡ್ಡದೊಡ್ಡ ವೃತ್ತಗಳನ್ನು ಹಾಕದೆ ಚೆನ್ನಾಗಿ ಭಾವವು ತಿಳಿಯುವಂತೆ ಬರೆದಿರು ವನು. ಭವಭೂತಿಯು ದೀರ್ಘವಾದ ಸಮಾಸ ಗದ್ಯಪದ್ಯಗಳನ್ನು ಹಾಕಿ ಕೃತ್ರಿಮಾಲಂಕಾರದಿಂದ ಭಾಷಾರಮಣಿಯನ್ನಲಂಕರಿಸಿರುವನು. ಸ್ವಲ್ಪ ಹೆಚ್ಚು ಕಡಿಮೆ ಆಗಣ ಕವಿಗಳಾದ ಶ್ರೀಹರ್ಷ ಬಾಣನೇ ಮೊದಲಾದವರು ಇದೇ ರೀತಿ ಯಾದ ಶೈಲಿಯನ್ನು ಅನುಸರಿಸಿರುವರು. ಇವರನ್ನನುಸರಿಸಿ ಆಗಣ ಕಾಲಕ್ಕೆ ತಕ್ಕಂತೆ ಭವಭೂತಿಯೂ ಬರೆದಿರುವನು.

ಭವಭೂತಿಯ ಗ್ರಂಥಗಳಲ್ಲಿ ಕೆಲವುಕಡೆ ಸ್ವಭಾವವಾಗಿಯೋ ಅಥವಾ ಬುದ್ಧಿಪೂರ್ವಕವಾಗಿಯೋ ಹೇಳಿರುವ ಕೆಲವು ವರ್ಣನಾಂಶಗಳು ಕಾಳಿದಾಸನ ಗ್ರಂಥಗಳಲ್ಲಿಯೂ ಕಾಣಬರುತ್ತವೆ.

ಉದಾಹರಣೆಗಾಗಿ ಕೆಲವು ಶ್ಲೋಕಗಳನ್ನು ಇಲ್ಲಿ ತೋರಿಸುವೆವು—

ಏತೇ ತೇ ಸುರಸಿಂಧುಧೌತದೃಷದಃ ಕರ್ಪೂರಖಂಡೋಜ್ಜ್ವಲಾಃ
ಪಾದಾ ಜರ್ಜರಭೂರ್ಜವಲ್ಕಲಭೃತೋ ಗೌರೀಗುರೋಃ ಪಾವನಾಃ ।

—ಮಹಾವೀರಚರಿತ ೭—೨೭.

ಕಾರ್ಯಾ ಸೈಕತಲೀನಹಂಸಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣಹರಿಣಾ ಗೌರೀಗುರೋಃ ಪಾವನಾಃ ।

—ಶಾಕುಂತಲ ೭— ೧೭.

ಉತ್ಖಾತಸ್ತ್ರಿಭುವನಕಂಟಕೋಽತಿದೃಪ್ಯ
ದ್ದೋರ್ದಂಡಾಂಚಿತಮಹಿಮಾಪ್ಯಯಂ ನಿಕಾರಃ ।
ದೇವ್ಯಾಶ್ಚ ಪ್ರತಿಶಮಿತಸ್ತಥಾತ್ರ ಸಂಧಾ
ನಿರ್ವ್ಯೂಢಾ ಪ್ರಗುಣವಿಭೀಷಣಾಭಿಷೇಕಾತ್ ॥

—ಮಹಾವೀರಚರಿತ ೭—೮.

ಉತ್ಖಾತಲೋಕತ್ರಯಕಂಟಕೇಽಪಿ
ಸತ್ಯಪ್ರತಿಜ್ಞೇಪ್ಯವಿಕತ್ಥನೇಽಪಿ ।
ತ್ವಾಂ ಪ್ರತ್ಯಕಸ್ಮಾತ್ಕಲುಷಪ್ರವೃತ್ತಾ
ವಸ್ತ್ಯೇವ ಮನ್ಯುರ್ಭರತಾಗ್ರಜೇ ಮೇ ॥

—ರಘುವಂಶ ೧೪—೭೩.

ಅನಿಯತರುದಿತಸ್ಮಿತಂ ವಿರಾಜತ್
ಕತಿಪಯಕೋಮಲದಂತಕುಡ್ಮಲಾಗ್ರಂ ।

ವದನಕಮಲಕಂ ಶಿಶೋಃ ಸ್ಮರಾಮಿ
ಸ್ಖಲದಸಮಂಜಸಮಂಜು ಜಲ್ಪಿತಂ ತೇ ||
—ಉತ್ತರರಾಮಚರಿತ ೪—೪.

ಆಲಕ್ಷ್ಯದಂತಮುಕುಲಾನನಿಮಿತ್ತಹಾಸೈಃ
ಅವ್ಯಕ್ತವರ್ಣರಮಣೀಯವಚಃಪ್ರವೃತ್ತೀನ್ |
ಅಂಕಾಶ್ರಯಪ್ರಣಯಿನಸ್ತನಯಾನ್ವಹಂತೋ
ಧನ್ಯಾಸ್ತದಂಗರಜಸಾ ಮಲಿನೀಭವಂತಿ ||
—ಶಾಕುಂತಲ ೭—೧೭.

ಭಾರತ ಕವಿಕುಲಕೀರ್ತನದಲ್ಲಿ ಕಾಳಿದಾಸ ಭವಭೂತಿಯರಿಬ್ಬರು ಮಾತ್ರವೇ ಮುಂದಾಗಿರುವರು. ಪ್ರತಿಯೊಬ್ಬರೂ ಈ ಕವಿಗಳನ್ನೇ ತೆಗೆದುಕೊಂಡು ಪರಸ್ಪರ ಹೋಲಿಸುವರು. ಕಾಳಿದಾಸನು ಯಾವುದನ್ನು ವ್ಯಂಗ್ಯದಲ್ಲಿ ಹೇಳುವನೋ ಅದನ್ನು ಭವಭೂತಿಯು ವಾಚ್ಯವಾಗಿ ಹೇಳಿರುವನು. ಇದಕ್ಕೆ ಉದಾಹರಣವಾಗಿ ಅವರವರ ಕಾವ್ಯಗಳಲ್ಲಿ ಸಮಾನಾಭಿಪ್ರಾಯವುಳ್ಳ ಕೆಲವು ಶ್ಲೋಕಗಳನ್ನು ಹೇಳುವೆವು—

ದುಷ್ಯಂತನು ಶಕುಂತಲೆಯ ಸೌಂದರ್ಯವನ್ನು ಕುರಿತು ತನ್ನ ಸ್ನೇಹಿತನೊಡನೆ ಹೇಳುವಿಕೆ—

ಚಿತ್ರೇ ನಿವೇಶ್ಯ ಪರಿಕಲ್ಪಿತಸತ್ತ್ವಯೋಗಾ
ರೂಪೋಚ್ಚಯೇನ ವಿಧಿನಾ ಮನಸಾ ಕೃತಾ ನು |
ಸ್ತ್ರೀರತ್ನಸೃಷ್ಟಿರಪರಾ ಪ್ರತಿಭಾತಿ ಸಾ ಮೇ
ಧಾತುರ್ವಿಭುತ್ವಮನುಚಿಂತ್ಯ ವಪುಶ್ಚ ತಸ್ಯಾಃ ||
—ಶಾಕುಂತಲ ೨—೯.

ಮಾಧವನು ಮಕರಂದನೊಡನೆ ಮಾಲತಿಯ ಸೌಂದರ್ಯವನ್ನು ವರ್ಣಿಸುವಿಕೆ—

ಸಾ ರಾಮಣೀಯಕನಿಧೇರಧಿದೇವತಾ ವಾ
ಸೌಂದರ್ಯಸಾರಸಮುದಾಯನಿಕೇತನಂ ವಾ |
ತಸ್ಯಾಃ ಸಖೇ ನಿಯತಮಿಂದುಕಲಾಮೃಣಾಳ
ಜ್ಯೋತ್ಸ್ನಾದಿ ಕಾರಣಮಭೂನ್ಮದನಶ್ಚ ವೇಧಾಃ ||
—ಮಾಲತೀಮಾಧವ ೧—೨೪.

ಕಶ್ಯಪನು ಶಕುಂತಲಾಪರವಾಗಿ ದುಷ್ಯಂತನಿಗೆ ಹೇಳುವುದು—

ಅಸ್ಮಾನ್ ಸಾಧು ವಿಚಿಂತ್ಯ ಸಂಯಮಧನಾನುಚ್ಚೈಃ ಕುಲಂ ಚಾತ್ಮನಃ
ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹಪ್ರವೃತ್ತಿಂ ಚ ತಾಂ |

ಸಾಮಾನ್ಯಪ್ರತಿಪತ್ತಿಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
ಭಾಗ್ಯಾಯತ್ತಮತಃಪರಂ ನ ಖಲು ತದ್ವಾಚ್ಯಂ ವಧೂಬಂಧುಭಿಃ ||

—ಶಾಕುಂತಲ ೪—೧೭.

ಕಾಮಂದಕಿಯು ಪ್ರಿಯತಮಳಾದ ಮಾಲತಿಯನ್ನು ಮಾಧವನಲ್ಲರ್ಪಿಸಿ—

ಪರಿಣತಿರಮಣೀಯಾಃ ಪ್ರೀತಯಸ್ತ್ವದ್ವಿಧಾನಾ
ಮಹಮಪಿ ತವ ಮಾನ್ಯಾ ಹೇತುಭಿಸ್ತೈಶ್ಚ ತೈಶ್ಚ |
ತದಿಹ ಸುವದನಾಯಾಂ ತಾತ ಮತ್ತಃ ಪರಸ್ಮಾತ್
ಪರಿಚಯ ಕರುಣಾಯಾ ಸರ್ವಥಾ ಮಾ ವಿರಂಸೀಃ ||

—ಮಾಲತೀಮಾಧವ ೬—೧೬.

ದುಷ್ಯಂತನು ಶಕುಂತಲೆಯ ವಿಚಾರದಲ್ಲಿ ಭಗ್ನಾಶನಾಗಿ—

ಕಾಮಂ ಪ್ರಿಯಾ ನ ಸುಲಭಾ
ಮನಸ್ತು ತದ್ಭಾವದರ್ಶನಾಶ್ವಾಸಿ |
ಅಕೃತಾರ್ಥೇಽಪಿ ಮನಸಿಜೇ
ರತಿಮುಭಯಪ್ರಾರ್ಥನಾ ಕುರುತೇ ||

—ಶಾಕುಂತಲ ೨—೧.

ಮಾಧವನಿಗೆ ಮಾಲತಿಯು ದೊರೆಯುವ ಸಂಭವವಿಲ್ಲವೆಂದು ತಿಳಿದು ಹತಾಶನಾಗಿ—

ಸಮಾನಪ್ರೇಮಾಣಂ ಜನಮಸುಲಭಂ ಪ್ರಾರ್ಥಿತವತೋ
ವಿಧೌ ವಾಮಾರಂಭೇ ಮಮ ಸಮುಚಿತೈಷಾ ಪರಿಣತಿಃ |
ತಥಾಪ್ಯಸ್ಮಿನ್ ದಾನಶ್ರವಣಸಮಯೇಽಸ್ಯಾಃ ಪ್ರವಿಗಳ
ತ್ಪ್ರಭಂ ಪ್ರಾತಶ್ಚಂದ್ರದ್ಯುತಿ ವದನಮಂತರ್ದಹತಿ ಮಾಂ |

—ಮಾಲತೀಮಾಧವ ೪—೪.

ಇನ್ನೂ ಇಂತಹ ಶ್ಲೋಕಗಳು ಅಲ್ಲಲ್ಲಿ ಎಷ್ಟೋ ದೊರೆಯುವುವಾದರೂ ಗ್ರಂಥ ವಿಸ್ತರಭಯದಿಂದ ವಿರಮಿಸಬೇಕಾಗುವುದು.

**ಮಾಲತೀಮಾಧವ: —**

ಇದು ರೂಪಕಭೇದವಾದ ಪ್ರಕರಣಜಾತಿಗೆ ಸೇರಿದುದಾಗಿ ೧೦ ಅಂಕಗಳಿರುವುವು. ಇದರ ಕಥಾಭಾಗವು ಕಲ್ಪಿತವಾದುದಾಗಿರುವುದು. ಕವಿಯು ತನ್ನ ಕಲ್ಪನೆಗೆ ತಕ್ಕಂತೆ ಆಗಣ ಕಾಲದ ನಡೆನುಡಿ, ಆಚಾರ, ಸಮಾಜಧರ್ಮಗಳನ್ನು ಜೋಡಣೆಮಾಡಿ ಬರೆದಿರುವನು. ಇದರಲ್ಲಿ ಶೃಂಗಾರರಸವು ಪ್ರಧಾನವಾದುದಾಗಿರುವುದು. ಮಾಲತೀಮಾಧವನಾಟಕದ ಕಥಾವಿಧಾನವು ಹೀಗೆ ಇರುವುದು.

ದೇವರಾತ, ಭೂರಿವಸು ಮತ್ತು ಕಾಮಂದಕಿ ಈ ಮೂವರೂ ಸಹಾಧ್ಯಾಯಿಗಳು. ದೇವರಾತ ಮತ್ತು ಭೂರಿವಸುವು ಒಂದೇ ಕಡೆ ಓದುತ್ತಿದ್ದಾಗ ಮುಂದೆ ತಮಗೆ ಮಕ್ಕಳಾದರೆ ಪರಸ್ಪರ ಮದುವೆಯನ್ನು ಮಾಡಿಕೊಳ್ಳ ತಕ್ಕುದೆಂಬುದೇ ಚಿಕ್ಕಂದಿನಲ್ಲಿ ನಡೆದ ವಾಗ್ದಾನವಾಗಿದ್ದಿತು. ಕಾಲಕ್ರಮ ದಲ್ಲಿ ದೇವರಾತನು ಕುಂಡಿನಪುರದ ಮಂತ್ರಿಯೂ ಭೂರಿವಸುವು ಪದ್ಮಾವತಿಯ ಮಂತ್ರಿಯೂ ಆದರು. ದೇವರಾತನು ತನ್ನ ಮಗನಾದ ಮಾಧವನನ್ನು ವಿದ್ಯಾಭ್ಯಾಸಕ್ಕಾಗಿ ಪದ್ಮಾವತಿಯ ಬೌದ್ಧವಿಹಾರಕ್ಕೆ ಕಳುಹಿಸಿದ್ದನು. ಕಾಮಂದಕಿಯು ಈ ಬೌದ್ಧವಿಹಾರದ ಒಡತಿಯಾಗಿದ್ದಳು. ಭೂರಿವಸುವಿಗೆ ಅತ್ಯಂತ ಸುಂದರಿಯಾದ ಮಾಲತಿ ಎಂಬ ಮಗಳಾದಳು. ಕಾಮಂದಕಿಯು ಜತೆಯಲ್ಲಿ ತಾವು ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾಗ ತಮ್ಮಲ್ಲಿ ನಡೆದ ವಾಗ್ದಾನವನ್ನು ಭೂರಿವಸುವಿಗೆ ಜ್ಞಾಪಕಕೊಡಬೇಕೆಂಬುದೇ ದೇವರಾತನ ಆಂತರ್ಯವಾಗಿದ್ದಿತು. ಹಿಂದಣ ಮಾತಿನಂತೆ ಭೂರಿವಸುವು ಮಗಳಾದ ಮಾಲತಿಯನ್ನು ಮಾಧವನಿಗೆ ಕೊಡಲಾಶಿಸುವನು. ಹೀಗೆ ಸಂಬಂಧವನ್ನು ಬೆಳೆಯಿಸುವುದು ರಾಜನಿಗೆ ಇಷ್ಟವಿಲ್ಲದೆ ತನ್ನ ಸಭಾಸದರಲ್ಲಿ ಒಬ್ಬನಾದ ನಂದನನಿಗೆ ಸುಂದರಿಯಾದ ಮಾಲತಿಯನ್ನುಕೊಡಲು ಬಲಾತ್ಕರಿಸುವನು. ಈ ಸಂಬಂಧಕ್ಕೆ ಭೂರಿವಸುವು ಒಡಂಬಡದೆ ಮಗಳಾದ ಮಾಲತಿಯನ್ನು ಮಾಧವನಿಗೆ ಕೊಟ್ಟು ಏಕಾಂತದಲ್ಲಿ ವಿವಾಹವನ್ನು ನಡೆಯಿಸುವಂತೆ ಮಠಾಧ್ಯಕ್ಷಳಾದ ಕಾಮಂದಕಿಗೆ ಏಕಾಂತವಾಗಿ ಹೇಳಿಕಳುಹಿಸಿ ರಾಜನು ಯಾವಾಗಲಾದರೂ ಕೇಳಿದರೆ ತನಗೆ ಆ ವಿಚಾರವೇ ತಿಳಿಯದೆಂದು ಹೇಳುವುದಕ್ಕೆ ಸಿದ್ಧನಾಗಿದ್ದನು. ಹೀಗೆ ಇರುವಲ್ಲ ಮಾಲತಿಯು ಯುವಕನಾದ ಮಾಧವನ ಸೌಂದರ್ಯವನ್ನು ಮೆಚ್ಚುವಳು. ಕಾಮಂದಕಿಯು ಮಾಧವನ ಮಿತ್ರನಾದ ಮಕರಂದನಿಗೂ ನಂದನನ ಸೋದರಿಯಾದ ಮದಯಂತಿಕೆಗೂ ವಿವಾಹವನ್ನು ಬೆಳೆಯಿಸಬೇಕೆಂಬ ಕುತೂಹಲದಲ್ಲಿರುವಳು. ಹೀಗಿರುತ್ತಾ ಉದ್ಯಾನದಲ್ಲಿ ಮಾಧವನು ಮಾಲತಿಯನ್ನು ನೋಡಿ ಪರವಶನಾಗುವನು. ಮಾಧವನು ತಾನು ರಚಿಸುತ್ತಿದ್ದ ಪುಷ್ಪಹಾರವನ್ನು ಮಾಲತಿಯ ಜತೆಗಾರಳಾದ ಲವಂಗಿಕೆಯ ಇಷ್ಟಪ್ರಕಾರ ಅವಳ ಕೈಯಲ್ಲಿ ಕೊಡುವನು. ಆಗ ಆನೆಯ ಮೇಲೆ ಕುಳಿತುಕೊಂಡು ವಿನೋದದಿಂದ ವಿಹರಿಸುತ್ತಿದ್ದ ಮಾಲತಿಯು ಮಾಧವನ ದೃಷ್ಟಿಯಿಂದ ಮರೆಯಾಗುವಳು. ನಾಯಕನು ಕ್ಷುಣ್ಣಮನಸ್ಕನಾಗಿ ಹಿಂದಿರುಗುವನು. ಸ್ನೇಹಿತನಾದ ಮಕರಂದನು ಸೌಂದರ್ಯಾಂಧನಾದ ಮಾಧವನನ್ನು ನೋಡಿ ಪ್ರಣಯ ವಿಹ್ವಲನಾಗಿರುವನೆಂದು ತಿಳಿದು ವಿಚಾರಿಸುವಲ್ಲಿ ಮಾಧವನು ಗೆಳೆಯ! ಉದ್ಯಾನ

ದಲ್ಲಿ ನಡೆಯುತ್ತಿದ್ದ ಮನ್ಮಥಪೂಜೆಯನ್ನು ನೋಡುವುದಕ್ಕೆಂದು ತನ್ನನ್ನು ಅವ ಲೋಕಿತೆಯು ಕರೆದುಕೊಂಡು ಹೋದಹಾಗೂ ಅಲ್ಲಿ ಮಾಲತಿಯು ತನ್ನಮನಾ ಪಹಾರಮಾಡಿದಹಾಗೂ ಹೇಳಿದುದಲ್ಲದೆ ಮಾಲತಿಯ ಸೌಂದರ್ಯವನ್ನು ಮನ ಬಂದಂತೆ ವರ್ಣಿಸುತ್ತಾ ಹಾಯ್! ಗೆಳೆಯ! ಮಾಲತಿಯು ಯಾವನೋ ಬೇರೊ ಬ್ಬನಲ್ಲಿ ಮನವಿಟ್ಟು ಅವನಲ್ಲಿ ಅನುರಕ್ತಳಾಗಿರುವಳೆಂದು ಹೇಳುವನು. ಅದನ್ನು ಕೇಳಿ ಮಕರಂದನು ಅವಳು ನಿನ್ನಲ್ಲಿ ಏನಾ ಮತ್ತಾರಲ್ಲಿಯೂ ಅನುರಕ್ತಳಾಗಿಲ್ಲ ವೆಂದು ಧೃಡಪಡಿಸಿಕೊಡುತ್ತಿರುವಷ್ಟರಲ್ಲಿ ಮಾಧವನ ಚಾರನೊಬ್ಬನು ಮಾಲತಿ ಯಿಂದ ಬರೆಯಲ್ಪಟ್ಟಿರುವ ಮಾಧವನ ಚಿತ್ರಪಠವನ್ನು ತಂದುಕೊಡುವನು. ಇದನ್ನು ನೋಡಿ ಮಾಧವನ ಸಂಶಯವು ದೂರವಾಯಿತು. ಮಾಧವನು ತನ್ನ ಭಾವಪಠದ ಮಗ್ಗುಲಿನಲ್ಲಿಯೇ ಸುರಸುಂದರಿಯಂತಿರುವ ಮಾಲತಿಯನ್ನು ಚಿತ್ರಿಸಿ ಅದರ ಕೆಳಗಡೆ—

> ಜಗತಿ ಜಯಿನಸ್ತೇ ತೇ ಭಾವಾ ನವೇಂದುಕಲಾದಯಃ |
> ಪ್ರಕೃತಿ ಮಧುರಾಃ ಸಂತ್ಯೇವಾನ್ಯೇ ಮನೋ ಮದಯಂತಿ ಯೇ ||
> ಮಮ ತು ಯದಿಯಂ ಯಾತಾ ಲೋಕೇ ವಿಲೋಚನಚಂದ್ರಿಕಾ |
> ನಯನವಿಷಯಂ ಜನ್ಮನ್ಯೇಕಃ ಸ ಏವ ಮಹೋತ್ಸವ ಃ |
>
> —ಮಾಲತೀಮಾಧವ ೧—೩೯.

ಎಂಬ ಈ ಶ್ಲೋಕವನ್ನು ಬರೆದಿಡುವನು. ಕೊನೆಗೆ ಈ ಚಿತ್ರಪಠವು ಮಾಲತಿಯ ಸ್ನೇಹಿತಳಾದ ಲವಂಗಿಕೆಯ ಕೈಸೇರುವುದು.

ಎರಡನೆಯ ಅಂಕದಲ್ಲಿ-ಮಠದಲ್ಲಿ ವಿರಹಾನಲಸಂತಪ್ತಳಾಗಿ ಹಳಹಳಿಸು ತ್ತಿರುವ ಮಾಲತಿಯ ಕೈಗೆ ಲವಂಗಿಕೆಯು ಆ ಚಿತ್ರಪಟವನ್ನು ಕೊಟ್ಟು ಸಂತೈ ಸುವಳು. ಲವಂಗಿಕೆಯ ಪ್ರಾರ್ಥನೆಯಂತೆ ಮಾಧವನು ಹಠಾತ್ತಾಗಿ ಮಾಲತಿಗೆ ಸಂದರ್ಶನವನ್ನು ಕೊಟ್ಟನು. ಇದನ್ನು ನೋಡಿ ಪುಳುಕಿತಗಾತ್ರಳಾದ ಆ ಮಾಲತಿಯು ನಡುಗಲಾರಂಭಿಸಿದಳು. ಲವಂಗಿಕೆಯು ಮಾಲತಿಯನ್ನು ನೋಡಿ ಎಲಾ ಗೆಳತಿ! ನೀನು ಯಾವುದನ್ನೂ ಯೋಚಿಸದೆ ತಾನಾಗಿ ಬಂದವನನ್ನುಪಾಣಿ ಗ್ರಹಣಮಾಡಿಕೊಳ್ಳೆಂದು ಹೇಳುವಳು. ಆದರೆ ಅದು ಸುಲಭಸಾಧ್ಯವೇ! ಇಲ್ಲ. ಏಕೆಂದರೆ, ತಂದೆಯಾದ ಭೂರಿವಸುವು ರಾಜಾಜ್ಞೆಯಂತೆ ನಡೆಯು ಸಲು ಮಾತುಕೊಟ್ಟಿರುವನು. ತಂದೆಯ ಇಷ್ಟಾವರೋಧವನ್ನು ಮಾಡಿ ರಾಜಾ ಜ್ಞೆಯನ್ನು ಮೀರಿ ನಡೆಯುವುದಕ್ಕಿಂತಲೂ ಮರಣವೇ ಶ್ರೇಯಸ್ಕರವೆಂದು ಯೋಚಿಸುತ್ತಿರುವಾಗ ಕಾಮಂದಕಿಯು ಮಾಲತಿಯ ಬಳಿಗೆ ಬರುವಳು. ಅವ ರಿಗೂ ಮಾಲತಿಗೂ ನಡೆದ ಕಥಾಸಂದರ್ಭದಲ್ಲಿ ಕಾಮಂದಕಿಯು ಮಾಧವನ ನಡತೆ ಕುಲಗೌರವ ಸೌಂದರ್ಯವನ್ನು ಕುರಿತು ಅನ್ಯಾಪದೇಶವಾಗಿ ಹೇಳಿದು

ದಲ್ಲದೆ ಶಕುಂತಲಾ ವಾಸವದತ್ತಾ ಮೊದಲಾದ ಸುಭಗೆಯರು ಅವರವರ ತಂದೆತಾಯಿಗಳ ಪರಾಮರ್ಶವಿಲ್ಲದೆ ತಮಗೆ ಬೇಕಾದವರನ್ನು ಸೇರಿಕೊಂಡು ಸುಖಿಸಿದರೆಂದು ಹೇಳುವ ನೆವದಲ್ಲಿ ಕಠೋರಹೃದಯನೂ ಮಂತ್ರಿಯೂ ಆದ ಭೂರಿವಸುವನ್ನು ಹಿಯ್ಯಾಳಿಸಿ ಮಾಲತಿಯ ಪ್ರಣಯವನ್ನು ವೃದ್ಧಿಗೊಳಿಸಿ ಸಂಧ್ಯಾವೇಳೆಗೆ ತನ್ನ ಮಠವನ್ನು ಸೇರುವಳು.

ಮೂರನೆಯ ಅಂಕದಲ್ಲಿ— ಕಾಮಂದಕಿಯು ಮಾಲತಿಯನ್ನು ಕರೆದುಕೊಂಡು ಈಶ್ವರನ ದೇವಾಲಯಕ್ಕೆ ಸೇರಿದಹಾಗಿರುವ ಉದ್ಯಾನಕ್ಕೆ ಹೋಗುವಳು. ಮೊದಲೇ ಏರ್ಪಡಿಸಿದಂತೆ ಮಾಧವನು ಅಲ್ಲಿರುವ ಒಂದು ಪೊದೆಯಲ್ಲಿ ಮರೆಯಾಗಿ ಅವಿತುಕೊಂಡಿರುವನು. ಮಾಲತಿಯು ಉದ್ಯಾನದ ರಾಮಣೀಯಕತೆಯನ್ನು ನೋಡುತ್ತಾ ಕಾಮಂದಕಿಯಿಂದ ಹೆಚ್ಚು ವಿಚಾರವನ್ನು ಕೇಳುತ್ತಾ ಅಲ್ಲಿಗೆ ಹೋಗಿ ಪುಷ್ಪಾಪಚಯವನ್ನು ಮಾಡಿದನಂತರ ಮಾಲತಿಯೂ ಮತ್ತೂ ಇತರರೂ ಪರ್ಣಶಾಲೆಯಲ್ಲಿ ಕುಳಿತುಕೊಳ್ಳುವರು. ಮಾಧವನು ಯಾರಿಗೂ ಕಾಣಿಸದಂತೆ ಅವಿತುಕೊಂಡಿದ್ದು ತನ್ನ ಪ್ರಣಯಿನಿಯನ್ನು ಮನಸದಣಿಯೆ ನೋಡುವನು. ಕಾಮಂದಕಿಯು ಮಾಧವನ ವಿರಹೋದ್ವೇಗವನ್ನೂ ಲವಂಗಿಕೆಯು ಮಾಲತಿಯ ವಿರಹದುಃಖವನ್ನೂ ಪರಸ್ಪರ ಹೇಳಿಕೊಳ್ಳುತ್ತಿರುವರು. ಈ ಸಂಭವದಲ್ಲಿ ಪಂಜರದಿಂದ ತಪ್ಪಿಸಿಕೊಂಡು ಹೊರಕ್ಕೆ ಬಂದು ಹಾವಳಿಯನ್ನು ಮಾಡುವ ಒಂದಾನೊಂದು ಹುಲಿಯ ಆರ್ಭಟವು ಕೇಳಬರುವುದು. ಹುಲಿಯು ಹಾಗೆಯೇ ಆರ್ಭಟಿಸುತ್ತ ನಂದನನ ತಂಗಿಯಾದ ಮದಯಂತಿಕೆಯ ಮೇಲೆ ಬಿದ್ದು ಕೊಲ್ಲುವಷ್ಟರಲ್ಲಿಯೇ ಮಕರಂದನು ಭಯದಿಂದ ಚೀರಿಡುತ್ತ ನಡುಗುತ್ತಿರುವ ಆಕೆಯನ್ನು ನೋಡಿ ರೋಷಭೀಷಣನಾಗಿ ಹುಲಿಯನ್ನೆದುರಿಸಿ ಕೊಂದು ತಾನೂ ಮೂರ್ಛೆಹೋಗುವನು.

(ಇಲ್ಲಿ ಕವಿಯು ಹುಲಿಯ ಅತ್ಯಾಚಾರಗಳನ್ನು ಕುರಿತು ಬಹು ಸುಂದರವಾದ ವರ್ಣನೆಯನ್ನು ಮಾಡಿ ಮದಯಂತಿಕೆಯ ಮುಖೇನ ಅದನ್ನು ಹೊರಪಡಿಸಿರುವನು. ಇದು ನಾಟಕದ ಅಂದವನ್ನು ಮಾರ್ಪಡಿಸಿರುವಂತೆ ತೋರುವುದು. ಏಕೆಂದರೆ, ಭಯವು ಮಾನವನನ್ನು ಸ್ತಂಭೀಭೂತನನ್ನಾಗಿ ಮಾಡಿಬಿಡುವುದು. ಆ ಕಾಲದಲ್ಲಿ ಭಯವಿಹ್ವಲತೆಯಿಂದ ಇರುವಾಗ ಅದರ ವರ್ಣನೆಯ ಮತ್ತು ಗುಣಕಥನವನ್ನು ಮಾಡುವ ಬಗೆ ಹೇಗೆಂಬುದು ತಿಳಿಯದಾಗಿರುವುದು. ಇದು ಸ್ವಭಾವವಿರುದ್ಧವೆಂದು ನಮಗೆ ತೋರುವುದು.)

ನಾಲ್ಕನೆಯ ಅಂಕದಲ್ಲಿ— ನಾಯಕಿಯೂ ಮತ್ತು ಇತರರೂ ಹುಲಿಗೆ ಹೆದರಿ ಸಮೀಪದಲ್ಲಿ ಇರುವ ಶಂಕರದೇವಾಲಯದಲ್ಲಿ ಅವಿತುಕೊಂಡಿರುವರು.

ಮಾಧವನು ಸ್ನೇಹಿತನಾದ ಮಕರಂದನ ವಿಚಾರಗಳನ್ನು ಕೇಳಿ ಮೂರ್ಛೆಯನ್ನು ಹೊಂದುವನು. ಮಾಲತಿ ಮತ್ತು ಮದಯಂತಿಕೆಯರ ಉಪಚಾರದಿಂದ ಈರ್ವರೂ ಎಚ್ಚೆತ್ತುಕೊಳ್ಳುವರು. ಕೂಡಲೇ ನಂದನನ ಸೇವಕನೊಬ್ಬನು ಬಂದು ನಂದನನ ತಂಗಿಯಾದ ಮದಯಂತಿಕೆಯೊಡನೆ ರಾಜನು ಮಾಲತಿಯನ್ನು ನಂದನನಿಗೆ ಕೊಡುವವನಾಗಿರುವನೆಂಬ ಸಮಾಚಾರವನ್ನು ತಿಳಿಸುವನು. ಮದಯಂತಿಕೆಯು ಬಹು ಸಂತೋಷದಿಂದ ತನ್ನ ಪ್ರಣಯಲೋಲುಪನೂ ಪ್ರಾಣದಾತನೂ ಆದ ಮಕರಂದನ ಮೇಲೆ ಪ್ರಣಯಕಟಾಕ್ಷವನ್ನು ಬೀರುತ್ತಾ ಹೊರಟು ಹೋಗುವಳು. ಇದನ್ನು ಕೇಳಿ ಮಾಧವನು ಹತಾಶನಾಗಿ ಉನ್ಮತ್ತನಂತಾಗುವನು. ಮಾಧವನಿಗೆ ಮಾಲತಿಯ ವಿಚಾರವಾಗಿ ಕಾಮಂದಕಿಯು ಕೊಟ್ಟ ಭರವಸೆಯೆಲ್ಲವೂ ನಾಶವಾಯಿತು. ಮಾಲತಿಯು ಹತಪ್ರಣಯಮಾನಸಳಾಗಿ ಹಿಂದಿರುಗುವಳು. ಮಾಧವನು ಹತಾಶನಾಗಿ ತನ್ನ ಕೆಲಸವನ್ನು ಕೈಗೂಡಿಸಿಕೊಳ್ಳುವುದಕ್ಕೆ ಗೂಢವಾದ ಕಾರ್ಯಗಳನ್ನು ಮಾಡಲು ನಿರ್ಧರಿಸಿಕೊಂಡನು. (ಇದು ಬಹು ಭಯಂಕರವಾದ ತಾಂತ್ರಿಕಪೂಜೆಯ ನೋಟವಾಗಿರುವುದು.)

ಐದನೆಯ ಅಂಕವೇ ಶ್ಮಶಾನದ ನೋಟ. ಇಲ್ಲಿ ಭವಭೂತಿಯು ತನ್ನ ಕವಿತಾಸಾಮರ್ಥ್ಯದ ಔದಾರ್ಯವನ್ನು ತೋರಿಸಿರುವನು. ವೀರರಸವರ್ಣನೆಯನ್ನೂ ಭೀಭತ್ಸರಸ ವರ್ಣನೆಯನ್ನೂ ಮಾಡುವುದರಲ್ಲಿ ಭವಭೂತಿಯನ್ನು ಮೀರಿಸಿದವರು ಯಾರೂ ಇಲ್ಲವೆಂತ ತೋರುತ್ತದೆ. ಅಘೋರಘಂಟನ ಅಪ್ಪಣೆಯಂತೆ ಕಪಾಲಕುಂಡಲೆಯು ಕಾಳಿಗೆ ಬಲಿಕೊಡಲು ನರಪಶುವನ್ನು ಹುಡುಕಿಕೊಂಡುಹೋಗುವಳು. ಮಾಧವನು ಒಂದು ಕೈಯಲ್ಲಿ ಕತ್ತಿ ಮತ್ತೊಂದು ಕೈಯಲ್ಲಿ ನರಮಾಂಸವನ್ನು ಹಿಡಿದುಕೊಂಡು ಮನಸ್ಸಿನಲ್ಲಿ ಮಾಲತಿಯ ಸೌಂದರ್ಯವನ್ನು ಬಣ್ಣಿಸಿಕೊಳ್ಳುತ್ತಾ ಬರುವನು. ತನ್ನ ಹಿಂದೆ ವಿಕಾರಶಬ್ದಗಳಾಗುತ್ತಿರುವುದನ್ನು ಕೇಳಿ ಪಿಶಾಚಗಳೆಂದರಿತು ಮಾಂಸವನ್ನು ಕೊಡಲು ನಿಲ್ಲುವನು. (ಇಲ್ಲಿ ನಮ್ಮ ಕವಿಯ ಅಘಟಿತಘಟನಾಚಾತುರ್ಯವರ್ಣನವು ಅಸೀಮವಾದುದಾಗಿರುವುದು.) ಇಲ್ಲಿ ಭೀಭತ್ಸರಸದೊಡನೆ ಶೃಂಗಾರರಸವನ್ನು ತೋರಿಸಿರುವನು. ಸ್ತ್ರೀಪಿಶಾಚಗಳ ಕಾರ್ಯವರ್ಣನಾವಸರದಲ್ಲಿ ಅಸ್ವಾಭಾವಿಕವಾದ ಶ್ಲೇಷಾರ್ಥಗಳನ್ನು ತೋರಿಸಿ ಭಯದ ಜತೆಯಲ್ಲಿ ವಿವಾಹವರ್ಣನದ ಮೂಲಕ ಶೃಂಗಾರರಸವನ್ನು ಜೋಡಿಸಿರುವನು. ಭಿನ್ನಭಿನ್ನರಸಗಳೊಡನೆ ಕೂಡಿದ ಮಿಶ್ರೋದಾಹರಣೆಗೆ ಈ ಶ್ಲೋಕವು ಮಾದರಿಯಾಗಿರುವುದು.—

ಆಂತ್ರೈಃ ಕಲ್ಪಿತಮಂಗಳಪ್ರತಿಸರಾಃ ಸ್ತ್ರೀಹಸ್ತರಕ್ತೋತ್ಪಲ
ವ್ಯಕ್ತೋತ್ತಂಸಭೃತಃ ಪಿನಹ್ಯ ಸಹಸಾ ಹೃತ್ಪುಂಡರೀಕಸ್ರಜಃ ।
ಏತಾಃ ಶೋಣಿತಪಂಕಕುಂಕುಮಜುಷಃ ಸಂಭೂಯ ಕಾಂತೈಃ ಪಿಬಂ
ತ್ಯಸ್ಥಿಸ್ನೇಹಸುರಾಂ ಕಪಾಲಚಷಕೈಃ ಪ್ರೀತಾಃ ಪಿಶಾಚಾಂಗನಾಃ ॥

—ಮಾಲತೀಮಾಧವ ೫—೧೮.

ಈ ಶ್ಲೋಕವನ್ನೇ ಮಹಾಕವಿಭೋಜರಾಜನು ತನ್ನ ಸರಸ್ವತೀಕಂಠಾಭರಣವೆಂಬ ಅಲಂಕಾರಗ್ರಂಥದಲ್ಲಿ ಭಿನ್ನಭಿನ್ನರಸಗಳ ಮಿಶ್ರೋದಾಹರಣಕ್ಕೆ ಉದಹರಿಸಿರುವಂತೆ ಕಂಡುಬರುತ್ತದೆ. ಮಾಧವನು ಶ್ಮಶಾನದಲ್ಲಿ ಅಲೆಯುತ್ತಿದ್ದಾಗ ಸಮೀಪದಲ್ಲಿರುವ ಕಾಳಿಕಾಲಯದಿಂದ ಆರ್ತಧ್ವನಿಯೊಂದು ಕೇಳಬಂದುದನ್ನು ಅನುಸರಿಸಿ ಕಾಳಿಕಾಲಯದಲ್ಲಿ ಯಾವುದೋ ಅಮಾನುಷಕೃತ್ಯವು ನಡೆಯುತ್ತಿರಬಹುದೆಂದೂಹಿಸಿ ಕೂಡಲೇ ಅಲ್ಲಿಗೆ ಹೋದನು. ನೋಡುವಲ್ಲಿ ನಿರ್ದಯನಾದ ಅಘೋರಘಂಟನು ಮಾಲತಿಸಮೇತನಾಗಿ ದೇವಿಯ ಎದುರಿನಲ್ಲಿ

"ಪ್ರಚಲಿತಕರಿಕೃತ್ತಿಪರ್ಯಂತಚಂಚನ್ನಖಾಘಾತಭಿನ್ನೇಂದುನಿಷ್ಯಂ
ದಮಾನಾಮೃತಶ್ಚ್ಯೋತಜೀವತ್ಕಪಾಲಾವಳೀಮುಕ್ತಚಂಡಾಟ್ಟ
ಹಾಸತ್ರಸದ್ಭೂರಿಭೂತಪ್ರವೃತ್ತಸ್ತುತಿ!"

"ಶ್ವಸದಸಿತಭುಜಂಗಭೋಗಾಂಗದಗ್ರಂಥಿನಿಷ್ಪೀಡನೋತ್ಫುಲ್ಲಫುಲ್ಲ
ತ್ಫಣಾಪೀಠನಿರ್ಯದ್ವಿಷಜ್ಯೋತಿರುಜ್ಜೃಂಭಣೋಡ್ಡಾಮರವ್ಯಸ್ತ
ವಿಸ್ತಾರಿದೋಃಖಂಡಪರ್ಯಾಸಿತಕ್ಷ್ಮಾಧರಂ!"

"ಜ್ವಲದನಲಪಿಶಂಗನೇತ್ರಚ್ಛಟಾಭಾರಭೀಮೋತ್ತಮಾಂಗಭ್ರಮಿಪ್ರ
ಸ್ತುತಾಲಾತಚಕ್ರಕ್ರಿಯಾಸ್ಯೂತದಿಗ್ಭಾಗಮುತ್ತುಂಗಖಟ್ವಾಂಗ
ಶೃಂಗಧ್ವಜೋದ್ಧೂತಿವಿಕ್ಷಿಪ್ತತಾರಾಗಣಂ!"

"ಪ್ರಮುದಿತಕಟಪೂತನೋತ್ತಾಲವೇತಾಲತಾಲಸ್ಫುಟತ್ಕರ್ಣಸಂ
ಭ್ರಾಂತಗೌರೀಘನಾಶ್ಲೇಷಹೃಷ್ಯನ್ಮನಸ್ತ್ರ್ಯಂಬಕಾನಂದಿವಸ್ತಾಂ
ಡವಂ ದೇವಿ ಭೂಯಾದರಿಷ್ಟ್ಯೈ ಚ ಹೃಷ್ಟ್ಯೈ ಚ ನಃ!"

—ಮಾಲತೀಮಾಧವ ೫—೨೩.

ಎಂದು ಪ್ರಾರ್ಥನೆಯನ್ನು ಮಾಡುತ್ತ ಮಾಲತಿಯನ್ನು ಕುರಿತು ಎಲೆ ಮಾಲತಿ! ನಿನ್ನ ಮನೋಭೀಷ್ಟವನ್ನು ದೇವಿಯಲ್ಲಿ ಪ್ರಾರ್ಥಿಸಿಕೊಳ್ಳೆಂದು ಹೇಳಿ ಕತ್ತಿಯನ್ನು ಒರೆಯಿಂದ ತೆಗೆಯಲುಜ್ಜುಗಿಸುವನು. ಮಾಲತಿಯು ಭಯದಿಂದ ಚೀರಿ ತನ್ನ ಮನೋಹರನಾದ ಮಾಧವನನ್ನು ಮನಸಾ ಧ್ಯಾನಿಸುತ್ತಿರುವಷ್ಟರಲ್ಲಿಯೇ

ಮಾಧವನು ಮಿಂಚಿನಂತೆ ಬಂದು ದುರಾತ್ಮನಾದ ಅಘೋರಘಂಟನಿಗೂ ಮಾಲತಿಗೂ ಮಧ್ಯದಲ್ಲಿ ನಿಂತುಕೊಳ್ಳುವನು. ಕಾಕತಾಳೀಯದಂತೆ ದೊರೆತ ಪರಸ್ಪರ ಸಂದರ್ಶನದ ವಿಚಾರದಲ್ಲಿ ಈರ್ವರಿಗೂ ನಡೆದ ಸಂಭಾಷಣವು ಹೃದಯ ದ್ರಾವಕವಾಗಿರುವುದು. ಮಾಧವನು ಅಘೋರಘಂಟನನ್ನು ನೋಡಿ ಅರೇ! ದುರಾತ್ಮನ್! ಪಾಷಂಡ! ಚಂಡಾಲ! ಎಂದು ಹೇಳಿ ಆತನನ್ನು ಸಂಹರಿಸುವನು. ಈ ಜಗಳವನ್ನು ನೋಡಿ ಕಾಮಂದಕಿಯು ಮಂತ್ರಿಯಾದ ಭೂರಿವಸುವಿನೊಡನೆ ಹೇಳಿ ಸೈನ್ಯವನ್ನು ತರಿಸಿ ಚಾಮುಂಡಾಲಯವನ್ನು ಮುತ್ತಿ ಮಾಧವನನ್ನು ಅಲ್ಲಿಯೇ ಬಿಟ್ಟು ಮಾಲತಿಯನ್ನು ಕರೆದುಕೊಂಡು ಹೋಗುವಳು, ಈ ನೋಟವು ದೇವಾಲಯದ ಒಳಗಡೆ ನಡೆದುದಾಗಿರುವುದು.

ಆರನೆಯ ಅಂಕದಲ್ಲಿ—ಕಪಾಲಕುಂಡಲೆಯು ಅಘೋರಘಂಟನ ಮರಣವನ್ನು ನೋಡಿ ಕಡು ದುಃಖಿಸಿ ಹೇಗಾದರೂ ಮಾಡಿ ಮಾಧವನನ್ನು ಕೊನೆಗಾಣಿಸಬೇಕೆಂದು ಸಮಯವನ್ನು ಕಾಯುತ್ತಿರುವಳು. ಈ ಕಡೆ ರಾಜಾಜ್ಞೆಯಂತೆ ಭೂರಿವಸುವಿನ ಮನೆಯಲ್ಲಿ ಮದುವೆಯ ಸಮಾರಂಭ. ಮದವಣಿಗನು ಉಜ್ಜಯಿನಿಯನ್ನು ಕಾಪಾಡುವ ಕುಲದೇವತೆಯ ಬಳಿಗೆ ಪೂಜೆಗಾಗಿ ಹೋಗುವನು. ಸಂಗಡ ಬಂದ ಪರಿವಾರವು ದೇವಾಲಯಕ್ಕೆ ಕೊಂಚ ದೂರದಲ್ಲಿ ನಿಲ್ಲುವುದು. ಬುದ್ಧಸನ್ಯಾಸಿನಿಯಾದ ಕಾಮಂದಕಿಯೂ ಲವಂಗಿಕೆಯೂ ಮದವಣಗಿತ್ತಿಯಾದ ಮಾಲತಿಯೊಬ್ಬಳನ್ನೇ ಕರೆದುಕೊಂಡು ದೇವಾಲಯದ ಒಳಗೆ ಹೋಗುವರು. ಮಂತ್ರಿಯು ಕೆಲವು ಆಭರಣಗಳನ್ನು ಕಳುಹಿಸಿ ಮಾಲತಿಗೆ ಧರಿಸುವಂತೆ ಕಾಮಂದಕಿಯ ಕೈಲಿ ಕೊಡುವನು. ತಂತ್ರಗಾರಳಾದ ಕಾಮಂದಕಿಯು ಹೊರಗೆ ಬಂದು ನಿಂತುಕೊಂಡು ಮೊದಲೇ ಏರ್ಪಾಡು ಮಾಡಿದ್ದಂತೆ ಮಾಧವನೂ ಮತ್ತು ಮಕರಂದನೂ ಇರುವ ಗರ್ಭಗೃಹಕ್ಕೆ ಮಾಲತಿಯನ್ನು ಕರೆದುಕೊಂಡು ಹೋಗಲು ಹೇಳುವಳು. ಮಾಲತಿಗೆ ಈ ವಿಚಾರವು ಯಾವುದೂ ತಿಳಿಯದೆ ಹತಾಶಳಾಗಿ ಜೀವವಿಸರ್ಜನಮಾಡುವುದೇ ಸರಿಯೆಂದು ನಿಶ್ಚಯಿಸಿ ಮಾಧವನಿಗೆ ತನ್ನ ಕಡೆಯ ವಂದನಗಳನ್ನು ತಿಳಿಸುವ ಹಾಗೆ ಲವಂಗಿಕೆಯನ್ನು ಬೇಡಿಕೊಳ್ಳುವಳು. ಈ ಸಮಯದಲ್ಲಿ ಲವಂಗಿಕೆಯು ಮಾಧವನನ್ನು ಸಂಜ್ಞೆಮಾಡಿ ಕರೆದು ತನ್ನ ಜಾಗದಲ್ಲಿ ನಿಂತುಕೊಂಡಿರುವ ಹಾಗೆ ಹೇಳಿ ಮೆಲ್ಲಗೆ ಹೊರಟುಹೋಗುವಳು. ಕಾಳಿಯ ಎದುರಿಗೆ ಸಾಷ್ಟಾಂಗ ಪ್ರಣಾಮದ ಮೂಲಕ ಭೂಮಿಯನ್ನು ಅಪ್ಪಿಕೊಂಡು ತನಗೆ ಸಮರ್ಪಕವಾದ ಪ್ರತ್ಯುತ್ತರವು ಬರುವವರೆಗೂ ಮೇಲಕ್ಕೆ ಏಳುವುದಿಲ್ಲವೆಂದು ಶಪಥವನ್ನು ಮಾಡಿದ್ದ ಮಾಲತಿಯನ್ನು ನೋಡಿ ಮಾಧವನು—

ಸರಳೇ ಸಾಹಸರಾಗಂ ಪರಿಹರ
ರಂಭೋರು ಮುಂಚ ಸಂರಂಭಂ ।
ವಿರಹಂ ವಿರಹಾಯಾಸಂ
ಸೋಢುಂ ತವ ಚಿತ್ತಮಸಹಂ ಮೇ ॥

—ಮಾಲತೀಮಾಧವ ೬—೧೦

ಎಂದು ಎಷ್ಟು ಪ್ರಾರ್ಥಿಸಿಕೊಂಡರೂ ಕೇಳದೆ ಮಲಗಿಕೊಂಡಿರುವ ಮಾಲತಿಯನ್ನು ನೋಡಿ ಪುನಃ—

ಕಿಂ ವಾ ಭಣಾಮಿ ವಿಚ್ಛೇದದಾರುಣಾಯಾಸಕಾರಿಣಿ ।
ಕಾಮಂ ಕುರು ವರಾರೋಹೇ ದೇಹಿ ಮೇ ಪರಿರಂಭಣಂ ॥

—ಮಾಲತೀಮಾಧವ ೬—೧೧

ಎಂದು ಕೇಳಿಕೊಳ್ಳುತ್ತಿರುವುದನ್ನು ಚಿತ್ತಸ್ವಾಸ್ಥ್ಯವಿಲ್ಲದೆ ಪರವಶಳಾಗಿದ್ದ ಮಾಲತಿಯು ಅದನ್ನು ಕೇಳಿ ತಾನು ಲವಂಗಿಕೆಯ ಹತ್ತಿರ ಮಾತನಾಡುತ್ತಿರುವೆನೆಂದು ತಿಳಿದು ಮೇಲಕ್ಕೆ ಎದ್ದು ಮಾಧವನನ್ನು ಲವಂಗಿಕೆಯೆಂದು ತಿಳಿದು ಅಪ್ಪಿಕೊಂಡು ಕೊರಳಿಗೆ ಪುಷ್ಪಹಾರವನ್ನು ಹಾಕುವುದಕ್ಕೆ ಹೋಗಿ ಮಾಧವನೆಂದರಿತು ಸಲಜ್ಜಿತಳಾಗಿ ದೂರನಿಲ್ಲುವಳು. ಕೂಡಲೇ ಕಾಮಂದಕಿಯೂ ಲವಂಗಿಕೆಯೂ ಈರ್ವರೂ ಒಳಹೊಕ್ಕು ತಾವು ಏರ್ಪಡಿಸಿದ ಗುಪ್ತವಿವಾಹಸಮಾಚಾರವನ್ನು ಅವಳಿಗೆ ಹೇಳಿ ಕೊನೆಗೆ ಪುಷ್ಪಹಾರವನ್ನು ಮಾಲತಿಯ ಕೈಯಿಂದ ಮಾಧವನ ಕೊರಳಿಗೆ ಹಾಕಿಸಿದಳು. ಅನಂತರ ತಂತ್ರಾಗಾರಳಾದ ಕಾಮಂದಕಿಯು ಮಾಧವನ ಸ್ನೇಹಿತನಾದ ಮಕರಂದನಿಗೆ ಸ್ತ್ರಿಯೋಚಿತವಸ್ತ್ರಾಲಂಕಾರಗಳಿಂದಲಂಕರಿಸಿ ನಂದನನಿಗೆ ವಿವಾಹವಾಗತಕ್ಕ ಮದವಣಿಗಿತ್ತಿಯಾದ ಮಾಲತಿಯೆಂದು ಹೇಳಿಕಳುಹಿಸುವಳು. ಲವಂಗಿಕೆಯು ಈ ಕೃತ್ರಿಮಸ್ತ್ರೀಯನ್ನು ಕರೆದುಕೊಂಡುಹೋಗಿ ಮಂತ್ರಿಯ ಮಗಳಾದ ಮಾಲತಿಯೆಂದು ಸಾಧಿಸುವಳು. ಎಲ್ಲರೂ ಇವಳೇ ಮಂತ್ರಿಯ ಮಗಳೆಂದೂ ಮಾಲತಿಯೆಂದೂ ತಿಳಿದುಕೊಂಡಿರುವರು. ತಂದೆಯಾದ ಭೂರಿವಸುವು ನಂದನನೂ ಈರೀತಿ ವಂಚಿಸಲ್ಪಟ್ಟರು. ಮಾಲತಿಯು ಸಂತೋಷದಿಂದ ಮಾಧವನೊಡನೆ ದೇವಾಲಯದ ಹಿಂಭಾಗದಲ್ಲಿರುವ ತೋಪಿಗೆ ಹೊರಟು ಹೋಗುವಳು.

ಏಳನೆಯ ಅಂಕದಲ್ಲಿ ನಂದನನ ಅರಮನೆ. ನಂದನನು ಕೃತ್ರಿಮಸ್ತ್ರೀಯಾದ ಮಕರಂದನನ್ನು ಮಾಲತಿಯೆಂದು ತಿಳಿದು ಪ್ರಣಯಮುಗ್ಧನಾಗಿ ಅಂಗಲಾಚುವನು. ಎಷ್ಟು ಅಂಗಲಾಚಿದರೂ ಮನಕೊಡದ ಕೃತ್ರಿಮಸ್ತ್ರೀಯಾದ ಮಕರಂದನನ್ನು ಬಲಾತ್ಕರಿಸಲು ಹೋಗುವನು. ಇವರೀರ್ವರಿಗೂ ಕೊಂಚ ಗುದ್ದಾಟವಾದ ನಂತರ ನಂದನನು ಹತಾಶನಾಗುವನು. ಅಹೋ! ಇವಳಿಗೆ

ಮಾಧವನ ಮೇಲಣ ಪ್ರೀತಿಯು ಇರುವುದೇ ಹೊರತು ತನ್ನಲ್ಲಿಲ್ಲವೆಂದು ತಿಳಿದು ಮಾಲತಿಯನ್ನು ಇನ್ನುಮೇಲೆ ಅಪೇಕ್ಷಿಸುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡುವನು. ಈ ಸಮಾಚಾರವನ್ನು ತಿಳಿದು ಮಕರಂದನ ಪ್ರಿಯಳಾದ ನಂದನನ ತಂಗಿ ಮದಯಂತಿಕೆಯು ಕೋಪಗೊಂಡಿರುವ ಮದವಣಗಿತ್ತಿಯನ್ನು ಸಮಾಧಾನಪಡಿಸಲು ಬರುವಳು. ಕೃತ್ರಿಮಸ್ತ್ರೀಯು ನಿದ್ರೆಹೋಗುವಂತೆ ನಟಿಸುವಳು. (ಇಲ್ಲಿ ದಾಸಿಯಾದ ಲವಂಗಿಕೆಗೂ ಮದಯಂತಿಕೆಗೂ ನಡೆಯುವ ಸಂಭಾಷಣವು ಮನೋರಂಜಕವಾಗಿರುವುದು.) ಮದಯಂತಿಕೆಯ ಸ್ನೇಹಿತಳಾದ ಬುದ್ಧಿರಕ್ಷಿತೆಯು ಬಂದು ಬೇರೆ ಪ್ರಸಂಗವನ್ನೆತ್ತುವಳು. ಮದಯಂತಿಕೆಯು ಮಕರಂದನ ಮೇಲೆ ಇರುವ ಮೋಹವನ್ನು ಸಂಪೂರ್ಣವಾಗಿ ವ್ಯಕ್ತಗೊಳಿಸಿದನಂತರ ಮಕರಂದನು ಎದ್ದು ಮದಯಂತಿಕೆಗೆ ಇಲ್ಲಿನ ಎಲ್ಲಾ ವಿಷಯಗಳನ್ನು ಸವಿಸ್ತಾರವಾಗಿ ಹೇಳಿ ಅವಳೊಡನೆ ಮಾಧವನಿರುವ ತೋಪಿಗೆ ತಾನೂ ಹೊರಟುಹೋದನು.

೮ನೆಯ ಅಂಕದಲ್ಲಿ ಮಾಧವನು ಮಾಲತಿಯೊಡನೆ ತೋಪಿನಲ್ಲಿದ್ದುಕೊಂಡು ಗೆಳೆಯನಾದ ಮಕರಂದನ ಬರುವಿಕೆಯನ್ನೆದುರುನೋಡುತ್ತಿದ್ದನು. ಮಾಲತಿಯನ್ನು ಮಾಧವನು ಎಷ್ಟು ಬಗೆಯಾಗಿ ಒಡಂಬಡಿಸಿದರೂ ಮಾಲತಿಯು ಮಾತನಾಡದೆ ನಿಂತುಕೊಂಡಿದ್ದಳು. ಇಷ್ಟರಲ್ಲಿಯೇ ಪುರರಕ್ಷಕರು ಮೋಸಗಾರನಾದ ಮಕರಂದನನ್ನು ಹುಡುಕಿಕೊಂಡು ತಮ್ಮ ಕಡೆಗೆ ಬರುವುದನ್ನು ತಿಳಿದು ಮಕರಂದನ ಸಹಾಯಕ್ಕೆ ಮಾಧವನೂ ಹೋಗುವನು. ಸಮಯವನ್ನು ಕಾಯುತ್ತಿದ್ದ ಕಪಾಲಕುಂಡಲೆಯು ಇದನ್ನು ನೋಡಿ ಮಾಲತಿಯನ್ನು ಪುನಃ ಎತ್ತಿಕೊಂಡು ಹೋಗಿಬಿಡುವಳು. ಪುರರಕ್ಷಕರು ಆ ಇಬ್ಬರನ್ನೂ ದೊರೆಯ ಮುಂದೆ ಕರೆದುಕೊಂಡು ಹೋಗಿ ನಿಲ್ಲಿಸಿದರು. ದೊರೆಯು ಈ ಇಬ್ಬರನ್ನೂ ನೋಡಿ ಇವರ ಸೌಂದರ್ಯಕ್ಕೂ ಪರಾಕ್ರಮಕ್ಕೂ ಮನಸೋತು ಮೆಚ್ಚಿ ಮನಗುಂದಿರುವ ಮಂತ್ರಿಯನ್ನೂ ಇಷ್ಟಾರ್ಥವು ಕೈಗೂಡದೆ ಎದೆಗುಂದಿರುವ ಸಭಾಸದರನ್ನೂ ಸಮಾಧಾನ ಪಡಿಸಿ ಇಂತಹ ಬಾಂಧವ್ಯವು ಕಲೆತುದಕ್ಕಾಗಿ ಅವರಿಗೆ ತಕ್ಕ ಉಪಚಾರೋಕ್ತಿಗಳನ್ನಾಡಿ ಅವರ ಕುಲಗೋತ್ರಸೌಜನ್ಯಗಳಿಗಭಿನಂದಿಸಿ ಅವರಿಬ್ಬರನ್ನೂ ಬಿಡುಗಡೆಮಾಡಿಸಿ ಬೇಕಾದಷ್ಟು ಆಭರಣಗಳನ್ನು ಬಹುಮಾನ ಕೊಡಿಸಿ ಕಳುಹಿಸಿಕೊಟ್ಟನು. ಆದರೆ ಪಾಪ! ಇಂತಹ ಅವಿಚ್ಛಿನ್ನಸಂತೋಷವನ್ನು ಅನುಭವಿಸಲು ನಿರ್ಭಾಗ್ಯನಾದ ನಮ್ಮ ಮಾಧವನ ಅದೃಷ್ಟದಲ್ಲಿ ಇನ್ನೂ ಬರೆದಿಲ್ಲ. ಮಾಧವನು ಬಹುಸಂತೋಷದಿಂದ ತೋಪಿನಲ್ಲಿರುವ ತನ್ನ ಪ್ರಣಯಿನಿಯಾದ ಮಾಲತಿಗೆ

ಈ ಸಂತೋಷದ ಸಮಾಚಾರವನ್ನು ಹೇಳಬೇಕೆಂದು ಹೋಗಿ ನೋಡುವಾಗ ಮಾಲತಿಯು ಅಲ್ಲಿ ಇರಲೇ ಇಲ್ಲ. ಮಾಧವನಿಗೆ ಸಾರಜಗತ್ತೆಲ್ಲವೂ ಶೂನ್ಯ; ಇದೇನು ಸ್ವಪ್ನವೋ! ಇಲ್ಲದಿದ್ದರೆ ಮಾಲತಿಯು ತನ್ನನ್ನು ಪರೀಕ್ಷಿಸಬೇಕೆಂದು ಎಲ್ಲಿಯಾದರೂ ಈ ತೋಪಿನಲ್ಲಿ ಅಡಗಿಕೊಂಡಿರಬಹುದೋ? ಹೇಗೆಂಬ ಇಂತಹ ಸಾವಿರಾರು ಯೋಚನೆಗಳಲ್ಲಿ ಮಗ್ನನಾಗಿ ಮಾಲತಿಯ ವಿರಹದಿಂದ ದುಃಖಿತ ನಾಗಿರಲು ಮಾಧವನನ್ನು ನೋಡಿ ಮಕರಂದನೂ ದುಃಖಿತನಾಗುವನು. ಮಾಧವನು ಬಹು ದುಃಖದಿಂದ ಹೇಳುವ—

> ಯಾತಾ ಭವೇದ್ಭಗವತೀ ಭವನಂ ಸಖೀ ಸಾ
> ಜೀವಂತ್ಯಥೈಷ್ಯತಿ ನ ವೇತ್ಯಭಿಶಂಕಿತೋಽಸ್ಮಿ ।
> ಪ್ರಾಯೇಣ ಬಾಂಧವಸುಹೃತ್ಪ್ರಿಯಸಂಗಮಾದಿ
> ಸೌದಾಮಿನೀಸ್ಫುರಣಚಂಚಲಮೇವ ಸೌಖ್ಯಂ ॥ ೮—೪ ॥

ಎಂಬ ಶ್ಲೋಕವು ಆಂಗ್ಲಕವಿಕುಲತಿಲಕನಾದ ಷೇಕ್ಸಪಿಯರನ ಜ್ಞಾಪಕವನ್ನು ಕೊಡುವುದು.†

ಒಂಭತ್ತನೆಯ ಅಂಕದಲ್ಲಿ— ಸೌದಾಮಿನಿಯು ಶ್ರೀಪರ್ವತದಿಂದ ಬರುವಳು. (ಇಲ್ಲಿ ಪದ್ಮವಟಿಯ ಸಮೀಪದಲ್ಲಿರುವ ಪ್ರಕೃತಿಯ ಶೋಭಾಸೌಂದರ್ಯವೂ ದೊಡ್ಡದೊಡ್ಡ ಮರಗಳುಳ್ಳ ವಿಂಧ್ಯಪರ್ವತದ ಬಳಿಯ ಕಾಡುಗಳೂ ಮನೋಹರವಾಗಿ ವರ್ಣಿಸಲ್ಪಟ್ಟಿರುವುವು.) ಸೌದಾಮಿನಿಯು ಮಾಲತಿಯ ವಿರಹದಿಂದ ಕಂಗಾಲಾಗಿರುವ ಮಾಧವನಿಗೆ ಮಾಲತಿಯು ಸುರಕ್ಷಿತಳಾಗಿರುವಳೆಂಬ ಶುಭಸಮಾಚಾರವನ್ನು ಹೇಳುವಳು. ಮಾಧವನು ಮಕರಂದನೊಡನೆ ಮಾಲತಿಯನ್ನು ಹುಡುಕುತ್ತಾ ಅಲ್ಲಲ್ಲಿ ಸಂಚರಿಸುತ್ತಿರುವನು. (ಇಲ್ಲಿ ಮಾಧವನ ವಿರಹವರ್ಣನವು ಬಹು ಉತ್ಕೃಷ್ಟವಾಗಿಯೂ ಹೃದಯದ್ರಾವಕವಾಗಿಯೂ ವರ್ಣಿತವಾಗಿರುವುದು. ಸುಖದುಃಖಗಳಲ್ಲಿ ಭಾಗಿಯಾದ ಮಕರಂದನ ಮೈತ್ರಿಯ ವಿಚಾರವಾಗಿ ಹೇಳುವ ಭಾಗಗಳು ಅತ್ಯಂತಾವಶ್ಯಕವಾಗಿ ನೋಡತಕ್ಕವುಗಳಾಗಿವೆ. ಮಾಧವನು ಮೇಲೆ ಹೋಗುತ್ತಿರುವ ಮೇಘವನ್ನು ನೋಡಿ ತನ್ನ ಪ್ರಣಯಿನಿಗೆ ಹೇಳಿಕಳುಹಿಸುವ ವಿಚಾರವು ಕಾಳಿದಾಸನ ಮೇಘಸಂದೇಶವನ್ನು ನೆನಪಿಗೆ ತಂದುಕೊಡುತ್ತದೆ.) ಮಾಧವನು ಆ ತೋಪಿನಲ್ಲಿ ನಿಂತು ಸ್ಥಳದೇವತೆಗಳನ್ನೂ ವನದೇವತೆಗಳನ್ನೂ ಮತ್ತು ಅಲ್ಲಿಯ ಭೂದೇವತೆಗಳನ್ನೂ ಕೇಳಿಕೊಳ್ಳುತ್ತಾ ಮೂರ್ಛೆಹೋಗುವನು. ಸೌದಾಮಿನಿಯು ಕಾಣದ ಹಾಗೆ ಬಂದು

† Brief as the lightning in the collied night. (Mid Summer Night's Dream, Act. 1, Scene 1,

ಕೊರಳಿನಲ್ಲಿ ಪುಷ್ಪಹಾರವನ್ನು ಹಾಕುವಳು. ಮಾಧವನು ಏಳುವನು. (ಈ ಸಮಯದಲ್ಲಿ ಅದೃಶ್ಯಳಾಗಿರುವ ಮಾಲತಿಯು ವಿಚಾರವನ್ನು ಹೇಳುವುದು ಹೃದಯವಿದಾರಕವಾಗಿರುವುದು.) ಸೌದಾಮಿನಿಯು ಮಾಧವನ ದುಃಖವನ್ನು ನೋಡಲಾರದೆ ಮಾಲತಿಯು ಬದುಕಿರುವಳೆಂದೂ ಸುರಕ್ಷಿತಳಾಗಿರುವಳೆಂದೂ, ತಾನೇ ಕಪಾಲಕುಂಡಲೆಯ ಕೈಯಿಂದ ತಪ್ಪಿಸಿ ಸುರಕ್ಷಿತವಾಗಿಟ್ಟಿರುವೆನೆಂದೂ ಹೇಳುವಳು.

ಹತ್ತನೆಯ ಅಂಕದಲ್ಲಿ ದುಃಖಾನ್ವಿತರಾದ ಕಾಮಂಡಕಿ ಮತ್ತು ಇತರರಿಗೆ ಮಾಲತಿಯ ಕ್ಷೇಮಸಮಾಚಾರವು ತಿಳಿಯುವುದು. ಕಾಮಂದಕಿಯು ಮಗಳ ವಿಯೋಗದುಃಖದಿಂದ ಅಗ್ನಿಪ್ರವೇಶವನ್ನು ಮಾಡಬೇಕೆಂದಿದ್ದ ಭೂರಿವಸುವಿಗೆ ಮಾಲತಿಯ ಕ್ಷೇಮವಾರ್ತೆಯನ್ನು ಹೇಳಿ ಅವನನ್ನು ಬದುಕಿಸುವಳು. ಅನಂತರ ಮಾಧವನೂ ಮಾಲತಿಯೂ ಮಕರಂದನೂ ಮದಯಂತಿಕೆಯೂ ಸೇರಿ ಸುಖದಿಂದಿರುವರು. ಈ ಆನಂದಕೋಲಾಹಲದಲ್ಲಿ ಸರ್ವವೂ ಮುಗಿದಂತಾದುದು.

ಇದರಲ್ಲಿರತಕ್ಕ ಅನೇಕ ದುಃಖಕರವಾದ ಶ್ಲೋಕಗಳು ಉತ್ತರರಾಮಚರಿತೆಯಲ್ಲಿ ಅಲ್ಲಲ್ಲಿ ಕಾಣುವುವು. ಕೊಂಚಕೊಂಚ ಭಿನ್ನವಿಸಿ ಬರೆದಿರುವ ಶ್ಲೋಕಗಳು ಈ ಮೂರು ನಾಟಕಗಳಲ್ಲಿಯೂ ಕಂಡುಬರುವುವು.

ಮಾಲತೀಮಾಧವದಲ್ಲಿ ಶೃಂಗಾರ ವೀರ ಕರುಣವೇ ಮೊದಲಾದ ರಸಗಳ ಮಿಶ್ರೋದಾಹರಣೆಗಳನ್ನು ನೋಡಬೇಕಾದರೆ ೫ನೆಯ ಅಂಕವನ್ನು ಪೂರ್ತಿಯಾಗಿ ಓದಬೇಕು. ಕೆಲವು ಕಡೆ ನ್ಯಾಯವಾಗಿ ಇರಬೇಕಾದುದಕ್ಕಿಂತಲೂ ಹೆಚ್ಚಾಗಿ ಬಹು ದೊಡ್ಡ ದೊಡ್ಡ ವಾಕ್ಯಗಳ ಸಮಾವೇಶನವಿದೆ. ೫ನೆಯ ಅಂಕದ ದಂಡಕದ ಪ್ರಸ್ತಾವನೆಯು ಭವಭೂತಿಯ ವಿದ್ಯಾನೈಪುಣ್ಯವನ್ನು ಸೂಚಿಸುತ್ತದೆ. ಪ್ರಕೃತಿಸೌಂದರ್ಯವರ್ಣನವು ನೈಜವಾದುದಾಗಿದೆ. ಪ್ರಣಯಿಜನ ಚಿತ್ತವೃತ್ತಿಯ ವರ್ಣನವು ಅತುಲ್ಯವಾದುದಾಗಿದೆ.

> ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
> ಜಾನಂತಿ ತೇ ಕಿಮಪಿ ತಾನ್ಪ್ರತಿ ನೈಷ ಯತ್ನಃ ।
> ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ
> ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ॥

ಎಂದು ಹೇಳಿರುವುದನ್ನು ನೋಡಿದರೆ ಪ್ರಸಿದ್ಧನಾಟಕಕಾರನಾದ ವರ್ಡ್ಸ್‌ವರ್ತ(Wordsworth)ನ The white Doe of Rylstone ಎಂಬುದರ ಭೂಮಿಕೆಯಲ್ಲಿನ—

**"I have little to say but that I hope will be acceptable to the intelligent to whom alone it is written"**
ಎಂಬುದು ಜ್ಞಾಪಕಕ್ಕೆ ಬರುವುದು.

ಪಾತ್ರಗಳ ವಿಚಾರ— ಸೂತ್ರಧಾರನು ತನ್ನ ಸೇವಕನೊಡನೆ ಸಂಭಾಷಿಸುವುದರಲ್ಲಿ ಕಾಮಂದಕಿ ಅವಲೋಕಿತೆಯರ ಪಾತ್ರವನ್ನೂ ಮಾಲತೀಮಾಧವರ ಪಾತ್ರವನ್ನೂ ಅಭಿನಯಿಸತಕ್ಕವರು ಯಾರೆಂದು ಕೇಳುವುದು ಸ್ವೈಜವಾಗಿ ತೋರುವುದಿಲ್ಲ. ಇದಲ್ಲದೆ ನಾಟಕದ ನಿಜತ್ವಕ್ಕೂ ಕುಂದಕ ಬರುವಂತಾಗಿ ತೋರುತ್ತದೆ. ಈ ಪಾತ್ರಗಳನ್ನು ಷೇಕ್ಸ್‌ಪಿಯರನ ಮಿಡ್‌ಸಮ್ಮರ್ ನೈಟ್ಸ್‌ಡ್ರೀಂ ಎಂಬ ನಾಟಕದಲ್ಲಿ ಪೈರಾಮಸ್ (Pyramus) ಮತ್ತು ತಿಸ್ಲಿ(Thisley)ಯರ ಪಾತ್ರಗಳಿಗೆ ಹೋಲಿಸಬಹುದಾಗಿದೆ. ಭವಭೂತಿಯ ಮಾಲತೀಮಾಧವನಾಟಕವನ್ನು ಷೇಕ್ಸ್‌ಪಿಯರಿನ ರೋಮಿಯೋ ಅಂಡ್ ಜೂಲಿಯಟ್ಟಿಗೆ ಹೋಲಿಸಬಹುದಾಗಿದೆ. ಮಾಲತೀಮಾಧವವು ಮಂಗಳಾಂತವಾಗಿಯೂ ರೋಮಿಯೋ ಅಂಡ್ ಜೂಲಿಯಟ್ ಎಂಬುದು ದುಃಖಾಂತವಾಗಿಯೂ ಮುಗಿಸಲ್ಪಟ್ಟಿರುವುದು. ಮಾಲತೀಮಾಧವದಲ್ಲಿ ಕಂಡು ಬರುವ ಕಾಮಂದಕಿಯನ್ನು ಫ್ರಯರ್‌ಲಾರೆನ್ಸಿಗೆ ಹೋಲಿಸುವುದಾದರೆ ತಪ್ಪಾಗದು.

**ಮಹಾವೀರಚರಿತ**ದಲ್ಲಿ ರಾಮಾಯಣ ಕಥೆಯು ಹೇಳಲ್ಪಟ್ಟಿದೆ. ಕಥಾಸಂವಿಧಾನವು ಬೇರೆ ತೆಗೆದು ಬರೆಯಲ್ಪಟ್ಟಂತೆಯೇ ಇದೆ. ಬ್ರಹ್ಮಋಷಿಯಾದ ವಿಶ್ವಾಮಿತ್ರನು ಅಯೋಧ್ಯಾನಾಥನಾದ ದಶರಥನಲ್ಲಿಗೆ ಹೋಗಿ ಯಜ್ಞವಿಘ್ನ ನಿವಾರಣಾರ್ಥವಾಗಿ ರಾಮಲಕ್ಷ್ಮಣರನ್ನು ಕಳುಹಿಸಿಕೊಡಬೇಕೆಂದು ಕೇಳಿ ಅವರನ್ನು ತನ್ನಾಶ್ರಮಕ್ಕೆ ಕರೆದುಕೊಂಡು ಬಂದಿದ್ದನು. ಅಲ್ಲದೆ ವಿಶ್ವಾಮಿತ್ರನು ಯಜ್ಞಕ್ಕೆ ಬರಬೇಕೆಂದು ಮಿಥಿಲಾಧಿಪನಾದ ಜನಕಮಹಾರಾಜನಿಗೂ ಆಮಂತ್ರಣವನ್ನು ಕಳುಹಿಸಿದ್ದನು. ಜನಕರಾಜನು ಹೊರಡುವುದಕ್ಕೆ ಅನುಕೂಲಿಸದೆ ಹೋದುದರಿಂದ ತನ್ನ ತಮ್ಮನಾದ ಕುಶಧ್ವಜನೊಡನೆ ಸೀತೆ ಮತ್ತು ಊರ್ಮಿಳೆಯರನ್ನು ಕಳುಹಿಸಿಕೊಟ್ಟಿದ್ದನು. ಹೀಗಾಗಿ ವಿಶ್ವಾಮಿತ್ರನ ಆಶ್ರಮದಲ್ಲಿ ರಾಮಲಕ್ಷ್ಮಣರಿಗೆ ರಾಜಪುತ್ರಿಯರ ಪ್ರಥಮಸಂದರ್ಶನವಾಯಿತು. ಇಷ್ಟರಲ್ಲಿಯೇ ಲಂಕಾಧಿಪನಾದ ರಾವಣನು ಸೀತೆಯನ್ನು ತನಗೆ ಮದುವೆಮಾಡಿಕೊಡಬೇಕೆಂದು ವಿಶ್ವಾಮಿತ್ರನ ಬಳಿಗೆ ತನ್ನಾಪ್ತನಾದ ರಾಕ್ಷಸನೊಬ್ಬನನ್ನು ಕಳುಹಿಸಿದನು. ವಿಶ್ವಾಮಿತ್ರನು ರಾಕ್ಷಸನನ್ನು ಸತ್ಕರಿಸಿ ಕುಶಲಪ್ರಶ್ನೆಗಳನ್ನು ನಡೆಯಿಸುತ್ತಿರುವಷ್ಟರಲ್ಲಿಯೇ ಭಯಂಕರ ಶಬ್ದವನ್ನು ಮಾಡುತ್ತ ಬಂದ ತಾಟಕಿಯನ್ನು ವಿಶ್ವಾಮಿತ್ರನ ಅಪ್ಪಣೆಯನ್ನು ಪಡೆದು

ಶ್ರೀ ರಾಮನು ಕೊಂದುಹಾಕಿದನು. ಅನಂತರ ಜನಕನ ಬಳಿಯಿಂದ ಯಜ್ಞಸಮಾರಂಭಕ್ಕಾಗಿ ಕುಶಧ್ವಜನು ತರಿಸಿದ್ದ ಶಿವಧನುಸ್ಸನ್ನು ಮುರಿದ ನಂತರ ರಾಮಲಕ್ಷ್ಮಣರಿಗೆ ಈ ಈರ್ವರು ಕನ್ಯೆಯರನ್ನೂ ವಿವಾಹ ಮಾಡಿ ಕೊಡಲು ಗೊತ್ತುಮಾಡಲ್ಪಟ್ಟಿತು. ಇಷ್ಟರಲ್ಲಿಯೇ ರಾವಣನ ಬಳಿಯಿಂದ ಬಂದಿದ್ದ ರಕ್ಕಸನು ಭಯಚಕಿತನೂ ನಿರಾಶನೂ ಆಗಿ ವಿಶ್ವಾಮಿತ್ರನಿಂದ ಬೀಳ್ಕೊಂಡು ಲಂಕೆಗೆ ಹೋಗಿ ಈ ಸಮಾಚಾರಗಳನ್ನು ರಾವಣನ ಮುಖ್ಯಾ ಮಾತ್ಯನಾದ ಮಾಲ್ಯವಂತನಿಗೆ ತಿಳಿಸಿದನು. ಇದನ್ನು ಕೇಳಿ ಮಾಲ್ಯವಂತನು ಚಿಂತಾಕುಲಿತನಾಗಿ ರಾಮನನ್ನು ಕೊಲ್ಲಲು ಹಲವು ಪ್ರಯತ್ನಗಳನ್ನು ಮಾಡಿ ದನು. ಮೊದಲು ಮಹೇಂದ್ರದ್ವೀಪಕ್ಕೆ ಹೋಗಿ ಪರಶುರಾಮನಿಗೆ ಶಿವಧನು ರ್ಭಂಗದ ವೃತ್ತಾಂತವನ್ನು ಹೇಳಿ ರಾಮನನ್ನು ಸಂಹರಿಸಬೇಕೆಂದು ಉತ್ತೇಜನ ಗೊಳಿಸಿದನು. (ಈ ವಿಚಾರಗಳನ್ನು ಕವಿಯು ತನ್ನ ಕಲ್ಪನಾಚಾತುರ್ಯವನ್ನು ವಿಾರಿ ತೋರಿಸಿ ಹೃದಯಂಗಮವಾಗಿರುವಂತೆ ಬರೆದಿರುವನು.) ಪರಶುರಾ ಮನು ಅತ್ಯುಗ್ರನೂ ಮತ್ತು ನಿರ್ದಯನೂ ಎಂದು ಪುರಾಣೋಕ್ತವಾಗಿದ್ದರೂ ಈನಾಟಕದಲ್ಲಿ ಭವಭೂತಿಯು ಅವನ ಸ್ವಭಾವವನ್ನು ಬಹು ಸೌಮ್ಯರೀತಿ ಯಿಂದ ವರ್ಣಿಸಿರುವನು. ರಾಮನು ವಾಲಿಯನ್ನು ಮೋಸದಿಂದ ಕೊಂದ ವಿಚಾರವು ಈನಾಟಕದಲ್ಲಿ ಹೇಳಲ್ಪಟ್ಟಿರುವುದಿಲ್ಲ. ನಾಟಕಸಂಪ್ರದಾಯಾ ನುಸಾರ ಈ ನಾಟಕದಲ್ಲಿಯ ಪಾತ್ರಗಳಲ್ಲಿ ಉದಾತ್ತತೆಯನ್ನು ತೋರಿಸಬೇ ಕೆಂಬಾಸ್ಥೆಯಿಂದ ಕಥಾಸಂವಿಧಾನವನ್ನು ತನ್ನ ಚತುರತೆಯಿಂದ ಬೇಕು ಬೇಕಾದ ಹಾಗೆ ತಿರುಗಿಸಿಕೊಂಡಿರುವನು. ಹೆಸರಿಗೆ ತಕ್ಕಂತೆ ಈ ನಾಟಕವು ವೀರರಸಪ್ರಧಾನವಾದುದಾಗಿರುವುದು. ಇದರಲ್ಲಿ ಸೂತ್ರಧಾರನು ನಾಂದೀ ಶ್ಲೋಕದಲ್ಲಿ ವೀರರಸೋತ್ತೇಜಕವಾದ ಶ್ಲೋಕದಿಂದ ಮಂಗಳಾಚರಣವನ್ನು ಮಾಡಿ ಎಲೈ ಪ್ರೇಕ್ಷಕರೇ! ನಾವು ಈ ದಿವಸ ವೀರರಸಪ್ರಧಾನವಾದ ಮಹಾ ವೀರಚರಿತವನ್ನಾಡತಕ್ಕವರಿರುತ್ತೇವೆ ಎಂದು ಹೇಳಿರುವನು. ಭಾಷಣವು ಸ್ಪಷ್ಟವಾಗಿಯೂ ಉದ್ದಾಮ ಮತ್ತು ರಸಭಾವಗರ್ಭಿತವಾಗಿಯೂ ಇದ್ದು ಆಯಾಯ ಪಾತ್ರಗಳಿಗೆ ಅನುಸಾರವಾಗಿ ವೀರರಸವು ತುಂಬಿತುಳುಕುತ್ತಿ ರುವುದು. ಇದರಲ್ಲಿ ಶೃಂಗಾರರಸವು ಅಲ್ಲಲ್ಲಿ ಕೊಂಚವಾಗಿರುವುದು. ಇವೆರಡು ರಸಗಳ ವಿನಾ ಈ ನಾಟಕದಲ್ಲಿ ಮತ್ತಾವ ರಸವೂ ಕಂಡುಬರುವು ದಿಲ್ಲ. ೫ ನೆಯ ಅಂಕದಲ್ಲಿ ಜಟಾಯು ಮತ್ತು ಸಂಪಾತಿಯರ ಪ್ರವೇಶ, ಕೊನೆಯ ಅಂಕದಲ್ಲಿ ಸೀತಾರಾಮರೇ ಮೊದಲಾದವರು ಪುಷ್ಪಕವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಬರುವಾಗ ದಂಡಕಾರಣ್ಯವರ್ಣನೆ ಇವು ಬಹು ಚೆಲು

ವಾಗಿರುವುವು. ಆರನೆಯ ಅಂಕದಲ್ಲಿ ಸೀತೆಯ ವಿಚಾರವಾಗಿ ಉತ್ಕಂಠಿತನಾದ ರಾವಣನು ಬರುವನು. ಕೂಡಲೇ ತನ್ನ ಕಡೆಗೆ ಬರುತ್ತಿದ್ದ ಮಂಡೋದರಿಯನ್ನು ರಾವಣನು ನೋಡಿ ತನ್ನ ಮುಖವನ್ನು ಬದಲಾಯಿಸಿಕೊಳ್ಳುವಿಕೆ, ಸೇತುಬಂಧವೃತ್ತಾಂತವನ್ನು ಹೇಳುವುದಕ್ಕೆ ಬಂದ ಮಂಡೋದರಿಯನ್ನು ಪರಿಹಾಸ್ಯಮಾಡಿ ಹೆದರಬೇಡವೆಂದು ಧೈರ್ಯವನ್ನು ಹೇಳುವಿಕೆ, ರಾವಣನ ಸೇನಾಪತಿಯಾದ ಪ್ರಹಸ್ತನು ಬಂದು ರಾವಣನನ್ನು ನೋಡಿ ರಾಮನು ಸೈನ್ಯದೊಡನೆ ಸಮುದ್ರವನ್ನು ದಾಟಿ ಲಂಕೆಗೆ ಮುತ್ತಿರುವನೆಂದು ಎರಡಾವೃತ್ತಿ ತಿಳಿಸಿದಾಗಲೂ ರಾವಣನು ಲಕ್ಷಿಸದೆ ಇರುವಿಕೆ ಇವುಗಳು ರಾವಣನ ಗರ್ವ, ಸೀತಾಸೌಂದರ್ಯೋನ್ಮಾದಾವಸ್ಥೆ, ಅಪ್ರಾಸಂಗಿಕ ಕಾಮಾತುರತ್ವ ಇವುಗಳನ್ನು ಸ್ಪಷ್ಟೀಕರಿಸುವುವು.

ಮೂರನೆಯದಾದ **ಉತ್ತರರಾಮಚರಿತೆ**ಯನ್ನು ಕವಿಯು ಮಹಾವೀರಚರಿತದ ಹಾಗೆಯೇ ಏರುಪೇರುಮಾಡಿ ಬರೆದಿರುವನು.

ಶ್ರೀರಾಮನ ಸಹೋದರಿಯೂ ಶಾಂತೆಯ ಗಂಡನೂ ಆದ ಋಷ್ಯಶೃಂಗನು ಯಾಗವನ್ನುಮಾಡಲಾರಂಭಿಸಿ ಯಾಗಕ್ಕಾಗಿ ಕೌಸಲ್ಯೆ, ಸುಮಿತ್ರೆ, ಕೈಕೇಯಿ, ವಸಿಷ್ಠಾರುಂಧತಿ ಮತ್ತು ರಾಜಕುಲದ ಗುರುಹಿರಿಯರನ್ನು ಬರಮಾಡಿಕೊಂಡಿದ್ದನು. ಜನಕನು ಸೀತಾರಾಮರನ್ನು ನೋಡಬೇಕೆಂಬ ಉದ್ದೇಶದಿಂದ ಅಯೋಧ್ಯೆಗೆ ಬಂದು ಅವರು ಅಲ್ಲಿ ಇಲ್ಲದಿರಲು ಪುನಃ ಮಿಥಿಲೆಗೆ ಪ್ರಯಾಣಮಾಡಿದನು. ಇದನ್ನು ಕೇಳಿ ತಂದೆಯನ್ನು ನೋಡಬೇಕೆಂದಿದ್ದ ಸೀತೆಯ ದುಃಖಾಪನೋದನಕ್ಕಾಗಿ ರಾಮನು ತಮ್ಮನಾದ ಲಕ್ಷ್ಮಣನಿಗೆ ತನ್ನ ಪೂರ್ವಚರಿತ್ರವೃತ್ತಾಂತವನ್ನು ತಿಳಿಸುವುದಾದ ಒಂದು ಚಿತ್ರಪಟವನ್ನು ಬರೆಸಿ ತರಿಸುವಂತೆ ಆಜ್ಞಾಪಿಸಿದನು. ಅದರಂತೆ ಸಿದ್ಧಗೊಳಿಸಿ ತಂದ ಚಿತ್ರಪಟವನ್ನು ವರ್ಣಿಸುತ್ತಾ ದಂಡಕಾರಣ್ಯವನ್ನು ನೋಡಿ ಸೀತಾವಿರಹವನ್ನು ಜ್ಞಾಪಿಸಿಕೊಂಡು ಅಲ್ಲಿಗೆ ನಿಲ್ಲಿಸುವಂತೆ ಹೇಳಿದನು. ಚಿತ್ರವಿಚಿತ್ರವಾದ ಅರಣ್ಯಸೌಂದರ್ಯ, ಪವಿತ್ರತಮವಾದ ಗಂಗಾಸಲಿಲ, ಮಹಾತ್ಮರಾದ ಋಷಿಗಳ ತಪೋವನ ಇವುಗಳನ್ನು ಪುನಃ ನೋಡಿ ಧನ್ಯತೆಯನ್ನು ಹೊಂದಬೇಕೆಂದು ಸೀತೆಯು ಆಶಿಸಿದಳು. ಆಕೆಯ ಇಷ್ಟಾನುಸಾರ ರಾಮನು ರಥವನ್ನು ಸಜ್ಜುಗೊಳಿಸಿ ತರಲಾಜ್ಞಾಪಿಸಿದನು. ಸೀತೆಯು ಚಿತ್ರವನ್ನು ನೋಡುತ್ತಿದ್ದಹಾಗೆಯೇ ಆಯಾಸದಿಂದ ರಾಮನ ತೋಳನ್ನು ದಿಂಬಾಗಿಟ್ಟುಕೊಂಡು ತೊಡೆಯ ಮೇಲೆ ಮಲಗಿದ್ದ ಸಮಯದಲ್ಲಿ ಶ್ರೀರಾಮನಿಂದ ನಗರವಾರ್ತಾವಿಚಾರವನ್ನು ತಿಳಿದುಕೊಂಡು ಬರಲು ಯೋಜಿಸಲ್ಪಟ್ಟ ದುರ್ಮುಖನು

ಸೀತಾದೇವಿಯ ವಿಚಾರವಾಗಿ ಮಾತನಾಡುತ್ತಿದ್ದ ರಜಕನ ವಿಷಯವನ್ನು ತಿಳಿಸಲು ಅದನ್ನು ಕೇಳಿ ಕಡುನೊಂದು ಮೂರ್ಛಿತನಾಗಿ ಸೀತಾದೇವಿಯನ್ನು ಅರಣ್ಯಕ್ಕೆ ಕಳುಹಿಸಲು ನಿಶ್ಚಯಮಾಡಿ ಕಳುಹಿಸಿಕೊಟ್ಟನು. ಅನಂತರ ವಾಲ್ಮೀಕಿಯಾಶ್ರಮಕ್ಕೆ ಸೀತಾಗಮನ, ಲವಕುಶರ ಜನನ, ಋಷ್ಯಶೃಂಗನ ಯಾಗಾನಂತರ ಕೌಸಲ್ಯೆ, ಕೈಕೇಯಿ ಮೊದಲಾದವರು ವಾಲ್ಮೀಕಿಯ ಆಶ್ರಮಕ್ಕೆ ಬಂದುದೂ ಶ್ರೀರಾಮನು ಅಶ್ವಮೇಧಕ್ಕಾಗಿ ಕುದುರೆಯನ್ನು ಬಿಟ್ಟು ಅದರ ರಕ್ಷಣೆಗಾಗಿ ಸೈನ್ಯವನ್ನು ಕಳುಹಿಸಿ ಸೈನ್ಯರಕ್ಷಣೆಗಾಗಿ ಲಕ್ಷ್ಮಣನ ಮಗನಾದ ಚಂದ್ರಕೇತುವನ್ನು ನಿಯೋಜಿಸಿದುದೂ ಶಂಬೂಕನೆಂಬ ಶೂದ್ರನು ಸ್ವಧರ್ಮಾಚರಣವನ್ನು ಬಿಟ್ಟು ತಪವನ್ನಾಚರಿಸುತ್ತಿದ್ದುದರಿಂದ ತನ್ನ ರಾಜ್ಯದಲ್ಲಿ ಅಕಾಲಮರಣಪ್ರಾಪ್ತವಾದುದನ್ನು ಕಂಡು ಅವನ ವಧಾರ್ಥವಾಗಿ ದಂಡಕಾರಣ್ಯಕ್ಕೆ ಶ್ರೀರಾಮನು ಬರುವುದಾಗಿಯೂ ಇವೇ ಮೊದಲಾದ ವಿಚಾರಗಳನ್ನು ವನದೇವತೆಯಾದ ವಾಸಂತಿಕೆಯು ವಾಲ್ಮೀಕಿಯ ಆಶ್ರಮದಲ್ಲಿನ ಆತ್ರೇಯಿಯೊಡನೆ ಹೇಳುವ ಭಾಷಣದಲ್ಲಿ ಸೂಚಿಸಿರುವನು. ಅದರಂತೆಯೇ ರಾಮನು ಬಂದು ಶಂಬೂಕನನ್ನು ವಧಿಸಿ ದಂಡಕಾರಣ್ಯವನ್ನು ನೋಡುತ್ತ ಅಗಸ್ತ್ಯರಿಂದ ಪ್ರಾರ್ಥಿಸಲ್ಪಟ್ಟವನಾಗಿ ಅವರ ಆಶ್ರಮಕ್ಕೆ ಹೋದನು. ಅಲ್ಲಿ ಸತ್ಕರಿಸಲ್ಪಟ್ಟವನಾಗಿ ಪುಷ್ಪಕವಿಮಾನಾರೂಢನಾಗಿ ದಂಡಕಾರಣ್ಯದಲ್ಲಿನ ಸೀತಾವಿರಹಜನ್ಯದುಃಖಸ್ಥಳಗಳನ್ನು ನೋಡಿ ಮೂರ್ಛೆಯನ್ನು ಹೊಂದಿದನು. ಇಂತಹ ಮೂರ್ಛೆಯನ್ನು ತಿಳಿಸುವುದಕ್ಕಾಗಿ ಗಂಗೆಯು ಮೊದಲೇ ಉಪಾಯವನ್ನು ಕಲ್ಪಿಸಿದ್ದಳು. ಸೀತೆಯು ಬೇಕಾದಾಗ ಅದೃಶ್ಯರೂಪವನ್ನು ತಾಳುವಂತೆ ಗಂಗೆಯು ವರವನ್ನು ಕೊಟ್ಟಿದ್ದಳು. ಅದರಂತೆಯೇ ಸೀತೆಯು ಅದೃಶ್ಯರೂಪದಿಂದ ರಾಮನನ್ನು ಸ್ಪರ್ಶಿಸಿದ ಕೂಡಲೇ ಪೂರ್ವಪರಿಚಯಸ್ಪರ್ಶದಿಂದ ಮೂರ್ಛೆಯನ್ನು ತಿಳಿದು ಎದ್ದನಂತರ ಪುಷ್ಪಕವಿಮಾನದಲ್ಲಿ ಕುಳಿತು ಅದನ್ನು ವಾಲ್ಮೀಕಿಯ ಆಶ್ರಮಕ್ಕೆ ತಿರುಗಿಸಿದನು. ಅಲ್ಲಿ ತಿರುಗುತ್ತಿದ್ದ ಇಬ್ಬರು ಹುಡುಗರನ್ನು ಜನಕನೂ ಮತ್ತು ಕೌಸಲ್ಯೆಯೂ ಮಾತನಾಡಿಸಿದಾಗ ನಾವು ವಾಲ್ಮೀಕಿಯ ಶಿಷ್ಯರು, ಹೆಸರು ಕುಶಲವರು, ನಾವು ತಂದೆತಾಯಿಗಳನ್ನರಿಯೆವು ಎಂದು ಹೇಳುತ್ತಿದ್ದುದನ್ನು ನೋಡಿ ಆಶ್ರಮದಲ್ಲಿದ್ದ ಮಿಕ್ಕ ವಟುಗಳು ಆಶ್ಚರ್ಯದೊಡನೆ ಲವನ ಬಳಿಗೆ ಬಂದು ಎಲೈ, ಲವನೆ! ಅಗೋ ನೋಡು; ನಮ್ಮ ಆಶ್ರಮಕ್ಕೆ ಒಂದು ಚತುಷ್ಪಾದಜಂತುವು ಬಂದಿದೆ. ಅದನ್ನು ನೋಡೋಣ ಬಾಯೆಂದು ಕರೆದುಕೊಂಡುಹೋಗಿ ಅದರ ಬೆಂಗಾವಲಿಗೆ ಬಂದಿದ್ದ ಸೈನ್ಯವನ್ನು ಪರಾಭವಗೊಳಿಸಿ ಚಂದ್ರಕೇತುವಿನೊಡನೆ ಯುದ್ಧಮಾಡುತ್ತಿರುವ ಆ ಬಾಲಕನನ್ನು ಯುದ್ಧವನ್ನು ನಿಲ್ಲಿಸೆಂದು ಹೇಳಿ ಚಂದ್ರಕೇತುವಿನಿಂದ ಪ್ರಶಂಸೆ ಮಾಡಲ್ಪಟ್ಟ ಲವನನ್ನು ರಾಮನು ತನ್ನ ಮಗನನ್ನಾಗಿ ತಿಳಿದುಕೊಂಡನು.

ಅನಂತರ ವಾಲ್ಮೀಕಿಯ ಆಜ್ಞಾನುಸಾರ ರಂಗಮಂಟಪವು ನಿರ್ಮಿಸಲ್ಪಟ್ಟು ಅಲ್ಲಿ ರಾಮಾಯಣಕಥೆಯು ಅಭಿನಯಿಸಲ್ಪಟ್ಟಿತು. ಅಪ್ಸರೆಯರು ನರ್ತಿಸಿದರು. ಲವನು ಶ್ರೀರಾಮನನ್ನು ಸಾಕ್ಷಾತ್ತಾಗಿ ನೋಡಿ ರಾಮಾಯಣದ ಮೂಲಪುರುಷನೆಂದರಿತು ನಮಸ್ಕರಿಸಿದನು. ಕೂಡಲೇ ಶ್ರೀರಾಮನ ಸಮಾಗಮನಿರಾಶಳಾಗಿ ಭೂಗರ್ಭವನ್ನು ಸೇರಿದ್ದ ಜಾನಕಿಯನ್ನು ಪೃಥ್ವಿಯೂ ಗಂಗೆಯೂ ತಂದಿತ್ತರು. ಪವಿತ್ರಳಾದ ಜಾನಕಿಯನ್ನು ಶ್ರೀರಾಮನು ಪರಿಗ್ರಹಿಸಿ ವಾಲ್ಮೀಕಿಯಿಂದ ಆಶೀರ್ವಾದವನ್ನುಹೊಂದಿ ಎಲ್ಲರೂ ಅಯೋಧ್ಯೆಗೆ ತೆರಳಿದರು. ಇದೇ ಉತ್ತರರಾಮಚರಿತೆಯ ಕಥಾಸಾರಾಂಶ.

ಮೂಲಕಥೆಯಂತೆ ನಿಲ್ಲಿಸಿಬಿಡುವುದಾಗಿದ್ದರೆ ನಾಟಕವು ಶೋಕಪರ್ಯವಸಾಯಿಯಾಗುತ್ತಿದ್ದಿತು. ಶೋಕಪರ್ಯವಸಾಯಿಯಾದ ನಾಟಕಗಳಾಗಲಿ ಕಥೆಗಳಾಗಲಿ ಗೀರ್ವಾಣವಾಙ್ಮಯದಲ್ಲಿ ಅತಿವಿರಳವಾದುದರಿಂದ ನಮ್ಮ ಕವಿಯು ಆನಂದಪರ್ಯವಸಾಯಿಯಾಗುವಹಾಗೆ ತಿರುಗಿಸಿಕೊಂಡು ಬರೆದಿರುವನು. ಕವಿಯು ಈ ನಾಟಕದಲ್ಲಿ ಮುಖ್ಯವಾದ ಎರಡು ಬದಲಾವಣೆಗಳನ್ನು ಮಾಡಿರುವನು. ಮೊದಲನೆಯದು, ವಾಲ್ಮೀಕಿಯು ರಾಮಾಯಣದಲ್ಲಿ ರಾಮಲಕ್ಷ್ಮಣರು ಲವಕುಶರಿಂದ ಪರಾಭವವನ್ನು ಹೊಂದಿದುದಾಗಿ ತೋರಿಸಿರುವನು. ಅತುಳಪರಾಕ್ರಮಿಗಳಾದ ಶ್ರೀರಾಮಲಕ್ಷ್ಮಣರಿಗೆ ಪರಾಭವಲಾಘವದೋಷವು ಬರಕೂಡದೆಂದು ಭವಭೂತಿಯು ಲವ ಮತ್ತು ಚಂದ್ರಕೇತುವಿನ ಯುದ್ಧಪ್ರಸಂಗವನ್ನು ಹೇಳಿ ತೋರಿಸಿರುವನು. ಎರಡನೆಯದು, ತನ್ನ ನಾಟಕವು ಸಂತೋಷಪರ್ಯವಸಾಯಿಯಾಗಿರಬೇಕೆಂಬುದು. ಶ್ರೀ ಸೀತಾರಾಮರು ಅಕೃತ್ರಿಮಪ್ರೇಮಲಾಭಾನ್ವಿತರಾಗಿದ್ದರೂ ದುರ್ಮುಖನಿಂದ ಸೀತಾವಿಚಾರವಾದ ಜನಾಪವಾದವನ್ನು ಕೇಳಿದ ಕೂಡಲೇ ಶ್ರೀರಾಮನು ಪಾಷಾಣಸದೃಶಹೃದಯನಾಗಿ ವಸಿಷ್ಠರಾಜ್ಞೆಯನ್ನೂ ತನ್ನ ಕಠೋರಪ್ರತಿಜ್ಞೆಯನ್ನೂ ಅಕ್ಷರಶಃ ಅನುಸರಿಸಿರುವನು. ತಾನು ದಯಾಮೂರ್ತಿಯಾದರೂ ಲೋಕಾಪವಾದಕ್ಕಂಜಿ ತೊಡೆಯ ಮೇಲೆ ಮಲಗಿಕೊಂಡು ನಿದ್ರಿಸುತ್ತಿದ್ದ ಸೀತೆಯನ್ನು ಕೆಳಕ್ಕೆ ತಳ್ಳಿಬಿಟ್ಟನೆಂಬುದನ್ನು ಯೋಚಿಸಿಕೊಂಡರೆ ಎಂತಹವನಿಗಾದರೂ ಹೃದಯದ್ರಾವಕವಾಗದೆ ಇರದು. ಮಹಾತ್ಮರ ಹೃದಯವು ಕ್ಷಣಾರ್ಧದಲ್ಲಿ ವಜ್ರಕ್ಕಿಂತಲೂ ಕಾಠಿಣ್ಯಯುಕ್ತವಾದುದಾಗಿಯೂ ಕ್ಷಣಾರ್ಧದಲ್ಲಿ ಹೂವಿಗಿಂತಲೂ ಮೃದುವಾದುದಾಗಿಯೂ ಆಗುವುದೆಂಬುದನ್ನು ಮೇಲೆ ಹೇಳಿದ ವಿಚಾರಗಳಿಂದ ತಿಳಿದುಕೊಳ್ಳಬಹುದಾಗಿದೆ. ಶಂಬೂಕನ ವಧೆಯನ್ನು ನಾಟಕದಲ್ಲಿ ತೋರಿಸಿ ಅಭಿನಯಿಸುವುದು ಅಪ್ರಶಸ್ತವಾದುದರಿಂದಲೂ ತಾನು ಸದಯನಾದುದರಿಂದಲೂ

ಶಂಬೂಕನಿಗೆ ದಿವ್ಯದೇಹವನ್ನು ಕೊಟ್ಟು ರಕ್ಷಿಸಿದಂತೆ ಕವಿಯು ತೋರಿಸಿರು ವನು. ಇದರಲ್ಲಿ ಕರುಣರಸವು ಪ್ರಧಾನವಾದುದಾಗಿರುವುದು.

ಉತ್ತರರಾಮಚರಿತವು ಯಾವ ರಸವನ್ನು ಪ್ರಧಾನವಾಗಿ ತೋರಿಸುವು ದೆಂಬ ವಿಚಾರದಲ್ಲಿ ಪಂಡಿತರು ಬಗೆ ಬಗೆಯಾಗಿ ಹೇಳುತ್ತಿರುವರು. ಈ ವಿಚಾರ ದಲ್ಲಿ ರಸವಿವೇಚನೆಯು ಅಪ್ರಾಸಂಗಿಕವಾಗಿ ತೋರದು. ಲಾಕ್ಷಣಿಕಸಂಪ್ರ ದಾಯಾನುಸಾರ—

"ವೀರಶೃಂಗಾರಯೋರೇಕಃ ಪ್ರಧಾನಂ ಯತ್ರ ವರ್ಣ್ಯತೆ"

—ಪ್ರತಾಪರುದ್ರೀಯ

ಎಂಬಂತೆ ಯಾವ ನಾಟಕದಲ್ಲಿಯಾದರೂ ಶೃಂಗಾರರಸವಾಗಲಿ ಅಥವಾ ವೀರ ರಸವಾಗಲಿ ಪ್ರಧಾನವಾಗಿಯಿದ್ದೇ ತೀರಬೇಕು. ಯಾವ ನಾಟಕವು ಈ ಸಂಪ್ರ ದಾಯಕ್ಕೆ ವಿರುದ್ಧವಾಗಿದೆಯೋ ಅಂತಹುದನ್ನು ಶಿಷ್ಟಾಚಾರಸಮ್ಮತವಲ್ಲವೆನ್ನು ವರು. ಉತ್ತರರಾಮಚರಿತೆಯಲ್ಲಿ ಮೇಲೆ ಹೇಳಿದಂತೆ ಯಾವ ರಸವೂ ಇಲ್ಲದೆ ಇರುವುದರಿಂದ ಕೆಲವರು ಇದರ ಪ್ರಧಾನರಸವು ಶೃಂಗಾರವೆಂದು ಹೇಳುವರು. ಮತ್ತೆ ಕೆಲವರು ವಿಪ್ರಲಂಭಶೃಂಗಾರವೆನ್ನುವರು. ಮತ್ತೆ ಕೆಲವರು ಕರುಣ ರಸವೆನ್ನುವರು.

ಕರುಣರಸದ ಸ್ಥಾಯಿಭಾವವು ಶೋಕ. ಶೃಂಗಾರರಸದ ಸ್ಥಾಯಿಭಾ ವವು ರತಿ. ರತಿಯೆಂದರೆ "ಸಂಭೋಗವಿಷಯ ಇಚ್ಛಾವಿಶೇಷೋ ರತಿಃ" ಎಂತಲೂ (a desire for sensual enjoyment) "ಇಷ್ಟಜನವಿಯೋಗಾದಿ ನಾ ಆತ್ಮನಿ ದುಃಖಾತಿ ಭೂಮಿಃ ಶೋಕಃ" (ones overpowering sorrow on account of the loss of someone endeared to him) ಎಂತಲೂ ಪ್ರತಾಪರುದ್ರೀಯದಲ್ಲಿ ಹೇಳಲ್ಪಟ್ಟಿದೆ. ಪಂಚೇಂದ್ರಿಯಗಳನ್ನು ಜಾಗರಗೊಳಿಸಿ ಸಂಭೋಗೇಚ್ಛೆಯನ್ನುಂಟುಮಾಡುವುದು ಅಥವಾ ಜನನೇಂದ್ರಿ ಯೋತ್ತೇಜನಗೊಳಿಸುವುದು ಯಾವುದೋ ಆ ಭಾವಕ್ಕೆ ರತಿಯೆಂತಲೂ ತನಗೆ ಪ್ರೀತಿಪಾತ್ರವಿಯೋಗವೇ ಶೋಕವೆಂತಲೂ ಅರ್ಥವಾಗುವುದು. ಶೃಂಗಾರವು ಸಂಭೋಗಶೃಂಗಾರವೆಂತಲೂ ವಿಪ್ರಲಂಭಶೃಂಗಾರವೆಂತಲೂ ಎರಡು ವಿಧ. ಪ್ರಕೃತ ನಮಗೆ ಬೇಕಾದುದು ವಿಪ್ರಲಂಭಶೃಂಗಾರ. ವಿಪ್ರಲಂಭಶೃಂಗಾರ ವೆಂದರೆ—

ಅಪ್ರಾಪ್ತಿರ್ವಿಪ್ರಲಂಭಸ್ಸ್ಯಾದ್ಯೂನೋರ್ಜಾತಾಭಿಲಾಷಯೋಃ ।

—ಭರತ ರಸಪ್ರಕರಣ.

ಸತೀಪುರುಷರು ಕೆಲವುಕಾಲ ಅಗಲಿದ್ದು ಆ ಅಗಲುವಿಕೆಯ ಕಾಲದಲ್ಲಿ ಸಂಭವಿಸಬಹುದಾದ ಕಷ್ಟಗಳನ್ನು ಅನುಭವಿಸುತ್ತಾ ತಾವು ಸೇರಬೇಕೆಂಬುವು ದರಲ್ಲಿ ನಿರಾಶರಾಗದೆ ಕೊನೆಗೆ ಇಬ್ಬರೂ ಸೇರುವುದಕ್ಕೆ ವಿಪ್ರಲಂಭಶೃಂಗಾ ರವೆನ್ನುವರು. ಇದರಲ್ಲಿ ಪ್ರಣಯವು ನೈರಾಶ್ಯವನ್ನು ಹೊಂದುವುದಿಲ್ಲ. ಹೆಂಗಸೇ ಆಗಲಿ ಅಥವಾ ಗಂಡಸೇ ಆಗಲಿ ಕಷ್ಟವನ್ನು ಅನುಭವಿಸುವುದು ತಾತ್ಕಾಲಿಕವಾದರೂ ಕೊನೆಗಾದರೂ ಇಬ್ಬರೂ ಸೇರುವೆವೆಂಬಾಸೆಯಿಂದ ಕಷ್ಟವನ್ನು ಅನುಭವಿಸುವರು. ಉದಾಹರಣಾರ್ಥವಾಗಿ—ಅಭಿಜ್ಞಾನಶಾಕುಂತ ಲದಲ್ಲಿನ ದುಷ್ಯಂತ ಮತ್ತು ಶಕುಂತಲಾ, ಮೇಘದೂತದಲ್ಲಿನ ಯಕ್ಷ ಮತ್ತು ಯಕ್ಷಭಾರ್ಯಾ, ವಿಕ್ರಮೋರ್ವಶೀಯದಲ್ಲಿನ ಪುರೂರವ ಮತ್ತು ಊರ್ವಶೀ ಇವರು ಕೆಲವುಕಾಲದವರೆಗೆ ಪರಸ್ಪರ ಅಗಲಿದ್ದು ಪುನಃ ತಾವು ಖಂಡಿತವಾ ಗಿಯೂ ಸೇರುವೆವೆಂಬ ಆಸೆಯಿಂದ ಎಷ್ಟು ತೊಂದರೆಗಳುಂಟಾದರೂ ಅನು ಭವಿಸಿ ಕೊನೆಗೆ ಈರ್ವರೂ ಸೇರಿ ಸುಖಿಸಿದರೆಂಬುದನ್ನು ಮನನಮಾಡುತ್ತಿ ರುವೆವಲ್ಲವೆ? ಇಂತಹುದಕ್ಕೆ ವಿಪ್ರಲಂಭಶೃಂಗಾರವೆನ್ನುವರು. ಹಾಗಾದರೆ ಉತ್ತರರಾಮಚರಿತದಲ್ಲಿನ ರಸವು ವಿಪ್ರಲಂಭಶೃಂಗಾರವೇ? ಅಥವಾ ಕರುಣವೇ? ವಿಪ್ರಲಂಭಶೃಂಗಾರವೆನ್ನುವುದಾದರೆ ನಾಯಕ-ನಾಯಕಿಯರು ಪುನಃ ಸೇರ ಬೇಕಲ್ಲವೆ? ಸೀತಾವಿಯೋಗಾನಂತರ ರಾಮನು ಸೀತೆಯು ಬದುಕಿರುವಳೆಂದು ತಿಳಿದಿದ್ದನೆ? ಹಾಗೆ ಒಂದುವೇಳೆ ತಿಳಿದಿದ್ದ ಪಕ್ಷದಲ್ಲಿ—

ತ್ರಸ್ತೈಕಹಾಯನಕುರಂಗವಿಲೋಲದೃಷ್ಟೇ
ಸ್ತಸ್ಯಾಃ ಪರಿಸ್ಫುರಿತಗರ್ಭಭರಾಲಸಾಯಾಃ ।
ಜ್ಯೋತ್ಸ್ನಾಮಯೀವ ಮೃದುಬಾಲಮೃಣಾಳಕಲ್ಪಾ
"ಕ್ರವ್ಯಾದ್ಭಿರಂಗಲತಿಕಾ ನಿಯತಂ ವಿಲುಪ್ತಾ" ॥

—ಉತ್ತರರಾಮಚರಿತೆ ೩—೨೮

(ಯಾರಾದರೂ ರಾಕ್ಷಸರು ಅಪಹರಿಸಿಕೊಂಡು ಹೋಗಿರಬೇಕು. ಇಲ್ಲ ವಾದರೆ ಯಾವುದಾದರೂ ಮೃಗಕ್ಕೆ ತುತ್ತಾಗಿರಬೇಕು.) ಎಂದೇಕೆ ಹೇಳುತ್ತಿ ದ್ದನು? ಅಲ್ಲದೆ—

ವಿನಾ ಸೀತಾದೇವ್ಯಾ ಕಿಮಿವ ಹಿ ನ ದುಃಖಂ ರಘುಪತೇಃ
ಪ್ರಿಯಾನಾಶೇ ಕೃತ್ಸ್ನಂ ಕಿಲ ಜಗದರಣ್ಯಂ ಹಿ ಭವತಿ ।
ಸ ಚ ಸ್ನೇಹಸ್ತಾವಾನಯಮಪಿ ವಿಯೋಗೋ ನಿರವಧಿಃ
ಕಿಮೇವಂ ತ್ವಂ ಪೃಚ್ಛಸ್ಯನಧಿಗತರಾಮಾಯಣ ಇವ ॥ ಅಂ. ೬—೩೦ ॥

ಎಂಬಲ್ಲಿ 'ಪ್ರಿಯಾನಾಶೇ' ಎಂದರೆ-'ಪ್ರಿಯಾಯಾ ಅದರ್ಶನೆ' ಎಂದೂ 'ನಿರ ವಧಿಃ' ಎಂದರೆ— ಅವಸಾನಶೂನ್ಯವೆಂದೂ ಅರ್ಥವಾಗುವುದು. (ಪ್ರಿಯತಮ

ಳಾದ ಸೀತೆಯು ನಾಶವಾಗಿ ಹೋಗಲಾಗಿ ಈ ಪ್ರಪಂಚವು ಅರಣ್ಯವೇಸರಿ. ಆಶೆಯಾದರೋ ಹೆಚ್ಚುತ್ತಿದೆ. ವಿಯೋಗದುಃಖವಾದರೋ ಅವಸಾನಶೂನ್ಯ ವಾಗಿದೆ.) ಮತ್ತು

ಯಸ್ಯಾಂ ತೇ ದಿವಸಾಸ್ತ್ವಯಾ ಸಹ ಮಯಾ ನೀತಾ ಯಥಾ ಸ್ವೇ ಗೃಹೇ
ಯತ್ಸಂಬಂಧಕಥಾಭಿರೇವ ಸತತಂ ದೀರ್ಘಾಭಿರಾಸ್ಥೀಯತ ।
ಏಕಃ ಸಂಪ್ರತಿ ನಾಶಿತಪ್ರಿಯತಮಸ್ತಾಮೇವ ರಾಮಃ ಕಥಂ
ಪಾಪಃ ಪಂಚವಟೀಂ ವಿಲೋಕಯತು ವಾ ಗಚ್ಛತ್ವಸಂಭಾವ್ಯ ವಾ ॥

॥ ಅಂ. ೨—೨೮ ॥

ಇಲ್ಲಿ "ಏಕಸ್ಸಂಪ್ರತಿನಾಶಿತಪ್ರಿಯತಮಸ್ತಾಂ" ಎಂದರೆ ಪ್ರಿಯತಮಳಾದ ಜಾನಕಿಯು ನಾಶಹೊಂದಲ್ಪಟ್ಟನಂತರ ಎಂದಾಗುವುದು ಅಲ್ಲದೆ—

ದೇವ್ಯಾ ಶೂನ್ಯಸ್ಯ ಜಗತೋ ದ್ವಾದಶಃ ಪರಿವತ್ಸರಃ ।
ಪ್ರಣಷ್ಟಮಿವ ನಾಮಾಪಿ ನ ಚ ರಾಮೋ ನ ಜೀವತಿ ॥ ಅಂ. ೩—೩೩ ॥

(ಅಹಹ! ಪ್ರಪಂಚದಲ್ಲಿ ಸೀತೆಯೆಂಬ ಹೆಸರು ಅಡಗಿಹೋಗಿ ಹನ್ನೆರಡು ವರ್ಷಗಳಾದುವು. ಇನ್ನೂ ರಾಮನು ಜೀವಿಸಿರುವನು.) ಎಂದು ಹೇಳಿರು ವನು.

ಈರೀತಿ ರಾಮನಿಗೆ ಸೀತೆಯು ಖಂಡಿತವಾಗಿಯೂ ದೊರಕಳೆಂದು ತಿಳಿ ದಿದ್ದಮೇಲೆ ಪುನಃ ಅವರಿಬ್ಬರೂ ಸೇರುವರೆಂಬ ಭರವಸೆಯು ಹೇಗೆ? ಅಲ್ಲ ದಿದ್ದರೆ ರಾಮನು ಮತ್ತಾವ ಅಭಿಪ್ರಾಯದಿಂದಲಾದರೂ ಸೀತೆಯನ್ನು ತ್ಯಾಗ ಮಾಡಿ ಪುನಃ ಅವಳನ್ನು ಸೇರಬಹುದೆಂಬ ಅಭಿಲಾಷೆಯಿಂದ ಹೀಗೆ ಎಲಪಿಸಿ ದುದಾದರೆ ಅವಳನ್ನು ಕಳುಹಿಸಿಬಿಟ್ಟ ಕಾರಣವಾದರೂ ಯಾವುದು?

ನ ಕಿಲ ಭವತಾಂ ದೇವ್ಯಾಃ ಸ್ಥಾನಂ ಗೃಹೇಽಭಿಮತಂ ತತಃ ॥ ೩—೩೨ ॥

ಹಾಯ್! ರಾಮನ ಮನೆಯಲ್ಲಿ ಸೀತೆಯು ಇರಲು ಲೋಕವು ಇಷ್ಟ ಪಡುವುದಿಲ್ಲವೆಂದು ಕಂಠೋಕ್ತವಾಗಿ ಹೇಳಿರುವನು. ಈ ಕಾರಣಗಳಿಂದ ರಾಮನು ಸೀತೆಯನ್ನು ವನವಾಸಕ್ಕೆ ಕಳುಹಿಸಬೇಕಾಯಿತೆಂದೂ ಪುನಃ ಅವರು ಸೇರುವ ಸಂಭವವೇ ಇಲ್ಲನೆಂದೂ ಹೇಳಿದಹಾಗಾಯಿತು.

ಇದಲ್ಲದೆ ಉತ್ತರರಾಮಚರಿತದ ೭ನೆಯ ಅಂಕವನ್ನು ಸೂಕ್ಷ್ಮದೃಷ್ಟಿ ಯಿಂದ ಓದುವ ಪ್ರತಿಯೊಬ್ಬನಿಗೂ ಸೀತಾರಾಮರು ಪುನಃ ಸೇರುವ ಸಂಭವ ವಿಲ್ಲವೆಂದೇ ಗೊತ್ತಾಗುವುದು. ಸೀತೆಯು, ರಾಮನನ್ನು ಹೊಂದುವ ಸಂಭವ ವಿಲ್ಲವೆಂದುತಿಳಿದೇ ಗಂಗೆಯಲ್ಲಿ ಬಿದ್ದಳು. ಅಂತರ್ನಾಟಕದಲ್ಲಿ, ದುಃಖಾತಿ

ರೇಕದಿಂದ "ಅಯಿ! ವಸುಂಧರೆ! ದೇಹಿ ಮೇ ವಿವರಂ" ಎಂದು ಹೇಳಿಕೊಂಡಿರು ವಳು. ಸೀತೆಯು ರಾಮನ ವಿಚಾರದಲ್ಲಿ ನಿರಾಶಳಾಗಿ ಭೂಮಿಯನ್ನು ಕುರಿತು ತನ್ನನ್ನು ಅಡಗಿಸಿಕೊಳ್ಳುವ ಹಾಗೆ ಬೇಡಿಕೊಂಡಿರುವಳು. ಇದೂ ಅಲ್ಲದೆ ನಮ್ಮ ನಾಟಕದ ಮುಖ್ಯತತ್ವವು ಪ್ರಜಾರಂಜನೆ. ಇದಕ್ಕಾಗಿ ರಾಮನು ಸ್ನೇಹ, ದಯೆ, ಸ್ವಸುಖ ಇವುಗಳಂತಿರಲಿ— ಪ್ರಿಯತಮಳಾದ ಜಾನಕಿ ಯನ್ನೂ ಕೂಡ ತ್ಯಾಗಮಾಡುವುದಾಗಿ ಹೇಳಿರುವನು.

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿ ವಾ ಜಾನಕೀಮಪಿ ।
ಆರಾಧನಾಯ ಲೋಕಸ್ಯ ಮುಂಚತೋ ನಾಸ್ತಿ ಮೇ ವ್ಯಥಾ ॥ ೧—೧೨ ॥

ದುರ್ಮುಖನ ಮಾತನ್ನಭಿಮಾನಿಸಿ ಲೋಕರಂಜನೆಗಾಗಿ ಅರ್ಧಾಂಗಿ ಯಾದ ಜಾನಕಿಯನ್ನೂ ಕಾಡುಪಾಲು ಮಾಡಿದನು. ಮನೋಹಾರಿಣಿ ಯಾದ ಹೆಂಡತಿಗಿಂತಲೂ ಕೀರ್ತಿಮಯವಾದ ಲೋಕಾರಾಧನೆಯೇ ರಾಜ ನಾದವನಿಗೆ ಹೆಚ್ಚಿನದೆಂದು ತರ್ಕಿಸಿ ಸೀತೆಯನ್ನು ಕಳುಹಿಸಿರುವನು. ಇಲ್ಲಿ ಸೀತೆಯನ್ನುಕಳುಹಿಸಿದುದು ರಾಮನ ಸ್ವಾರ್ಥತ್ಯಾಗ ಮತ್ತು ರಾಜನೀತಿಯನ್ನು ತೋರಿಸುವುದು. ಎರಡನೆಯದು ಸೀತಾವಿಯೋಗ. ಇದು ಐಹಿಕಸುಖಮಾತ್ರ ವನ್ನು ತೋರಿಸುವುದು. ಇದರಿಂದ ವಿಪ್ರಲಂಭಶೃಂಗಾರವು ಕೇವಲ ಐಹಿಕ ಸುಖವನ್ನು ತೋರಿಸುವುದೆಂದೇಕೆ ಹೇಳಕೂಡದು ? ಇಂತಹುದನ್ನು ಇಲ್ಲಿ ಪ್ರಧಾನರಸವೆಂದು ಕರೆಯುವ ಬಗೆ ಹೇಗೆ ? ಸಕಲವನ್ನೂಮಂಗಳಾಂತವಾಗಿ ಮುಗಿಸಬೇಕೆಂಬ ಭಾರತೀಯರ ಸಂಪ್ರದಾಯದಂತೆ ಭವಭೂತಿಯು ಶ್ರೀರಾಮ ನಿಗೆ ಸೀತೆಯನ್ನು ದೊರೆಕಿಸಿಕೊಟ್ಟಿರುವುದನ್ನುನೋಡಿ ವಿಪ್ರಲಂಭಶೃಂಗಾರ ವೆನ್ನುವುದು ಸರಿಯಾದುದಾಗಿ ರಸಜ್ಞರು ಒಪ್ಪರು. ಇದಲ್ಲದೆ ಗ್ರಂಥಕಾರನು ತಾನೇ ತನ್ನಗ್ರಂಥದಲ್ಲಿ ಕರುಣವೇ ಪ್ರಧಾನರಸವೆಂದು ಹೇಳಿಕೊಂಡಿರುವನು.

ಪುಟಪಾಕಪ್ರತೀಕಾಶಃ ರಾಮಸ್ಯ ಕರುಣೋರಸಃ ॥ ಎಂದೂ

ಪರಿಪಾಂಡುದುರ್ಬಲಕಪೋಲಸುಂದರಂ
ದಧತೀ ವಿಲೋಲಕಬರೀಕಮಾನನಂ ।
'ಕರುಣಸ್ಯ ಮೂರ್ತಿ' ರಥವಾ ಶರೀರಿಣೀ
ವಿರಹವ್ಯಥೇವ ವನಮೇತಿ ಜಾನಕೀ ॥ ೩—೪ ॥

ಎಂದೂ ಹೇಳಿರುವುದರಿಂದ ಗ್ರಂಥಕಾರನ ಅಭಿಪ್ರಾಯದಂತೆ ಕರುಣರಸ ಹೊರತು ಮತ್ತಾವುದೂ ಪ್ರಧಾನರಸವಲ್ಲವೆಂದು ಹೇಳಿದಹಾಗಾಯಿತು. ಮತ್ತು—

ಏಕೋ ರಸಃ ಕರುಣ ಏವ ನಿಮಿತ್ತಭೇದಾತ್
ಭಿನ್ನಃ ಪೃಥಕ್‌ಪೃಥಗಿವಶ್ರಯತೇ ವಿವರ್ತಾನ್ ॥

ಎಂದು ಹೇಳಿರುವುದರಿಂದ ಇದರಲ್ಲಿ ಕರುಣರಸವು ಒಂದೇ ಇರುವುದೆಂದೂ ಅದು ಕಾರಣಾಂತರಗಳಿಂದ ಭಿನ್ನ ಭಿನ್ನವಾಗಿ ತೋರುವುದೆಂದೂ ಹೇಳಿದಂತಾಯಿತು. ಈತನ ಗ್ರಂಥದಲ್ಲಿ ಅನೇಕ ಸ್ಥಳಗಳಲ್ಲಿ 'ಕರುಣ' ಶಬ್ದವನ್ನು ಉಪಯೋಗಿಸಿರುವನು. ಕೆಲವುಸ್ಥಳಗಳಲ್ಲಿ ಕರುಣ ಶಬ್ದವು ಶೋಕಾರ್ಥದಲ್ಲಿ ಪರ್ಯಾಯವಾಯಿಯಾಗಿರುವುದು. ರಾಮನ ಮನಸ್ಸಿನಲ್ಲಿ ಸೀತಾವಿಯೋಗವಾಗಿ ಅವಳು ಪುನಃ ದೊರಕುವುದು ಅಸಂಭವವೆಂದು ತಿಳಿದಾಗ ಕರುಣರಸವಲ್ಲದೆ ಮತ್ತೇನಿರುವದು? ಲಾಕ್ಷಣಿಕರೇನೋ ನಾಟಕಕ್ಕೆ ಶೃಂಗಾರ ಅಥವಾ ವೀರರಸ ಪ್ರಾಧಾನ್ಯವೆಂದು ಹೇಳಿರುವರು. ಇದನ್ನು ಅನುಸರಿಸುವುದು ಎಷ್ಟುಮಟ್ಟಿಗೆ ಸಾಧ್ಯಾಸಾಧ್ಯವೆಂಬುದನ್ನು ಉತ್ತರರಾಮಚರಿತೆಯಿಂದ ತಿಳಿಯತಕ್ಕುದಾಗಿದೆ. ಅತ್ಯಂತ ಪ್ರತಿಭಾಶಾಲಿಯೂ, ಮೇಧಾವಿಯೂ ಆದ ಕವಿಯು ಸಾಧ್ಯವಾದ ಮಟ್ಟಿಗೂ ತನ್ನ ಕವಿತಾಪ್ರೌಢಿಮೆಯ ಮಾರ್ಗವನ್ನನುಸರಿಸುವನೇ ಹೊರತು ಇತರರ ಮಾರ್ಗವನ್ನನುಸರಿಸುವುದಿಲ್ಲ. ಆದುದರಿಂದಲೇ ಕಾಳಿದಾಸನು—

"ಪುರಾಣಮಿತ್ಯೇವ ನ ಸಾಧು ಸರ್ವಂ" ಎಂದು ಹೇಳಿರುವನು.

ಭವಭೂತಿಯು ತನ್ನ ಕವಿತಾಸಾಮರ್ಥ್ಯದ ವಿಚಾರವನ್ನು ತಿಳಿದವನಾದುದರಿಂದಲೇ—

"ಯಂ ಬ್ರಹ್ಮಾಣಮಿಯಂ ದೇವೀ ವಾಗ್ವಶ್ಯೇವಾನ್ವವರ್ತತ"

—ಉ. ರಾ. ನಾಂದಿ ೧—೭.

ಎಂದು ಹೇಳಿಕೊಂಡಿರುವನು. ಪ್ರತಿಯೊಬ್ಬನೂ ತನಗೆ ನ್ಯಾಯವೆಂದು ತಿಳಿದು ಬರುವ ಮಾರ್ಗವನ್ನು ಅನುಸರಿಸಬೇಕು. ಅದಕ್ಕಾಗಿ ಎಷ್ಟಾದರೂ ಸಾಹಸಪಡಬೇಕು. ಜನರಿಂದ ಹೊಗಳಿಸಿಕೊಳ್ಳಬೇಕೆಂಬುದು ಶುದ್ಧ ತಪ್ಪು ಎಂಬುದು

'ಸರ್ವಥಾ ವ್ಯವಹರ್ತವ್ಯಂ ಕುತೋ ಹ್ಯವಚನೀಯತಾ'

—ಉತ್ತರರಾಮಚರಿತ (೧—೫)

ಎಂದು ಹೇಳಿರುವುದರಿಂದ ತಿಳಿಯಬರುತ್ತದೆ. ಇದಲ್ಲದೆ ಕವಿಯು ತನ್ನ ಜೀವಿತ ಕಾಲದಲ್ಲಿ ತನ್ನ ಮಾಲತೀಮಾಧವ ನಾಟಕವು ಜಗತ್ಪ್ರಸಿದ್ಧಿಯನ್ನು ಹೊಂದುವುದೋ ಇಲ್ಲವೋ ಎಂಬುದನ್ನು ಲಕ್ಷಿಸಬೇಕಾದವಶ್ಯಕವಿಲ್ಲವೆಂದೂ ಪ್ರಪಂಚವೂ ಕಾಲವೂ ಅನಂತವಾಗಿರುವುದರಿಂದ ಈಗ ಇಲ್ಲದಿದ್ದರೂ ಮತ್ತೆ ಯಾವಾಗಲಾದರೂ ಸಂಭಾವಿಸಲ್ಪಡುವುದೆಂದೂ ಎಷ್ಟೋ ಶತಮಾನಗಳ ಹಿಂದೆಯೇ ಹೇಳಿರುವನು.

ಎಲ್ಲರೂ ತಾವು ಬರೆಯುವ ಕಾವ್ಯಾರಂಭದಲ್ಲಿ ನಿರ್ವಿಘ್ನಪ್ರಾಪ್ತಿಗೋಸ್ಕರ ಯಾವುದಾದರೂ ದೇವಸ್ತೋತ್ರವನ್ನು ಮಾಡುವ ವಾಡಿಕೆ ಇರುವುದು. ಇವನು ಹಾಗೆ ಮಾಡದೆ ಪೂರ್ವಕವಿಗಳನ್ನೂ ವಾಗೀಶ್ವರಿಯನ್ನೂ ಸ್ತುತಿಸಿರುವನು.

ನಾಟಕಗಳಲ್ಲಿ ಯಾವುದಾದರೂ ಋತುವನ್ನು ಕುರಿತು ಹೇಳುವ ವಾಡಿಕೆ ಯುಂಟು. ಶೃಂಗಾರರಸಭೋಗಕ್ಕಾದರೆ ವಸಂತಋತುವೆಂತಲೂ ವೀರರಸಕ್ಕಾದರೆ ಶರದೃತುವೆಂತಲೂ ದಶರೂಪಕದಲ್ಲಿ ಹೇಳಲ್ಪಟ್ಟಿರುವುದು. ಭವಭೂತಿಯು ತನ್ನ ನಾಟಕಗಳಲ್ಲಿ ಯಾವ ಋತುವನ್ನೂ ಕುರಿತು ಹೇಳಿರುವುದಿಲ್ಲ. ಮತ್ತು ನಾಟಕಗಳಲ್ಲಿ ನಾಯಕ ನಾಯಕಿಯರು, ವಿದೂಷಕನೇ ಮೊದಲಾದವರೊಡನೆ ತೋರಲ್ಪಡುವರು. ಭವಭೂತಿಯು ತನ್ನ ನಾಟಕಗಳನ್ನು ವಿದೂಷಕನ ಅಗತ್ಯವಿಲ್ಲದೆಯೇ ಬರೆದಿರುವನು. ಅರಣ್ಯದಲ್ಲಿ ಜನಿಸಿ ವಾಲ್ಮೀಕರ ಆಶ್ರಮದಲ್ಲಿ ಕಾಪಾಡಲ್ಪಟ್ಟ ಲವಕುಶರನ್ನು ಷೇಕ್ಸ್‌ಪಿಯರನ "ಸಿಂಬಲೈನ್" ನಾಟಕದಲ್ಲಿನ ಇಬ್ಬರು ರಾಜಪುತ್ರರಿಗೆ (to the two princes Guiderius Arviragus who are brought up by the hermit Belarius) ಹೋಲಿಸಬಹುದು. ಭವಭೂತಿಯ ಶೌರ್ಯವರ್ಣನೆಯನ್ನು ನೋಡಿ ಪಂಡಿತ ವಿಲ್ಸನ್‌ಮಹಾಶಯನು ಭವಭೂತಿಯು ಆಂಗ್ಲನಾಟಕಧೌರೇಯನಾದ ಸ್ಕಾಟ್ (Sir Walter Scott) ನನ್ನು ಮೀರಿಸಿರುವನೆಂದು ಅಭಿಪ್ರಾಯಪಟ್ಟಿರುವನು. ಭವಭೂತಿಯ ಭಾಷಾಸರಣಿಯು ಬಹು ಇಂಪಾಗಿರುವುದೆಂಬುದಕ್ಕೆ ಈ ಒಂದು ಶ್ಲೋಕವೇ ಸಾಕಾಗಿರುವುದು.

> ಮ್ಲಾನಸ್ಯ ಜೀವಕುಸುಮಸ್ಯ ವಿಕಾಸನಾನಿ
> ಸಂತರ್ಪಣಾನಿ ಸಕಲೇಂದ್ರಿಯಮೋಹನಾನಿ ।
> ಆನಂದನಾನಿ ಹೃದಯೈಕರಸಾಯನಾನಿ
> ದಿಷ್ಟ್ಯಾ ಮಯಾಪ್ಯಧಿಗತಾನಿ ವಚೋಮೃತಾನಿ ॥
>
> —ಮಾಲತೀಮಾಧವ ೬—೮

ಭವಭೂತಿಯ ಸ್ವಾಭಾವಿಕವರ್ಣನೆಯು ವರ್ಡ್ಸ್‌ವರ್ತ್ (Wordsworth)ನ ವರ್ಣನೆಗಳನ್ನು ಮೀರುವುದು. ಆಂಗ್ಲಕವಿಯಾದ ಷೆಲ್ಲಿ (Shelly) ಮಹಾಶಯನು(Poets are the unacknowledged Legislators of the World) ಎಂದು ಹೇಳಿರುವುದು ಭವಭೂತಿಗೆ ಒಪ್ಪಿರುವುದು.

ಕೆಲವರು ಕವಿಯಾದವನು ತನ್ನ ಶ್ರೇಷ್ಠತೆ, ಕಾಲಸ್ಥಿತಿಗಳನ್ನು ಹೇಳಿಕೊಳ್ಳುವುದರಿಂದಲೂ—

> ಕಾವ್ಯೇಽಪಿ ನಾಟಕೇ ವಾಪಿ ವಯಂ ವಾ ವಯಮೇವ ವಾ ।

ಎಂದು ಭವಭೂತಿಯು ಹೇಳಿರುವುದರಿಂದಲೂ ಆತ್ಮಪ್ರಶಂಸಾದೋಷವು ಬರುವುದೆಂದು ಶಂಕಿಸಬಹುದು. ಬಹುದೂರ ವಿಚಾರಮಾಡಿನೋಡಿದರೆ ಕವಿಗಳ ಪ್ರಶಸ್ತಿಯು ಅವರ ಜೀವಿತಕಾಲದಲ್ಲಿ ಅಲ್ಲ. ಅವರ ಮರಣಾನಂತರವೇ ಹೆಚ್ಚಾಗಿರುವುದು. ಏಕೆಂದರೆ ಅವರು ಜೀವಂತರಾಗಿರುವಾಗ ಪರೋತ್ಕರ್ಷತೆಯನ್ನುಸಹಿಸದೆ ಅಸೂಯೆಪಡುವವರು ಹೆಚ್ಚಾಗಿರುವರೇ ಹೊರತು ನಿರ್ಮಲ ಬುದ್ಧಿಯುಳ್ಳ ಸಾರಜ್ಞರು ಬಹುತರ ಕಡಿಮೆಯಾಗಿಯೇ ಇರುವರು. ಆದುದರಿಂದಲೇ ಭವಭೂತಿಯು—

ಲೋಕೇ ನಿತ್ಯಪ್ರಮೋದಂ ವಿದಧತು ಕವಯಃ ಶ್ಲೋಕಮಾಪ್ತಪ್ರಸಾದಂ
ಸಂಖ್ಯಾವಂತೋಪಿ ಭೂಮ್ನಾ ಪರಕೃತಿಷು ಮುದಂ ಸಂಪ್ರಧಾರ್ಯಪ್ರಯಾಂತು ||

ಎಂದು ಹೇಳಿರುವನು.

ಕಾಳಿದಾಸನು ತನಗೆ ಬೇಕಾದ ಪದಾರ್ಥಸೌಂದರ್ಯವನ್ನು ತನಗೆ ಬೇಕು ಬೇಕಾದಹಾಗೆ ವರ್ಣಿಸಿ ಪ್ರತ್ಯುತ್ಪನ್ನಮತಿಗಳಾದ ವಿದ್ವನ್ಮಣಿಗಳು ತನ್ನ ಕವಿತೆಯ ಮೇಲೆ ಬೇಕು ಬೇಕಾದ ಹಾಗೆ ಊಹಿಸಿ ತದ್ವಾರಾ ಆನಂದವನ್ನನುಭವಿಸಲು ಅನುಕೂಲವನ್ನು ಕಲ್ಪಿಸಿಕೊಟ್ಟಿರುವನು. ಭವಭೂತಿಯು ತಾನು ಹೇಳಬೇಕಾದುದೆಲ್ಲವನ್ನೂ ಹೇಳಿ ಊಹಿಸಲವಕಾಶಕೊಡದಂತೆ ತಾನೇ ಮುಗಿಸಿಬಿಟ್ಟಿರುವನು. ಇದೇ ಇವರೀರ್ವರ ಕವಿತಾವೈಲಕ್ಷಣ್ಯವಾಗಿರುವುದು. ಸ್ಥಾಲೀಪುಲಾಕನ್ಯಾಯದಂತೆ ಭವಭೂತಿಯ ಕೆಲವು ಶ್ಲೋಕಗಳನ್ನು ಮಾದರಿಗಾಗಿ ತೋರಿಸಿ ಅವನ ಜೀವನಚರಿತೆಯನ್ನು ಮುಗಿಸಲಾಶಿಸುವೆವು.

ಮದನೋದ್ಯಾನದಲ್ಲಿ ಮಾಧವನಿಗೂ ಮಾಲತಿಗೂ ಪ್ರಥಮಸಂದರ್ಶನವಾದಾಗ ಇದುವರೆವಿಗೆ ಗೂಢವಾಗಿರುತ್ತಿದ್ದ ಪ್ರಣಯವು ಮಾಲತಿಯನ್ನು ನೋಡಿದ ಕೂಡಲೇ ಎಲ್ಲೆಯನ್ನು ಮೀರಿ ಹೇಗೆಹೇಗೆ ತನ್ನನ್ನನುಸರಿಸಿತೆಂಬ ವಿಚಾರವಾಗಿ ಹೀಗೆ ಹೇಳಲ್ಪಟ್ಟಿರುವುದು—

ಸ್ತಿಮಿತವಿಕಸಿತಾನಾಮುಲ್ಲಸದ್ಭ್ರೂಲತಾನಾಂ
　ಮಸೃಣಮುಕುಳಿತಾನಾಂ ಪ್ರಾಂತವಿಸ್ತಾರಭಾಜಾಂ |
ಪ್ರತಿನಯನನಿಪಾತೇ ಕಿಂಚಿದಾಕುಂಚಿತಾನಾಂ
　ವಿವಿಧಮಹಮಭೂವಂ ಪಾತ್ರಮಾಲೋಕಿತಾನಾಂ || ೧—೨೭ ||

ಶ್ರೀರಾಮನು ಜನಕಸಭೆಯಲ್ಲಿ ಶಿವಧನುರ್ಭಂಗವನ್ನು ಮಾಡಿದುದನ್ನು ಪರಶುರಾಮನು ಕೇಳಿ ಕೋಪಗೊಂಡು ಹೇಳಿದುದು—

ಜಾಮದಗ್ನ್ಯಃ— ಅಹೊ! ದುರಾತ್ಮನಃ ಕ್ಷತ್ರಿಯವಟೋರನಾತ್ಮಜ್ಞತಾ!

ನ ತ್ರಸ್ತಂ ಯದಿ ನಾಮ ಭೂತಕರುಣಾಸಂತಾನಶಾಂತಾತ್ಮನ
ಸ್ತೇನ ವ್ಯಾರುಜತಾ ಧನುರ್ಭಗವತೋ ದೇವಾದ್ಭವಾನೀಪತೇಃ ।
ತತ್ಪುತ್ರಸ್ತು ಮದಾಂಧತಾರಕವಧಾದ್ವಿಶ್ವಸ್ಯ ದತ್ತೋತ್ಸವಃ
ಸ್ಕಂದಃ ಸ್ಕಂದ ಇವ ಪ್ರಿಯೋಽಹಮಥವಾ ಶಿಷ್ಯಃ ಕಥಂ ನ ಶ್ರುತಃ ॥

—ಮಹಾವೀರಚರಿತ ೨—೨೮

ಅಹಹ! ಯಾವನ ನೇತ್ರಜ್ವಾಲೆಯಿಂದ ಬ್ರಹ್ಮಾಂಡವೆಲ್ಲವೂ ಕ್ಷಣ ಮಾತ್ರದಲ್ಲಿ ಸುಟ್ಟು ಭಸ್ಮಸಾತ್ತಾಗಿ ಹೋಗಿಬಿಡುವುದೋ ಅಂತಹ ಜಟಾ ಜೂಟಧಾರಿ, ಷಡ್ಗುಣೈಶ್ವರ್ಯಸಂಪನ್ನನಾದ ಚಂಡೀಶನ ಧನುರ್ಭಂಗ ವನ್ನು ಕೊಂಚವೂ ಹೆದರದೆ, ಯೋಚಿಸದೆ, ಲೀಲಾಜಾಲವಾಗಿ ಮಾಡಿದನಲ್ಲವೆ! ಒಳ್ಳೆತೊಳ್ಳಿತು— ಅದೂ ಹಾಗಿರಲಿ. ಆ ಮದಾಂಧನಾದ ತಾರಕಾಸುರನ ಸಂಹಾರಕನಾದ ಕುಮಾರನನ್ನಾದರೂ ಕೇಳಬಹುದಾಗಿದ್ದಿತು. ಅಥವಾ ಯಾವನೋ ಒಬ್ಬ ಕ್ಷುಲ್ಲಕ ಕ್ಷತ್ರಿಯಾಧಮನ ಅಪರಾಧಕ್ಕೋಸ್ಕರ ಇಪ್ಪ ತ್ತೊಂದುಸಲ ಭೂಭ್ರಮಣ ಮಾಡಿ ಆ ಹಾಳು ಕ್ಷತ್ರಿಯವಂಶವನ್ನು ಈ ತೀಕ್ಷ್ಣವಾದ ಕೊಡಲಿಯಿಂದ ಕಡಿದು ಆ ರಕ್ತದಿಂದಲೇ ಪರಲೋಕಗತರಾದ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಈಶ್ವರನಲ್ಲಿ ಬಹುಕಾಲ ಧನುರ್ವಿದ್ಯಾ ಭ್ಯಾಸವನ್ನು ಮಾಡಿ ಭೂಮಂಡಲದಲ್ಲೆಲ್ಲಾ ಪ್ರಖ್ಯಾತನಾದ ನನ್ನನ್ನಾದರೂ ಕೇಳಿ ಆ ಧನುಸ್ಸಿನ ಗೋಜಿಗೆ ಹೋಗಬಹುದಾಗಿತ್ತು. ಆಗಲಿ, ನನ್ನ ಆಚಾರ್ಯ ನಾದ ಮೃತ್ಯುಂಜಯನನ್ನು ಅವಮಾನಪಡಿಸಿದ ಆ ನೀಚ, ದುರಾತ್ಮ, ಕ್ಷತ್ರಿಯ ಪಶುವನ್ನು ಕ್ಷಣಾರ್ಧದಲ್ಲಿಯೇ ನಿಗ್ರಹಿಸಿಬಿಡುವೆನು.

ದುರ್ಮುಖನು ಬಂದು ಸೀತಾವಿಚಾರವಾಗಿ ರಜಕನು ಹೇಳಿಕೊಂಡು ದನ್ನು ತಿಳಿಸಿದಾಗ ರಾಮನು ಕಡುನೊಂದು ಮೂರ್ಛೆಹೊಂದಿ ತನಗೆ ತಾನೇ ಹೇಳಿಕೊಂಡುದು—

ಪರಗೃಹವಾಸದ ಕಷ್ಟ—

ಹಾ! ಹಾ! ಧಿಕ್ಪರಗೃಹವಾಸದೂಷಣಂ ಯತ್
ವೈದೇಹ್ಯಾಃ ಪ್ರಶಮಿತಮದ್ಭುತೈರುಪಾಯೈಃ ।
ಏತತ್ತತ್ಪುನರಪಿ ದೈವದುರ್ವಿಪಾಕಾ
ದಾಲರ್ಕಂ ವಿಷಮಿವ ಸರ್ವತಃ ಪ್ರಸಕ್ತಮ್ ॥

ಉತ್ತರರಾಮಚರಿತ ೧—೪೦.

ಹಾ! ಹಾ! ಲೋಕದಲ್ಲಿ ಸ್ತ್ರೀಯರು ಪತಿವ್ರತೆಯರಾದರೂ ಪರಗೃಹ ವಾಸದಿಂದ ಅಪಯಶಸ್ಸನ್ನು ಹೊಂದಿ ಅನರ್ಥಪರಂಪರೆಗೆ ಗುರಿಯಾಗುವರು.

ಪ್ರಾಣಾಧಿಕಳಾದ ಜಾನಕಿಯು ಪರಮಪವಿತ್ರಳೆಂದು ಸಮಸ್ತಋಷಿಗಳ, ದಿಕ್ಪಾಲಕರ, ಇಂದ್ರಾದಿದೇವತೆಗಳ, ಸಮ್ಮುಖದಲ್ಲಿ ಅಗ್ನಿಯ ಮೂಲಕ ತೀರ್ಮಾನವಾದರೂ, ಉನ್ಮತ್ತಶುನಕವು ಕಚ್ಚಿದರೆ ಅದರ ವಿಷವು ಪ್ರಾರಂಭದಲ್ಲಿ ಕಾಣಿಸಿಕೊಳ್ಳದೆ ಅನಂತರ ದೇಹವನ್ನೆಲ್ಲಾ ವ್ಯಾಪಿಸಿ ನಾಶಪಡಿಸುವಂತೆ ರಾವಣಗೃಹವಾಸದಿಂದುಂಟಾದ ಅಪಯಶಸ್ಸು ಕೊಂಚಕಾಲ ಲೀನವಾಗಿ ಪುನಃ ಕಾಣಿಸಿಕೊಂಡು ಸೀತೆಯನ್ನು ವಿಪತ್ತಿಗೆ ಗುರಿಮಾಡಿರುವುದು.

ಆಯಾಸದಿಂದ ತನ್ನ ತೊಡೆಯ ಮೇಲೆ ಮಲಗಿಕೊಂಡಿದ್ದ ಜಾನಕಿಯನ್ನು ನೋಡಿ ರಾಮನು ಹೇಳುವುದು—

ತ್ವಯಾ ಜಗಂತಿ ಪುಣ್ಯಾನಿ ತ್ವಯ್ಯಪುಣ್ಯಾ ಜನೋಕ್ತಯಃ ।

ನಿನ್ನಿಂದ ಜಗತ್ತೇ ಪಾವನವಾಗಿರುವಲ್ಲಿ, ಲೋಕವಾದವು ಮಾತ್ರ ನಿನ್ನಲ್ಲಿ ಪಾಪಾತ್ಮಕವಾಗಿರುವುದಲ್ಲಾ! ಅಯ್ಯೋ!

ಗರ್ಭಿಣಿಯಾದ ಜಾನಕಿಯು ಅಡವಿಯ ಪಾಲಾದಳೆಂಬುದನ್ನು ತಿಳಿದು, ತಂದೆಯಾದ ಜನಕನು ಹೇಳುವುದು—

ನೂನಂ ತ್ವಯಾ ಪರಿಭವಂ ಚ ನವಂ ಚ ಘೋರಂ
ತಾಂ ಚ ವ್ಯಥಾಂ ಪ್ರಸವಕಾಲಕೃತಾಂ ಅವಾಪ್ಯ ।
ಕ್ರವ್ಯಾದ್ಗಣೇಷು ಪರಿತಃ ಪರಿವಾರಯತ್ಸು
ಸಂತ್ರಸ್ತಯಾ ಶರಣಮಿತ್ಯಸಕೃತ್ ಸ್ಮೃತೋಽಸ್ಮಿ ॥

—ಉತ್ತರರಾಮಚರಿತೆ ೪—೨೩.

ಹಾ! ವತ್ಸೆ! ಪತಿಯಿಂದುಂಟಾದ ಘೋರತರತಿರಸ್ಕಾರದಿಂದಲೂ ಪ್ರಸವಕಾಲದ ಆ ದುರ್ಭರಯಾತನೆಯಿಂದಲೂ ಬಳಲಿ ಕ್ರೂರತರಗಳಾದ ಅರಣ್ಯಸತ್ವಗಳು ಸುತ್ತಲೂ ನಿಂತಿರಲು ಭಯಪಡುತ್ತಾ, ಅಯ್ಯೋ! ನೀನು ನಿರ್ಭಾಗ್ಯನಾದ ನನ್ನನ್ನು ಎಷ್ಟುಸಾರಿ ನೆನೆಸಿಕೊಂಡೆಯೋ!

ಪಟ್ಟಣವನ್ನು ಎಂದೂ ನೋಡದ ಋಷಿಬಾಲಕರು ಅಶ್ವಮೇಧಯಾಗಾರ್ಥವಾಗಿ ಭೂಪ್ರದಕ್ಷಿಣೆಮಾಡಿಕೊಂಡು ಬಂದ ಕುದುರೆಯನ್ನು ನೋಡಿ ಅವಸರವಸರದಿಂದ ಬಂದು ಲವನನ್ನು ಕುರಿತು—

ಕುಮಾರ!

ಪಶ್ಚಾತ್ಪುಚ್ಛಂ ವಹತಿ ವಿಪುಲಂ ತಚ್ಚ ಧೂನೋತ್ಯಜಸ್ರಂ
ದೀರ್ಘಗ್ರೀವಃ ಸ ಭವತಿ ಖುರಃ ತಸ್ಯ ಚತ್ವಾರ ಏವ ।
ಶಷ್ಪಾಣ್ಯತ್ತಿ ಪ್ರಕಿರತಿ ಶಕೃತ್ಪಿಂಡಕಾನಾಮ್ರಮಾತ್ರಾನ್
ಕಿಂ ವ್ಯಾಖ್ಯಾನೈರ್ವ್ರಜತಿ ಸ ಪುನರ್ದೂರಮೇಹ್ಯೇಹಿ ಯಾಮಃ ॥

—ಉತ್ತರರಾಮಚರಿತೆ ೪—೨೬.

ಕುಮಾರ! ಕುದುರೆ! ಕುದುರೆ! ಎಂಬ ಭೂತವಿಶೇಷವನ್ನು ಈದಿವಸ ಪ್ರತ್ಯಕ್ಷವಾಗಿ ನೋಡಿದೆವು. ನೋಡು! ಅದಕ್ಕೆ ಹಿಂದೆ ಒಂದು ದೊಡ್ಡ ಬಾಲ ಇದೆ. ಯಾವಾಗಲೂ ಅದು ಅಲ್ಲಾಡುತ್ತಲೇ ಇದೆ. ಕತ್ತು ಉದ್ದವಾಗಿದೆ. ನೋಡೋ! ನಮ್ಮಾಶ್ರಮದಲ್ಲಿರುವ ಗೋವೃಹರಿಣಾದಿಗಳಿಗೆ ಒಂದುಕಾಲಿಗೆ ಎರಡು ಗೊರಸುಗಳಿವೆ. ಇದಕ್ಕೆ ಒಟ್ಟಿಗೆ ನಾಲ್ಕೇ ಗೊರಸುಗಳಿವೆ. ಅಲ್ಲಿ ನೋಡೋ! ಹುಲ್ಲನ್ನು ತಿನ್ನುತ್ತದೆ. ಮಾವಿನಕಾಯಿಯ ಪ್ರಮಾಣ ಲದ್ದಿಯನ್ನು ಹಾಕುತ್ತದೆ. ಹೆಚ್ಚು ಮಾತಿನಿಂದೇನು! ಅದು ಹೊರಟುಹೋಗುತ್ತದೆ. ಬೇಗಬಾರೋ! ಬಾ! ಬಾ!

ಲವ ಮತ್ತು ಚಂದ್ರಕೇತುವಿನ ವೀರಭಾಷಣಾನಂತರ ಲವನು ರಾಮನನ್ನು ಉಪಹಾಸಮಾಡಿದುದು—

> ಸಿದ್ಧಂ ಹ್ಯೇತದ್ವಾಚಿ ವೀರ್ಯಂ ದ್ವಿಜಾನಾಂ
> ಬಾಹ್ವೋರ್ವೀರ್ಯಂ ಯತ್ತು ತತ್ ಕ್ಷತ್ರಿಯಾಣಾಂ ।
> ಶಸ್ತ್ರಗ್ರಾಹೀ ಬ್ರಾಹ್ಮಣೋ ಜಾಮದಗ್ನ್ಯಃ
> ತಸ್ಮಿನ್ ದಾಂತೇ ಕಾ ಸ್ತುತಿಸ್ತಸ್ಯ ರಾಜ್ಞಃ ॥
>
> —ಉತ್ತರರಾಮಚರಿತೆ ೫—೩೨.

ಲಕ್ಷ್ಮಣನ ಮಗನಾದ ಚಂದ್ರಕೇತುವು ಲವನನ್ನು ಕುರಿತು ಮಹಾಪರಾಕ್ರಮಿಯಾದ ಪರಶುರಾಮನು ಕೂಡಾ ನಮ್ಮ ದೊಡ್ಡಪ್ಪ(ರಾಮ)ನಿಂದ ಪರಾಜಿತನಾಗಿರುವನೆಂದು ಹೇಳಲು, ಲವನು ನಕ್ಕು ಹೌದು! ಹೌದು! ಬ್ರಾಹ್ಮಣರು ಮಾತಿನಲ್ಲಿ ಸಮರ್ಥರು. ಕ್ಷತ್ರಿಯರು ಭುಜಪರಾಕ್ರಮಿಗಳು. ದರ್ಭೆಗೆ ಬದಲಾಗಿ ಕೊಡಲಿಯನ್ನು ಹಿಡಿದ ಆ ಪಾರ್ವವಟು(ಪರಶುರಾಮ)ವನ್ನು ಸೋಲಿಸಿದಮಾತ್ರದಿಂದಲೇ ನಿಮ್ಮ ದೊಡ್ಡಪ್ಪನೇನು ಸಪ್ತಲೋಕೈಕವೀರನೋ!

ಚಂದ್ರಕೇತುವು ಅವನ ಮಾತನ್ನು ಕೇಳಿ ಜಿಹಾಸೆಗೊಂಡು ಆರ್ಯಸುಮಂತ್ರನನ್ನು ಕುರಿತು— ಶ್ರೀರಾಮನ ಮಹಿಮೆಯನ್ನು ಅವನ ಪವಿತ್ರಚರಿತೆ (ರಾಮಾಯಣ)ಯನ್ನೂ ತಿಳಿಯದೆ, ಮಹಾತ್ಮರಲ್ಲಿ ನಿಂದೆಯನ್ನಾರೋಪಿಸುವ ಈ ಬಾಲನೊಡನೆ ಮಾತು ಸಾಕೆನ್ನಲು, ಲವನು ಚಂದ್ರಕೇತುವನ್ನು ನೋಡಿ ಹೇಳುವುದು—

> ವೃದ್ಧಾಸ್ತೇನ ವಿಚಾರಣೀಯಚರಿತಾಸ್ತಿಷ್ಠಂತು ಕಿಂ ವರ್ತತಾಂ
> ಸುಂದಸ್ತ್ರೀಮಥನೇಪ್ಯಕುಂಠಯಶಸೋ ಲೋಕೇ ಮಹಾಂತೋ ಹಿ ತೇ ।
> ಯಾನಿ ತ್ರೀಣ್ಯಕುತೋಮುಖಾನ್ಯಪಿ ಪದಾನ್ಯಾಸನ್ ಖರಾಯೋಧನೇ
> ಯದ್ವಾ ಕೌಶಲಮಿಂದ್ರಸೂನುನಿಧನೇ ತತ್ರಾಪ್ಯಭಿಜ್ಞೋ ಜನಃ ॥
>
> —ಉತ್ತರರಾಮಚರಿತೆ ೫—೩೪.

ಅಯ್ಯೋ, ಕುಮಾರ! ಲೋಕದಲ್ಲಿ ನಿಮ್ಮ ರಾಮನ ಚರಿತೆಯನ್ನು ತಿಳಿಯದವರು ಯಾರುತಾನೇ ಇರುವರು! ಮುಖ್ಯವಾಗಿ ದೊಡ್ಡವರ ವಿಷಯವಾಗಿ ವಿಮರ್ಶಿಸಬಾರದೆಂದು ಲೋಕೋಕ್ತಿಯಿರುವುದು. ಅದಂತಿರಲಿ; ಸುಂದನ ಹೆಂಡತಿಯಾದ ತಾಟಕಿಯೆಂಬ ಅಬಲೆಯನ್ನು ಸಂಹರಿಸಿ ಕೀರ್ತಿಹೊಂದಿದ ಸ್ತ್ರೀಘಾತಕಶೂರರು ಅನೇಕರಿರುವರಲ್ಲವೆ! ಖರನ ಸಂಗಡ ಯುದ್ಧವನ್ನು ಮಾಡುವಾಗ ತಾನು ಕ್ಷತ್ರಿಯಕುಲೋತ್ಪನ್ನನೆಂಬುದನ್ನುಕೂಡ ಮರೆತು, ಸಮರಾಂಗಣದಲ್ಲಿ ಮೂರುಹೆಜ್ಜೆ ಹಿಂದಕ್ಕೆ ಬಂದು ಅವನನ್ನು ಕೊಂದದ್ದು ಕ್ಷಾತ್ರಧರ್ಮವೋ? ಅದೂ ಇರಲಿ, ಸೀತೆಯನ್ನು ಹುಡುಕಿ ತಂದುಕೊಡುವೆನೆಂದು ಹೇಳಿದ ಸುಗ್ರೀವನ ಮಾತಿಗೆ ಒಳಪಟ್ಟು ನಿರಪರಾಧಿಯಾದ ವಾಲಿಯನ್ನು ಮೋಸದಿಂದ ಮರೆಯಲ್ಲಿ ನಿಂತು ವಧಿಸಿದ ನಿಮ್ಮ ದೊಡ್ಡಪ್ಪನ ಕುಟಿಲಚರಿತೆಯನ್ನು ನಾನು ಬಲ್ಲೆನು. ಸಾಕು! ಸುಮ್ಮನಿರು.



## ವಾಕ್ಪತಿ

**ವಾಕ್ಪತಿಯು*** ಯಶೋವರ್ಮನ ಆಸ್ಥಾನದಲ್ಲಿ ರಾಜಕವಿಯಾಗಿದ್ದನು. ಇವನು ಅದೇ ಆಸ್ಥಾನದಲ್ಲಿದ್ದ ಕಮಲಾಯುಧನೆಂಬ ಮತ್ತೊಬ್ಬ ಕವಿಯ ಶಿಷ್ಯನೂ ಅಥವಾ ಮಿತ್ರನೂ ಭವಭೂತಿಯ ಶಿಷ್ಯನೂ ಅಥವಾ ಅವನ ಗ್ರಂಥಗಳಿಗೆ ಮನಸೋತವನೂ ಆಗಿದ್ದನೆಂದು ತಿಳಿಯಬರುತ್ತದೆ† ಇವನು ತರ್ಕ ನ್ಯಾಯಶಾಸ್ತ್ರ ಸಕಲಪುರಾಣಪಾರಂಗತನಾಗಿದ್ದುದಾಗಿ ತಿಳಿಯಬರುತ್ತದೆ. ಯಶೋವರ್ಮನು ಕ್ರಿ. ಶ. ಎಂಟನೆಯ ಶತಮಾನದ ಪೂರ್ವಾರ್ಧದವನಾದುದರಿಂದ ಇವನ ಆಸ್ಥಾನ

* ಇವನು (ವಾಕ್ಪತಿರಾಜ) ಮುಂಜನಲ್ಲ. ಡಾ| ಪೀಟರ್‌ಸನ್‌ರವರು ವಾಕ್ಪತಿರಾಜನನ್ನು 'ಗೌಡವಧ' ಕಾವ್ಯಕಾರನೆಂದು ಹೇಳುವರು. (ಸುಭಾಷಿತರತ್ನಾವಳಿಯ ಮುನ್ನುಡಿ. ಪುಟ. ೧೧೫.) ಮುಂಜನು ಮಾಳವದಲ್ಲಾಳಿದ ಪರಮಾರವಂಶದ ಏಳನೆಯ ತಲೆಯವನೂ ಕ್ರಿ. ಶ. ೯೭೪—೯೯೫ರಲ್ಲಿದ್ದವನೂ, ಪೃಥ್ವೀವಲ್ಲಭ, ಅಮೋಘವರ್ಷ, ಶ್ರೀವಲ್ಲಭ, ಉತ್ಪಲರಾಜ ಎಂಬ ಅಡ್ಡ ಹೆಸರುಗಳುಳ್ಳವನೂ ಆಗಿದ್ದನು. ನಮ್ಮ ಕವಿಯು ಎಂಟನೆಯ ಶತಮಾನದಲ್ಲಿ ಯಶೋವರ್ಮನ ಆಸ್ಥಾನದಲ್ಲಿದ್ದವನು.

† ಗೌಡವಹೋ (ಗೌಡವಧ ಕಾವ್ಯ) ಪ್ರಸ್ತಾವನಾ ಪುಟ. ೩೩. ಇವನಿಗೆ ಬಪ್ಪಾರಾಯನೆಂಬ ಹೆಸರಿದ್ದಿತೆಂದೂ ಇವನು ಯಶೋವರ್ಮನ ಸಾಮಂತರಾಜನಾಗಿದ್ದನೆಂದೂ ಕಲ್ಹಣನು ಹೇಳುವನು. (ರಾಜತರಂಗಿಣೀ. ೪. ೧೪೪.)

ಪಂಡಿತನಾದ ವಾಕ್ಪತಿಯು ಕೂಡ ಕ್ರಿ. ಶ. ಎಂಟನೆಯ ಶತಮಾನದವನೆನ್ನು ವುದು ನಿಶ್ಚಯವು. ಯಶೋವರ್ಮನ ಆಸ್ಥಾನಪಂಡಿತರು ಕೇಳಿಕೊಂಡ ಮೇರೆ ತನ್ನ ಆಶ್ರಯದಾತಾರನಾದ ಯಶೋವರ್ಮನ ಪರಾಕ್ರಮಾತಿಶಯಾದಿವೈಭವ ವರ್ಣನೆಗಳನ್ನೂ ಗೌಡರಾಜನನ್ನು ಜಯಿಸಿ ಹೇಗೆ ಕೊಂದನೆಂಬ ವಿಚಾರವನ್ನೂ ಒಳಗೊಂಡಿರುವ **ಗೌಡವಹೋ(ಗೌಡವಧ)**ವೆಂಬ ಮಹಾಕಾವ್ಯವನ್ನು ಇವನು ಪ್ರಾಕೃತದಲ್ಲಿ ಬರೆದುದಾಗಿ ತಿಳಿಯಬರುತ್ತದೆ.

ಕಾವ್ಯವು ಚಾರಿತ್ರಿಕಸಂಬಂಧವಾದುದಾಗಿ ಯಶೋವರ್ಮನು ದಿಗ್ವಿಜಯ ಕ್ಕಾಗಿ ಸೈನ್ಯದೊಡನೆ ಹೊರಟು ಎಲ್ಲಾ ರಾಜರುಗಳನ್ನೂ ಜಯಿಸಿ ಕಪ್ಪಕಾಣಿಕೆ ಗಳನ್ನು ತೆಗೆದುಕೊಂಡು ಅನೇಕರನ್ನು ಸೆರೆಹಿಡಿದು, ದುಷ್ಟನಾದ ಗೌಡಾಧಿಪ ನನ್ನು ಕೊಂದು ಶಿಷ್ಟರಕ್ಷಣೆಯನ್ನು ಮಾಡಿ, ವಿಜಯಶಾಲಿಯಾಗಿ ಹಿಂದಿರು ಗಿದನೆಂಬುದೇ ಕಥಾಮೂಲವಾಗಿರುವುದು. ಕಾವ್ಯವು ೧೨೦೯ ಶ್ಲೋಕಗಳುಳ್ಳ ದ್ದಾಗಿ 'ಆರ್ಯಾ' ವೃತ್ತದಲ್ಲಿ, ಬರೆಯಲ್ಪಟ್ಟಿರುವುದು. ಪ್ರಾಕೃತಕಾವ್ಯವಾದ 'ರಾವಣವಹೋ' (ರಾವಣವಧ) ಎಂಬ ಕಾವ್ಯವನ್ನು ನೋಡಿ ಇದನ್ನು ಬರೆದಿರು ವಂತೆ ತೋರುತ್ತದೆ.

ವರ್ಷರ್ತುವು ಕಳೆದ ಒಂದಾನೊಂದು ಶುಭಲಗ್ನದಲ್ಲಿ ಯಶೋವರ್ಮನು ವಿಜಯಯಾತ್ರೆಗಾಗಿ ಹೊರಟು ಸೋನಾಕಣಿವೆಯ ಬಳಿಯಲ್ಲಿಳಿದು, ವಿಂಧ್ಯ ಪರ್ವತಕ್ಕೆ ಹೋಗಿ ವಿಂಧ್ಯವಾಸಿನಿಯನ್ನು ಸೇವಿಸಿ ಬಹುತರ ಪ್ರಾರ್ಥಿಸಿ ಗೌಡ ಅಥವಾ ಮಗಧಾಧಿಪನನ್ನು ಕೊಂದು ವಂಗದೇಶದ ರಾಜರನ್ನು ಜಯಿಸಿ ಕಪ್ಪ ಕಾಣಿಕೆಗಳನ್ನು ಕೊಂಡು ಹಾಗೆಯೇ ಮಾರ್ಗಕ್ರಮಣವನ್ನು ಮಾಡಿ, ಮಲಯ ಪರ್ವತ (ಸಹ್ಯಾದ್ರಿಯ ದಕ್ಷಿಣಭಾಗ)ವನ್ನು ದಾಟಿ ದಕ್ಷಿಣದೇಶದ ರಾಜನನ್ನು ವಶವರ್ತಿಯನ್ನಾಗಿ ಮಾಡಿಕೊಂಡು ಪಾರಸೀಕದೇಶದ ಮೇಲೆ ದಂಡೆತ್ತಿ ಆ ರಾಜ ನನ್ನೂ ಸದೆಬಡಿದು ಅಲ್ಲಿಂದ ಸಮುದ್ರತೀರಕ್ಕೆ ಬಂದು ಅಲ್ಲಿ ಕೆಲವು ಕಾಲ ಕಳೆದು ಮರುದೇಶ (ಮಾರ್ವಾಡ)ಕ್ಕೆ ಹೋಗಿ ಅಲ್ಲಿಂದ ಈಗಣ ಪಂಜಾಬಿನಲ್ಲಿ ರುವ, ಶ್ರೀಕಂಠ(ಸ್ಥಾನೇಶ್ವರ)ದೇಶದ ಮಾರ್ಗವಾಗಿ ಕುರುಕ್ಷೇತ್ರ ಮತ್ತು ಅಯೋಧ್ಯಾದಿದೇಶಗಳನ್ನು ನೋಡಿಕೊಂಡು ಕನೋಜಿಗೆ ಹಿಂದಿರುಗಿದನು. ಇವನ ವಿಜಯಯಾತ್ರಾವಸರದಲ್ಲಿ ಕವಿಯು ನದೀ ನದಾರಾಮ, ಪರ್ವತ, ಋತು, ಜಲಕ್ರೀಡೆ, ನರನಾರಿಯರ, ಖಗಮೃಗಗಳ, ತರುಗುಲ್ಮಲತೆಗಳ, ಫಲಪುಷ್ಪಗಳ, ದೇವಾಲಯಗಳ ವರ್ಣನೆಗಳನ್ನು ಬಹು ಹೃದಯಂಗಮವಾಗಿ ವರ್ಣಿಸಿರುವನು.

ಇದರಲ್ಲಿ ದೇಶಕ್ರಮವನ್ನನುಸರಿಸಿಹೇಳದೆ, ಮನಬಂದಂತೆ ಪ್ರಾರಂಭಿಸಿ ಮುಗಿಸಿರುವನಾದುದರಿಂದ ಆ ದೇಶಗಳಿಗೆ ಈಗಣ ಹೆಸರಾವುದೆಂಬುದನ್ನು ಗುರ್ತಿಸಲರಿದಾಗಿದೆ.

ಮಗಧಾಧಿಪನನ್ನೇ ಗೌಡರಾಜನಾಗಿ ಹೇಳಿದೆಯೇ ಹೊರತು ಮಗಧಾಧಿಪನಾರು? ಗೌಡರಾಜನಾರು? ಮಗಧಾಧಿಪನೇ ಗೌಡರಾಜನೆಂಬಾಭಿಧಾನದಿಂದ ಇದ್ದನೆ? ಹೇಗೆಂಬ ವಿಚಾರವು ಸಂದಿಗ್ಧವಾಗಿರುವುದು. ಎಲ್ಲಾ ಕಾವ್ಯಗಳಲ್ಲಿಯೂ ಸರ್ಗ, ಅಧ್ಯಾಯ, ಉಚ್ಛ್ವಾಸಗಳೆಂದು ಹೇಳಿರುವಹಾಗೆ ಇದರಲ್ಲಿ ಹೇಳದೆ, 'ಕುಲಕ'ಗಳೆಂದು ಹೇಳಲ್ಪಟ್ಟಿರುವುದು. ಇದಕ್ಕೆ ಜಾಲಾಂಧರೀಯಭಟ್ಟ ಶ್ರೀಮದುಪೇಂದ್ರಹರಿಪಾಲನೆಂಬುವನು 'ಗೌಡವಧಸಾರ'ವೆಂಬ ಟೀಕೆಯನ್ನು ಬರೆದಿರುವನು. ಮಾದರಿಗಾಗಿ ಇದರಲ್ಲಿನ ಒಂದು ಶ್ಲೋಕವನ್ನು ಎತ್ತಿ ಬರೆಯುವೆವು—

> ಪರ ಗುಣ ಪರಿಹಾರ ಪರಂಪರಾಏ
> ತಹ ತೇ ಗುಣಙ್ಘಯಾ ಜಾಯಾ ।
> ಜಾಯಾ ತೇಹಿಂಚಿಯ ಜಹ ಗುಣೇಹಿ
> ಗುಣಿಣೋ ಪರಂ ಪಿಸುಣಾ ॥ ೬೧ ॥



## ಭಟ್ಟನಾರಾಯಣ

ಇವನು ಕಾನ್ಯಕುಬ್ಜ (ಕನೋಜ್)ದ ಬ್ರಾಹ್ಮಣನು. ಕಾಶ್ಯಪಗೋತ್ರದವನು.* ಜನನೀಜನಕರಾರೆಂಬುದು ತಿಳಿಯದು.

> "ತದಿದಂ ಕವೇರ್ಮೃಗರಾಜಲಕ್ಷ್ಮಣೋ **'ಭಟ್ಟನಾರಾಯಣ'**ಸ್ಯ
> ಕೃತಿಃ **'ವೇಣೀಸಂಹಾರಂ'** .. .. .. ..।"

ಎಂದು ಸೂತ್ರಧಾರನು ಹೇಳಿರುವುದರಿಂದ ಭಟ್ಟನಾರಾಯಣನಿಗೆ "ಮೃಗರಾಜಲಕ್ಷ್ಮಣ"ಎಂಬ ಬಿರುದು ಇದ್ದುದಾಗಿಯೂ, 'ವೇಣೀಸಂಹಾರ'ದ ಕರ್ತೃವೆಂಬುದಾಗಿಯೂ ತಿಳಿಯಬರುತ್ತದೆ. ಆಗ ವಂಗದೇಶದಲ್ಲಿ ಆಳುತ್ತಿದ್ದ ಆದಿಸೂರನೆಂಬ ರಾಜನು ಕೇಳಿಕೊಂಡಂತೆ ಇವನು ವಂಗದೇಶಕ್ಕೆ ಹೋಗಿ ಅಲ್ಲಿಯೇ ನಿಂತು ಈಗಣ ವಂಗೀಯಬ್ರಾಹ್ಮಣರ ಮೂಲಪುರುಷನಾದಂತೆ ಅಲ್ಲಿಯ ಕಥೆಯು ಹೇಳುತ್ತಿರು

* ಕೆಲವರು ಶಾಂಡಿಲ್ಯಗೋತ್ರದವನೆನ್ನುವರು.

ವುದು. ಅಲ್ಲದೆ ವೇಣೀಸಂಹಾರನಾಟಕದ ಭೂಮಿಕೆಯಿಂದಲೂ ತಿಳಿಯಬರುವುದು. ಆದಿಸೂರನು ಬಲ್ಲಾಳಸೇನನ ಇಪ್ಪತ್ತೆರಡನೆಯ ತಲೆಯವನೆಂದೂ ಭಾಗವತಸಂಪ್ರದಾಯ ಅಥವಾ ಪಂಚರಾತ್ರಸಂಪ್ರದಾಯಾನುಷ್ಠಾನಪರನಾಗಿದ್ದನೆಂದೂ ಚರಿತ್ರೆಗಳಿಂದ ತಿಳಿಯಬರುವುದು.‡ ಭಾಗವತಸಂಪ್ರದಾಯಾರ್ಥವನ್ನು ಸೂಚಿಸುವುದಾದ ಭಾಗಗಳು ಇವನ ನಾಟಕದ ಮೊದಲನೆಯ ಅಂಕದ ೨೩ನೆಯ ಶ್ಲೋಕದಲ್ಲಿಯೂ ಆರನೆಯ ಅಂಕದ ೪೩ ಮತ್ತು ೪೫ ನೆಯ ಶ್ಲೋಕಗಳಲ್ಲಿಯೂ ಕಂಡುಬರುವಂತಿದೆ.

**ಕಾಲವಿಚಾರ—** ಪಾಶ್ಚಾತ್ಯಪಂಡಿತರೂ ಪ್ರಾಚ್ಯ ಪಂಡಿತರೂ ಕೆಲವು ವರ್ಷಗಳ ಹೆಚ್ಚುಕಡಿಮೆ ಭಟ್ಟನಾರಾಯಣನು ಎಂಟನೆಯ ಶತಮಾನದಲ್ಲಿದ್ದವನೆಂದು ಹೇಳುವುದರಿಂದಲೂ, ಕ್ರಿ. ಶ. ಎಂಟನೆಯ ಶತಮಾನದ ಕೊನೆಯವನಾದ ವಾಮನನು ವೇಣೀಸಂಹಾರದ ಶ್ಲೋಕಗಳನ್ನು ಉದಹರಿಸಿಕೊಂಡಿರುವುದರಿಂದಲೂ ಇವನು ಕ್ರಿ. ಶ. ಎಂಟನೆಯ ಶತಮಾನದ ಪೂರ್ವಾರ್ಧದವನೆಂದು ಖಂಡಿತವಾಗಿ ಹೇಳಬಹುದಾಗಿದೆ.

ದ್ರೌಪದಿಯು ದುಶ್ಶಾಸನನಿಂದ ಮುಡಿಹಿಡಿದು ಕೌರವಸಭೆಗೆ ಸೆಳೆಯಲ್ಪಟ್ಟಾಗ ಬಿಚ್ಚಿಹೋದ ವೇಣಿಯನ್ನು, ವನವಾಸಾನಂತರ ಭೀಮನು ದುರ್ಯೋಧನನೊಡನೆ ಯುದ್ಧವನ್ನು ಮಾಡಿ ಅವನ ತೊಡೆಯನ್ನು ಸೀಳಿ, ರಕ್ತದಿಂದಾರಕ್ತವಾದ ಕೈಗಳಿಂದ ತಡವಿ ಬಂಧಿಸಿದನೆಂಬ ಕಥಾಭಾಗವನ್ನು ಕವಿಯು ಮಹಾಭಾರತದ ಸಭಾಪರ್ವದಿಂದಾರಿಸಿಕೊಂಡು ನಾಟಕವನ್ನಾಗಿ ಬರೆದು ಅದನ್ನು '**ವೇಣೀಸಂಹಾರ**'*ವೆಂದು ಕರೆದಿರುವನು.

ಇದರಲ್ಲಿ ಆರು ಅಂಕಗಳಿರುವುವು. ಇದಕ್ಕೆ ಜಗದ್ಧರನೆಂಬವನು ಟೀಕೆಯನ್ನು ಬರೆದಿರುವನು. ಇದರಲ್ಲಿ ವೀರರಸವು ಪ್ರಧಾನವಾದುದಾಗಿರುವುದು. ಶೈಲಿಯು ಆಪಾತತಃ ಮಧುರವಾಗಿಯೂ ಸರಳವಾಗಿಯೂ ಇರುವುದು. ಭಾರತಯುದ್ಧವನ್ನು ಮುಗಿಸಿ ಬಿಚ್ಚಿಹೋದ ದ್ರೌಪದಿಯ ಕೂದಲುಗಳನ್ನು ಎತ್ತಿ ಜಡೆಯಿಕ್ಕಿ ಯುಧಿಷ್ಠಿರರಾಜ್ಯಾಭಿಷೇಕವನ್ನು ತೋರಿ ನಾಟಕವನ್ನು ಮಂಗಳಾಂತವಾಗಿ ಮುಗಿಸಿರುವನು. ಆತ್ಮಶ್ಲಾಘೆಯಿಲ್ಲದವನೂ ಗಂಭೀರನೂ ಕ್ಷಮಾಶೀಲನೂ ಮಹಾಸತ್ವನೂ ಅಚಂಚಲವೃತ್ತಿಯೂ ದೃಢವ್ರತಾದಿ

‡ Prof. M. Krishnamacharya's History of Classical Sanskrit Literature P. 95.

* ಕೆಲವು ಹಸ್ತಲಿಖಿತಪ್ರತಿಗಳಲ್ಲಿ "ವೇಣೀಸಂವರಣಂ" ಎಂದಿದೆ.

ಧೀರೋದಾತ್ತಾದಿಗುಣಗಳಿಂದ ಕೂಡಿದ ಯುಧಿಷ್ಠಿರನೇ ಇದರ ಕಥಾ ನಾಯಕನು. ಸ್ತ್ರೀಯಸಾಪುಗಲ್ಭಾದಿಲಕ್ಷಣಗಳಿಂದ ಕೂಡಿದ ದ್ರೌಪದಿಯೇ ಕಥಾನಾಯಕಿಯು. ಇವರಲ್ಲದೆ ಕವಿಯಿಂದ ಉಪನಿಬದ್ಧರಾದ ಪಾತ್ರಗಳಲ್ಲಿ ಭೀಮ, ದುರ್ಯೋಧನ, ಭಾನುಮತೀ, ಅಶ್ವತ್ಥಾಮ, ಕರ್ಣ, ಧೃತರಾಷ್ಟ್ರ, ಗಾಂಧಾರೀ ಮತ್ತು ಚಾರ್ವಾಕ ಇವರು ಮುಖ್ಯರು. ಹಾಸ್ಯ ಮತ್ತು ಶಾಂತ ಈ ಎರಡು ರಸಗಳು ವಿನಾ ಮಿಕ್ಕ ರಸಗಳು ಅಂತರ್ಹಿತಗಳಾಗಿರುವುವು. ಎರಡನೆಯ ಅಂಕದಲ್ಲಿ ಶೃಂಗಾರರಸವೂ, ಮೂರನೆಯ ಅಂಕದಲ್ಲಿ ಕರುಣ, ಬೀಭತ್ಸ ಮತ್ತು ರೌದ್ರರಸಗಳೂ, ನಾಲ್ಕನೆಯ ಅಂಕದಲ್ಲಿ ಭಯಾನಕರಸವೂ, ಆರನೆಯ ಅಂಕದಲ್ಲಿ ಅದ್ಭುತರಸವೂ ಇರುವುವು. ಮೂರನೆಯ ಅಂಕದ ವಿಷಯವೂ ಮತ್ತು ಭಾಷಣಗಳೂ ಕವಿತಾಸಾಮರ್ಥ್ಯವನ್ನು ಹೇಳುವುವಾಗಿವೆ. ನಾಲ್ಕನೆಯ ಅಂಕದಲ್ಲಿ ಸುಂದರಕನ ಪಾತ್ರವು ಸಾಧಾರಣತರದ್ದಾಗಿರುವುದು. ಮೊದಲನೆಯ ಅಂಕದಲ್ಲಿ ಭೀಮನು ದ್ರೌಪದಿಯನ್ನು ಸಮಾಧಾನಗೊಳಿಸುವುದೂ ಎರಡನೆಯ ಅಂಕದಲ್ಲಿ ದುರ್ಯೋಧನ ಮತ್ತು ಭಾನುಮತಿಯರ ಪ್ರಣಯ ವಿಚಾರವೂ ಹೃದಯಂಗಮವಾಗಿರುವಂತೆ ವರ್ಣಿತವಾಗಿವೆ. ಇದರಲ್ಲಿ ಕಂಡು ಬರುವ ದ್ರೌಪದಿ ಮತ್ತು ಭಾನುಮತೀ ಸ್ತ್ರೀಪಾತ್ರಗಳು ಅವರವರ ಪತಿ ಮತಾನುವರ್ತಿಗಳೆಂಬುದನ್ನು ಸೂಚಿಸುತ್ತವೆ. ಆದರೂ ಮಾನವಚೇತನಗಳು —

"Not too bright or good  
For human nature's daily food  
For transient sorrows, simple wiles  
Praise, blame, love, kisses, tears and smiles"

ಎಂದು ಹೇಳುವುದಾದರೆ ತಪ್ಪಾಗದು.

ಮಾದರಿಗಾಗಿ ಇದರ ಕೆಲವು ಶ್ಲೋಕಗಳನ್ನೆತ್ತಿ ಬರೆಯುವೆವು—

ಈ ನಾಟಕದ ಕಥಾಸಾರಾಂಶವೆಲ್ಲವನ್ನೂ ಭೀಮನು ಒಂದೇ ಶ್ಲೋಕದಲ್ಲಿ ಹೇಳಿ ಮುಗಿಸಿರುವನು—

**ಚತ್ವಾರೋ ವಯಮೃತ್ವಿಜಃ ಸ ಭಗವಾನ್ ಕರ್ಮೋಪದೇಷ್ಟಾ ಹರಿಃ**  
**ಸಂಗ್ರಾಮಾಧ್ವರದೀಕ್ಷಿತೋ ನರಪತಿಃ ಪತ್ನೀ ಗೃಹೀತವ್ರತಾ ।**  
**ಕೌರವ್ಯಾಃ ಪಶವಃ ಪ್ರಿಯಾಪರಿಭವಕ್ಲೇಶೋಪಶಾಂತಿಃ ಫಲಂ**  
**ರಾಜನ್ಯೋಪನಿಮಂತ್ರಣಾಯ ರಸತಿ ಸ್ಫೀತಂ ಹತೋ ದುಂದುಭಿಃ ॥೧—೨೫॥**

ಎಲೌ, ದ್ರುಪದಕುಮಾರಿ! ನಾವು ನಾಲ್ವರೂ (ಹೋತೃ–ಅಧ್ವರ್ಯು–ಉದ್ಗಾತಾ–ಬ್ರಹ್ಮ) ಋತ್ವಿಕ್ಕುಗಳು. ಪರಮಾತ್ಮನಾದ ಶ್ರೀಕೃಷ್ಣನು ಯಜ್ಞ

ಕರ್ಮವನ್ನು ಮಾಡಿಸುವವನು. ವ್ರತನಿಷ್ಠಾಗರಿಷ್ಠನಾದ ನಿನ್ನೊಡನಿರುವ ಅಣ್ಣ ನಾದ ಯುಧಿಷ್ಠಿರನೇ ಯುದ್ಧಾಧ್ವರದೀಕ್ಷೆಯನ್ನು ಕೈಗೊಂಡಿರುವವನು. ಕೌರವರೇ ಯಜ್ಞಪಶುಗಳು. ಇದುವರೆಗೆ ನಿನ್ನಿಂದ ಅನುಭವಿಸಲ್ಪಟ್ಟ ಕ್ಲೇಶ ಶಾಂತಿಯೇ ಈ ಯಜ್ಞದ ಫಲವು. ಈ ಯಜ್ಞಸಮಾರಂಭಕ್ಕೆ ದಿಕ್ಕು ದಿಕ್ಕು ಗಳಿಂದಲೂ ರಾಜರನ್ನು ಕರೆಯುವುದಕ್ಕಾಗಿಯೇ ಈ ರಣದುಂದುಭಿ.

ತಂದೆಯಾದ ದ್ರೋಣನ ಪರಾಕ್ರಮದ ವಿಚಾರವಾಗಿ ಅಶ್ವತ್ಥಾಮನ ಹೇಳಿಕೆ—

ದಗ್ಧಂ ವಿಶ್ವಂ ದಹನಕಿರಣೈರ್ನೋದಿತಾ ದ್ವಾದಶಾರ್ಕಾ
ವಾತಾ ವಾತಾ ದಿಶಿ ದಿಶಿ ನ ವಾ ಸಪ್ತಧಾ ಸಪ್ತಭಿನ್ನಾಃ ।
ಛನ್ನಂ ಮೇಘೈರ್ನ ಗಗನತಲಂ ಪುಷ್ಕರಾವರ್ತಕಾದ್ಯೈಃ
ಪಾಪಂ ಪಾಪಾಃ ಕಥಯತ ಕಥಂ ಶೌರ್ಯರಾಶೇಃ ಪಿತುರ್ಮೇ ॥ ೩—೫ ॥

ಓ ಪಾಪಿಗಳೇ!

ದ್ವಾದಶಾದಿತ್ಯರು ಒಂದೇಸಲ ಉದಯಿಸಿ ಪ್ರಪಂಚವನ್ನು ದಹಿಸಲು ಉಜ್ಜ್ರಿ ಗಿಸಿದರೂ ಸಪ್ತಮರುತ್ತುಗಳು ಏಳುಸಲ ಗುಣಿಸಿಕೊಂಡು ಪ್ರತಿದಿಕ್ಕಿನಲ್ಲಿ ಬೀಸುವುದಾದರೂ ಪುಷ್ಕರಾವರ್ತಾದಿಸಪ್ತಮೇಘಗಳು ಒಂದೇಸಲ ಆಕಾಶ ವನ್ನು ತುಂಬಿ ಭೋರ್ಗರೆಯುವುವಾದರೂ ಲೆಕ್ಕಿಸದ ಶೌರ್ಯರಾಶಿಯಾಗಿರುವ ನನ್ನ ತಂದೆಗೆ ಸೋಲೆಂದರೆ ಏನು? ಸಾವೆಂದರೆ ಏನು?

ದುರ್ಯೋಧನನು ಭೀಮನ ಕೈಗೆ ಸಿಕ್ಕಿದಾಗ ಭೀಮನು ಹೇಳುವುದು—

ಆಶೈಶವಾದನುದಿನಂ ಜನಿತಾಪರಾಧಃ
ಕ್ಷೀಬೋ ಮದೇನ ಭುಜಯೋರ್ಹತರಾಜಪುತ್ರ ।
ಆಸಾದ್ಯ ಮೇಽಂತರಮಿದಂ ಭುಜಪಂಜರಸ್ಯ
ಜೀವನ್ಪ್ರಯಾಸಿ ನ ಪದಾತ್ಪದಮದ್ಯ ಪಾಪಃ ॥ ೬—೩೮ ॥

ಎಲವೋ, ಪಾಪಿ, ದುರ್ಯೋಧನ!

ಚಿಕ್ಕತನದಿಂದಲೂ ತಪ್ಪುಕೆಲಸಗಳನ್ನು ಮಾಡುತ್ತಾ ನನ್ನ ತಮ್ಮಂದಿರೇ ಮೊದಲಾದ ರಾಜಪುತ್ರರನ್ನು ಗೋಳಾಡಿಸಿದ ನೀನು ಈಗ ನನ್ನ ಭುಜಪಂಜರಕ್ಕೆ ಸಿಕ್ಕಿರುವೆ. ಇನ್ನು ನೀನು ತಪ್ಪಿಸಿಕೊಳ್ಳಲಾರೆ. ನಿನ್ನ ಪಾಪಗಳ ಫಲವನ್ನು ಈಗ ಅನುಭವಿಸು.



# ವಿಶಾಖದತ್ತ

ಇವನನ್ನು ವಿಶಾಖದೇವನೆಂತಲೂ ಕರೆಯುವುದುಂಟು.

"ಆಜ್ಞಾಪಿತೋಽಸ್ಮಿ ಪರಿಷದಾ ಯಥಾದ್ಯ ತ್ವಯಾ ಸಾಮಂತ ವಟೇಶ್ವರದತ್ತಪೌತ್ರಸ್ಯ ಮಹಾರಾಜಪದಭಾಕ್ಪೃಥುಸೂನೋಃ ಕವೇಃ **ವಿಶಾಖದತ್ತ**ಸ್ಯ ಕೃತಿರಭಿನವಂ **ಮುದ್ರಾರಾಕ್ಷಸಂ** ನಾಮ ನಾಟಕಂ ನಾಟಯಿತವ್ಯಮಿತಿ"

ಎಂದು ಸೂತ್ರಧಾರನು ಹೇಳಿರುವುದರಿಂದ ವಿಶಾಖದತ್ತನು ಸಾಮಂತರಾಜ ವಟೇಶ್ವರದತ್ತನ ಮೊಮ್ಮಗನೂ ಮಹಾರಾಜನೆಂಬ ಪದವಿಯನ್ನು ಹೊಂದಿದ ಪೃಥುವಿನ* ಮಗನೂ "ಮುದ್ರಾರಾಕ್ಷಸ"ವೆಂಬ ನಾಟಕವನ್ನು ಬರೆದವನೂ ಎಂದು ತಿಳಿಯಬರುತ್ತದೆ.

ವಟೇಶ್ವರದತ್ತನು ಯಾವ ರಾಜನಿಗೆ ಸಾಮಂತರಾಜನಾಗಿದ್ದನೆಂಬುದಾಗಲಿ ಮಹಾರಾಜಪದವಿಯನ್ನು ದೊರಕಿಸಿಕೊಂಡ ಪೃಥುವು ಎಲ್ಲಿಯವನೆಂದಾಗಲಿ ವಿಶಾಖದತ್ತನು ಬರೆದಿರುವ ಇತರ ಗ್ರಂಥಗಳಾವುವೆಂಬುದಾಗಲಿ ತಿಳಿಯಬರುವಂತಿಲ್ಲ.

**ಕಾಲವಿಚಾರ** — ಮುದ್ರಾರಾಕ್ಷಸದ ಕಥಾಭಾಗವು ಪಾಟಲೀಪುತ್ರ ಅಥವಾ ಕುಸುಮಪುರದಲ್ಲಿ ನಡೆದುದಾಗಿದೆ. ಪಾಟಲೀಪುತ್ರವು ಶೋಣಾ ಮತ್ತು ಗಂಗಾನದಿಗಳ ಸಂಗಮಸ್ಥಾನದ ದಕ್ಷಿಣದಲ್ಲಿದ್ದುದಾಗಿ ತಿಳಿಯಬರುತ್ತದೆ. ಕ್ರಿ. ಶ. ೩೯೯–೪೧೪ರ ವರೆಗೆ ಇಂಡಿಯಾ ಮತ್ತು ಮಧ್ಯ ಆಸಿಯಾಖಂಡದಲ್ಲಿ ಸಂಚರಿಸಿದ ಫಾಹಿಯಾನನು ಈ ಪಾಟಲೀಪುತ್ರವನ್ನು "ಪಾಲಿಬೋತ್ರ"ವೆಂದು ಕರೆದಿರುವನು, ಅಲ್ಲದೆ ಮಗಧರಾಜ್ಯಕ್ಕೆ ರಾಜಧಾನಿಯಾಗಿದ್ದಿತೆಂದೂ ಹೇಳಿರುವನು. ಕ್ರಿ. ಶ. ಏಳನೆಯ ಶತಮಾನದಲ್ಲಿ ಇಂಡಿಯಾದೇಶಕ್ಕೆ ಬಂದಿದ್ದ ಹುಯನ್‌ತ್ಸಾಂಗನೆಂಬ ಭ್ರಮಣಕಾರಿಯು ಗಂಗಾನದಿಯ ದಕ್ಷಿಣದಲ್ಲಿರುವ ಪಾಟಲೀಪುತ್ರವು ಹಾಳಾಗುತ್ತಿರುವುದೆಂದೂ ಇನ್ನೂ ಎಪ್ಪತ್ತು ಲೀಗಳಷ್ಟು ಉಳಿದುಕೊಂಡಿರುವುದೆಂದೂ ಬರೆದಿರುವನು.† ಇದರಿಂದ ಹುಯನ್‌ತ್ಸಾಂಗನ ಕಾಲಕ್ಕೆ ಎಂದರೆ ಕ್ರಿ. ಶ. ಏಳನೆಯ ಶತಮಾನದ ಮಧ್ಯಕಾಲದ ವರೆಗೂ ಪಾಟಲೀಪುತ್ರವೆಂಬುದು ಇದ್ದುದಾಗಿ ನಿಶ್ಚಿತವಾಗುವುದು.

---

* ಇವನು ಅಜಮೀರಿನಲ್ಲಿ ಕಾರ್ಯಭಾರವನ್ನು ನಡೆಸುತ್ತಿದ್ದ ಚೌಹಣವಂಶದ ಪೃಥುರಾಜನಲ್ಲ.

† Cunningham's Arch: Surv: Report Vol. VIII P. 6.

ಹೀಗೆ ಒಂದು ಶತಮಾನವು ಕಳೆದನಂತರ ಕ್ರಿ. ಶ. ೭೫೬ ರಲ್ಲಿ ಇಂಡಿಯಾ ದೇಶಕ್ಕೆ ಬಂದಿದ್ದ ಮತ್ತೊಬ್ಬ ಚೀನಾಪ್ರವಾಸಿಯು ಕಾನ್‌ಯೂಯೆನ್ (Kan-yuen) ವರ್ಷದ ಕೊನೆಯಲ್ಲಿ ಎಂದರೆ ಕ್ರಿ.ಶ. ೭೫೬ರಲ್ಲಿ ಹೋ-ಲುಂಗ್ (Ho-lung)ನದಿಯ ದಡವು ಕುಸಿದುಬಿದ್ದುದಾಗಿ ಒಕ್ಕಣಿಸಿರುವನು. ಇದನ್ನು ಆಂಗ್ಲಭಾಷೆಗೆ ಪರಿವರ್ತಿಸಿರುವ ಪಂಡಿತನು ಹೋ-ಲುಂಗ್ ಎಂಬುದು ಗಂಗಾನದಿಯಾಗಿರಬೇಕೆಂದು ಸೂಚಿಸಿರುವನು. ಈ ಅಭಿಪ್ರಾಯವನ್ನು ಜನರಲ್ ಕನಿಂಗ್ ಹ್ಯಾಮರವರೂ ಮು|| ಬಿಗ್ಲರವರೂ ಅನುಮೋದಿಸಿರುವರು.† ಈ ಕಾರಣಗಳಿಂದ ಮುದ್ರಾರಾಕ್ಷಸವು ಕ್ರಿ.ಶ. ೮ನೆಯ ಶತಮಾನದಲ್ಲಿ ಬರೆಯಲ್ಪಟ್ಟುದಾಗಿ ಹೇಳಬೇಕಾಗುವುದು. ಮತ್ತು ಒಂದುವೇಳೆ ಈಗಣ ಶಾಹೀನಗರವೇ ಆಗಣ ಪಾಟಲೀಪುತ್ರವೆಂದು ಹೇಳುವುದಾದರೆ, ಈಗಣ ಪಾಟ್ನಾನಗರವನ್ನೂ ಅದರ ಕೋಟೆಯನ್ನೂ ಷೇರಷಹನು ಕಟ್ಟಿಸಿದುದಾಗಿ ತಿಳಿಯಬರುವುದು. ಹುಯನ್‌ತ್ಸಾಂಗನ ಕಾಲದಿಂದೀಚೆಗೆ ಬರೆಯಲ್ಪಟ್ಟುದೊರೆತಿರುವ ಗ್ರಂಥಗಳಲ್ಲಿ 'ಪಾಟ್ನಾ'ಎಂಬಹೆಸರಿರುವುದೇ ಹೊರತು 'ಪಾಟಲೀಪುತ್ರ'ವೆಂಬ ಹೆಸರಿರುವುದಾಗಿ ಕಂಡುಬರುವುದಿಲ್ಲ. ಪಾಹಿಯಾನನ ಕಾಲದಲ್ಲಿ ಬೌದ್ಧಮತವು ಅತ್ಯಂತೋತ್ಕರ್ಷಸ್ಥಿತಿಯಲ್ಲಿ ಇದ್ದು ಹುಯನ್‌ತ್ಸಾಂಗನ ಕಾಲಕ್ಕೆ ಕ್ಷೀಣದೆಸೆಗೆ ಪ್ರಾರಂಭಿಸಿ ಕ್ರಿ. ಶ. ೮—೯ ನೆಯ ಶತಮಾನಗಳಲ್ಲಿ ಅವಹೇಳನಾಸ್ಪದವಾದುದೆಂದು ಚರಿತ್ರೆಗಳಿಂದ ತಿಳಿಯಬರುತ್ತದೆ. ಆದುದರಿಂದ ವಿಶಾಖದತ್ತನು ಬೌದ್ಧಮತಖಿಲದ್ಯೋತಕವಾದ ಕ್ರಿ. ಶ. ಎಂಟನೆಯ ಶತಮಾನದವನೆಂದು ಸ್ಪಷ್ಟವಾಗುವುದು. ಇದಲ್ಲದೆ ಹರ್ಷಚರಿತದಲ್ಲಿ ಹೂಣರ ಉಲ್ಲೇಖವಿರುವುದು. ಇವರು ಪ್ರಬಲರಾಗಿ ರಾಜ್ಯಗಳ ಮೇಲೆ ಬಿದ್ದು ಕೊಳ್ಳೆಹೊಡೆಯುತ್ತಿದ್ದುದರಿಂದ ಇವರ ಕಾಟವನ್ನು ತಡೆಯಲಾರದೆ ಮೌಖರಿವಂಶದರಸರು ನೆರೆಹೊರೆಯ ರಾಜರ ಸಹಾಯದಿಂದ ಯುದ್ಧಮಾಡಿರುವುದಾಗಿ ತಿಳಿಯಬರುವುದರಿಂದ ಈ ನಾಟಕದಲ್ಲಿ ಕಂಡುಬರುವ ಮ್ಲೇಚ್ಛರೆಂಬುವರು ಈ ಹೂಣರಾಗಿದ್ದಿರಬೇಕೆಂದು ಸ್ಪಷ್ಟವಾಗುವುದು.

ಮು|| ವಿಲ್ಸನ್‌ಪಂಡಿತರವರು ವಿಶಾಖದತ್ತನ ಕಾಲವು ಪಠಾಣರು ಹಿಂದೂ ರಾಜರನ್ನು ತೊಂದರೆಗೊಳಿಸುತ್ತಿದ್ದ ಕಾಲವೆಂದೂ ಮ್ಲೇಚ್ಛಪದಕ್ಕೆ ತುರುಷ್ಕ ಅಥವಾ ಮುಹಮ್ಮದೀಯರೆಂದೂ ಅರ್ಥವನ್ನು ಕಲ್ಪಿಸಿಕೊಂಡು ವಿಶಾಖದತ್ತನು ಕ್ರಿ. ಶ. ೧೧—೧೨ ನೆಯ ಶತಮಾನದವನೆಂದೂ ಹೇಳಿರುವರು.* ಗ್ರಂಥದಲ್ಲಿ

† Introduction to Mudrarakshasa by K. T. Telang P.23.

* Cunningham's Arch. Surv. Report Vol. VIII P. 12 & XI P. 156

ಮಲಯಕೇತುವು ಮ್ಲೇಚ್ಛನೆಂದು ಕರೆಯಲ್ಪಟ್ಟಿರುವನು. ಇವನ ಹೆಸರಾಗಲಿ ಅಥವಾ ಇವನ ಚಿಕ್ಕಪ್ಪನಾದ ವೈರೋಚಕನ ಅಥವಾ ಪರ್ವತಕನ (ಇವನನ್ನು ಶೈಲೇಶ್ವರನೆಂದೂ ಪರ್ವತೇಶ್ವರನೆಂದೂ ಕರೆಯುವ ವಾಡಿಕೆ) ಇವರಲ್ಲಿ ಯಾರ ಹೆಸರೂ ಮಹಮ್ಮದೀಯ ಹೆಸರುಗಳಾಗಿ ತೋರುವುದಿಲ್ಲ. ಹಾಗೆ ಮ್ಲೇಚ್ಛಶಬ್ದಕ್ಕೆ ಮಹಮ್ಮದೀಯರೆಂದು ಹೇಳುವುದಾದರೆ ಮುದ್ರಾರಾಕ್ಷಸದಲ್ಲಿ ಕಂಡುಬರುವ ಯವನ, ಕಿರಾತ, ಕಾಂಭೋಜ, ಪಾರಸೀಕ, ಬಾಹ್ಲೀಕ, (ಇವರು ಈ ನಾಟಕದ ಎರಡನೆಯ ಅಂಕದಲ್ಲಿಯೂ) ಖಾಸ, ಮಗಧ, ಗಾಂಧಾರ, ಚೀಣ, ಹೂಣ, ಕಾಲೂತ, ಮ್ಲೇಚ್ಛ, (ಇವರು ಐದನೆಯ ಅಂಕದಲ್ಲಿಯೂ ಕಂಡುಬರುವರು) ಇವರು ಯಾರು ಯಾರೆಂಬುದು ವಿಚಾರಾಸ್ಪದವಾಗುವುದು. ಇವರಲ್ಲಿ ಕೆಲವರನ್ನು ಆಯಾಯ ದೇಶೀಯರೆಂದೇ ಹೇಳುವುದಾದರೆ ಉಳಿದವರು ಯಾರೆಂಬ ಸಂದೇಹವು ಉಂಟಾಗುವುದು.

ಮ್ಲೇಚ್ಛಶಬ್ದಕ್ಕೆ ಕೋಶಕಾರನು ಹೀಗೆಂದು ಒಕ್ಕಣಿಸಿರುವನು—

ಭೇದಾಃ ಕಿರಾತ-ಶಬರ-ಪುಳಿಂದಾ ಮ್ಲೇಚ್ಛ ಜಾತಯಃ |

ಕಿರಾತಶಬ್ದವೇ ಮೊದಲಾದುವು ಚಂಡಾಲಭೇದಗಳಾದ ಮ್ಲೇಚ್ಛ ಜಾತಿಯ ಹೆಸರುಗಳು—

ಗೋಮಾಂಸಭಕ್ಷಕೋ ಯಸ್ತು ಲೋಕಬಾಹ್ಯಂ ಚ ಭಾಷತೇ |
ಸರ್ವಾಚಾರವಿಹೀನೋಽಸೌ "ಮ್ಲೇಚ್ಛ" ಇತ್ಯಭಿಧೀಯತೇ || *

"ಕೀತಿ ಶಬ್ದಂ ರಾತಿ ಇತಿ ಕಿರಾತಃ" ಕೀಕೀ ಎಂದು ಶಬ್ದವನ್ನು ಮಾಡುವವರು ಕಿರಾತರು. ಎಲೆಗಳನ್ನು ಕಟ್ಟಿಕೊಳ್ಳುವವರು ಶಬರರು. ತಮ್ಮ ಭಾಷೆಯನ್ನು ಹೊರತು ಇತರ ಯಾವ ಭಾಷೆಯನ್ನೂ ಅರಿಯದವರು ಪುಳಿಂದರು. "ಮ್ಲೇಚ್ಛಂ ತೇಽವ್ಯಕ್ತಂ ಭಾಷಂತ ಇತಿ ಮ್ಲೇಚ್ಛಾಃ" ವ್ಯಕ್ತವಾಗದ ಹಾಗೆ ಮಾತನಾಡುವವರು ಮ್ಲೇಚ್ಛರು. ಆಚಾರಹೀನರಾಗಿ ಲೋಕಬಾಹ್ಯವಿಷಯಗಳನ್ನು ಮಾತನಾಡುತ್ತ ಗೋಮಾಂಸಭಕ್ಷಕರಾಗಿರುವವರು 'ಮ್ಲೇಚ್ಛರು'. ಹೀಗಿರುವಲ್ಲಿ ಮ್ಲೇಚ್ಛಶಬ್ದಕ್ಕೆ ಮಹಮ್ಮದೀಯರೆಂದು ಮಾತ್ರವೇ ಅನ್ವಯಿಸುವುದು ಹೇಗೆಂಬ ವಿಚಾರವು ಅನುಮಾನಾಸ್ಪದವಾದುದಾಗಿದೆ.

ನಂದರ ನಾಶ ಮತ್ತು ಚಂದ್ರಗುಪ್ತನ ಏಳಿಗೆಗೆ ಅಮಾತ್ಯರಾಕ್ಷಸನ ಮುದ್ರೆಯುಂಗುರವೇ ಕಾರಣವಾದುದರಿಂದ ಕವಿಯು ತನ್ನ ಗ್ರಂಥವನ್ನು "**ಮುದ್ರಾರಾಕ್ಷಸ**"ವೆಂದು ಕರೆದಿರುವನು. ರಾಕ್ಷಸನ ಮುದ್ರೆಯುಂಗುರವು ಚಾಣಕ್ಯನ

* ಗುರುಬಾಲಪ್ರಬೋಧಿಕಾ ದ್ವಿತೀಯಕಾಂಡ ಶೂದ್ರವರ್ಗ ಪುಟ. ೩೩೩.

ಸಂಚಿಗೆ ಒಳಪಟ್ಟು ನಂದರು ಹಾಳಾಗಿ ಮುರಾನಂದನಿಗೆ ರಾಜ್ಯಭಾರವು ಹೇಗೆ ದೊರೆಕಿತೆಂಬ ವಿಚಾರವು ಕಥೆಯಲ್ಲಿ ವಿಶದವಾಗಿ ವರ್ಣಿತವಾಗಿರುವುದು.

ಮಹಾಕವಿಯಾದ ಷೇಕ್ಸಪೀಯರನು—

**"I shall .... ... .... .... .... ....**

**a round unvarnished tale deliver"**

ಎಂದು ಹೇಳುವಂತೆ ನಾಟಕಗಳಿಗೆ ಇರಬೇಕಾದ ವೇಷಭಾಷಾಲಂಕಾರಗಳೊಂದೂ ಇಲ್ಲದೆ ಇದ್ದುದು ಇದ್ದಹಾಗೆಯೇ ಬರೆಯಲ್ಪಟ್ಟಿರುವ ನಾಟಕಗಳಲ್ಲಿ ಶೂದ್ರಕನ ಮೃಚ್ಛಕಟಿಕ, ವಿಶಾಖದತ್ತನ ಮುದ್ರಾರಾಕ್ಷಸ, ಇವೆರಡು ನಾಟಕಗಳು ಮಾತ್ರವೇ ದೊರೆಯುವುವು. ಚಾರಿತ್ರಸಂಬಂಧಗಳಾದ ನಾಟಕಗಳೆಂದು ಪ್ರಕೃತ ದೊರೆತಿರುವುದರಲ್ಲಿ ಇವುಗಳ ಜತೆಗೆ ಮಾಳವಿಕಾಗ್ನಿಮಿತ್ರವೂ ಸೇರಿ ಮೂರು ನಾಟಕಗಳಾಗುವುವು. ಪ್ರಾಚೀನಕವಿಗಳು ಪುರಾಣೇತಿಹಾಸಾದಿಗಳಿಂದ ಕಥಾಭಾಗಗಳನ್ನು ತೆಗೆದುಕೊಂಡು ಬರೆದಿರುವಂತೆ ಇವುಗಳ ಕಥಾಭಾಗಗಳೂ ಆಗಣ ಸಾಮಾಜಿಕ, ನೈತಿಕ, ಚಾರಿತ್ರಭಾಗಗಳನ್ನೊಳಕೊಂಡು ಬರೆಯಲ್ಪಟ್ಟಿರುವುವು.

ಚಾಣಕ್ಯನ ಕೃತಿ, ನಂದವಂಶೋದ್ಧರಣ, ಚಂದ್ರಗುಪ್ತಾಭಿಷೇಕವೇ ಮೊದಲಾದುವು ಸಂಕ್ಷೇಪರೀತಿಯಿಂದ ವಿಷ್ಣುಪುರಾಣದಲ್ಲಿ—

"ನವ ಚೈತಾನ್ನಂದಾನ್ಕೌಟಿಲ್ಯೋ ಬ್ರಾಹ್ಮಣಸ್ಸಮುದ್ಧರಿಷ್ಯತಿ ।
ಕೌಟಿಲ್ಯ ಏವ ಚಂದ್ರಗುಪ್ತಂ ರಾಜ್ಯೇಽಭಿಷೇಕ್ಷ್ಯತಿ। ಅತಃ ಪರಂ
ಶೂದ್ರಾಃ ಪೃಥಿವೀಂ ಭೋಕ್ಷ್ಯಂತಿ।" ಎಂದೂ—

ಬೃಹತ್ಕಥೆಯಲ್ಲಿ—

ಚಾಣಕ್ಯನಾಮ್ನಾ ತೇನಾಥ ಶಕಟಾರಗೃಹೇ ರಹಃ ।
ಕೃತ್ಯಾಂ ವಿಧಾಯ ಸಪ್ತಾಹಾತ್ಸಪುತ್ರೋ ನಿಹತೋ ನೃಪಃ ॥

"ಶಕಟಾರಃ ಕ್ಷಪಣಕಲಿಂಗಧಾರೀ ಚಾಣಕ್ಯಮಿತ್ರಂ ಇಂದುಶರ್ಮಾ।"

ಯೋಗಾನಂದೇ ಯಶಃ ಶೇಷೇ ಪೂರ್ವನಂದಸುತಃ ಸ್ತತಃ ।
ಚಂದ್ರಗುಪ್ತಃ ಕೃತೋ ರಾಜ್ಯೇ ಚಾಣಕ್ಯೇನ ಮಹೌಜಸಾ ॥ ಎಂದೂ—

ಕಾಮಂದಕಿಯಲ್ಲಿ—

ವಂಶೇ ವಿಶಾಲವಂಶಾನಾಮೃಷೀಣಾಮಿವ ಭೂಯಸಾಂ ।
ಅಪ್ರತಿಗ್ರಾಹಕಾಣಾಂ ಯೋ ಬಭೂವ ಭುವಿ ವಿಶ್ರುತಃ ॥
ಜಾತವೇದಾ ಇವಾರ್ಚಿಷ್ಮಾನ್ವೇದಾನ್ವೇದವಿದಾಂ ವರಃ ।
ಯೋಽಧೀತವಾನ್ಸ ಚತುರಶ್ಚತುರೋಪ್ಯೇಕವೇದವತ್ ॥

ಯಸ್ಯಾಭಿಚಾರವಜ್ರೇಣ ವಜ್ರಜ್ವಲನತೇಜಸಃ ।
ಪಪಾತ ಮೂಲತಃ ಶ್ರೀಮಾನ್ಸುಪರ್ವಾನಂದಪರ್ವತಃ ॥

ಏಕಾಕೀ ಮಂತ್ರಶಕ್ತ್ಯಾ ಯಃ ಶಕ್ತಃ ಶಕ್ತಿಧರೋಪಮಃ ।
ಆಜಹಾರ ನೃಚಂದ್ರಾಯ ಚಂದ್ರಗುಪ್ತಾಯ ಮೇದಿನೀಂ ॥

ನೀತಿಶಾಸ್ತ್ರಾಮೃತಂ ಧೀಮಾನ್ ಅರ್ಥಶಾಸ್ತ್ರಮಹೋದಧೇಃ ।
ಯ ಉದ್ದಧ್ರೇ ನಮಸ್ತಸ್ಮೈ ವಿಷ್ಣುಗುಪ್ತಾಯ ವೇಧಸೇ ॥

ಎಂದೂ ಹೇಳಲ್ಪಟ್ಟಿರುವುದು. ಸಾಧಾರಣವಾಗಿ ನಾಟಕಗಳಲ್ಲಿರುವಂತೆ ಇದರಲ್ಲಿ ಸ್ತ್ರೀಪಾತ್ರವಿರುವುದಿಲ್ಲ. ಚಂದನದಾಸನ ಹೆಂಡತಿ ಮತ್ತು ಅವಳ ಮಗನ ವಿಚಾರವು ಈ ನಾಟಕದ ಕೊನೆಯ ಅಂಕಾರಂಭದಲ್ಲಿ ಬರುವುದು. ಇದರ ಶೈಲಿಯು ಸಾಹಸೋದ್ಯೋಗಗಳಿಂದ ಕೂಡಿ ಮೃದುಮಧುರಭಾಷಣವರ್ಜಿತವಾದುದಾಗಿರುವುದು. ಪಾತ್ರಗಳ ವರ್ಣನೆಯೂ ಕೂಡ ಹಾಗೆಯೇ ಇರುವುದು.

ಪಾತ್ರಗಳಲ್ಲಿ ಮುಖ್ಯವಾದ ಚಾಣಕ್ಯನ ಪಾತ್ರವನ್ನು ಪರಿಶೀಲಿಸಿನೋಡುವುದಾದರೆ—

ಚಾಣಕ್ಯನು ಅತ್ಯಂತಮೇಧಾವಿಯೂ ಗಂಡುಗಲಿಯೂ ಮಹಾಸಂಚುಗಾರನೂ ದೂರಾಲೋಚನೆಯುಳ್ಳವನೂ, ದೃಢಸಂಕಲ್ಪನೂ ಅಲಸಿಕೆಯಿಂದ ದೂರನೂ ಅಪ್ರತಿಮರಾಜನೀತಿಜ್ಞನೂ ಆಗಿದ್ದನೆಂದು ತಿಳಿಯಬರುವುದು.

ರಾಕ್ಷಸನು ವೀರನೂ ಸ್ವಾಮಿಭಕ್ತನೂ ಧೃತಿವಂತನೂ ದೂರಾಲೋಚನೆಯಲ್ಲಿ ಚಾಣಕ್ಯನಿಗೆ ಸಮಬಾರದವನೂ ಅಲಸಿಕೆಗೆ ಕೊಂಚ ಮನಸೋತವನೂ ಸರಳಹೃದಯನೂ ಆಗಿದ್ದನೆಂದು ತಿಳಿಯಬರುವುದು. ಇವನ ಇತರ ಗುಣಗಳ ವಿಚಾರವಾಗಿ ಈ ನಾಟಕದ ಆರನೆಯ ಅಂಕದಲ್ಲಿ ಚಾಣಕ್ಯನ ಕುಟಿಲತಂತ್ರದಿಂದ ತನ್ನ ಕಾರ್ಯಗಳೆಲ್ಲವೂ ನಿಷ್ಫಲವಾದುದನ್ನು ಕಂಡು ನಿರಾಶನಾದ ರಾಕ್ಷಸನ ಹೇಳಿಕೆಯು ವ್ಯಕ್ತಪಡಿಸುವುದು.

ಪರಸ್ಪರವಿರೋಧಿಗಳಾದ ಚಂದ್ರಗುಪ್ತ ಮಲಯಕೇತು ಇವರಲ್ಲಿ ಚಂದ್ರಗುಪ್ತನು ಗೌರವಶಾಲಿಯೂ ಸುಶೀಲನೂ ಶೂರನೂ ಸ್ವಾಮಿಭಕ್ತನೂ ಮೇಧಾವಿಯೂ ಆಗಿ ತನ್ನಾಪ್ತಮಂತ್ರದಲ್ಲಿ ನಂಬಿಕೆಯುಳ್ಳವನೂ ಪೂರ್ವಾಪರವಿಮರ್ಶಕನೂ ಆಗಿದ್ದುದಾಗಿ ಕಂಡುಬರುವುದು.

ಮಲಯಕೇತುವು ಯಾವಾಗಲೂ ಸಂಶಯಗ್ರಸ್ತನೂ ಚಪಲಹೃದಯನೂ ಅಭಿಮಾನಶೂನ್ಯನೂ, ಗೌರವದೂರನೂ ವಿಚಾರಹೀನನಾದ ಹುಡುಗತನದವನೂ ಆಗಿದ್ದಿರಬೇಕೆಂದು ಗೊತ್ತಾಗುವುದು.

ಇದರಲ್ಲಿನ ಇತರಪಾತ್ರಗಳು ಆಯಾಯ ಪಾತ್ರಕ್ಕೆ ತಕ್ಕಂತೆ ಇರುವುವು. ಇದರಲ್ಲಿ ಏಳು ಅಂಕಗಳಿರುವುವು.

"ಅತ್ರ ನಾಟಕೇ ವೀರೋ ರಸಃ ಅತಿಗಹನಕೌಟಿಲ್ಯನೀತಿರೂಪೋ ದ್ಭುತರಸಃ ಪ್ರಬಲಮಂಗಂ, ಅನ್ಯೇ ಶೃಂಗಾರಕರುಣಾದಯೋ ಯಥಾಯಥಂ ದೃಷ್ಟವ್ಯಾಃ।"

ಎಂಬಂತೆ ಇದರಲ್ಲಿ ವೀರರಸವು ಪ್ರಧಾನವಾದುದಾಗಿ ಕೌಟಿಲ್ಯನ ಅತ್ಯಂತ ಗಹನವಾದ ನೀತಿರೂಪದದೆಸೆಯಿಂದ ಅದ್ಭುತರಸವು ತೋರಿ ವಿಚಾರಕ್ಕೆ ತಕ್ಕಂತೆ ಅಲ್ಲಲ್ಲಿ ಶೃಂಗಾರಕರುಣರಸಗಳು ತೋರಿಬರುವುವು.

ಚಾಣಕ್ಯನು ಚಣಕಋಷಿಯ ಮಗನು. ಇವನು ಸಾಂಗವೇದಾಧ್ಯಾಯಿಯಾಗಿದ್ದುದಲ್ಲದೆ ಜ್ಯೋತಿಃಶಾಸ್ತ್ರದಲ್ಲಿಯೂ ನೀತಿಶಾಸ್ತ್ರದಲ್ಲಿಯೂ ಪಾರಂಗತನಾಗಿದ್ದನು. ಇವನಿಗೆ ಕೌಟಿಲ್ಯನೆಂದೂ ವಿಷ್ಣುಗುಪ್ತನೆಂದೂ ಪರ್ಯಾಯ ನಾಮಗಳಿದ್ದುವು. ಇವನು 'ಅರ್ಥಶಾಸ್ತ್ರ'ವೆಂಬ ಗ್ರಂಥವನ್ನು ಬರೆದಿರುವನು. ವಿಶಾಖದತ್ತನ ಮುದ್ರಾರಾಕ್ಷಸದ ಕಥೆಯನ್ನು ಪೂರ್ವಭಾಗವೆಂದೂ ಉತ್ತರಭಾಗವೆಂದೂ ಎರಡು ಭಾಗಗಳನ್ನಾಗಿ ಮಾಡಿಕೊಂಡರೆ ಉತ್ತರಭಾಗದ ಕಥೆಯು ಮಾತ್ರ ನಾಟಕರೂಪವಾಗಿ ಬರೆಯಲ್ಪಟ್ಟಿರುವುದರಿಂದ ಪೂರ್ವಭಾಗದ ಕಥೆಯನ್ನು ಹೇಳದೆ ಉತ್ತರಭಾಗದ ಕಥೆಯು ರುಚಿಸಲಾರದಾದುದರಿಂದ ಪೂರ್ವ ಕಥಾವೃತ್ತಾಂತವನ್ನು ಸಂಕ್ಷೇಪಿಸಿ ಬರೆಯುವೆವು—

**ಕಥಾಸಾರಾಂಶ**—ಪಾಟಲೀಪುತ್ರ ಅಥವಾ ಕುಸುಮಪುರದಲ್ಲಿ ಕಲಿಯುಗದ ಆದಿಯಲ್ಲಿ ಆಳುತ್ತಿದ್ದ ಚಂದ್ರವಂಶದರಸನಾದ ಸರ್ವಾರ್ಥಸಿದ್ಧಿ ಎಂಬವನಿಗೆ ಇಬ್ಬರುಪತ್ನಿಯರಿದ್ದರು. ಸರ್ವಾಂಗಸುಂದರಳಾದ ಸುನಂದೆಯೆಂಬುವಳೇ ಪಟ್ಟಮಹಿಷಿ. ಶೂದ್ರಕುಲಸಂಜಾತಳಾಗಿ ಅನುಪಮಲಾವಣ್ಯಸುಧಾಸಾಗರಳಾದ ಮುರೆಯೇ ಪ್ರಿಯಮಹಿಷಿ. ಅಮಾತ್ಯರಾಕ್ಷಸನೆಂಬವನೇ ಪ್ರಧಾನಿ. ಇವರೊಡನೆ ಕೂಡಿ ರಾಜ್ಯಭಾರವನ್ನು ನಡೆಸುತ್ತಿದ್ದಾಗ ರಾಜನನ್ನು ನೋಡುವುದಕ್ಕಾಗಿ ಬಂದ ಒಬ್ಬಾನೊಬ್ಬ ಮುನಿಪುಂಗವನಿಗೆ ಅತಿಥಿಸತ್ಕಾರವನ್ನು ಮಾಡಿ ಅರ್ಘ್ಯಪಾದ್ಯಾಚಮನಗಳಿಂದ ಸತ್ಕರಿಸಿ ಅವನಿಂದ ಅನುಗೃಹೀತನಾಗಿ ಕೊಡಲ್ಪಟ್ಟ ಜಲವನ್ನು ಈರ್ವರಿಗೂ ಪ್ರೋಕ್ಷಿಸಲಾಗಿ ಸುನಂದೆಯ ತಲೆಯಲ್ಲಿ ಒಂಭತ್ತು ಬಿಂದುಗಳೂ ಮುರೆಯ ತಲೆಯಮೇಲೆ ಒಂದೇ ಬಿಂದುವೂ ನಿಂತಿತು. ಇದರ ಫಲರೂಪವಾಗಿ ಆ ಸುನಂದೆಯಲ್ಲಿ ಒಂಭತ್ತು ಮಕ್ಕಳಾದರು. ಅವರೇ ನವನಂದರು. ಮುರಾಸಂಜಾತನೇ ಮೌರ್ಯನು. ಹೀಗೆ ಕೆಲವು ಕಾಲ-

ಕಳೆಯಲು ಸರ್ವಾರ್ಥಸಿದ್ಧಿಯು ಜ್ಯೇಷ್ಠಪುಗನಾದ ನಂದನಲ್ಲಿ ರಾಜ್ಯಭಾರವನ್ನಿರಿಸಿ ಮೌರ್ಯನನ್ನು ಸೇನಾಧಿಕಾರದಲ್ಲಿ ನಿಯೋಗಿಸಿ ನಿಶ್ಚಿಂತನಾಗಿ ಕಾಲಕ್ಷೇಪವನ್ನು ಮಾಡುತ್ತಿದ್ದನು. ಕಾಲಕ್ರಮದಲ್ಲಿ ಮೌರ್ಯನಿಗೆ ನಂದರಿಗಿಂತಲೂ ಬಲಿಷ್ಠರಾದ ನೂರುಮಂದಿ ಮಕ್ಕಳಾದರು. ಇವರಲ್ಲಿ ಎಲ್ಲರಿಗಿಂತಲೂ ಕಿರಿಯವನೇ ಚಂದ್ರಗುಪ್ತನು. ನವನಂದರು ಸುಪುತ್ರರಿಂದೊಡಗೂಡಿದ ಮೌರ್ಯನ ಏಳಿಗೆಯನ್ನು ಸಹಿಸಲಾರದೆ ಕಪಟಸನ್ನಾಹದಿಂದ ಎಲ್ಲರನ್ನೂ ನೆಲಮಾಳಿಗೆಯಲ್ಲಿ ಸೇರಿಸಿ ಅನ್ನೋದಕಗಳನ್ನು ಸಹಾ ಕೊಡದೆ ಕೊಂದುಹಾಕಿದರು. ಈಶ್ವರೇಚ್ಛೆಯಿಂದ ಸಾಯದೆ ಬದುಕಿದ್ದ ಚಂದ್ರಗುಪ್ತನಿಗೆ ಅನ್ನಸತ್ರಾಧಿಕಾರವನ್ನು ಕೊಟ್ಟರು. ನಂದರ ಮೋಸವನ್ನೂ ತನ್ನ ಹಿರಿಯರೆಲ್ಲರೂ ಸತ್ತುದನ್ನೂ ಯೋಚಿಸಿ ಚಂದ್ರಗುಪ್ತನು ನೊಂದುಕೊಂಡು ನಂದರ ನಾಶಕಾಲವನ್ನೇ ನಿರೀಕ್ಷಿಸುತ್ತಾ ಇರುವಾಗ ಅನ್ನಸತ್ರದ ಎದುರಿನಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನ ಸಂದರ್ಶನವಾಯಿತು. ಅವನೇ ಮಹಾತ್ಮನಾದ ಚಾಣಕ್ಯನು. ತನ್ನ ಮಾರ್ಗವನ್ನಡ್ಡಿಪಡಿಸಿದ ಹುಲ್ಲಿನ ಬೇರನ್ನು ಬುಡಸಹಿತ ಕಿತ್ತೊಗೆಯಲೆತ್ನಿಸುತ್ತಿರುವ ಚಾಣಕ್ಯನನ್ನು ನೋಡಿ ನಂದವಂಶದ ಮೂಲೋತ್ಪಾಟನಕ್ಕೆ ಇವನೇ ಸಮರ್ಥನೆಂದೆಣಿಸಿ ಅವನಿಗೆ ಶರಣಾಗತನಾಗಿ ತನ್ನ ಚರಿತವನ್ನು ಸಾಂಗೋಪಾಂಗವಾಗಿ ಹೇಳಿದನು. ಚಾಣಕ್ಯನು ಇದೆಲ್ಲವನ್ನೂ ಕೇಳಿ ಚಂದ್ರಗುಪ್ತನನ್ನು ಸಮಾಧಾನಗೊಳಿಸಿ ಉಪಾಯವನ್ನು ಯೋಚಿಸುತ್ತಾ ಹಾಗೆಯೇ ಸತ್ರಕ್ಕೆ ಹೋಗಿ ಅಗ್ರಾಸನವನ್ನು ಅಲಂಕರಿಸಿದನು. ಮೃಗಯಾವಿನೋದಕ್ಕಾಗಿ ಹೋಗಿಬಂದ ನಂದರು ಸತ್ರವನ್ನು ಹೊಕ್ಕು ತಾವು ಬಂದುದನ್ನು ನೋಡಿಯೂ ಕೂಡ ಲಕ್ಷ್ಯಕ್ಕೆ ತಾರದಿರ್ದ ಆ ಬ್ರಾಹ್ಮಣನನ್ನು ಕಂಡು ಕೋಪಗೊಂಡು ಅವನನ್ನು ಮುಡಿಹಿಡಿದು ಎಳೆದು ದೂಡಿದರು. ಆಗ ಚಾಣಕ್ಯನು ಕ್ರುದ್ಧನಾಗಿ ಎಲೈ, ರಾಜಾಧಮರಾದ ನವನಂದರೆ! ನಿಮ್ಮನ್ನು ಕೊಲ್ಲದೆ ಈ ಮುಡಿಗಂಟನಿಕ್ಕೆನೆಂದು ಪ್ರತಿಜ್ಞೆಯನ್ನು ಮಾಡಿ ಹೊರಟುಹೋದನು. ಹೀಗೆ ಹೊರಟುಹೋದ ಚಾಣಕ್ಯನನ್ನು ಚಂದ್ರಗುಪ್ತನು ಹೋಗಿಸೇರಿಕೊಂಡನು. ಚಾಣಕ್ಯನು ಇಂದುಶರ್ಮನಿಗೆ ಬುದ್ಧಭಿಕ್ಷುಕನ ವೇಷವನ್ನು ಹಾಕಿ ಕಳುಹಿಸಿ ಅಮಾತ್ಯರಾಕ್ಷಸನನ್ನು ಮೋಸಗೊಳಿಸಿದನು. ಅನಂತರ ಚಂದ್ರಗುಪ್ತನೊಡನೆ ಹೊರಟು ಪರ್ವತೇಶ್ವರನ ಬಳಿಗೆ ಹೋಗಿ ಅವನು ದಂಡೆತ್ತಿ ಬರಬೇಕಾಗಿಯೂ ಇದಕ್ಕಾಗಿ ಅವನಿಗೆ ರಾಜ್ಯಾರ್ಧವನ್ನು ಕೊಡುವುದಾಗಿಯೂ ಹೇಳಿ ಕುಸುಮಪುರದ ಮೇಲೆ ದಂಡೆತ್ತಿಸಿದನು. ರಾಕ್ಷಸನು ಯುದ್ಧಮಾಡಿದರೆ ಜಯಾಪಜಯಗಳು ಹೇಗಿರುವುವೋ ಎಂದು ಶಂಕಿತನಾಗಿ ಅವನೊಡನೆ ಕಪಟ ಸಂಧಿಯನ್ನು ಮಾಡಿಕೊಂಡು ಚಂದ್ರಗುಪ್ತನನ್ನು ಕೊಲ್ಲಲಾಲೋಚಿಸಿದನು.

ತಂತ್ರಚತುರನಾದ ಚಾಣಕ್ಯನು ಯುದ್ಧಮಾಡುವುದರಿಂದ ಪ್ರಾಣನಷ್ಟಗಳಾಗುವುವೆಂದು ಯೋಚಿಸಿ ಅದಕ್ಕೆ ಅವಕಾಶಕೊಡದೆ ಉಪಾಯಾಂತರದಿಂದ ನವನಂದರನ್ನು ಕೊಲ್ಲಿಸಿದನು. ರಾಕ್ಷಸನು ನಂದರ ಮರಣದಿಂದ ಕಡುದುಃಖಿತನಾಗಿ ಎಂತಾದರೂ ಮೌರ್ಯಪುತ್ರನಿಗೆ ರಾಜ್ಯವು ಸಿಕ್ಕದಂತೆ ಮಾಡಬೇಕೆಂದೆಣಿಸಿ ಪಟ್ಟಣವನ್ನು ಮುತ್ತಿರುವ ದಳವನ್ನು ನೋಡಿ ಉಳಿಗಾಲವಿಲ್ಲೆಂದು ತಿಳಿದು ಸರ್ವಾರ್ಥಸಿದ್ಧಿಯನ್ನು ಸುರಂಗಮಾರ್ಗದಲ್ಲಿ ಬೇರೊಂದೆಡೆಗೆ ಏಕಾಂತದಲ್ಲಿ ಕಳುಹಿಸಿ ನಂದರಾಜ್ಯವನ್ನು ಚಂದ್ರಗುಪ್ತನ ವಶಮಾಡಿ ಅವನಲ್ಲಿ ಮೈತ್ರಿಯನ್ನು ನಟಿಸುತ್ತಾ ವಿಷಕನ್ಯಾ*ಪ್ರಯೋಗದ ಮೂಲಕ ಚಂದ್ರಗುಪ್ತನನ್ನು ಕೊಲ್ಲಿಸಬೇಕೆಂದು ಯೋಚಿಸುತ್ತಿರುವುದನ್ನು ವಿಷ್ಣುಗುಪ್ತನು ತಿಳಿದು ಪರ್ವತೇಶ್ವರನಿಗೆ ಅದೇ ವಿಷಕನ್ಯಾಪ್ರಯೋಗವಾಗುವಂತೆ ಸಂಚುಮಾಡಿ ಕೊಲ್ಲಿಸಿ ಅವನ ಮಗನಾದ ಮಲಯಕೇತುವಿಗೆ ಭಯವನ್ನು ಹುಟ್ಟಿಸಿ ಓಡಿಸಿದುದಲ್ಲದೆ ಅನಾಯಕವಾಗಿದ್ದ ನಂದರಾಜ್ಯವನ್ನು ವಶಮಾಡಿಕೊಂಡನು. ಹೀಗೆ ಅಮಾತ್ಯರಾಕ್ಷಸನು ಯೋಚಿಸಿದ ಕಪಟೋಪಾಯಗಳೊಂದೂ ಚಂದ್ರಗುಪ್ತನ ಮೇಲೆ ಸಾಗದ ಹಾಗೆ ಪ್ರತಿಕ್ರಿಯೆಯನ್ನು ಮಾಡಿ ಚಂದ್ರಗುಪ್ತನನ್ನು ಉಳಿಸಿದನು. ಅದಲ್ಲದೆ ಸರ್ವಾರ್ಥಸಿದ್ಧಿಯನ್ನು ಹುಡುಕಿಸಿ ಅವನನ್ನು ಕೊಲ್ಲಿಸಿ ನಂದರ ವಂಶವನ್ನೇ ತೊಡೆದು ಬಿಟ್ಟನು. ಇದನ್ನು ನೋಡಿ ರಾಕ್ಷಸನು ಕಡುದುಃಖದಿಂದ ಕೋಪಾವಿಷ್ಟನಾಗಿ ಹೇಗಾದರೂ ಮಾಡಿ ಈ ರಾಜ್ಯವನ್ನು ಹೆರರ ಪಾಲಾದರೂ ಮಾಡಿ ಚಂದ್ರಗುಪ್ತನನ್ನು ಕೊಲ್ಲುವುದಾಗಿ ಪ್ರತಿಜ್ಞೆಯನ್ನು ಮಾಡಿ ಮಲಯಕೇತುವಿನ ಬಳಿಗೆ ಹೋಗಿ ಚಾಣಕ್ಯನು ಪರ್ವತೇಶ್ವರನಿಗೆ ಮಾಡಿದ ಅಪಕಾರಗಳೆಲ್ಲವನ್ನೂ ತಿಳುಹಿ ಚಂದ್ರಗುಪ್ತನನ್ನು ಕೊಲ್ಲುವ ಉಪಾಯವನ್ನು ಸೂಚಿಸಿ ಚಂದ್ರಗುಪ್ತನ ರಾಜ್ಯವನ್ನು ಅವನಿಗೆ ಕೊಡುವುದಾಗಿ ಭರವಸೆಯನ್ನಿತ್ತನು. ಮಲಯಕೇತುವು ಇದನ್ನು ಕೇಳಿ ತಂದೆಯ ಮರಣವನ್ನು ನೆನೆಸಿಕೊಂಡು ದುಃಖಾತಿರೇಕದಿಂದ ವಿಚಾರವಿಲ್ಲದೆ, ಯುದ್ಧದಲ್ಲಿ ಚಂದ್ರಗುಪ್ತನನ್ನು ಕೊಲ್ಲುವುದಾಗಿ ನಿಶ್ಚಯಿಸಿ ಅಮಾತ್ಯರಾಕ್ಷಸನನ್ನು ಮುಖ್ಯಮಂತ್ರಿಯಾಗಿ ನಿಯಮಿಸಿಕೊಂಡನು. ಇದರಿಂದ ಅಮಾತ್ಯರಾಕ್ಷಸನು ಸಂತುಷ್ಟನಾಗಿ ಹೇಗಾದರೂ ಮಲಯಕೇತು

---

* 'ವಿಷಾಂಗನಾ' 'ವಿಷಮಯೀ'ಎಂಬ ಪದಕ್ಕೆ ವಿಷದಿಂದ ಬೆಳೆಸಲ್ಪಟ್ಟವಳೆಂದು ವ್ಯಾಖ್ಯಾನಕಾರರು ಹೇಳಿರುವುದು ಸ್ವಭಾವವಿರುದ್ಧವೆಂದು ತೋರುವುದು. ಹೀಗೆ ಹೇಳುವ ಬದಲು ರಸಿಕಳಾದ ಆ ವಿಷಾಂಗಿಯು ವಾತ್ಸ್ಯಾಯನಕಾಮಸೂತ್ರಪ್ರಕಾರ ಚುಂಬನಾದಿ ಸ್ಥಳಗಳಲ್ಲಿ ವಿಷಲೇಪನಮಾಡಿಕೊಂಡು ಹೋಗಿದ್ದಳೆಂದೂ ಕಾಮುಕನಾದ ಪರ್ವತನು ಇಂತಹಳ ರೂಪೋನ್ಮಾದಭರದಲ್ಲಿ ತದಂಗಚುಂಬನವಶದಿಂದ ವಿಷವ್ಯಾಪ್ತನಾಗಿ ಮೃತನಾದನೆಂದೂ ಹೇಳಿದ್ದರೆ ಸಮಂಜಸವಾಗಿ ತೋರುತ್ತಿತ್ತು.

ವನ್ನು ದರ್ವಿಯಾಗಿಟ್ಟುಕೊಂಡು ಆಹವಯಜ್ಞದಲ್ಲಿ ಚಂದ್ರಗುಪ್ತಪಶುವನ್ನು ವಧಿಸಿ ಪಿತೃಲೋಕದಲ್ಲಿರುವ ತನ್ನೊಡೆಯರಾದ ಸರ್ವಾರ್ಥಸಿದ್ಧಿಯೇ ಮೊದಲಾದ ನವನಂದರಿಗೆ ಆ ಪ್ರಾಣವನ್ನಾಹುತಿಕೊಡುವೆನೆಂದು ಸಂತಸವುಳ್ಳವನಾಗಿ ಚತುರಂಗಬಲವನ್ನು ಜತೆಗೊಳಿಸುತ್ತಿದ್ದನು.

**ಉತ್ತರಭಾಗದ ಕಥೆ—** ಕೌಟಿಲ್ಯನು ಈ ವಿಚಾರವನ್ನು ಬೇಹಿನವರಿಂದ ತಿಳಿದು ಅದಕ್ಕೆ ತಕ್ಕ ಪ್ರತೀಕಾರೋಪಾಯಗಳನ್ನು ಹೂಡಿ ಚಂದನದಾಸನ ಮನೆಯಲ್ಲಿಡಲ್ಪಟ್ಟು ಗೋಪ್ಯದಲ್ಲಿದ್ದ ರಾಕ್ಷಸನಮುದ್ರೆಯುಂಗುರವನ್ನು ಉಪಾಯಾಂತರದಿಂದ ದೊರಕಿಸಿಕೊಂಡು ತನ್ಮೂಲಕ ರಾಕ್ಷಸನನ್ನು ವಂಚಿಸಿ ಅವನು ಮಾಡಲು ಯೋಚಿಸುವ ಪ್ರತಿ ಉಪಾಯಕ್ಕೂ ವಿರುದ್ಧೋಪಾಯವನ್ನು ಕಲ್ಪಿಸಿ ಕೌಮುದೀಮಹೋತ್ಸವದ ಮೂಲಕ ಚಂದ್ರಗುಪ್ತನಿಗಾಗಬಹುದಾದ ಅಪಾಯವನ್ನು ತಪ್ಪಿಸಿ ಹೇಗಾದರೂ ಅಮಾತ್ಯರಾಕ್ಷಸನನ್ನು ಹಿಡಿಯಲೆಳಸಿ, ರಾಕ್ಷಸನ ಮಿತ್ರನಾದ ಚಂದನದಾಸನ ಮನೆಯಲ್ಲಿರುವ ರಾಕ್ಷಸನ ಪತ್ನೀಪುತ್ರರನ್ನು ಕರೆಯಿಸಿಕೊಂಡರೆ ರಾಕ್ಷಸನು ತಾನಾಗಿಯೇ ಬರುವನೆಂಬ ಉಪಾಯವನ್ನು ಹೂಡಿ ಚಂದನದಾಸನನ್ನು ಕರೆಯಿಸಿ, ರಾಕ್ಷಸನ ಪತ್ನೀಪುತ್ರರನ್ನು ಕಳುಹಿಸಿಕೊಡತಕ್ಕುದೆಂದು ಆಜ್ಞಾಪಿಸಿದುದಕ್ಕೆ ಚಂದನದಾಸನು 'ಪ್ರಾಣವನ್ನಾದರೂ ಕೊಡುವೆನಲ್ಲದೆ ಮಿತ್ರನ ಪತ್ನೀಪುತ್ರರನ್ನು ತಂದೊಪ್ಪಿಸೆನು' ಎಂದುದನ್ನು ಕೇಳಿ ರಾಜಾಜ್ಞೆಯನ್ನು ಮೀರುವವರು ವಧಾರ್ಹರೆಂದು ಕಟ್ಟಪ್ಪಣೆಯನ್ನು ಮಾಡಿ ಚಂದನದಾಸನನ್ನು ವಧ್ಯಸ್ಥಾನಕ್ಕೆ ಒಯ್ಯಲು ಈ ಸಮಾಚಾರವನ್ನು ಅಮಾತ್ಯರಾಕ್ಷಸನು ತಿಳಿದು ಕಡುದುಃಖಿತನಾಗಿ ತಾನು ಈಗ ಹೋಗದಿದ್ದರೆ ಪ್ರಾಣಮಿತ್ರನಾದ ಚಂದನದಾಸನು ಬದುಕನೆಂದು ತಿಳಿದು ಅವನನ್ನು ರಕ್ಷಿಸಲೋಸುಗ ತಾನಾಗಿಯೇ ಚಾಣಕ್ಯನ ಬಳಿಗೆ ಹೋಗಿ ಚಾಣಕ್ಯನಿಂದ ಕೊಂಡಾಡಲ್ಪಟ್ಟವನಾಗಿ ನಿಂತುಕೊಳ್ಳಲು ಚಾಣಕ್ಯನು ಸಂತುಷ್ಟನಾಗಿ ಚಂದನದಾಸ ಮತ್ತು ಮಲಯಕೇತುವಿನ ಪ್ರಾಣಗಳನ್ನುಳುಹಿ ಮಲಯಕೇತುವಿಗೆ ಪಿತ್ರಾರ್ಜಿತರಾಜ್ಯವನ್ನೇ ಕೊಟ್ಟು ಸುಖದಲ್ಲಿ ಬಾಳೆಂದು ಹೇಳಿಕಳುಹಿಸಿ ಅಮಾತ್ಯರಾಕ್ಷಸನನ್ನು ಮಂತ್ರಿಪದದಲ್ಲಿರಿಸಿ ಚಂದ್ರಗುಪ್ತನಿಗೆ ಸಾಮ್ರಾಜ್ಯಪಟ್ಟಾಭಿಷೇಕವನ್ನು ಬೆಳೆಯಿಸಿ ಚಂದ್ರಗುಪ್ತನನ್ನು ಸಂತಸಗೊಳಿಸಿ ತಾನೂ ಸಂತಸಗೊಂಡನು.

ನಂದವಂಶನಿರ್ಮೂಲನ ಹೊರತು ಬಿಚ್ಚಿಹೋದ ಮುಡಿಯನ್ನು ಗಂಟಿಕ್ಕೆನೆಂದು ಚಾಣಕ್ಯನು ಹೇಳಿದುದು ವೇಣೀಸಂಹಾರದಲ್ಲಿನ ದ್ರೌಪದಿಯ ಪ್ರತಿಜ್ಞೆಯನ್ನು ಜ್ಞಾಪಕಕೊಡುವುದಾಗಿದೆ.

ಪಾತ್ರಪ್ರಯೋಜನ ಮತ್ತು ಅದರಿಂದ ತಿಳಿಯಬಹುದಾದ ನೀತಿ:—

ನಂದರ ಪಾತ್ರ:— ರಾಜರಾದವರು ಮದಾಂಧತೆಯಿಂದ ವಿಚಾರಹೀನರಾಗಿ ದೇವಬ್ರಾಹ್ಮಣರನ್ನು ಅಪಮಾನಗೊಳಿಸಕೂಡದೆಂಬುದನ್ನೂ—

ಚಂದ್ರಗುಪ್ತ:— ರಾಜನಾದವನು ಗುರುಹಿರಿಯರ ಭಕ್ತನೂ ಸನ್ಮಂತ್ರಿಗಳಲ್ಲಿ ನಂಬಿಕೆ ಇಡಲ್ಪಟ್ಟವನೂ ಸೇವಾಜನ, ಪರಿಜನ, ಪುರಜನರ ತಾರತಮ್ಯವನ್ನರಿತು ತಕ್ಕಂತೆ ಗೌರವಿಸಿ ರಾಜ್ಯಸೂತ್ರವನ್ನು ನಡೆಯಿಸತಕ್ಕವನೂ ಬೇಹಿನವರ ಮಾತಿನಲ್ಲಿ ವಿಮರ್ಶಪರನೂ ಆಲಸ್ಯದೂರನೂ ಆಗಿ ದೂರಾಲೋಚನಾಪರನೂ ಆರ್ತತ್ರಾಣಪರಾಯಣನೂ ಅಬಲಾಜನರಕ್ಷಕನೂ ಮೇಧಾವಿಯೂ ಇಂಗಿತಜ್ಞನೂ ಆಗಿರಬೇಕೆಂಬುದನ್ನೂ—

ಅಮಾತ್ಯರಾಕ್ಷಸ:— ಮಂತ್ರಿಯಾದವನು ಅಪ್ರತಿಹತವಾದ ರಾಜಭಕ್ತಿಯುಳ್ಳವನೂ ವ್ಯವಹಾರಸಮರ್ಥನೂ ರಾಜಕಾರ್ಯನಿರ್ವಾಹಕನೂ ಶಾರೀರಿಕ ಸುಖದುಃಖಗಳಿಗೆ ಮನಸೋಲದವನೂ ಆಗಿರಬೇಕೆಂಬುದನ್ನೂ—

ಚಂದನದಾಸ:— ಮೈತ್ರಿಗಿಂತಲೂ ಹಿರಿದಾದುದು ಯಾವುದೂ ಇಲ್ಲವೆಂದೂ ಪರಹಿತವ್ರತವೇ ಉಪಾದೇಯವಾದುದೆಂದೂ ಯಾವಾಗಲೂ ಮಿತ್ರದ್ರೋಹವನ್ನೆಣಿಸಲೇಕೂಡದೆಂಬುದನ್ನೂ—

ಪರಿಜನಸೇವಕರು ಮತ್ತು ಇತರರು— ಇಂದುಶರ್ಮಾ, ಕ್ಷಪಣಕಾದಿಗಳ ವಿಚಾರದಲ್ಲಿ ಧನಲುಬ್ಧರೂ ಇಂದ್ರಿಯಲುಬ್ಧರೂ ಆಗದೆ ಸ್ವಾಮಿಕಾರ್ಯಧುರಂಧರರಾಗಿ ಧರ್ಮಮಾರ್ಗೈಕಪರಾಯಣರಾಗಿರಬೇಕೆಂಬುದನ್ನೂ—

ಮಲಯಕೇತು:—ಇತರರ ಪೊಳ್ಳುಮಾತಿಗೆ ಕಿವಿಗೊಡದವನೂ ವಿಚಾರಹೀನತೆಯಿಂದ ಮನಬಂದಂತೆ ನಡೆಯದವನೂ ಡಂಭಾಚಾರಕ್ಕೆ ಮನಸೋಲದವನಾಗಿರಬೇಕೆಂಬುದನ್ನೂ—

ಚಾಣಕ್ಯ:— ಸ್ವಾರ್ಥತ್ಯಾಗ, ಪರಹಿತವ್ರತ, ಬ್ರಹ್ಮಕರ್ಮಾನುಷ್ಠಾನ ಮೇಧಾವಿಯಾಗಿರುವ ಬ್ರಾಹ್ಮಣನ ಬಲವು ಸರ್ವಶ್ರೇಷ್ಠವಾದುದೆಂದೂ ಕ್ಷತ್ರಿಯ ಬಲವು ಅದಕ್ಕೆ ಎದುರುನಿಲ್ಲದೆಂದೂ ಅಂತಹ ಬ್ರಹ್ಮಬಲದ ತೇಜೋವಧೆಯಾಗುವುದಾದರೆ ಎಂತಹ ಬಲಿಷ್ಠರಾಗಲೀ ರಾಜರಾಗಲೀ ಧನಕನಕವಾಹನಾದಿ ಸಂಪತ್ತುಗಳ ನೂರ್ಮಡಿಯಾಗಲೀ ಕ್ಷಣಾರ್ಧದಲ್ಲಿ ಚೂರ್ಣೀಕೃತವಾಗುವುದೆಂದೂ ಬ್ರಹ್ಮಬಲಪಾಲನವೇ ಧರ್ಮಪಾಲನವೆಂದೂ "ಬ್ರಹ್ಮದ್ವೇಷಂ ನ ಕಾರಯೇತ್" ಎಂಬಂತೆ ಯಾರೇ ಆಗಲಿ ಬ್ರಹ್ಮದ್ವೇಷವನ್ನು ಮಾಡಲೇಕೂಡದೆಂಬುದನ್ನೂ ಬೋಧಿಸುವುದಾಗಿದೆ.

ಪ್ರಬಲ ಶತ್ರುವಾಗಿದ್ದರೂ ಕೂಡ ಲೆಕ್ಕಿಸದೆ ಅಮಾತ್ಯರಾಕ್ಷಸನ ಸ್ವಾಮಿಭಕ್ತಿಯನ್ನು ಮೆಚ್ಚಿ ಕೊಂಡಾಡುವುದು ಚಾಣಕ್ಯನ ಗುಣಗ್ರಹಣಪರಿಪಾಟವನ್ನು ವ್ಯಕ್ತಗೊಳಿಸುವುದು.

ಐಶ್ವರ್ಯಾದನಪೇತಮೀಶ್ವರಮಯಂ ಲೋಕೋಽರ್ಥತಃ ಸೇವತೇ
ತಂ ಗಚ್ಛಂತ್ಯನು ಯೇ ವಿಪತ್ತಿಷು ಪುನಸ್ತೇ ತತ್ಪ್ರತಿಷ್ಠಾಶಯಾ ।
ಭರ್ತುರ್ಯೇ ಪ್ರಲಯೇಽಪಿ ಪೂರ್ವಸುಕೃತಾಸಂಗೇನ ನಿಸ್ಸಂಗಯಾ
ಭಕ್ತ್ಯಾ ಕಾರ್ಯಧುರಂ ವಹಂತಿ ಬಹವಸ್ತೇ ದುರ್ಲಭಾಸ್ತ್ವಾದೃಶಾಃ॥೧—೧೪॥

ಭಲೆ! ಅಮಾತ್ಯರಾಕ್ಷಸ!!

ಲೋಕದಲ್ಲಿ ಕೆಲವರು ಹಣದಾಸೆಗಾಗಿ ರಾಜನನ್ನು ಸೇವಿಸುವರು. ಪ್ರಭುವಾದವನು ಒಂದುವೇಳೆ ತಾತ್ಕಾಲಿಕ ಆಪತ್ತಿನೊಳಗಿದ್ದರೂ ಕಾಲಾಂತರದಲ್ಲಿಯಾದರೂ ಪುನಃ ಸಂಪತ್ತುಳ್ಳವನಾಗಿ ತಮ್ಮನ್ನು ಕಾಪಾಡುವನೆಂಬ ಆಶೆಯಿಂದ ಕೆಲವರು ಸೇವಿಸುವರು. ನೀನಾದರೋ ನಿನ್ನ ಸ್ವಾಮಿಯು ನಿರ್ಮೂಲನಾಗಿ ಹೋಗಿದ್ದರೂ ಕೂಡ ಅವನ ಮೇಲಣ ಭಕ್ತ್ಯತಿಶಯದಿಂದ ನಿನ್ನ ಸರ್ವಸ್ವವನ್ನೂ ಪರಿತ್ಯಾಗಮಾಡಿ ಪ್ರತಿಕ್ರಿಯೆಯನ್ನೆಣಿಸುತ್ತಿರುವ ನಿನ್ನಂತಹ ಉತ್ತಮಸ್ವಾಮಿಭೃತ್ಯರು ದುರ್ಲಭರು.

ನಂದಮೂಲೋತ್ಪಾಟನಾನಂತರ ಚಾಣಕ್ಯನು ಹೇಳುವುದು—

ಶ್ಯಾಮೀಕೃತ್ಯಾನನೇಂದೂನರಿಯುವತಿದಿಶಾಂ ಸಂತತೈಃ ಶೋಕಧೂಮೈಃ
ಕಾಮಂ ಮಂತ್ರಿದ್ರುಮೇಭ್ಯೋ ನಯಪವನಹುತಂ ಮೋಹಭಸ್ಮ ಪ್ರಕೀರ್ಯ ।
ದಗ್ಧ್ವಾ ಸಂಭ್ರಾಂತಪೌರದ್ವಿಜಗಣರಹಿತಾನ್ ನಂದವಂಶಪ್ರರೋಹಾನ್
ದಾಹ್ಯಾಭಾವಾನ್ನ ಖೇದಾಜ್ಜ್ವಲನ ಇವ ವನೇ ಶಾಮ್ಯತಿ ಕ್ರೋಧವಹ್ನಿಃ॥೧—೧೧॥

ಈ ಶ್ಲೋಕದಲ್ಲಿ ಚಾಣಕ್ಯನ ಕ್ರೋಧವು ಅರಣ್ಯದ ಬೆಂಕಿ(ಕಾಡ್ಗಿಚ್ಚಿ)ಗೆ ಹೋಲಿಸಲ್ಪಟ್ಟು ವರ್ಣಿತವಾಗಿರುವುದು—

ಕಾಡುಗಿಚ್ಚು ದಟ್ಟವಾಗಿ ಬರುವ ಹೊಗೆಯ ಸಮೂಹದಿಂದ ನಾಲ್ಕು ದಿಕ್ಕುಗಳಲ್ಲಿಯೂ ಪ್ರಸರಿಸಿ ದಿಗಂಗನೆಯರ ಮುಖಕಮಲವನ್ನು ಕಪ್ಪುಮಾಡಿ, ಅರಣ್ಯದ ಗಾಳಿಯಿಂದ ಜ್ವಲಿತವಾಗಿ ಅಲ್ಲಿರುವ ಮರಗಳನ್ನೆಲ್ಲ ಸುಟ್ಟು ಬೂದಿಮಾಡಿ ಆ ಮರಗಳಲ್ಲಿ ಆಶ್ರಯವಾಗಿರುವ ಪಕ್ಷಿಗಳಿಗೆ ಮಾತ್ರ ಯಾವ ತೊಂದರೆಯನ್ನೂ ಕೊಡದೆ, ಇನ್ನು ಸುಡುವುದಕ್ಕೆ ಅಲ್ಲಿ ಏನೂ ಇಲ್ಲವಾದುದರಿಂದ ನಂದಿಹೋಗುವುದು. ಅದರಂತೆಯೇ, ಚಾಣಕ್ಯನ "ಕ್ರೋಧ"ವೆಂಬ ದಾವಾನಲವು ನಿರಂತರವಾಗಿ ವೃದ್ಧಿಹೊಂದುತ್ತಿರುವ "ಶೋಕ"ವೆಂಬ ಹೊಗೆಯಿಂದ "ಶತ್ರುಸ್ತ್ರೀ"ಯರೆಂಬ ದಿಗಂಗನೆಯರ ಮುಖಕಮಲವನ್ನು ಕಪ್ಪುಮಾಡಿ "ನೀತಿ"ಎಂಬ

ಗಾಳಿಯಿಂದ ವರ್ಧಿತವಾಗಿ "ಮಂತ್ರಿ"ಗಳೆಂಬ ಮರಗಳನ್ನು ಸುಟ್ಟು "ಮೋಹ" ವೆಂಬ ಭಸ್ಮವನ್ನು ಚೆಲ್ಲಿ ನಂದವಂಶದ ಬೀಜಗಳನ್ನೆಲ್ಲ ನಿರ್ಮೂಲವಾಗಿ ದಹಿಸಿ ಪುರಜನರಿಗೆ ಮಾತ್ರ ಏನೂ ಉಪದ್ರುವವಾಗದಂತೆ ಮಾಡಿ ಇನ್ನು ಸುಡುವುದಕ್ಕೆ ಏನೂ ಇಲ್ಲದುದರಿಂದ ಶಾಂತಿಯನ್ನೈದುತ್ತಿರುವುದು.

> ಶೋಚಂತೋಽವನತೈರ್ನರಾಧಿಪಭಯಾದ್ಧಿಕ್ಕಷ್ಟಗರ್ಭೈರ್ಮುಖೈಃ
> ಮಾಮಗ್ರಾಸನತೋಽವಕೃಷ್ಟಮವಶಂ ಯೇ ದೃಷ್ಟವಂತಃ ಪುರಾ ।
> ತೇ ಪಶ್ಯಂತಿ ತಥೈವ ಸಂಪ್ರತಿ ಜನಾ ನಂದಂ ಮಯಾ ಸಾನ್ವಯಂ
> ಸಿಂಹೇನೇವ ಗಜೇಂದ್ರಮದ್ರಿಶಿಖರಾತ್ಸಿಂಹಾಸನಾತ್ಪಾತಿತಂ ॥ ೧—೧೨ ॥

ಆದಿನ ಭೋಜನಶಾಲೆಯಲ್ಲಿ ಅಗ್ರಾಸನದ ಮೇಲೆ ಕುಳಿತಿದ್ದ ನನ್ನನ್ನು ರಾಜಸೇವಕರು (ಭಯದಿಂದ) ಎಳೆದುದನ್ನು ಯಾರು ಯಾರು ನೋಡಿದ್ದರೋ ಅವರೇ ಈಗ–ಸಿಂಹವು ಗಜೇಂದ್ರನನ್ನು ಪರ್ವತಶಿಖರದಿಂದ ಉರುಳಿಸುವಹಾಗೆ ನಂದನನ್ನು ಸಿಹ್ಮಾಸನದಿಂದ ತಳ್ಳಿಸಿರುವುದನ್ನು ನೋಡಲಿ.

ಚಾಣಕ್ಯನಿಂದ ಕರೆಯಿಸಿಕೊಳ್ಳಲ್ಪಟ್ಟ ಬಾಗುರಾಯಣನು ಬಹುಕಂಟಕ ಮಧ್ಯವರ್ತಿಯಾದ ಚಂದ್ರಗುಪ್ತನ ರಾಜ್ಯವು ಸ್ಥಿರವಾಗಿ ನಿಲ್ಲಬೇಕಾದರೆ ಅಮಾತ್ಯ ರಾಕ್ಷಸನನ್ನು ಹೊರತು ಮತ್ತಾರಿಂದಲೂ ಸಾಗದೆಂದಾಲೋಚಿಸಿ ರಾಕ್ಷಸನನ್ನು ಕರೆಯಿಸಿಕೊಳ್ಳಬೇಕೆಂದು ಆಲೋಚಿಸುತ್ತಿರುವ ಚಾಣಕ್ಯನ ತಂತ್ರವನ್ನು ತಿಳಿದ ಬಾಗುರಾಯಣನ ಹೇಳಿಕೆ—

> ಮುಹುರ್ಲಕ್ಷ್ಯೋದ್ಭೇದಾ ಮುಹುರಧಿಗಮಾಭಾವಗಹನಾ
> ಮುಹುಃ ಸಂಪೂರ್ಣಾಂಗೀ ಮುಹುರತಿಕೃಶಾ ಕಾರ್ಯವಶತಃ ।
> ಮುಹುರ್ನಶ್ಯದ್ಬೀಜಾ ಮುಹುರಪಿ ಬಹುಪ್ರಾಪಿತಫಲೇ
> ತ್ಯಹೋ ಚಿತ್ರಾಕಾರಾ ನಿಯತಿರಿವ ನೀತಿರ್ನಯವಿದಃ ॥ ೫—೩ ॥

ಅಹಹ! ಆಚಾರ್ಯಚಾಣಕ್ಯನ ರಾಜತಂತ್ರವು ಸ್ವಲ್ಪಕಾಲ ಸೂಕ್ಷ್ಮವಾಗಿ ಕಾಣಿಸಿ ಕೂಡಲೇ ಕೆಲವುಕಾಲ ಅಂತರ್ಹಿತವಾಗಿ ಮತ್ತೊಂದು ಸಮಯದಲ್ಲಿ ಬೃಹದಾಕಾರವನ್ನು ಹೊಂದಿ ಮಗುದೊಂದು ಸಮಯದಲ್ಲಿ ಕಾರ್ಯಾಂತರದಿಂದ ಕೃಶತ್ವವನ್ನು ಹೊಂದಿ ಉತ್ತರಕ್ಷಣದಲ್ಲಿಯೇ ಭಗ್ನೋದ್ಯೋಗವುಳ್ಳಂತೆ ಭಾಸವಾಗಿ ಪರ್ಯವಸಾನದಲ್ಲಿ ಬಹುಫಲಪ್ರಾಪ್ತಿಯಿಂದೊಡಗೂಡಿ ಅಘಟಿತಘಟನಾ ಸಾಮರ್ಥ್ಯವುಳ್ಳ ದೈವಶಕ್ತಿಯಂತೆ ಭೇದಿಸಲಶಕ್ಯವಾಗಿರುವುದು.

ಮುದ್ರಾರಾಕ್ಷಸನಾಟಕ ಮತ್ತು ಪೂರ್ವಕಥೆಯನ್ನೋದುವ ಸರಳ ಹೃದಯರು ಚಾಣಕ್ಯನು ಬ್ರಾಹ್ಮಣನಾದರೂ ಪ್ರಾಣಹತ್ಯಾಶೀಲನೆಂದೂ ಮೇಧಾವಿಯಾದರೂ ಧೂರ್ತನೆಂದೂ ಚತುರನಾದರೂ ಕಪಟಿಯೆಂದೂ ಇಷ್ಟೇ

ಮೊದಲಾಗಿ ಮನಸೊಂದು ಚಾಣಕ್ಯನನ್ನು ದೂಷಿಸಬಹುದು. ದುಷ್ಟನಿಗ್ರಹ ಶಿಷ್ಟಪರಿಪಾಲನವಾಡಬೇಕೆಂಬುದೇ ಚಾಣಕ್ಯನ ಸತ್ಸಂಕಲ್ಪವಾಗಿದ್ದಿತು. ಅದ ರಂತೆ ದುಷ್ಟರಾದ ನವನಂದರನ್ನು ನಿಗ್ರಹಿಸಿ ಶಿಷ್ಟನಾದ ಚಂದ್ರಗುಪ್ತನಿಗೆ ರಾಜ್ಯಾಭಿಷೇಕವನ್ನು ಮಾಡಿ ಸ್ವಾಮಿಭಕ್ತನಾದ ಮತ್ತು ರಾಜ್ಯಸೂತ್ರವನ್ನು ಸುಗಮವಾಗಿ ನಡೆಯಿಸಲು ದಕ್ಷನಾದ ಅಮಾತ್ಯರಾಕ್ಷಸನು ಶತ್ರುವಾಗಿದ್ದರೂ ಕೂಡ ಧರ್ಮಮಾರ್ಗನಿರತನಾದುದರಿಂದ ಆವನನ್ನೇ ಮಂತ್ರಿಪದವಿಗೆ ಯೋಜಿಸಿ ದನು. ಹೀಗೆ ತನ್ನ ಸಂಕಲ್ಪಸಿದ್ಧಿಗಾಗಿ ಬೇಕುಬೇಕಾದುದನ್ನೆಲ್ಲವನ್ನೂ ಮಾಡ ಬೇಕಾಯಿತು. ರಾಜತಂತ್ರವೇ ಅಂತಹುದಾಗಿರುವುದು. ಪ್ರಪಂಚದ ಮೂಲವು ಧರ್ಮವಾಗಿರುವುದು. ಅಂತಹ ಧರ್ಮೋದ್ಧಾರಕ್ಕೆ ದುಷ್ಟನಿಗ್ರಹ ಶಿಷ್ಟಪರಿ ಪಾಲನವು ಅವಶ್ಯಕವೆಂಬುದು ಶಿಕ್ಷಿತರ ಮತವೆಂದರೆ ಅತ್ಯುಕ್ತಿಯಾಗದು.

## ಮುರಾರಿ

ಇವನನ್ನು "**ಭಟ್ಟಮುರಾರಿ**" ಎಂದೂ

> **ಭೂಯಸ್ತರಾಣಿ ಯದಮೂನಿ ತಮಸ್ವಿನೀಷು**
> **ಜ್ಯೋತ್ಸ್ನೀಷು ಚ ಪ್ರವಿರಳಾನಿ ತತಃ ಪ್ರತೀಮಃ**
> **ಸಂಧ್ಯಾನಲೇನ ಭೃಶಮಂಬರಮೂಷಿಕಾಯಾ**
> **ಮಾವರ್ತಿಕೈರುಡುಭಿರೇವ ಕೃತೋಯಮಿಂದುಃ ॥ ೨—೮೧ ॥**

ಎಂದು ಚಂದ್ರವರ್ಣನೆಯನ್ನು ಮಾಡಿರುವುದರಿಂದ ಇವನನ್ನು '**ಇಂದುಮುರಾರಿ**' ಎಂದೂ ಕರೆಯುವರು.

> "ಅಸ್ತಿ ಮೌದ್ಗಲ್ಯಗೋತ್ರಸಂಭವಸ್ಯ ಮಹಾಕವೇರ್ಭಟ್ಟ'ಶ್ರೀವರ್ಧ ಮಾನ'ತನುಜನ್ಮನಃ 'ತಂತುಮತೀ'ನಂದನಸ್ಯ'**ಮುರಾರೇಃ**'ಕೃತಿಃ ಅಭಿನವಂ '**ಅನರ್ಘರಾಘವಂ**'ನಾಮ ನಾಟಕಂ"

ಎಂದು ಹೇಳಿರುವುದರಿಂದ ಇವನು ಮೌದ್ಗಲ್ಯಗೋತ್ರದವನೂ ತಂತುಮತೀ ಮತ್ತು ವರ್ಧಮಾನರಲ್ಲಿ ಜನ್ಮಿಸಿದವನೂ "ಅನರ್ಘರಾಘವ" ಎಂಬ ನಾಟಕ ವನ್ನು ಬರೆದವನೂ ಎಂದು ಗೊತ್ತಾಗುವುದು.

ಇವನು ಮಹಾವೈಯ್ಯಾಕರಣನೂ ಶಬ್ದನಿಷ್ಣಾತನೂ ನೈಯಾಯಿಕನೂ ಆಗಿದ್ದುದಾಗಿ ತಿಳಿಯಬರುವುದು.

ಪಂಡಿತಪ್ರಕಾಂಡರು ಭಟ್ಟಮುರಾರಿಯನ್ನು—

**ದೇವೀಂ ವಾಚಮುಪಾಸತೇ ಹಿ ಬಹವಃ ಸಾರಂ ತು ಸಾರಸ್ವತಂ**
**ಜಾನೀತೇ ನಿತರಾಂ ಅಸೌ ಗುರುಕುಲಕ್ಲಿಷ್ಟೋ ಮುರಾರಿಃ ಕವಿಃ** । ಎಂದೂ

**ಮುರಾರಿಪದಚಿಂತಾಯಾಂ ಭವಭೂತೇಸ್ತು ಕಾ ಕಥಾ** । ಎಂದೂ

**“ಮುರಾರೇಃ ತೃತೀಯಃ ಪಂಥಾಃ”**

ಎಂದೂ ಕೊಂಡಾಡಿರುವರು.

**ಕಾಲವಿಚಾರ:**—ಕ್ರಿ. ಶ. ೮೫೫–೮೮೪ ರ ವರೆಗೆ ಆಳಿದ ಅವಂತಿವರ್ಮನ ಆಸ್ಥಾನಪಂಡಿತನಾದ ಮಹಾಕವಿ ರತ್ನಾಕರನು ಅನರ್ಘರಾಘವದ ಶ್ಲೋಕಗಳನ್ನುದಹರಿಸಿ ಕೊಂಡಿರುವುದರಿಂದ ಈ ಕವಿಯು ರತ್ನಾಕರನಿಗಿಂತ ಪ್ರಾಚೀನನೆಂದೂ ಕ್ರಿ.ಶ. ೮ ನೆಯ ಶತಮಾನದ ಪೂರ್ವಾರ್ಧದ ಕವಿಗಳಾರೂ ಮುರಾರಿಯ ಹೆಸರನ್ನು ಹೇಳದೆ ಇರುವುದರಿಂದ ಇವನು ಕ್ರಿ. ಶ. ಎಂಟನೆಯ ಶತಮಾನದ ಉತ್ತರಭಾಗದವನೆಂದೂ ಹೇಳಬಹುದು.

**ಅನರ್ಘರಾಘವನಾಟಕ**ವು ಏಳು ಅಂಕಗಳುಳ್ಳದಾಗಿ ರೌದ್ರ, ಭೀಭತ್ಸ, ಭಯಾನಕರಸಗಳಿಂದ ಕೂಡಿಕೊಂಡಿರುವುದು. ಇದರಲ್ಲಿ ವಿಶ್ವಾಮಿತ್ರನು ಯಜ್ಞಸಂರಕ್ಷಣಾರ್ಥವಾಗಿ ರಾಮಲಕ್ಷ್ಮಣರನ್ನು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದುದನ್ನು ಮೊದಲುಮಾಡಿಕೊಂಡು ರಾಮನು ರಾವಣವಧಾನಂತರ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದವರೆಗೆ ನಡೆದ ಕಥಾಭಾಗವನ್ನು ತೆಗೆದುಕೊಂಡು ರೂಪಕವನ್ನಾಗಿ ನಿರೂಪಿಸಿರುವನು. ಶೈಲಿಯು ಪ್ರೌಢತರವಾದುದಾಗಿ ಅರ್ಥಗಾಂಭೀರ್ಯವೂ ಶಬ್ದಗೌರವವೂ ಚೆನ್ನಾಗಿ ಕಾದುಕೊಳ್ಳಲ್ಪಟ್ಟಿರುವುದಾದುದರಿಂದ ಇವನು ತನ್ನಗ್ರಂಥದ ವಿಚಾರವಾಗಿ—

**ಯೇ ಶಬ್ದಶಾಸ್ತ್ರನಿಷ್ಣಾತಾಃ ಯೇ ಶೀಲಿತನಿಘಂಟವಃ ।**
**ತೇಷಾಮೇವಾಧಿಕಾರೋಽಸ್ತಿ ಮುರಾರಿಕೃತನಾಟಕೇ ॥**

ಎಂದು ಹೇಳಿಕೊಂಡಿರುವನು.

ಕಥಾಪ್ರಾರಂಭದಲ್ಲಿ ಕವಿಯು ಸೂತ್ರಧಾರನಿಂದ ನೀತಿಬೋಧಕವಾದ—

**ಯಾಂತಿ ನ್ಯಾಯಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ ।**
**ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥**

ಎಂಬ ಶ್ಲೋಕವನ್ನು ಹೇಳಿಸಿ ನ್ಯಾಯಮಾರ್ಗಪ್ರವರ್ತಕನಾದ ಶ್ರೀರಾಮನಿಗೆ ತಿರ್ಯಕ್ಪ್ರಾಣಿಗಳು ಕೂಡಾ ಸಹಾಯವಾದುವು; ಅನ್ಯಾಯಮಾರ್ಗಗಾಮಿ

ಯಾದ ದಶಶಿರನಿಗೆ ವಿಭೀಷಣನು ಸಹೋದರನಾದರೂ ಹಿರಿಯನೆಂಬ ಮಮತೆಯನ್ನೂ ಗೌರವವನ್ನೂ ತೋರಿಯುವಂತಾದುದು ಎಂಬುದರಮೂಲಕ ಮುಂದಣ ಕಥಾಸೂಚನೆಯನ್ನು ಮಾಡಿರುವನು. ಇವನ ನಾಟಕದಲ್ಲಿ ಸ್ವಭಾವಾತಿರೇಕಗಳಾದ ಕೆಲವು ವರ್ಣನೆಗಳು ಅಲ್ಲಲ್ಲಿ ದೊರೆಯುವುವಲ್ಲದೆ ಶಬ್ದಸಾಧನಕ್ರಮಗಳು ಕೂಡ ಹಲವುಕಡೆ ಗಡುಸಾಗಿರುವುವು. ಇದರಲ್ಲಿ ನಾಟಕಕಲಾಕೌಶಲ್ಯವು ಹೆಚ್ಚಾಗಿ ಇರುವಂತೆ ತೋರುವುದಿಲ್ಲ.

ಈವಿಷಯವಾಗಿ ಪ್ರೊ. ಎಮ್. ಕೃಷ್ಣಮಾಚಾರ್ಯರವರೂ ಈ ನಾಟಕದಲ್ಲಿ ಕಲಾಕೌಶಲವಿಲ್ಲವೆಂದೂ ಚೆನ್ನಾಗಿ ಅಭಿನಯಿಸಲಾಗದೆಂದೂ ಮುಂತಾಗಿ ಹೇಳಿರುವರು.*

ಇದರಿಂದ ಕೆಲವು ಶ್ಲೋಕಗಳನ್ನುದ್ಧರಿಸುವೆವು—

ಉದಯವರ್ಣನೆ—

> ಜಾತಾಃ ಪಕ್ವಪಲಾಂಡುಪಾಂಡುಮಧುರಚ್ಛಾಯಾಕಿರಸ್ತಾರಕಾಃ
> ಪ್ರಾಚೀಮಂಕುರಯಂತಿ ಕಾಞ್ಚನರುಚೋ ರಾಜೀವಜೀವಾತವಃ |
> ಲೂತಾತಂತುವಿತಾನವರ್ತುಲಮಿತೋ ಬಿಂಬಂ ದಧಚ್ಚಂದ್ರಮಾಃ
> ಪ್ರಾತಃ ಪ್ರೋಷಿತರೋಚಿರಂಬರತಲಾದಸ್ತಾಚಲಂ ಚುಂಬತಿ || ೨—೨ ||

ಸೂರ್ಯವರ್ಣನೆ—

> ಪ್ರಾಚೀವಿಭ್ರಮಕರ್ಣಿಕಾಃ ಕಮಲಿನೀಸಂವರ್ತಿಕಾಸ್ಸಂಪ್ರತಿ
> ದ್ವೇತಿಸ್ತೋರಮಣೀಯಮಂಬರಮಣೇರ್ದ್ಯಾಮುಚ್ಚರಂತೇ ರುಚಃ |
> ಸ್ತೋಕೋಚ್ಛ್ವಾಸಮಪೀದಮುತ್ಸುಕತಯಾ ಸಂಭೂಯ ಕೋಶಾದ್ಬಹಿಃ
> ನಿಷ್ಕ್ರಾಮದ್ಭ್ರಮರೌಘಸಂಭ್ರಮವಶಾದಂಭೋಜಮುಜ್ಜೃಂಭತೇ||೨-೪||

ಶಿವಧನುಸ್ಸನ್ನು ಮುರಿದುದಕ್ಕಾಗಿ ಕೋಪಗೊಂಡ ಪರಶುರಾಮನಿಗೆ ಶ್ರೀರಾಮನು ಹೇಳುವುದು.

> ಬಾಲಸ್ವಭಾವಸುಲಭೇನ ಕುತೂಹಲೇನ
> ಕೃಷ್ಟಂ ಧನುರ್ಭಗವತೋ ವೃಷಭಧ್ವಜಸ್ಯ |
> ತತ್ರಾನುಷಂಗಿಕಮಮಂಗಳವಿಾದೃಶಂ ತು
> ಸಂವೃತ್ತಮತ್ರ ನ ಮಯಾ ಗಣಿತಸ್ತ್ವಮಾಸೀಃ || ೪—೩೧ ||

---

* Prof. M. Krishnamacharya's History of Classical Sanskrit Literature P. 98.

ಎಲ್ಲೈ! ಬಾಲಯೋಗ್ಯವಾದ ಚಾಪಲ್ಯದಿಂದ ಆ ಶಿವಧನುಸ್ಸನ್ನೆಳೆದಾಗ ಪ್ರಸಂಗವಶಾತ್ ಧನುರ್ಭಂಗವಾಯಿತು. ಇದಕ್ಕಾಗಿ ನನ್ನತಪ್ಪನ್ನು ಮನ್ನಿಸಿ ರಕ್ಷಿಸಬೇಕೆಂದು ಅಪರಾಧಿಯಂತೆ ನಿನ್ನನ್ನು ಪ್ರಾರ್ಥಿಸುವುದಿಲ್ಲ.



## ದಾಮೋದರಗುಪ್ತ

ಇವನು ಬ್ರಾಹ್ಮಣನು. ನೀತಿಯನ್ನು ಚೆನ್ನಾಗಿ ತಿಳಿದವನು. ಕಾಶ್ಮೀರ ರಾಜನಾಗಿದ್ದ ಜಯಾಪೀಡ*ನ ಆಸ್ಥಾನಮಂತ್ರಿಯಾಗಿ ಇದ್ದನು. ಬಲಿಚಕ್ರವರ್ತಿಯು ಶುಕ್ರಾಚಾರ್ಯನನ್ನು ಮಂತ್ರಿಪದಕ್ಕೇರ್ಪಡಿಸಿಕೊಂಡಿದ್ದ ಹಾಗೆ ಜಯಾಪೀಡನು ದಾಮೋದರಗುಪ್ತನನ್ನು ಮಂತ್ರಿಯಾಗಿಟ್ಟುಕೊಂಡಿದ್ದನೆಂದೂ ಈತನ ಬಳಿ ವಾಮನಪಂಡಿತನೇ ಮೊದಲಾದ ಅನೇಕ ವಿದ್ವನ್ಮಂತ್ರಿಗಳೂ ಮನೋರಥ, ಶಂಖದತ್ತ, ಚಟಕ, ಸಂಧಿಮಂತನೇ ಮೊದಲಾದವರೂ ಇದ್ದುದಾಗಿ—

> ಸ "ದಾಮೋದರಗುಪ್ತಾ"ಖ್ಯಂ ಕುಟ್ಟನೀಮತಕಾರಿಣಂ |
> ಕವಿಂ ಕವಿಂ ಬಲಿರಿವ ಧುರ್ಯಂ ಧೀಸಚಿವಂ ವ್ಯಧಾತ್ ||
> ಮನೋರಥಶ್ಶಂಖದತ್ತಶ್ಚಟಕಸ್ಸಂಧಿಮಾಂಸ್ತಥಾ |
> ಬಭೂವುಃ ಕವಯಸ್ತಸ್ಯ ವಾಮನಾದ್ಯಾಶ್ಚ ಪಂಡಿತಾಃ ||
>
> —ರಾಜತರಂಗಿಣೀ ೪. ೪೮೮—೯೬.

ಎಂಬ ಶ್ಲೋಕದಿಂದ ತಿಳಿಯಬರುತ್ತದೆ. ಚಾರಿತ್ರಶೋಧಕರು ಇದರಂತೆ ಶೋಧಿಸಿ ಜಯಾಪೀಡನು ಕ್ರಿ. ಶ. ೭೫೫—೭೮೭ ರ ವರೆಗೆ ಆಳಿದುದಾಗಿ ಗೊತ್ತುಮಾಡಿರುವದರಿಂದ ಇವನ ಸಮಕಾಲಿಕನಾದ ದಾಮೋದರಗುಪ್ತನೂ ಕ್ರಿ. ಶ. ಎಂಟನೆಯ ಶತಮಾನದವನೆಂಬುದು ಸ್ಪಷ್ಟವು.

ಇವನು ಬರೆದಿರುವ "**ಕುಟ್ಟನೀಮತ**" †ಎಂಬ ಕಾವ್ಯವು ಹೊರತು ಮತ್ತಾವುದೂ ಕಂಡುಬರುವುದಿಲ್ಲ. ಇದೂ ಅಲ್ಲಲ್ಲಿ ಜೀರ್ಣವಾಗಿ ಹೋಗಿ

---

* ಇವನನ್ನು ಜಯಾದಿತ್ಯನೆಂದೂ ಕರೆಯುವರು.

† ಡಾ. ಪೀಟರ್ಸ್ನ್ ಸಾಹೇಬರವರು ಇದರ ತಾಳವಾಲೆಯ ಪ್ರತಿಯೊಂದನ್ನು ದೊರಕಿಸಿಕೊಂಡು ಅದು ಜೀರ್ಣವಾಗಿ ಅಸಮಗ್ರವಾಗಿದ್ದರೂ ಕೂಡ ಇಂತಹ ದುರ್ಲಭವಾದ ಪ್ರಾಚೀನ ಗ್ರಂಥವು ನಾಶವಾಗುವುದೆಂದು ಅಚ್ಚುಹಾಕಿಸಿ ಪ್ರಚುರಪಡಿಸಿದಂತೆಯೂ ತಾಲಪತ್ರದಲ್ಲಿ 'ಶಂಭಳೀಮತ'ವೆಂದು ಇರುವುದೆಂದೂ ಶಂಭಳೀ ಶಬ್ದವು ಕುಟ್ಟನೀಶಬ್ದದ ಪರ್ಯಾಯವೆಂದೂ ತಿಳಿಯಬರುತ್ತದೆ. —*Kavyamala* Part III, P. 32, Foot note.

ಅಸಂಪೂರ್ಣವಾಗಿರುವುದು. ಹೋದುದು ಹೋಗಲಾಗಿ ಉಳಿದ ೯೨೭ಶ್ಲೋಕ ಗಳು 'ಆರ್ಯಾ'ವೃತ್ತದಲ್ಲಿ ಬರೆಯಲ್ಪಟ್ಟು ಕಾವ್ಯಮಾಲೆಯಲ್ಲಿ ಪ್ರಸಿದ್ಧಗೊಳಿ ಸಲ್ಪಟ್ಟಿರುವುವು. ಇದರಲ್ಲಿ ಕಥೆಯು ಒಂದುರೀತಿಯಾಗಿರದೆ ಉಪದೇಶಾತ್ಮಕ ವಾದ ಹಲವು ಕಥೆಗಳಿಂದ ಜೋಡಣೆಮಾಡಲ್ಪಟ್ಟಿರುವುದು.

'ಕುಟ್ಟಿನೀಮತ' ಎಂದರೇನು? 'ಕುಟ್ಟಿನೀ' ಎಂದರೇನು? 'ಶಂಭಳೀ' ಎಂದರೇನು? ಎಂಬುದನ್ನು ಇಲ್ಲಿ ಬರೆಯುವೆವು—

. . . . . . **ಕುಟ್ಟಿನೀ ಶಂಭಳೀ ಸಮೇ |**

**—ಅಮರಕೋಶ.**

ಕುಟ್ಟಿನೀ ಶಂಭಳೀ ಶಬ್ದಗಳು ತಲೆಹಿಡಕಿಯಾದ ಕುಂಟ್ಲಗಿತ್ತಿಯ ಎಂದರೆ ಸೂಳೆ ಯನ್ನು ವಿಟನಿಗೆ ಹೊಂದಿಸಿಕೊಡುವವಳ ಹೆಸರುಗಳು.

"ವಿಟಸ್ಯ ಕುಟುಂಬಂ ಅರ್ಥಹರಣೇನ ಕುಟ್ಟಯತಿ = ನಾಶಯತಿ
ಇತಿ ಕುಟ್ಟಿನೀ"

ಎಂದರೆ ವಿಟನ ಕುಟುಂಬವನ್ನು ಅರ್ಥಹರಣದಿಂದ ಕೆಡಿಸುವವಳು.

"ಶಂ = ಶ್ರೇಯಃ ಭಾಲಯತಿ = ಹಿನಸ್ತಿ ಇತಿ ಶಂಭಳೀ–ಭಲಭಲ್ಲ–ಪರಿ
ಭಾಷಣಹಿಂಸಾದಾನೇಷು"

ಎಂದರೆ ಸುಖವನ್ನೂ ಶ್ರೇಯಸ್ಸನ್ನೂ ಕೆಡಿಸುವವಳು.

"ಕುಟ್ಟಿನೀಮತ" ಎಂದರೆ ಕುಟ್ಟಿನಿಯರ ಧರ್ಮ ಅಥವಾ ನಡತೆಗಳನ್ನು ತಿಳಿಸುವುದಕ್ಕೆ ಹೆಸರು. ಕುಟ್ಟಿನಿಯರ ಸ್ವಭಾವಚರಿತವನ್ನು ಹೇಳುವುದಾದು ದರಿಂದ ಈ ಗ್ರಂಥವು '**ಕುಟ್ಟಿನೀಮತ**'ವೆಂದೇ ಕರೆಯಲ್ಪಟ್ಟಿದೆ. ವೇಶ್ಯಾಲಂಪಟರ ವಿಚಾರವನ್ನು ಚೆನ್ನಾಗಿ ತಿಳಿದ ಈ ಕವಿಯು ನೀತಿಯನ್ನು ಹೇಳುವುದಕ್ಕಾಗಿ ಈ ಗ್ರಂಥವನ್ನು ಬರೆದುದಾಗಿ ತಿಳಿಯಬರುತ್ತದೆ. ಈ ಗ್ರಂಥವು ವೇಶ್ಯೆಯರ ಚೇಷ್ಟೆ, ಕುಟ್ಟಿನಿಯರ ಚಾತುರ್ಯ, ಜಾರರ ದುರವಸ್ಥೆಗಳನ್ನು ಲೋಕಕ್ಕೆ ತಿಳಿಯಹೇಳುವ ನೀತಿಚರಿತವಾಗಿರುವುದು.

ವಾರಾಣಸೀನಗರನಿವಾಸಿಯಾದ ವಾರಾಂಗನೆಯೊಬ್ಬಳು ಒಂದಾನೊಂದು ದಿನ ಮನೆಯ ಮುಹಡಿಯ ಮೇಲೆ ನಿಂತಿದ್ದಾಗ ಸಮೀಪದಲ್ಲಿ ಹೋಗುತ್ತಿದ್ದ ಗಾಯಕನೊಬ್ಬನು ಪ್ರಸಂಗವಶಾತ್ ಹೇಳಿದ—

**ಯೌವನಸೌಂದರ್ಯಮದಂ**
**ದೂರೇಣಾಪಾಸ್ಯ ವಾರವನಿತಾಭಿಃ |**

ಯತ್ನೇನ ವೇದಿತವ್ಯಾಃ
ಕಾಮುಕಹೃದಯಾರ್ಜನೋಪಾಯಾಃ ||

ಎಂಬ ಶ್ಲೋಕವನ್ನು ಕೇಳಿ ಉಪ್ಪರಿಗೆಯಿಂದ ಇಳಿದುಬಂದು ಕಾಮುಕ ರಾಗಿ ಬಂದವರ ಧನಗೃಹಾರಾಮಸುಖಸಂಪತ್ತುಗಳನ್ನು ಮೋಸದಿಂದ ಸಂಪಾದಿಸಿರುವ ದೂತಿಕಾಕೃತ್ಯವಿಚಕ್ಷಣಳಾದ ವಿಕರಳಾ ಎಂಬ ಓರ್ವ ವಯೋವೃದ್ಧ ಕುಟ್ಟಿನಿಯ ಮನೆಗೆ ಹೋಗಿ ಎಲೆ, ಅಜ್ಜಿ! ವಿಷಯಾಸಕ್ತರಾದ ವಿಟರನ್ನು ವಶಪಡಿಸಿಕೊಳ್ಳುವಂತಹ ಉಪಾಯವನ್ನು ಹೇಳಿಕೊಡಬೇಕೆಂದು ಪ್ರಾರ್ಥಿಸಲಾಗಿ ಆ ಕುಟ್ಟಿನಿಯು ಅವಳಿಗೆ ಉತ್ತಮವಾಗಿರುವ ವಿಟವಶೀಕರಣೋಪಾಯಗಳನ್ನು ಉಪಾಖ್ಯಾನಗಳ ಮೂಲಕ ಸಮರ್ಥಿಸಿ, ಮನಕ್ಕೊಪ್ಪುವಂತೆ ಹೇಳಿ ವಿಷಯಾಸಕ್ತರಾಗಿ ತನ್ನಲ್ಲಿಗೆ ಬಂದ ವಿಟರನ್ನು ತಾನು ಹೇಳಿದಹಾಗೆ ವಶಪಡಿಸಿಕೊಂಡು ಅವರ ಸರ್ವಸ್ವಗಳನ್ನು ಸುಲಿಗೆ ಮಾಡಿದ ಸ್ವಾನುಭವವನ್ನು ವಿವರಿಸಿಹೇಳಿ ಕಳುಹಿಸಿಕೊಟ್ಟಳು. ಈ ಕಾವ್ಯವನ್ನೋದುವ ಕಾಮುಕರಿಗೆ ವಾರವನಿತೆಯರ ಮಾಯೋಪಾಯಗಳೆಲ್ಲವೂ ಸವಿಸ್ತರವಾಗಿ ತಿಳಿದು ಅದನ್ನುಳಿದು ಮೋಕ್ಷಕಾಮಿಗಳಾಗಬೇಕೆಂಬ ವಿಚಾರವು ಸ್ಫೂರ್ತಿಗೆ ಬರುವುದು.

ಎಂತಹ ವಿದ್ಯಾಧನಸಂಪನ್ನನಾದರೂ ದುರ್ಮೈತ್ರಿಗೆ ಶೀಘ್ರವಾಗಿ ವಶನಾಗುವನೆಂದೂ ಎಂತಹ ಜ್ಞಾನಸಂಪನ್ನನಾದರೂ ವಿಷಯಸುಖಗಳಿಗೆ ಮರುಳಾಗಿ ವೇಶ್ಯೆಯರ ಕಪಟೋಕ್ತಿಗಳನ್ನು ವಿಶ್ವಸಿಸುವನೆಂದೂ ಎಷ್ಟೇ ಧನಮಾನಹಾನಿಯಾದರೂ ಆ ವಾರವನಿತಾಸುಖವನ್ನು ಬಿಡಲೊಪ್ಪನೆಂದೂ ಆ ಹತಭಾಗ್ಯನಾದ ವಿಟನು ತನ್ನ ಸೊಕ್ಕಿನ ಸೂಳೆಯರಿಂದ ಎಷ್ಟೋ ಸಲ ಮೋಸಗೊಳಿಸಲ್ಪಟ್ಟಿರುವನಾದರೂ ಮೃಷಾವಾದಕ್ಕೆ ಎದುರುನಿಂತರೂ ಏನಾದರೂ ಹೇಗಾದರೂ ಎಷ್ಟಾದರೂ ಸಾಲದೆ ಅವುಗಳೆಲ್ಲವೂ ಕಾಮತಂತ್ರವಶೀಕರಣ ಪ್ರಣಯಜಾಲವೆಂದು ತಿಳಿದು ವಿಷಯೋನ್ಮತ್ತನಾಗಿ ಅವರ ಮಾತಿನಲ್ಲಿಯೇ ನಂಬಿಕೆಯನ್ನಿಟ್ಟು ಮೋಸಹೋಗುವನೆಂದೂ ಅಂತಹ ವಿಷಯಲಾಲಸತೆಯಿಂದ ವಿಟಲೋಕಕ್ಕೆ ನೀತಿಯನ್ನು ಹೇಳಿ ತೋರಿಸುವುದಕ್ಕಾಗಿಯೇ ಈ ಕಾವ್ಯವು ಬರೆಯಲ್ಪಟ್ಟಿರುವುದೆಂದೂ ಬೋಧೆಯಾಗುವುದು.

ಕಾವ್ಯಶೈಲಿಯು ಅತ್ಯಂತಪೇಶಲವಾಗಿಯೂ ಹೃದ್ಯವಾಗಿಯೂ ಪಂಡಿತ ಪಾಮರರಾದಿಯಾಗಿ ಎಲ್ಲರಿಗೂ ತಿಳಿಯುವಂತೆ ಸುಲಭವಾಗಿಯೂ ಬರೆಯಲ್ಪಟ್ಟಿರುವುದು.

ಇವನ ಕವಿತಾಧೋರಣೆಯನ್ನು ತೋರಿಸುವುದಕ್ಕಾಗಿ ಎರಡು ಶ್ಲೋಕಗಳನ್ನು ಬರೆಯುವೆವು—

ಅವಗಣ್ಯಾಭಿಪ್ರಾಯಂ
ಸ್ವಾಮಿನ್ಯಾಃ ಪರಿಜನೋಽಪಿ ಯಂ ಪುರುಷಂ।
ಅಪಹಸತಿ ತಿರಸ್ಕಾರ್ಯಂ
ತಸ್ಯ ನ ಮೂಲ್ಯಂ ವರಾಟಿಕಾಃ ಪಂಚ ॥

ತವ ಹೃದಯೇ ಹೃದಯಮಿದಂ
ವಿನ್ಯಸ್ತಂ ನ್ಯಾಸಪಾಲನಂ ಕಷ್ಟಂ ॥
ಯತ್ನಾತ್ತಥಾ ವಿಧೇಯಂ
ಸ್ಥಾನಭ್ರಂಶೋ ಯಥಾ ನ ಸ್ಯಾತ್ ॥

ಇದರಲ್ಲಿರುವ ಸುಂದರಸೇನೋಪಾಖ್ಯಾನವನ್ನು ವಾಚಕರ ಅವಗಾಹನೆಗೆತಂದಿದೆ.

ಪಾಟಲೀಪುತ್ರನಿವಾಸಿಯಾದ ಪುರಂದರನೆಂಬ ಸೋಮಯಾಜಿಯ ಮಗನೂ ವೇದಶಾಸ್ತ್ರಸಂಪನ್ನನೂ ಆದ ಸುಂದರಸೇನನೆಂಬೋರ್ವ ಯುವಕನು ಪ್ರಾಪ್ತವಯಸ್ಕನಾಗಿ ದೇಶಸಂಚಾರವನ್ನು ಮಾಡಲೆಳಸಿ ಗುಣಪಾಲನೆಂಬ ಮಿತ್ರನೊಡನೆ ಹೊರಟು ದೇಶಸಂಚಾರವನ್ನು ಮಾಡುತ್ತ ಅರಬುದವೆಂಬಪರ್ವತದ ಸಹಜಲಾವಣ್ಯಕ್ಕೆ ಮನಸೋತು ಪರ್ವತವನ್ನೇರಿ ವಿಹರಿಸುತ್ತಿದ್ದಾಗ ಅಲ್ಲಿ ನವಯೌವನಸಮನ್ವಿತಳಾದ "ಹಾರಲತಾ" ಎಂಬ ವೇಶ್ಯೆಯನ್ನು ನೋಡಿ ಯೌವನಮುಗ್ಧತೆಯಿಂದ ಮೋಹಪರವಶನಾಗಿ ಅವಳೊಡನೆ ವಿಹರಿಸುತ್ತ ಜನನೀಜನಕರಾದಿಯಾಗಿ ತನ್ನ ಸರ್ವಸ್ವವನ್ನೂ ಮರೆತು ಇರುತ್ತಿದ್ದನು. ಈ ವಿಚಾರವನ್ನು ತಂದೆಯಾದ ಪುರಂದರನು ಕೇಳಿ ಕಡುನೊಂದು ತನ್ನ ಮಗನಿಗೆ ಕಾಗದವನ್ನು ಬರೆದು ಪರಿಚರರೊಡನೆ ಕಳುಹಿಸಿಕೊಟ್ಟನು. ಸುಂದರಸೇನನು ಅದನ್ನು ಓದಿನೋಡಿಕೊಂಡು ತನ್ನ ದುಷ್ಕಾರ್ಯಕ್ಕಾಗಿ ದುಃಖಪಟ್ಟು ಮಿತ್ರನ ಹೇಳಿಕೆಯನ್ನನುಸರಿಸಿ ಹಾರಲತೆಯನ್ನು ಬಿಟ್ಟು ಸ್ವಗ್ರಾಮಕ್ಕೆ ಬಂದು ಜನನೀಜನಕರನ್ನು ಸೇರಿ ಸುಖದಿಂದಿದ್ದನೆಂಬುದೇ ಕಥಾಸಾರಾಂಶವಾಗಿರುವುದು.

ನೀತಿದಾಯಕವಾದುದಾಗಿ ಪುರಂದರನಿಂದ ಬರೆಯಲ್ಪಟ್ಟುದಾದ ಲೇಖನದ ಸಾರಾಂಶವನ್ನು ಇಲ್ಲಿ ಸಂಗ್ರಹಿಸಿದೆ—

ಹಾ, ಪುತ್ರ!

ತಡೆಯಲಾಗದೆ ಉಕ್ಕಿಬರುತ್ತಿರುವ ಶೋಕಾತಿರೇಕದಿಂದ, ಅಸ್ಪಷ್ಟವಾದ ಮಾತುಗಳಿಂದ ಪುರಂದರನು ನಿನಗೆ ಕುಶಲವನ್ನು ಹಾರೈಸುವನು.

ಇಂತಹ ದುರ್ಮಾರ್ಗಪ್ರವರ್ತಕನಾಗುವ ಮೊದಲು ನೀನು ನಿನ್ನ ಅಕಲಂಕಕುಲಗೌರವವನ್ನಾಗಲಿ ಹಿರಿಯರಿಗೆ ಉಚಿತವಾದ ವರ್ತನವನ್ನಾಗಲಿ ಗಮನಿಸಿದೆಯಾ?

ಮಗನೆ! ಅಕುಟಿಲವಾದ ಗತಿಯುಳ್ಳ (ಎಂದರೆ ಕೇವಲ ಸರಳಸ್ವಭಾವದವರಾದ) ದ್ವಿಜಿಹ್ವತಾದೋಷದೂರರಾದ (ಎಂದರೆ ವಚನಭ್ರಷ್ಟರಲ್ಲದ) ಮತ್ತು ಪರಹಿಂಸಾಪರಾಙ್ಮುಖರಾದ ಈ ಶ್ರೋತ್ರಿಯವಂಶದಲ್ಲಿ ಭುಜಂಗನಾಗಿ (ಎಂದರೆ ವಿಟನಾಗಿ) ನೀನು ಹೇಗೆ ಉತ್ಪನ್ನನಾದೆ?

ಪುರೋಡಾಶಾಶನದಿಂದ ಪವಿತ್ರವಾದುದಾಗಿ ವೇದಘೋಷಮುಖರಿತವಾದ ಆ ನಿನ್ನ ಮುಖವೆಲ್ಲಿ? ಮದ್ಯವಾಸಿತರಾದ ವಾರವನಿತೆಯರ ಮುಖರಸಾಸ್ವಾದನದಿಂದ ಕಲುಷಿತವಾದ ಈ ನಿನ್ನ ಮುಖವೆಲ್ಲಿ?

ವೇದಮಂತ್ರೋಚ್ಚಾರಣಪುರಸ್ಸರವಾಗಿ ಮಾಡುವ ಆ ಕುಶಪಾಟನವೆಲ್ಲಿ? ದಾಸೀಜನರತಸಂಗರದಲ್ಲಿ ನಿರ್ದಯೆಯಿಂದ ಮಾಡುವ ಈ ನಖಕ್ಷತವೆಲ್ಲಿ?

ಕುಮಾರ! ಹೋಮಾಗ್ನಿಧೂಮದಿಂದ ಉಂಟಾದ ಬಾಷ್ಪಕ್ಷಾಳಿತವಾಗಿ ಶುಭ್ರವಾದುದಾದ ಆ ನಿನ್ನ ಮುಖವೆಲ್ಲಿ? ಗಣಿಕಾಭರ್ತ್ಸನಶೋಕದಿಂದುಂಟಾದ ದುಃಖಾಶ್ರುಪೂರ್ಣವಾದ ಈ ಮುಖವೆಲ್ಲಿ?

ಸತ್ಕರ್ಮಸಮಾರಂಭಗಳಲ್ಲಿ ಕೇಳಲ್ಪಡುವ ಆ ವಷಟ್ಕಾರಧ್ವನಿಯೆಲ್ಲಿ? ವಾರವನಿತಾರತಿಕಾಲದಲ್ಲಿನ ಈ ರಣಿತಾಕರ್ಣನ ಕುತೂಹಲವೆಲ್ಲಿ?

ಗುರುಗಳಿಂದ ಶಿಕ್ಷಿತನಾಗುತ್ತಿದ್ದಾಗ ಉಂಟಾಗುತ್ತಿದ್ದ ಆ ಕಂಪನವೆಲ್ಲಿ? ವಾರವನಿತೆಯರ ಪಾದತಾಡನದಿಂದುಂಟಾಗುವ ಈ ಕಂಪನವೆಲ್ಲಿ?

ಸ್ಮೃತಿಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವ ನಿಯಮಗಳನ್ನಾಚರಿಸಲು ಯೋಗ್ಯವಾದುದಾದ ಆ ಹರಿಣಚರ್ಮವಸನವೆಲ್ಲಿ? ಅದು ಬಿಟ್ಟು ಈ ಪಣ್ಯಸ್ತ್ರೀಸ್ಪರ್ಶದೂಷಿತವಾದುದಾದ ಈ ಮಲಿನಾಂಬರಧಾರಣವೆಲ್ಲಿ?

ಹಾ, ಪುತ್ರ! ಶೈಶವಾರಭ್ಯ ಸಮಿತ್ತೃಣನ್ನು ಮಾತ್ರವೇ ಖಂಡಿಸುವುದನ್ನು ಕಲಿತುಕೊಂಡಿದ್ದ ನೀನು ಈಗ ಈ ವಾರವನಿತೆಯರ ಅಧರಖಂಡನೆಯನ್ನು ಕಲಿತುಕೊಂಡ ಬಗೆ ಹೇಗೆ?

ಯಾವಾಗಲೂ ನಿಶ್ಚಲಮನಸ್ಸಿನಿಂದ ಗುರುಶುಶ್ರೂಷೆಯನ್ನು ಮಾಡಿಕೊಂಡಿದ್ದ ನಿನಗೆ ಈ ವಾರವನಿತಾಶುಶ್ರೂಷಣವು ಬಂದ ಪರಿಹೇಗೆ?

ಸದಾಕಾಲದಲ್ಲಿಯೂ ವೇದಾಭ್ಯಾಸನಿರತನಾಗಿದ್ದ ನೀನು ಈ ಕುಪಿತವೇಶ್ಯಾಜನರನ್ನನುಸರಿಸುವ ಇಂತಹ ವಚನಚಾತುರ್ಯವನ್ನೆಲ್ಲಿ ಕಲಿತೆ?

ಮಗನೆ! ಇಂತಹ ಪವಿತ್ರಕುಲದಲ್ಲಿ ಹುಟ್ಟಿದ ನಿನಗೂ ಹೀಗಾದ ಮೇಲೆ ಹೇಳುವುದೇನು! ಕೇವಲಪ್ರಾಕ್ತನಕರ್ಮದೋಷದ ಫಲವೆನ್ನಬೇಕಾಗಿದೆ.

ಕುಟುಂಬಭಾರವನ್ನು ನಿನ್ನಲ್ಲಿಳುಹಿ ಪರಲೋಕಸಾಧನಾವಲಂಬಿಯಾಗಿ ಸ್ವಸ್ಥನಾಗಿರುವೆನೆಂಬ ಆಶೆಯು ನನಗೆ ಅಧಿಕವಾಗಿದ್ದಿತು. ಆದರೆ ಈಗ ಅದು ವಿಪರೀತವಾದುದರಿಂದ ನಿರಾಶೆಯಾದುದು.

---

## ಮಾಘಕವಿ

ಇವನು ಘೂರ್ಜರದೇಶದವನು. ಬ್ರಾಹ್ಮಣನು, ದತ್ತಕನ ಮಗನು. ಸುಪ್ರಭದೇವನ ಮೊಮ್ಮಗನು. ಸುಪ್ರಭದೇವನು ಶ್ರೀವರ್ಮಲ*ನೆಂಬ ರಾಜನಲ್ಲಿ ಪ್ರಧಾನಮಂತ್ರಿಯಾಗಿದ್ದನು. ಇವನ ಗ್ರಂಥಪರಿಶೀಲನದಿಂದ ಇವನು ಮಹಾವಾಙ್ಮಿಯೂ ತರ್ಕವ್ಯಾಕರಣವೇದಾಂತಶಾಸ್ತ್ರಜ್ಞಾತನೂ ಆಗಿದ್ದುದಾಗಿ ಗೊತ್ತಾಗುತ್ತದೆ.

ಇವನ ವಿಚಾರವು— (೧) ಬಲ್ಲಾಳಕೃತಭೋಜಪ್ರಬಂಧದಲ್ಲಿಯೂ (೨) ಮೇರುತುಂಗಾಚಾರ್ಯನ ಪ್ರಬಂಧಚಿಂತಾಮಣಿಯಲ್ಲಿಯೂ (೩)ಪ್ರಭಾವಕಚರಿತದಲ್ಲಿಯೂ ಹೇಳಲ್ಪಟ್ಟಿರುವುದು. ಈ ಮೂರರಲ್ಲಿಯೂ ಕವಿಯ ವಿಚಾರವು ಪರಸ್ಪರ ವಿರುದ್ಧವಾಗಿ ಹೇಳಲ್ಪಟ್ಟಿರುವಂತೆ ಕಂಡುಬರುವುದು.

ಮಾದರಿಗಾಗಿ ಪ್ರಭಾವಕಚರಿತದ ಕಥೆಯನ್ನು ಸಂಕ್ಷೇಪಿಸಿ ಹೇಳುವೆವು—

ಘೂರ್ಜರದೇಶದ ರಾಜಧಾನಿಯಾದ ಮಾಲವ(?)ವನ್ನು ಶ್ರೀವರ್ಮಲನೆಂಬ ರಾಜನೊಬ್ಬನು ಸುಪ್ರಭನೆಂಬ ಬ್ರಾಹ್ಮಣಮಂತ್ರಿಯೊಡನೆ ಆಳುತ್ತಿದ್ದನು. ಸುಪ್ರಭದೇವನಿಗೆ ದತ್ತಕನೆಂತಲೂ, ಶುಭಕರನೆಂತಲೂ ಈರ್ವರು ಮಕ್ಕಳಾದರು. ಹಿರಿಯವನಾದ ದತ್ತಕನಿಗೆ ಭೋಜನೆಂಬ ಮಗನೂ ಕಿರಿಯವನಾದ ಶುಭಕರನಿಗೆ ಸಿದ್ಧಕವಿಯೆಂಬ ಮಗನೂ ಆದರು. ಭೋಜನ ಸ್ನೇಹಿತನು **'ಮಾಘ'**ನೆಂತಲೂ ಅವನು **'ಶಿಶುಪಾಲವಧ'**ಎಂಬ ಕಾವ್ಯವನ್ನು ಬರೆದನೆಂತಲೂ ಸಿದ್ಧಕವಿಯು ಉಪಮಿತಿಭವಪ್ರಪಂಚವೆಂಬ ಗ್ರಂಥವನ್ನು ಬರೆದನೆಂತಲೂ ಮೊದಲಾಗಿ ಹೇಳಲ್ಪಟ್ಟಿದೆ. ಇದರಲ್ಲಿ ದತ್ತಕನ ಮಗ ಭೋಜನೆಂದೂ ಅವನ ಸ್ನೇಹಿತನು ಮಾಘನೆಂದೂ ಹೇಳಿರುವುದರ ಹೊರತು ದತ್ತಕನ ಮಗ ಮಾಘನೆಂದು ಹೇಳಿರುವುದಿಲ್ಲ. ಶಿಶುಪಾಲವಧೆಯನ್ನು ಬರೆದ ಮಾಘನು ದತ್ತಕಸೂನುವೆಂದು

---

* ಶಿಶುಪಾಲವಧಕಾವ್ಯಾಂತ್ಯದಲ್ಲಿ ಕಂಡುಬರುವ ಕವಿವಂಶವರ್ಣನದಲ್ಲಿ 'ಶ್ರೀಧರ್ಮನಾಭ' ಎಂದಿರುವುದು.

ಇತರ ಗ್ರಂಥಗಳಲ್ಲಿ ಹೇಳಿರುವುದು ಹೊರತು ಭೋಜನ ಸ್ನೇಹಿತನೆಂದು ಎಲ್ಲಿಯೂ ಹೇಳಲ್ಪಟ್ಟಿರುವುದಿಲ್ಲ.

ಘೂರ್ಜರದೇಶಕ್ಕೆ ಮಾಲವವು ಯಾವಾಗ ರಾಜಧಾನಿಯಾಗಿದ್ದಿತೆಂಬುದಾಗಲಿ ಶ್ರೀವರ್ಮಲನು ಯಾರು? ಯಾವಾಗ ರಾಜ್ಯವನ್ನಾಳಿದನು? ಎಂಬ ವಿಚಾರವಾಗಲಿ ಪ್ರಕೃತ ದೊರಕಿರುವ ಪಾಲವಂಶಾನುಕ್ರಮಣಿಕೆಯಲ್ಲಿ ಹೇಳಿರುವುದಿಲ್ಲ.

**ಕಾಲವಿಚಾರ—** ಪ್ರೊ. ಮ್ಯಾಕಡಾನಲ್ಲರವರು ಮಾಘಕವಿಯು ಕ್ರಿ. ಶ. ಹತ್ತನೆಯ ಶತಮಾನಕ್ಕಿಂತ ಹಿಂದಣವನು ಎಂದರೆ ಕ್ರಿ. ಶ. ಒಂಭತ್ತನೆಯ ಶತಮಾನದವನಾಗಿರಬೇಕೆಂದು ಹೇಳಿರುವರು.* ಇದು ಹೀಗೆಯೇ ಸರಿಯೆಂದು ಸ್ಪಷ್ಟಪಡಿಸಿರುವುದಿಲ್ಲ.

ಪ್ರೊ. ತರಣೀಚರಣಚೌಧುರಿಯವರು ಕ್ರಿ. ಶ. ಸುಮಾರು ಎಂಟನೆಯ ಶತಮಾನದಲ್ಲಿದ್ದಿರಬೇಕೆಂದು ಹೇಳುವರು. ಉಳಿದವರಾರೂ ಮಾಘನ ಕಾಲದ ವಿಚಾರವಾಗಿ ಬರೆದಿರುವಂತೆ ಕಂಡುಬರುವುದಿಲ್ಲ.

ಕಾಶ್ಮೀರವಾಸಿಯಾದ ಆನಂದವರ್ಧನನು ಕ್ರಿ.ಶ. ಒಂಭತ್ತನೆಯ ಶತಮಾನದವನಾಗಿದ್ದು ಮಾಘನ ಶಿಶುಪಾಲವಧೆಯ ಶ್ಲೋಕಗಳನ್ನು ಧ್ವನ್ಯಾಲೋಕದಲ್ಲಿ ಉದಹರಿಸಿಕೊಂಡಿರುವುದರಿಂದಲೂ ಕ್ರಿ. ಶ. ಏಳನೆಯ ಶತಮಾನದ ಕವಿಗಳಾರೂ ಇಂತಹ ಮಹಾಕಾವ್ಯದ ಉದಾಹರಣೆಗಳನ್ನು ಹೇಳದೆ ಇರುವುದರಿಂದಲೂ ಈ ಕವಿಯು ಕ್ರಿ. ಶ. ಎಂಟನೆಯ ಶತಮಾನದಲ್ಲಿದ್ದಿರಬೇಕೆಂದು ಸ್ಪಷ್ಟವಾಗುವುದು.

ಇವನು ಶಿಶುಪಾಲವಧನೆಂಬ ಕಾವ್ಯವನ್ನು ಬರೆದಿರುವನು. ಈ ವಿಚಾರವು—

**ಶ್ರೀಶಬ್ದರಮ್ಯಕೃತಸರ್ಗಸಮಾಪ್ತಿಲಕ್ಷ್ಮ**
**ಲಕ್ಷ್ಮೀಪತೇಶ್ಚರಿತಕೀರ್ತನಚಾರುಮಾಘಃ ।**
**ತಸ್ಯಾತ್ಮಜಸ್ಸುಕವಿಕೀರ್ತಿದುರಾಶಯಾದಃ**
**ಕಾವ್ಯಂ ವ್ಯಧತ್ತ 'ಶಿಶುಪಾಲವಧಾಭಿಧಾನಂ' ॥**

ಎಂಬ ಶ್ಲೋಕದಿಂದ ವ್ಯಕ್ತವಾಗುವುದು. ಇದು ಮಹಾಕಾವ್ಯಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿರುವುದು. ಇದರಲ್ಲಿ ಇಪ್ಪತ್ತು ಸರ್ಗಗಳಿರುವುವು. ಕಥಾಭಾಗವನ್ನು ಶ್ರೀಮದ್ಭಾಗವತದ ದಶಮಸ್ಕಂದದ ಎಪ್ಪತ್ತನಾಲ್ಕನೆಯ ಅಧ್ಯಾಯದಿಂದ ತೆಗೆದುಕೊಂಡು ಬರೆದಿರುವನು.

* History of Sanskrit Literature P. 329.

ಧರ್ಮರಾಯನ ರಾಜಸೂಯಯಾಗಕ್ಕೆ ಬಂದಿದ್ದ ಶ್ರೀಕೃಷ್ಣಶಿಶುಪಾಲಾದಿಗಳು ಆ ಯಜ್ಞಸಭೆಯಲ್ಲಿ ಕೂಡಿದ್ದಾಗ ಅಗ್ರಪೂಜಾಯೋಗ್ಯನು ಶ್ರೀಕೃಷ್ಣನೆಂದು ಹೊಗಳುತ್ತಿರುವ ಸಹದೇವನ ಮಾತನ್ನು ಕೇಳಿ ಶ್ರೀಕೃಷ್ಣನ ಗುಣವರ್ಣನದಿಂದ ಕೋಪೋದ್ರೇಕಗೊಂಡ ಶಿಶುಪಾಲನು ತುಂಬಿದ ಸಭೆಯಲ್ಲಿ ಶ್ರೀಕೃಷ್ಣನನ್ನು ಜರಿಯಲು ಅತಿಚತುರನಾದ ಶ್ರೀಕೃಷ್ಣನು ಚಕ್ರದಿಂದ ಶಿಶುಪಾಲನನ್ನು ಕೊಂದುಹಾಕಿದನೆಂಬುದನ್ನು ತನಗೆ ಬೇಕುಬೇಕಾದಹಾಗೆ ತಿರುಗಿಸಿ ಬರೆದುಕೊಂಡಿರುವನು. ಕಥಾಂತರದಲ್ಲಿ ಬರುವುದಾದ ಶಿಶುಪಾಲವಧಾರ್ಥಸೂಚಕವಾದ ಮತ್ತು ದುಷ್ಟನಿಗ್ರಹ, ಶಿಷ್ಟಪರಿಪಾಲನಾರ್ಥಸೂಚಕವಾದ ಮಂಗಳಶ್ಲೋಕವನ್ನು "ಶಾಸಿತುಂ ಜಗತ್" ಎಂಬ ಶಬ್ದಪ್ರಯೋಗದೊಡನೆ ಪ್ರಾರಂಭಿಸಿರುವನು. ಕವಿಯು ತನಗಿದ್ದ ವ್ಯಾಕರಣಾಲಂಕಾರಚತುರತೆಯನ್ನು ತನ್ನ ಕಾವ್ಯದ ೧೯ನೆಯಸರ್ಗದಲ್ಲಿ ಮನದಣಿಯುವಂತೆ ತೋರಿಸಿ ಅದನ್ನು 'ಚಿತ್ರಯುದ್ಧ'ವೆಂದು ಕರೆದಿರುವನು.

ಈ ಕಾವ್ಯವು ಕವಿಯ ಹೆಸರಿನಿಂದಲೇ ಹೆಚ್ಚಾಗಿ ಪ್ರಖ್ಯಾತವಾಗಿರುವುದು. ಈ ಕಾವ್ಯಕ್ಕೆ ಎಂಟು ಟೀಕೆಗಳಿರುವುವು—

(೧) ವಲ್ಲಭದೇವ*ರಚಿತ "ಸಂದೇಹವಿಷೌಷಧ"ವೆಂಬ ಟೀಕಾ (೨) ರಂಗರಾಜಟೀಕಾ, (೩) ಏಕನಾಥನ† ಟೀಕಾ, (೪) ಚಾರಿತ್ರವರ್ಧನನ ಟೀಕಾ, (೫) ಮಲ್ಲಿನಾಥನ "ಸರ್ವಂಕಷಾ" ಎಂಬ ಟೀಕಾ, (೬) ಭರತಮಲ್ಲನ "ಸುಬೋಧ"ವೆಂಬ ಟೀಕಾ, (೭) ದಿನಕರಮಿಶ್ರನ "ಸುಬೋಧಿನೀ"ಟೀಕಾ, (೮) ಗೋಪಾಲನ "ಹಸಂತೀ"ಟೀಕಾ. ಈ ವ್ಯಾಖ್ಯಾನಗಳಲ್ಲಿ ಮಲ್ಲಿನಾಥಕೃತ "ಸರ್ವಂಕಷಾ" ಎಂಬ ಟೀಕೆಯು ಬಹುರಮ್ಯವಾಗಿ ಬರೆಯಲ್ಪಟ್ಟಿರುವುದು.

ಈ ಕಾವ್ಯದಲ್ಲಿನ ಸುಂದರಭಾಗಗಳು—

೪ ನೆಯ ಸರ್ಗದಲ್ಲಿ—ರೈವತಕಪರ್ವತದ ವರ್ಣನೆ,

೬ ನೆಯ ಸರ್ಗದಲ್ಲಿ—ಷಡೃತುವರ್ಣನೆ,

೭ ನೆಯ ಸರ್ಗದಲ್ಲಿ—ಪುಷ್ಪಾಪಚಯವರ್ಣನೆ,

೮ ನೆಯ ಸರ್ಗದಲ್ಲಿ—ಜಲಕ್ರೀಡಾವರ್ಣನೆ,

೯—೧೦ ನೆಯ ಸರ್ಗಗಳಲ್ಲಿ—ಸಂಧ್ಯಾಕಾಲ ಚಂದ್ರೋದಯ ಪ್ರಸಾಧನಾದಿ ವರ್ಣನೆ, ಪಾನಗೋಷ್ಠೀವರ್ಣನೆ, ರಾತ್ರಿಕ್ರೀಡಾ ವರ್ಣನೆ.

---

* ಇವನು 'ಸುಭಾಷಿತಾವಳಿ'ಯನ್ನು ಬರೆದವನಲ್ಲ.

† ಏಕನಾಥಸಾಧುವು ಇವನಲ್ಲ.

೧೧ ನೆಯ ಸರ್ಗದಲ್ಲಿ—ಪ್ರಭಾತವರ್ಣನೆ,
೧೨ ನೆಯ ಸರ್ಗದಲ್ಲಿ—ಯಮುನಾನದೀವರ್ಣನೆ,
೧೩ ನೆಯ ಸರ್ಗದಲ್ಲಿ—ಪಾಂಡವರ ಬಳಿಗೆ ಕೃಷ್ಣನು ಹೋಗುವಿಕೆ, ಇಂದ್ರಪ್ರಸ್ಥಕ್ಕೆ ಶ್ರೀಕೃಷ್ಣನ ಆಗಮನಸಮಾಚಾರವನ್ನು ತಿಳಿದ ಪೌರನಾರಿಯರ ಚೇಷ್ಟಾವರ್ಣನೆ,
೧೪ ನೆಯ ಸರ್ಗದಲ್ಲಿ—ರಾಜಸೂಯಾಧ್ವರವರ್ಣನೆ, ಶ್ರೀಕೃಷ್ಣನ ಪ್ರತ್ಯರ್ಥದಾನವರ್ಣನೆ, ಭೀಷ್ಮಕೃತಕೃಷ್ಣಸ್ತುತಿ-

ಇವೇ ಮೊದಲಾದುವುಗಳು ಹೃದಯಂಗಮವಾಗಿ ವರ್ಣಿತವಾಗಿರುವುವು.

ಇವನ ಶೈಲಿ, ರಸೌಚಿತ್ಯ, ವರ್ಣನಾಕ್ರಮ ಇವುಗಳೆಲ್ಲವನ್ನೂ ಪರಿಶೀಲಿಸಿದರೆ ಎಲ್ಲದರಲ್ಲಿಯೂ ಇವನು ಭಾರವಿಯ।ಕಿರಾತಾರ್ಜುನೀಯದ ಮೇಲಿನಸ್ಪರ್ಧೆಯಿಂದಲೇ ಬರೆದುದಾಗಿ ತೋರುತ್ತದೆ. ಭಾರವಿಗಿಂತಲೂ ಚೆಲುವಾಗಿಯೂ ಲೋಕೋತ್ತರವಾಗಿಯೂ ಬರೆಯಬೇಕೆಂಬುದೇ ಈ ಕವಿಯ ಆಶೆಯಿದ್ದಿರಬಹುದು. ಈ ಎರಡು ಕಾವ್ಯಗಳ ಹೊಂದಣಿಕೆಯೂ ಒಂದರ ಹಾಗೆ ಮತ್ತೊಂದು ಇದೆ. ಕಿರಾತಾರ್ಜುನೀಯದಲ್ಲಿ ವ್ಯಾಸನು ಹಿತೋಪದೇಶಕನಾಗಿರುವನು. ಶಿಶುಪಾಲವಧೆಯಲ್ಲಿ ನಾರದನು ಹಿತೋಪದೇಶಕನಾಗಿರುವನು. ರಾಜನೀತಿತಂತ್ರವಿಚಾರವಾಗಿ ಯುಧಿಷ್ಠಿರ, ಭೀಮ, ದ್ರೌಪದಿ ಈ ಮೂವರೂ ವಾದಿಸುವರು. ಮಾಘಕಾವ್ಯದಲ್ಲಿ ಶ್ರೀಕೃಷ್ಣ, ಬಲರಾಮ, ಉದ್ಧವ ಈ ಮೂವರೂ ತರ್ಕಿಸುವರು. ಭಾರವಿಯ ಕಾವ್ಯದಲ್ಲಿ ಅನೇಕ ವ್ಯಾಕರಣಾದಿಚಮತ್ಕಾರಗಳು ಕಂಡುಬರುವಂತೆ ಇದರಲ್ಲಿಯೂ ಕಂಡುಬರುವುವು. ಇದರಲ್ಲಿಯ ವರ್ಣನೆಯ ಪ್ರಾರಂಭವು ಅತಿಸುಂದರವೂ ಹೃದಯಂಗಮವೂ ಆಗಿರುವುದಾದರೂ ಹಾಗೆಯೇ ಓದುತ್ತ ಓದುತ್ತ ಮುಂದಾಗುವವನಿಗೆ ಕಥಾಸಂವಿಧಾನವೂ ರಸಮಾಧುರ್ಯವೂ ಸಂಕೋಚವಾಗಿಯೂ, ಕ್ಲಿಷ್ಟವಾಗಿಯೂ ತೋರಿಬರುವುದು. ಕಥಾಸಂದರ್ಭಕ್ಕೆ ಬೇಡದ ಎಷ್ಟೋ ವಿಷಯಗಳನ್ನು ವರ್ಣಿಸಿರುವುದರಲ್ಲಿ ತನ್ನ ಅನುಪಮ ಮೇಧಾಶಕ್ತಿಯನ್ನು ತೋರ್ಪಡಿಸಿರುವುದು ಅಲ್ಲಲ್ಲಿ ಕಂಡುಬರುವುದು.

**ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ ।**
**ದಂಡಿನಃ ಪದಲಾಲಿತ್ಯಂ "ಮಾಘೇ ಸಂತಿ ತ್ರಯೋಗುಣಾಃ" ॥**

ಎಂಬುದನ್ನೂ—

**ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ ।**

ಎಂಬುದನ್ನೂ ಮಾಘನ ಕಾವ್ಯದಲ್ಲಿ ಹೆಗ್ಗಳಿಗೊಂಡ ಯಾವನೋ ಹೇಳಿರುವ ಚಾಟೂಕ್ತಿಯಾಗಿರಬೇಕೆಂದು ಭಾಸವಾಗುತ್ತದೆ.

ತಾರಾನಾಥತರ್ಕವಾಚಸ್ಪತಿಯು ಮಾಘಶಬ್ದನಿಷ್ಪತ್ತಿಯನ್ನು ಮಾಡಿರುವುದರಲ್ಲಿ—

**ಉದಿತೇ ತು ಪುನರ್ಮಾಘೇ ಭಾರವೇರ್ಭಾರವೇರಿವ ।**
**ತಾವದ್ಭಾಬಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ ।**

(ಮಾಘಕವಿಯ ಜನ್ಮಧಾರಣದ ವರೆಗೂ ಭಾರವಿಯ ಕೀರ್ತಿಯು ಹರಡಿರುವುದು) ಎಂದು ಹೇಳಿರುವುದು ಲೋಕಸಾಮಾನ್ಯವಾಗಿರುವುದು. ಭಾರವಿಯು ಯಾವುದನ್ನು ವರ್ಣಿಸಿರುವನೋ ಅದನ್ನೇ ಮಾಘನೂ ವರ್ಣಿಸಿರುವನು.

## ಉದಾಹರಣೆ

ಕಿರಾತಾರ್ಜುನೀಯ—

**೫ ನೆಯ ಸರ್ಗದಲ್ಲಿ—ಹಿಮಾದ್ರಿವರ್ಣನೆ,**
**೪ ,, ಶರದ್ವರ್ಣನೆ,**
**೮ ,, ಪುಷ್ಪಾಪಚಯವರ್ಣನೆ ಮತ್ತು ಜಲಕ್ರೀಡಾವರ್ಣನೆ,**
**೯ ,, ಸಂಧ್ಯಾವರ್ಣನೆ, ಚಂದ್ರೋದಯವರ್ಣನೆ, ಸುರತವರ್ಣನೆ, ಪಾನಗೋಷ್ಠೀವರ್ಣನೆ, ಪ್ರಭಾತವರ್ಣನೆ,**
**೧೦ ,, ಅರ್ಜುನನ ಬಳಿಗೆ ಅಪ್ಸರೆಯರು ಹೋಗುವಿಕೆ, ಅರ್ಜುನನ ವರ್ಣನೆ, ಅರ್ಜುನನನ್ನು ನೋಡಿ ಅಪ್ಸರೆಯರು ಚೇಷ್ಟೆಯನ್ನು ಮಾಡುವಿಕೆ, ಪ್ರಯಾಸವೈಫಲ್ಯವರ್ಣನೆ.**

ಶಿಶುಪಾಲವಧ—

**೪ ನೆಯ ಸರ್ಗದಲ್ಲಿ— ರೈವತಕ ಪರ್ವತದ ವರ್ಣನೆ,**
**೬ ,, ಷಡೃತುವರ್ಣನೆ,**
**೭-೮ ,, ಪುಷ್ಪಾಪಚಯವರ್ಣನೆ, ಜಲಕ್ರೀಡಾವರ್ಣನೆ,**
**೯-೧೧ ,, ಸಂಧ್ಯಾವರ್ಣನೆ, ಚಂದ್ರೋದಯಪ್ರಸಾಧನಾದಿವರ್ಣನೆ, ರಾತ್ರಿಕ್ರೀಡಾ ವರ್ಣನೆ,— ಪ್ರಭಾತವರ್ಣನೆ,**
**೧೩ ,, ಪಾಂಡವರ ಬಳಿಗೆ ಕೃಷ್ಣನು ಹೋಗುವಿಕೆ, ಶ್ರೀಕೃಷ್ಣನ ವರ್ಣನೆ, ಕೃಷ್ಣನನ್ನು ನೋಡಿ ಪುರನಾರಿಯರ ಚೇಷ್ಟಾವರ್ಣನೆ ಇವೇ ಮೊದಲಾದುವುಗಳು.**

ವಲ್ಲಭದೇವನು ತನ್ನ ಸುಭಾಷಿತಾವಳಿಯಲ್ಲಿ—

**ನಾರೀನಿತಂಬಫಲಕೇ ಪ್ರತಿಬಧ್ಯಮಾನಾ**
**ಹಂಸೀವ ಹೇಮರಶನಾ ಮಧುರಂ ರರಾಸ ।**
**ತನ್ಮೋಚನಾರ್ಥಮಿವ ನೂಪುರರಾಜಹಂಸಾ**
**ಶ್ಚಕ್ರಂದುರಾರ್ತಮುಖರಂ ಚರಣಾವಲಗ್ನಾಃ ॥**

**ಶೀಲಂ ಶೈಲತಟಾತ್ಪತತ್ವಭಿಜನೋ ನಿರ್ದಹ್ಯತಾಂ ವಹ್ನಿನಾ**
**ಮಾ ಶ್ರಾಷಂ ಜಗತಿ ಶ್ರುತಸ್ಯ ವಿಫಲೇ ಕೇಶಸ್ಯ ನಾಮಾಪ್ಯಹಂ ।**

ಶೌರ್ಯೇ ವೈರಿಣಿ ವಜ್ರಮಾಶು ನಿಪತತ್ವರ್ಥೋಽಸ್ತು ಮೇ ಸರ್ವದಾ
ಯೇನೈಕೇನ ವಿನಾ ಗುಣಾಸ್ತೃಣಬುಸಪ್ರಾಯಾಸ್ಸಮಸ್ತಾ ಅಮೀ ॥

ಎಂಬ ಈ ಎರಡುಶ್ಲೋಕಗಳನ್ನು ಮಾಘಕೃತವೆಂದು ಹೇಳಿಕೊಂಡಿರುವನು.

ಬುಭುಕ್ಷಿತೈರ್ವ್ಯಾಕರಣಂ ನ ಭುಜ್ಯತೇ
ಪಿಪಾಸಿತೈಃ ಕಾವ್ಯರಸೋ ನ ಪೀಯತೇ ।
ನ ವಿದ್ಯಯಾ ಕೇನಚಿದುದ್ಧೃತಂ ಕುಲಂ
ಹಿರಣ್ಯಮೇವಾರ್ಜಯ ನಿಷ್ಫಲಾಃ ಕಲಾಃ ॥

ಎಂಬುದನ್ನು ಕ್ಷೇಮೇಂದ್ರನು ತನ್ನ ಔಚಿತ್ಯವಿಚಾರಚರ್ಚೆಯಲ್ಲಿ ಮಾಘಕೃತವೆಂದು ಹೇಳಿಕೊಂಡಿರುವನು. ಇವುಗಳೆಲ್ಲವನ್ನೂ ನೋಡಿದರೆ ಈ ಕವಿಯು ಮತ್ತಾವುದಾದರೂ ಗ್ರಂಥಗಳನ್ನು ಬರೆದಿರಬಹುದೆಂಬ ಶಂಕೆಯು ತೋರುವುದು.

ಇದರಲ್ಲಿನ ಒಂದೆರಡು ಶ್ಲೋಕಗಳನ್ನು ಮಾದರಿಗಾಗಿ ಹೇಳುವೆವು—

ಸ್ಫುರತ್ತುಷಾರಾಂಶುಮರೀಚಿಜಾಲೈಃ
ವಿನಿಹ್ನುತಾಸ್ಸ್ಫಾಟಿಕಸೌಧಪಂಕ್ತೀಃ ॥
ಆರುಹ್ಯ ನಾರ್ಯಃ ಕ್ಷಣದಾಸು ಯಸ್ಯಾಂ
ನಭೋಗತಾ ದೇವ್ಯ ಇವ ವ್ಯರಾಜನ್ ॥ ೩—೪೩ ॥

ಆ ದ್ವಾರಕಾನಗರದಲ್ಲಿ ರಾತ್ರಿಯಲ್ಲಿ ಸ್ಫಟಿಕಶಿಲಾನಿರ್ಮಿತಗಳಾದ ಅತ್ಯುನ್ನತಪ್ರಾಸಾದಚಂದ್ರಶಾಲೆಗಳಲ್ಲಿ ವಿಹರಿಸುತ್ತಿರುವ ರಮಣಿಯರ ಸುವರ್ಣಪ್ರಭಾದೇದೀಪ್ಯಮಾನವಾದ ಅವಯವಗಳು ಚಂದ್ರನ ಚಂದ್ರಿಕೆಯಿಂದ ಆಚ್ಛಾದಿಸಲ್ಪಟ್ಟು ಗಗನಚಾರಿಣಿಯರಾದ ಸುರರಮಣಿಯರಂತೆ ಕಂಗೊಳಿಸುತ್ತಿದ್ದುವು.

ಅಧಿರುಕ್ಮಮಂದಿರಗವಾಕ್ಷಮುಲ್ಲಸತ್
ಸುಹೃಶೋ ರರಾಜ ಮುರಜಿದ್ದಿದೃಕ್ಷಯಾ ।
ವದನಾರವಿಂದಮುದಯಾದ್ರಿಕಂದರಾ
ವಿವರೋದರಸ್ಥಿತಮಿವೇಂದುಮಂಡಲಂ ॥ ೧೩—೩೫ ॥

ಯುಧಿಷ್ಠಿರನು ಆಚರಿಸುವ ರಾಜಸೂಯಯಾಗನಿಮಿತ್ತವಾಗಿ ಶ್ರೀಕೃಷ್ಣಪರಮಾತ್ಮನು ದ್ವಾರಕೆಯನ್ನು ಬಿಟ್ಟು ಹಸ್ತಿನಾಪುರವನ್ನು ಪ್ರವೇಶಿಸಿದನು. ಇದಕ್ಕೆ ಮೊದಲೇ ಶ್ರೀಕೃಷ್ಣನ ಆಗಮನವನ್ನು ನಿರೀಕ್ಷಿಸುತ್ತಿದ್ದ ಧರ್ಮರಾಜಾದಿಗಳು ಮಹಾಸಂಭ್ರಮದಿಂದ ವಾದ್ಯಘೋಷದೊಡನೆ ಶ್ರೀಕೃಷ್ಣನನ್ನು ಕರೆದುಕೊಂಡು ಹಸ್ತಿನಾಪುರದ ಗಗನಚುಂಬಿಗಳಾದ ಪ್ರಾಸಾದಮಾಲೆಗಳಿಂದ ಅಲಂಕೃತವಾದ ರಾಜವೀಥಿಯಲ್ಲಿ ಬರುತ್ತಿದ್ದರು. ಪುರಜನರೆಲ್ಲರೂ ಶ್ರೀಕೃಷ್ಣನು ಬರುವನೆಂಬ ಸಂಭ್ರಮದಿಂದ ಅವನನ್ನು ನಿರ್ನಿಮೇಷದೃಷ್ಟಿಯಿಂದ ನೋಡು

ತ್ತಿರಲಾಗಿ:- ತರುಣಿಯೊಬ್ಬಳು ಮಹೋನ್ನತಸೌಧದ ಗವಾಕ್ಷದಲ್ಲಿ ಅತ್ಯಂತೋತ್ಸಾಹದಿಂದ ನೋಡುತ್ತಿರಲು, ಗವಾಕ್ಷಮಧ್ಯದಲ್ಲಿ ಕಾಣುವ ತರುಣಿಯ ಮುಖಕಮಲವು ಉದಯಾದ್ರಿಯ ಗುಹಾವಿವರಮಧ್ಯಗತವಾದ ಚಂದ್ರನಂತೆ ರಾರಾಜಿಸುತ್ತಿದ್ದಿತು.

**ಅನಿರ್ಲೋಡಿತಕಾರ್ಯಸ್ಯ ವಾಗ್ಜಾಲಂ ವಾಗ್ಮಿನೋ ವೃಥಾ ।**
**ನಿಮಿತ್ತಾದಪರಾದ್ಧೇಷೋರ್ಧಾನುಷ್ಕಸ್ಯೇವ ವಲ್ಗಿತಂ ॥ ೨—೨೭ ॥**

ಕಾಲದೇಶಭೇದದಿಂದ ಕಾರ್ಯಾಕಾರ್ಯಗಳನ್ನು ತಿಳಿಯದೆ ಸರ್ವಸ್ವವನ್ನೂ ಸಾಧಿಸುವೆನೆಂಬುವನ ವಾಗಾಡಂಬರವು ಗುರಿತಪ್ಪಿದ ಬಾಣಪ್ರಹಾರದಂತೆ ಅಸಾರ್ಥಕವಾಗುವದು.



# ಅಮರುಕ

ಇವನು 'ಸುವರ್ಣಕಾರ'ನೆಂದು

. . . . **ವಿಶ್ವಪ್ರಖ್ಯಾತನಾಡಿಂಧಮಕುಲತಿಲಕೋ ವಿಶ್ವಕರ್ಮಾ ದ್ವಿತೀಯಃ** ॥‡
ಎಂದು ಹೇಳಿರುವುದರಿಂದ ತಿಳಿಯುಬರುವುದು.

ಇವನ ಕಾಲವಿಚಾರದಲ್ಲಿ ಪ್ರೊ. ಎಮ್. ಕೃಷ್ಣಮಾಚಾರ್ಯರವರು ಇವನು ಶಂಕರಯತೀಂದ್ರರ ಕಾಲದವನೆಂದಿರುವರು.$

ಪ್ರೊ. ಮ್ಯಾಕ್ಸಮುಲ್ಲರವರೂ ಮತ್ತು ಇ. ಎಸ್. ಕೃಷ್ಣಸ್ವಾಮಯ್ಯರವರೂ ಶಂಕರಯತೀಂದ್ರರ ಕಾಲವು ಕ್ರಿ. ಶ. ೭೮೮ ಆಗಿರಬೇಕೆಂದು ಸಾಧಿಸಿರುವರು.†

ಕ್ರಿ. ಶ. ೯ ನೆಯ ಶತಮಾನದವನಾದ ಆನಂದವರ್ಧನನು ತನ್ನ ಗ್ರಂಥದಲ್ಲಿ ಅಮರುಕನ ಶ್ಲೋಕಗಳನ್ನು ಉದಹರಿಸಿಕೊಂಡಿರುವನು. ಇದರಿಂದ ಆನಂದವರ್ಧನನಿಗಿಂತಲೂ ಅಮರುಕನು ಪ್ರಾಚೀನನೆಂದೂ ಶಂಕರರ ಕಾಲವು ಕ್ರಿ.ಶ.೮ ನೆಯ ಶತಮಾನವಾದುದರಿಂದ ಇವರ ಸಮಕಾಲಿಕನಾದ ಅಮರುಕನೂ ಕ್ರಿ. ಶ. ಎಂಟನೆಯ ಶತಮಾನದವನೆಂದೂ ನಿರ್ಧರವಾಗುವುದು.

‡ Dr. Peterson's Intro. to *Subhashithavali* P. 2.
$ The Classical Sanskrit Literature P. 120.
† Shankara and his Age. P. 15.

ಇವನು "**ಅಮರುಶತಕ**"*ಎಂಬ ನೂರುಶ್ಲೋಕಗಳುಳ್ಳ ಶೃಂಗಾರ ಗ್ರಂಥವನ್ನು ಬರೆದಿರುವನು. ಈ ಕವಿಯು ಪ್ರಣಯಿಗಳ ಭಾವ, ಆನಂದ, ಪ್ರೀತಿ, ಕೋಪ, ವಿರಹ, ಅನುವರ್ತನಗಳೇ ಮೊದಲಾದುವುಗಳನ್ನು ಸಹಜವಾಗಿ ಚಿತ್ರಿಸುವುದರಲ್ಲಿ ಅತಿನಿಪುಣನಾಗಿದ್ದನೆಂದು ತೋರುತ್ತದೆ. ಇತ್ತೀಚೆಗೆ ಇದರಲ್ಲಿ ನೂತನನೂತನಗಳಾದ ಶ್ಲೋಕಗಳು ಸಂಕಲಿತವಾಗಿರುವಂತೆ ಕಂಡುಬರುವುದರಿಂದ ಅಮರುಶತಕದ ಶ್ಲೋಕಗಳೆಲ್ಲವೂ ಇವನದೆಂದು ಹೇಳಲಾಗುವುದಿಲ್ಲ. ಅಮರುಶತಕದ ಕೆಲವು ಶ್ಲೋಕಗಳು ಅರ್ಗಟ, ವಾಸುದೇವ, ಪುಳಿನ, ವಿಜ್ಜಿಕಾ, ದುರ್ವಾಹಕ, ರತ್ನಾಕರ, ಶಿಲಾಭಟ್ಟಾರಿಕಾ, ಅದ್ಭುತಮಲ್ಲ ಇವರುಗಳಿಂದ ರಚಿತವಾದುವೆಂದು ವಲ್ಲಭದೇವನ ಸುಭಾಷಿತಾವಳಿಯಲ್ಲಿ ಹೇಳಲ್ಪಟ್ಟಿರುವುದು. ಅಮರುಕನು ವಿಶೇಷವಾಗಿ ಶಾರ್ದೂಲವಿಕ್ರೀಡಿತವೃತ್ತದಲ್ಲಿ ಶ್ಲೋಕಗಳನ್ನು ಬರೆದಿರುವುದಾಗಿ ತೋರುವುದರಿಂದ ಈ ಶತಕದಲ್ಲಿ ಕಾಣುವ ಈ ಬಗೆಯ ಶ್ಲೋಕಗಳು ಮಾತ್ರವೇ ಇವನದಾಗಿರಬಹುದೆಂದು ಹೇಳಬೇಕಾಗಿದೆ.

ಗ್ರಂಥಾಂತ್ಯದಲ್ಲಿ—

> "ಇತಿ ಶ್ರೀವೀರನಾರಾಯಣಸಕಲವಿದ್ಯಾವಿಶಾರದ ಪೆದ್ದಕೋಮಟಿ ವೇಮಭೂಪಾಲವಿರಚಿತಾ ಶೃಂಗಾರದೀಪಿಕಾಖ್ಯಾ ಅಮರುಕ ವ್ಯಾಖ್ಯಾ ಸಮಾಪ್ತಾ।"

ಎಂದಿರುವುದರಿಂದ ವೇಮಭೂಪಾಲನೆಂಬವನು ಇದಕ್ಕೆ "ಶೃಂಗಾರದೀಪಿಕಾ" ಎಂಬ ವ್ಯಾಖ್ಯಾನವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಇವನಲ್ಲದೆ ಈ ಶತಕಕ್ಕೆ ಅರ್ಜುನವರ್ಮದೇವನು "ರಸಿಕಸಂಜೀವಿನಿ" ಎಂಬ ವ್ಯಾಖ್ಯಾನವನ್ನೂ ಸೂರ್ಯದಾಸನು "ಶೃಂಗಾರತರಂಗಿಣಿ" ಎಂಬ ವ್ಯಾಖ್ಯಾನವನ್ನೂ ಶೇಷರಾಮಕೃಷ್ಣನೆಂಬವನು 'ರಸಿಕಸಂಜೀವಿನಿ' ಎಂಬ ಮತ್ತೊಂದು ವ್ಯಾಖ್ಯಾನವನ್ನೂ ಬರೆದಿರುವರು. ಇದಲ್ಲದೆ ರುದ್ರದೇವನ ವ್ಯಾಖ್ಯಾನವೂ ರವಿಚಂದ್ರನ ವ್ಯಾಖ್ಯಾನವೂ ಇರುವುವು.

ಇದರಡಿ ಮಾದರಿಗಾಗಿ ಎರಡು ಶ್ಲೋಕಗಳನ್ನು ಕೊಡುವೆವು—

ಪ್ರಣಯಕುಪಿತಳಾದೊಬ್ಬಳು ತನ್ನ ಪ್ರಾಣಾಧಿಕನಲ್ಲಾಚರಿಸಿದ ಕಾರ್ಯ ಚತುರತೆಯ ವರ್ಣನವು ಹೀಗಿರುವುದು—

---

* **ಶ್ರೀಮಚ್ಛಂಕರಭಗವತ್ಪಾದರನ್ನು ಅಮರುಶತಕಕಾರರನ್ನಾಗಿ ಮಾಧವೀಯಶಂಕರ ವಿಜಯವು ಹೇಳುವುದಲ್ಲದೆ ಅಮರುಶತಕದ ಪ್ರಸ್ತಾವನೆಯಲ್ಲಿಯೂ ಉದ್ಧೃತವಾಗಿರುವುದು. ಅಮರುಶತಕಕಾರನಾದ ಅಮರುಕನಿಗೂ ಶ್ರೀಮಚ್ಛಂಕರಭಗವತ್ಪಾದರಿಗೂ ಯಾವ ಸಂಬಂಧವೂ ಇರದೆಂದು ಸುಶಿಕ್ಷಿತರು ತದ್ಗ್ರಂಥಾವಲೋಕನದಿಂದ ಮಾತ್ರವೇ ತಿಳಿಯಬಹುದಾಗಿದೆ.**

ಏಕತ್ರಾಸನಸಂಸ್ಥಿತಿಃ ಪರಿಹೃತಾ ಪ್ರತ್ಯುದ್ಗಮಾದ್ದೂರತಃ
ತಾಂಬೂಲಾಹರಣಚ್ಛಲೇನ ರಭಸಾಶ್ಲೇಷೋಽಪಿ ಸಂವಿಘ್ನಿತಃ ।
ಆಲಾಪೋಽಪಿ ನ ಮಿಶ್ರಿತಃ ಪರಿಜನಂ ವ್ಯಾವರ್ತಯಂತ್ಯಾಂತಿಕೇ
ಕಾಂತಂ ಪ್ರತ್ಯುಪಚಾರತಶ್ಚತುರಯಾ ಕೋಪಃ ಕೃತಾರ್ಥೀಕೃತಃ ॥

—ಅಮರುಶತಕ ೧೮.

ಎದುರುಗೊಳ್ಳುವ ನೆಪದಿಂದ ಏಕಾಸನಸ್ಥಿತಿಗೂ ತಾಂಬೂಲಾಹರಣ ನೆಪದಿಂದ ರಭಸಾಲಿಂಗನಕ್ಕೂ ಸವಿಾಪವರ್ತಿಗಳಾಗಿ ತಿರುಗುತ್ತಿರುವ ಸಖಿಯರ ನೆಪದಿಂದ ಮಾತಾಡುವಿಕೆಗೂ ಅವಕಾಶಕೊಡದೆ ಕಾಂತನನ್ನು ಉಪಚರಿಸುವ ನೆಪದಿಂದ ತನಗುಂಟಾದ ಪ್ರಣಯಕೋಪವನ್ನು ಚತುರತೆಯಿಂದ ಸಾರ್ಥಕ ಮಾಡಿಕೊಂಡಳು.

ಯಾವಳೋ ಓರ್ವ ಸ್ತ್ರೀಯಲ್ಲಿ ಅನುರಕ್ತನಾದವನು ಯೋಚಿಸಿಕೊಳ್ಳುವುದು:—

ಸಾ ಬಾಲಾ ವಯಮಪ್ರಗಲ್ಭಮನಸಃ ಸಾ ಸ್ತ್ರೀ ವಯಂ ಕಾತರಾಃ
ಸಾ ಪೀನೋನ್ನತಿಮತ್ಪಯೋಧರಯುಗಂ ಧತ್ತೇ ಸಖೇದಾವಯಂ ।
ಸಾಕ್ರಾಂತಾ ಜಘನಸ್ಥಲೇನ ಗುರುಣಾ ಗಂತುಂ ನ ಶಕ್ತಾ ವಯಂ
ದೋಷೈರನ್ಯಜನಾಶ್ರಯೈರಪಟವೋ ಜಾತಾಃ ಸ್ಮ ಇತ್ಯದ್ಭುತಂ ॥

—ಅಮರುಶತಕ ೩೪.

ಆಕೆಯು ಹುಡುಗಿ, (ಬಾಲ್ಯವಿರುವಲ್ಲಿ ಅಪ್ರಗಲ್ಭತೆಯು ಸ್ವಭಾವವಾಗಿರಬೇಕಾದುದು) ಆದರೂ ನಾವು ಅಪ್ರಗಲ್ಭಮನವುಳ್ಳವರಾಗಿರುವೆವು. ಆಕೆಯು ಹೆಂಗಸು, (ಸ್ತ್ರೀಯರಲ್ಲಿ ಕಾತರತೆಯು ಸಹಜವಾದುದು) ಆದರೂ ನಾವು ಕಾತರರಾಗಿರುವೆವು. ಆಕೆಯು ಪೀನೋನ್ನತವಕ್ಷೋಜಗಳುಳ್ಳವಳು (ಭಾರವನ್ನುಹೊತ್ತಿರುವವರು ಖೇದಪಡುವರು) ಆದರೂ ನಾವು ಖೇದವನ್ನು ಅನುಭವಿಸುತ್ತಿರುವೆವು. ಆಕೆಯು ಗುರುತರಜಘನಾಕ್ರಾಂತಳಾಗಿರುವಳು (ಗುರುತರಭಾರಾಕ್ರಾಂತರು ನಡೆಯಲು ಸಮರ್ಥರಲ್ಲ) ಆದರೂ ನಾವು ನಡೆಯಲು ಸಮರ್ಥರಾಗಿರುವುದಿಲ್ಲ. ಈರೀತಿಯಾಗಿ ಅನ್ಯರ ದೋಷಗಳಿಂದ ನಾವು ನಿಶ್ಚೇಷ್ಟಿತರಾಗಿ ಮಾಡಲ್ಪಟ್ಟಿರುವೆವೆಂಬುದೇ ಅತ್ಯಾಶ್ಚರ್ಯಕರವಾಗಿರುವುದು.



## ಆರ್ಯಸೂರಿ

ಇವನು*ಕೌಂಡಿನ್ಯಗೋತ್ರದವನು. 'ವಿಜಯವಿಕ್ರಮ'ವೆಂಬ ವ್ಯಾಯೋಗ ವನ್ನು ಬರೆದಿರುವನು. ಇದರ ಪದಬಂಧ ಮತ್ತು ಶೈಲಿಯು ಪ್ರೌಢತರ ವಾದುದಾಗಿ ವೀರರಸದೊಡನೆ ಕೂಡಿ ಭವಭೂತಿಯ ಮಹಾವೀರಚರಿತವನ್ನು ಜ್ಞಾಪಕಕ್ಕೆ ತರುವುದಾಗಿದೆ. ಇದರಿಂದ ಇವನು ಕ್ರಿ. ಶ. ಎಂಟನೆಯ ಶತ ಮಾನದವನಾಗಿರಬಹುದೆಂದು ಊಹಿಸಬೇಕಾಗಿದೆ. ಇದರಲ್ಲಿಯ ಶ್ಲೋಕಗಳು ಹೀಗಿರುವುವು—

ವಸಂತರ್ತುವರ್ಣನೆ—

ಮಾನಂ ವಿಮೋಚಯತಿ ಜೀರ್ಣಮಿವಾಶುಪರ್ಣಂ
ರಾಗಂ ಪ್ರವಾಲಮಿವ ನೂತನಮಾತನೋತಿ ।
ವೀರುತ್ಸ್ವಿವ ಪ್ರತಿನವೋತ್ಕಲಿಕಾಕುಲಾಸು
ಯೋಷಿತ್ಸ್ವಪಿ ಪ್ರಚರತಿ ಸ್ಫುಟಮೇಷ ಚೈತ್ರಂ ॥

ಸೈಂಧವ ವಧಾರ್ಥವಾಗಿ ಹೋಗುವಾಗ ಕೃಷ್ಣನು ಅರ್ಜುನನಿಗೆ ಬಹು ಉತ್ಸಾಹದಿಂದ ಹೇಳುವಿಕೆ—

ರಣಪ್ರಸ್ಥಾನೋದ್ಯತ್ಪಟುಪಟಹನಾದಶ್ರುತಿಭವ
ನ್ಮುದಾ ಪ್ರಾದುರ್ಭೂತಪ್ರಚುರಪುಲಕಾಂಕಾ ತವ ತನುಃ ।
ಅಯಂ ತೇ ಕೃಷ್ಣಾಯಾಃ ಕುಚಕಲಶಸಂಭಾರಸುಭಗಃ
ಪರೀರಂಭೋ ಭೂಯೋ ದ್ವಿಗುಣಪುಲಕೈರಂಕುರಯತಿ ॥

ಎಲೈ! ಅರ್ಜುನ! ಯುದ್ಧಕ್ಕೆ ಹೊರಡಲನುವಾಗಿರುವ ನಿನ್ನ ಅವಯವ ಗಳು ಸಮರಪ್ರಯಾಣಕಾಲದ ಅತ್ಯಂತಭೀಷಣವಾದ ಭೇರೀನಿನಾದದಿಂದ ಪುಲ ಕಿತವಾಗದಿದ್ದರೂ ನಿನ್ನ ಪ್ರಣಯಮೂರ್ತಿಯ ಗಾಢಾಲಿಂಗನದಿಂದ ರೋಮಾಂ ಚವು ದ್ವಿಗುಣಿತವಾಗಿ ಅಂತಸ್ಥವಾಗಿದ್ದ ವೀರರಸವನ್ನಭಿವೃದ್ಧಿಪಡಿಸಿ ಯುದ್ಧಕ್ಕೆ ಹೊರಡಲು ನಿನ್ನನ್ನು ಹುರಿದುಂಬಿಸುತ್ತಿರುವುದು.

ಭೀಷ್ಮನನ್ನು ನೋಡಿ ಹೇಳುವುದು—

ಪಿತ್ರರ್ಥಂ ತ್ಯಜತಾ ಸಮುದ್ರವಲಯಕ್ಷೋಣೀಗತಪ್ರಾಭವಂ
ಭ್ರಾತ್ರರ್ಥಂ ಚ ಸಮುಜ್ಝಿತಃ ಪ್ರಣಯಿನೀಸಂಭೋಗಲೀಲಾರಸಂ ।
ಪೌತ್ರಾರ್ಥಂ ಜಹತಃ ತಥಾ ಪ್ರಿಯತಮಾನ್ ಪ್ರಾಣಾನ್ ರಣಪ್ರಾಂಗಣೇ
ಲೋಕೋತ್ತೀರ್ಣಮಹೋ ನ ಕಿಂ ಗುಣಗಣೋತ್ತುಂಗಸ್ಯ ಗಾಂಗಾಯನೇಃ॥

* ಕಾವ್ಯಮೀಮಾಂಸೆಯಲ್ಲಿ ಹೇಳಲ್ಪಟ್ಟಿರುವ ಆರ್ಯಸೂರಿಯು ಇವನಲ್ಲ.

ತಾನು ಮಹಾಶೂರನೂ ಕ್ಷತ್ರಿಯಕುಲತಿಲಕನೂ ಆಗಿದ್ದರೂ ತಂದೆಯ ಸಲುವಾಗಿ ರಾಜ್ಯವನ್ನೂ ಸೋದರರಿಗಾಗಿ ಸುಖಾಭಿಲಾಷೆಯನ್ನೂ ಪೌತ್ರನಾದ ದುರ್ಯೋಧನನಿಗಾಗಿ ಯುದ್ಧರಂಗದಲ್ಲಿ ಪ್ರಾಣವನ್ನೂ ಕೊಟ್ಟ ಭೀಷ್ಮನ ಅತ್ಯಂತ ಶ್ರೇಷ್ಠವಾದ ಗುಣಗಳು ಲೋಕೋತ್ತರವಾದುವುಗಳಾಗಿರುವುವು.

ದ್ರೋಣನನ್ನು ಕಂಡು ಹೇಳುವುದು—

> ಕ್ಷತ್ರಶ್ರಿಯಂ ಪ್ರಕಟಯನ್ ವಿಷಮಾಸ್ತ್ರಚಿಹ್ನಾನ್
> ಬ್ರಾಹ್ಮೀಂ ಶ್ರಿಯಂ ಚ ಕಲಯನ್ ಮುಖವೇದಿಲಕ್ಷ್ಯಾಂ ।
> ಯಃ ಕ್ರೂರಸೌಮ್ಯಹೃದಯೋ ಮಥನಾತ್ಪುರಸ್ತಾ
> ದಂತರ್ವಿಷಾಮೃತಯುತೋಽಬ್ಧಿರಿವಾವಭಾತಿ ॥

ಕ್ಷತ್ರಿಯರ ಮಧ್ಯದಲ್ಲಿ ಮಹಾಯೋದ್ಧನಂತೆ ಅತ್ಯಂತಭೀಷಣಗಳಾದ ಬಾಣಗಳ ಮಳೆಯನ್ನು ಸುರಿಸುತ್ತ ಬ್ರಾಹ್ಮಣಸಮುದಾಯದಲ್ಲಿ ಉಜ್ವಲಬ್ರಹ್ಮ ತೇಜಸ್ಸಿನಿಂದ ದೇದೀಪ್ಯಮಾನನಾಗಿ ಕಾಣುತ್ತಿರುವ ದ್ರೋಣನು ಹಿಂದೆ ಸಾಗರ ಮಥನಕಾಲದಲ್ಲಿ ಒಳಗೆ ಕಾಲಕೂಟವನ್ನೂ ಹೊರಗೆ ಅಮೃತವನ್ನೂ ಧರಿಸಿ ಕೊಂಡಿದ್ದ ಸಮುದ್ರನಂತೆ ಗಂಭೀರನೂ ಭಯಂಕರನೂ ಆಗಿರುವನು.



## ತ್ರಿವಿಕ್ರಮಭಟ್ಟ

ಇವನು 'ದೇವಾದಿತ್ಯಭಟ್ಟ'ನ ಮಗನೆಂದು ಮಾತ್ರ ಈತನು ಬರೆದಿರುವ "**ದಮಯಂತೀಕಥಾ**" ಎಂಬ ಗ್ರಂಥದ ಭೂಮಿಕೆಯಿಂದ ತಿಳಿಯಬರುವುದು. ಇದನ್ನು "**ನಳಚಂಪೂಃ**" ಎಂದೂ ಕರೆಯುವರು.

ಇವನು ತನ್ನ ಗ್ರಂಥದಲ್ಲಿ—

> ಶಶ್ವದ್ಬಾಣದ್ವಿತೀಯೇನ ನಮದಾಕಾರಧಾರಿಣಾ ।
> ಧನುಷೇವ ಗುಣಾಢ್ಯೇನ ನಿಃಶೇಷೋ ರಚಿತೋ ಜನಃ ॥ ೧—೧೪ ॥

ಎಂದು ಮಹಾಕವಿಬಾಣನ ಹೆಸರನ್ನು ಹೇಳಿರುವುದರಿಂದಲೂ "ಸರಸ್ವತೀಕಂಠಾ ಭರಣ"ಕಾರನಾದ ಭೋಜನು ತನ್ನ ಗ್ರಂಥದಲ್ಲಿ ತ್ರಿವಿಕ್ರಮನ ದಮಯಂತೀ ಕಥೆಯ—

> ಪರ್ವತಭೇದಿಪವಿತ್ರಂ ಜೈತ್ರಂ ನರಕಸ್ಯ ಬಹುಮತಂ ಗಹನಂ ।
> ಹರಿಮಿವ ಹರಿಮಿವ ಹರಿಮಿವ ವಹತಿ ಪಯಃ ಪಶ್ಯತ ಪಯೋಷ್ಣೀ ॥

ಎಂಬ ಶ್ಲೋಕವನ್ನು ಉದಹರಿಸಿಕೊಂಡಿರುವುದರಿಂದಲೂ **ತ್ರಿವಿಕ್ರಮಭಟ್ಟ**ನು ಬಾಣನಿಗಿಂತ ಈಚಿನವನೂ ಭೋಜನಿಗಿಂತ ಪ್ರಾಚೀನನೂ ಆಗಿರಬೇಕೆಂದು ವ್ಯಕ್ತವಾಗುವುದು. ಬಾಣನು ಕ್ರಿ.ಶ. ಏಳನೆಯ ಶತಮಾನದವನು. ಭೋಜನು ಕ್ರಿ. ಶ. ಹನ್ನೊಂದನೆಯ ತಶಮಾನದವನು. ಕ್ರಿ.ಶ. ೯–೧೦ ನೆಯ ಶತಮಾನದ ಆಲಂಕಾರಿಕರಾರೂ ಉದಾಹರಣೆಗಾಗಿ ತ್ರಿವಿಕ್ರಮನ ಹೆಸರನ್ನು ಹೇಳದಿರುವುದರಿಂದಲೂ ಕ್ರಿ. ಶ. ೧೦ ನೆಯ ಶತಮಾನಾನಂತರ ದೊರೆಯುವ **ಚಂಪೂ**ಗ್ರಂಥಗಳು ಬಹುಸರಸವಾಗಿದ್ದು ಇಂತಹ ಕ್ಲಿಷ್ಟಶೈಲಿಯು ಕ್ರಿ. ಶ. ಹತ್ತನೆಯ ಶತಮಾನದ ಹಿಂದೆ ಗೌರವಿಸಲ್ಪಡುತ್ತಿದ್ದುದಾಗಿ ಸ್ಪಷ್ಟಪಡುವುದರಿಂದಲೂ ಇವನು ಎಂಟನೆಯ ಶತಮಾನದ ಉತ್ತರಾರ್ಧದವನಾಗಿರಬೇಕೆಂದು ತೋರುವುದು.

"**ದಮಯಂತೀಕಥೆ**"ಯಲ್ಲಿ ಏಳು ಉಚ್ಛ್ವಾಸಗಳಿರುವುವು. ಇದು ಗದ್ಯ ಪದ್ಯಮಯವಾದ **ಚಂಪೂ***ಗ್ರಂಥವಾಗಿರುವುದು. ಇದಕ್ಕೆ ಚಂಡಪಾಲ, ಗುಣವಿನಯಗಣಿ, ದಾಮೋದರಭಟ್ಟ ಈ ಮೂವರು ಟೀಕೆಯನ್ನು ಬರೆದಿರುವರು.† ಇದರಲ್ಲಿ ಚಂಡಪಾಲಕೃತ "ವಿಷಮಪದಪ್ರಕಾಶ"ವೆಂಬ ವ್ಯಾಖ್ಯಾನವು ಹೆಸರಾದುದು. ಪ್ರೊ. ಎಮ್. ಕೃಷ್ಣಮಾಚಾರ್ಯರವರು ನಾಲ್ಕು ಟೀಕೆಗಳು ಇರುವುವಾಗಿ ಹೇಳಿರುವರು.‡ ಮತ್ತೊಂದು ಯಾವುದೆಂಬುದು ತಿಳಿಯದು. ಪ್ರತಿಸರ್ಗಾಂತದಲ್ಲಿಯೂ—

> "ಇತಿ 'ಶ್ರೀತ್ರಿವಿಕ್ರಮಭಟ್ಟ' ವಿರಚಿತಾಯಾಂ 'ದಮಯಂತೀ
> ಕಥಾ'ಯಾಂ ಹರಚರಣಸರೋಜಾಂಕಾಯಾಂ"

ಎಂದಿದೆ. ಇವನ ಗದ್ಯ ಮತ್ತು ಪದ್ಯಶೈಲಿಯು ದೀರ್ಘಸಮಾಸ-ಶ್ಲೇಷಕ್ಲಿಷ್ಟತೆಗಳಿಂದ ಕೂಡಿ ಸುಬಂಧುವಿನ ಕವಿತಾಶೈಲಿಯನ್ನು ಹೋಲುವುದಾದರೂ ಸುರಸವಾಗಿದೆ.

ತನ್ನ ತಂದೆಯು ಯಾವುದೋ ಕಾರ್ಯಾರ್ಥಿಯಾಗಿ ಗ್ರಾಮಾಂತರಕ್ಕೆ ಹೋಗಿದ್ದ ಸಮಯದಲ್ಲಿ ಪರ ಊರಿನ ವಿದ್ವಾಂಸನೊಬ್ಬನು ರಾಜಸಭೆಗೆ ಬಂದು ತನ್ನ ಪಾಂಡಿತ್ಯಪ್ರದರ್ಶನಾರ್ಥವಾಗಿ ರಾಜಸಭಾಪಂಡಿತರನ್ನು ವಾದಕ್ಕಾಗಿ ಪ್ರಾರ್ಥಿಸಿದನು. ರಾಜದೂತರು ದೇವಾದಿತ್ಯಭಟ್ಟನ ಮನೆಗೆ ಬಂದು ರಾಜಾಜ್ಞೆ

* ಗದ್ಯಪದ್ಯಮಯಂ ಕಾವ್ಯಂ 'ಚಂಪೂ'ರಿತ್ಯಭಿಧೀಯತೇ । —ಸಾಹಿತ್ಯದರ್ಪಣ.

† Introduction to *Damayanthee Katha* P. 2.

‡ The Classical Sanskrit Literature P. 147.

ಯನ್ನು ತಿಳಿಸಲು ತ್ರಿವಿಕ್ರಮಭಟ್ಟನು ರಾಜಸಭೆಗೆ ಮಾರನೆಯ ದಿವಸ ಬರುವುದಾಗಿ ಹೇಳಿಕಳುಹಿಸಿ ಆ ರಾತ್ರಿ ಸಕಲವಿದ್ಯಾಧಿದೇವತೆಯಾದ ಸರಸ್ವತಿಯನ್ನು ಬಹುತರಪ್ರಾರ್ಥಿಸಿ ಪ್ರಸನ್ನಳನ್ನಾಗಿಮಾಡಿಕೊಂಡು ಎಲೌ! ಸರಸ್ವತಿಯೇ! ಗ್ರಾಮಾಂತರಕ್ಕೆ ಹೋಗಿರುವ ನನ್ನ ತಂದೆಯು ಬರುವವರೆಗೂ ನನಗೆ ಕವಿತಾಶಕ್ತಿಯನ್ನೂ ವಾಗ್ಧೋರಣಿಯನ್ನೂ ಅನುಗ್ರಹಿಸಿ ಎದುರಾಳಿಯನ್ನು ಪರಾಜಿತನನ್ನಾಗಿ ಮಾಡಿಕೊಡಬೇಕೆಂದು ಪ್ರಾರ್ಥಿಸಲು ಶಾರದೆಯು ಹಾಗೆಯೇ ಆಗಲೆಂದು ಹರಸಿ ಅದೃಶ್ಯಳಾದಳು. ಅನಂತರ ತ್ರಿವಿಕ್ರಮಭಟ್ಟನು ರಾಜಸಭೆಯನ್ನೈದಿ ಪ್ರತಿವಾದಿಯನ್ನು ಜಯಿಸಿ ಸಂತುಷ್ಟನಾಗಿ ತಂದೆಯು ಬರುವುದರೊಳಗಾಗಿ ಯಾವುದಾದರೊಂದು ಕಾವ್ಯವನ್ನು ಬರೆಯಬೇಕೆಂದಾಲೋಚಿಸಿ—

ಪುಣ್ಯಶ್ಲೋಕೋ ನಳೋ ರಾಜಾ ಪುಣ್ಯಶ್ಲೋಕೋ ಯುಧಿಷ್ಠಿರಃ ||
ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಜನಾರ್ದನಃ |

ಎಂಬುದನ್ನರಿತು ಅದರಂತೆ ಪುಣ್ಯಶ್ಲೋಕನಾದ ನಳಮಹಾರಾಜನ ಕಥೆಯನ್ನು ಮಹಾಭಾರತದಿಂದ ತೆಗೆದುಕೊಂಡು ಚಂಪೂಕಾವ್ಯವಾಗಿ ಬರೆದುದಾಗಿಯೂ ಇವನು ಇದನ್ನು ಬರೆಯುವುದಕ್ಕೆ ಪ್ರಾರಂಭಿಸಿದ ಕೆಲವು ದಿವಸಗಳಲ್ಲಿಯೇ ತಂದೆಯು ಸ್ವಗ್ರಾಮಕ್ಕೆ ಹಿಂದಿರುಗಿದನಾದುದರಿಂದ ಮೊದಲೇ ತ್ರಿವಿಕ್ರಮನು ಕೇಳಿಕೊಂಡಂತೆ ಸರಸ್ವತಿಯು ಅದೃಶ್ಯಳಾಗಿ ವಾಙ್ಮಯವು ಕುಂಠಿತವಾಗಿ ಗ್ರಂಥವು ಪೂರ್ತಿಯಾಗದೆ ಏಳು ಉಚ್ಛ್ವಾಸಗಳವರೆಗೆ ಆಗಿ ನಿಂತುಹೋದುದಾಗಿಯೂ ಜನಜನಿತ ಕಥೆಯೊಂದಿರುವುದು.* ಇದಕ್ಕನುಗುಣವಾಗಿ ಕಥೆಯೂ ಪೂರ್ತಿಯಾಗಿ ಬರೆಯಲ್ಪಡದೆ ನಳನು ದುಃಖಪೂರ್ಣನಾಗಿ ಹಂಸತೂಲಿಕಾತಲ್ಪದಲ್ಲಿ ಮಲಗಿ—

ಹರ್ಷಾದುತ್ಪುಲಕಂ ವಿಕಾಸಿ ರಭಸಾದುತ್ತಾನಿತಂ ಕೌತುಕಾ
ಧ್ಭ್ರೂಂಗಾರಾದಲಸಂ ಭಯಾತ್ತರಲದೃಙ್ನಮ್ರಂಚ ಲಜ್ಜಾಭರಾತ್ |
ತಸ್ಯಾಸ್ತನ್ನವಸಂಗಮೇ ಮೃಗದೃಶೋ ದೃಶ್ಯೇತ ಭೂಯೋಽಪಿ ಕಿಂ
ಕಿಂಚಿತ್ಕಾಂಚನಗೌರಗಂಡಗಲಿತಸ್ವೇದಾಂಬುರಮ್ಯಂ ಮುಖಂ || ೭—೮೮.

ಅಪಿ ಚ

ಅಪಸರತಿ ನ ಚಕ್ಷುಷೋ ಮೃಗಾಕ್ಷೀ
ರಜನಿರಿಯಂ ಚ ನ ಯಾತಿ ನೈತಿ ನಿದ್ರಾ |
ಪ್ರಹರತಿ ಮದನೋಽಪಿ ದುಃಖಿತಾನಾಂ
ಬತ ಬಹುಶೋಽಭಿಮುಖೀಭವಂತ್ಯಪಾಯಾಃ || ೭—೮೯

* Intro. to *Damayanthi Katha* P. 1.

ಇತಿ ವಿವಿಧವಿತರ್ಕಾವೇಶವಿಧ್ವಸ್ತನಿದ್ರಃ
ಸಜಲಜಡಿಮ ಮಾಲತ್ಪಕ್ಷ್ಮ ಚಕ್ಷುರ್ದಧಾನಃ ।
ಹರಚರಣಸರೋಜದ್ವಂದ್ವಮಾಧಾಯ ಚಿತ್ತೇ
ನೃಪತಿರಪಿ ವಿದಗ್ಧಃ ಸ ತ್ರಿಯಾಮಾಮನೈಷೀತ್ ॥ —೫೦

ಎಂದು ಯೋಚಿಸುತ್ತಿದ್ದನೆಂಬಲ್ಲಿಗೆ ಮುಗಿಸಲ್ಪಟ್ಟು "ಗ್ರಂಥೋಽಪಿ ಸಮಾಪ್ತಃ" ಎಂದಿರುವುದು.

ವ್ಯಾಖ್ಯಾನಕಾರನಾದ ಚಂಡಪಾಲನು ಏಳು ಉಚ್ಛ್ವಾಸಗಳ ವ್ಯಾಖ್ಯಾನವನ್ನು ಮುಗಿಸಿ ಕೊನೆಯಲ್ಲಿ "ಇತಿ ಶ್ರೀ ಚಂಡಪಾಲ ವಿರಚಿತೇ ದಮಯಂತೀ ವಿವರಣೇ ಸಪ್ತಮ ಉಚ್ಛ್ವಾಸಃ ಸಮಾಪ್ತಃ" ಎಂದು ಬರೆದಿರುವನೇ ಹೊರತು ಗ್ರಂಥವು ಮುಗಿಯಿತೆಂದು ಹೇಳಿರುವುದಿಲ್ಲ. ಇದರಲ್ಲಿಯ ನಳಹಂಸೀಸಂವಾದವನ್ನು ಮಾದರಿಗಾಗಿ ಬರೆಯುವೆವು:—

ನಳಮಹಾರಾಜನು ವನವಿಹಾರಕ್ಕಾಗಿ ಬಂದು ಅಲ್ಲಿದ್ದ ಒಂದಾನೊಂದು ಕಾಸಾರದಲ್ಲಿ ವಿಹರಿಸುತ್ತಿದ್ದ ಹಂಸಗಳನ್ನು ಕಂಡು ಅವುಗಳಲ್ಲಿ ಒಂದನ್ನು ವಿನೋದಕ್ಕಾಗಿ ಹಿಡಿದುಕೊಳ್ಳಲು ಆ ರಾಜಹಂಸವು ರಾಜನನ್ನು ಆಶೀರ್ವದಿಸಿತು. * ನಳನು ಇದನ್ನು ಕೇಳಿ ಅಚ್ಚರಿಗೊಂಡು ಹಂಸಕ್ಕೆ ಸ್ವಾಗತವನ್ನು ಬಯಸಲು ಆ ಹಂಸವು ಎಲೈ! ರಾಜನೆ, ನಿನ್ನ ಆಲೋಕನದಿಂದಲೇ ನನಗೆ ಸುಸ್ವಾಗತವೆಂದು ಹೇಳಿ ರಾಜನನ್ನು ಸಂತೋಷಗೊಳಿಸಿತು. ಇಷ್ಟರಲ್ಲಿಯೇ ಹಂಸಿಯು ರಾಜನು ತನ್ನ ಪ್ರಿಯನನ್ನು ಬಂಧಿಸಿಟ್ಟುಕೊಂಡಿರುವುದನ್ನು ನೋಡಿ ಖೇದಪಡುತ್ತ ಹೇಗಾದರೂ ಮಾಡಿ ತನ್ನ ಸ್ವಾಮಿಯನ್ನು ಬಿಡಿಸಿಕೊಳ್ಳಬೇಕೆಂದು ಯೋಚಿಸಿ ರಾಜನನ್ನು ಕುರಿತು ಶ್ಲೇಷಯುಕ್ತವಾಗಿರುವ ಮಾತುಗಳಿಂದ ಹೀಗೆಂದಿತು:—

"ಏಕಾಂತೇ ಸೇವತೇ ಯೋಗಂ ಮುಕ್ತಾಹಾರಪರಿಚ್ಛದಃ ।
ಹಂಸಃ ಸ ಮೋಕ್ಷಯೋಗ್ಯೋಽಪಿ ದೇವ ಕಿಂ ಬಧ್ಯತೇ ತ್ವಯಾ ॥" ೨—೧೪

---

* ನಳನು ಹಿಡಿದ ಹಂಸವು ಮೊದಲು ದಮಯಂತಿಯ ಬಳಿಯಿಂದ ಬಂದು ದಮಯಂತಿಯ ಸೌಂದರ್ಯವರ್ಣನವನ್ನು ಮಾಡಬೇಕೆಂದೆಣಿಸಿ ನಳಮಹಾರಾಜನಿಗೆ ಹಂಸಗಳನ್ನು ಹಿಡಿಯುವ ಅಪೇಕ್ಷೆಯುಂಟಾದಾಗ ತಾನಾಗಿಯೇ ಅವನ ಕೈಗೆ ಸಿಕ್ಕಿ ಪ್ರಥಮ ಪರಿಚಯಾವಿಷ್ಟನಾದ ನಳನಿಗೆ ಆಶೀರ್ವದಿಸಿತು. ಹಾಗಲ್ಲದೇ ಇರುವದಾಗಿದ್ದರೆ ನಳನ ಕೈಗೆ ಸಿಕ್ಕಿ ಬಂಧಿಸಲ್ಪಟ್ಟಾಗ ದುಃಖಿಸುವುದಕ್ಕೆ ಬದಲಾಗಿ ಸಾನಂದದಿಂದಾಶೀರ್ವದಿಸುವ ಕಾರಣವಿರಲಿಲ್ಲ. ಇದರಿಂದ ಕಾರ್ಯಾರ್ಥಿಯಾದ ಹಂಸವು ದಮಯಂತಿಯಿಂದ ಕಳುಹಿಸಲ್ಪಟ್ಟು ತಾನಾಗಿಯೇ ಸಿಕ್ಕಿ ಬಿದ್ದುದಾಗಿ ಸ್ಪಷ್ಟವಾಗುತ್ತದೆ.

**ಹಂಸಪರವಾಗಿ:—** ಏ—ಎಲೈ ಕಂದರ್ಪಪ್ರತಿಮನಾದ, ದೇವ—ಪ್ರಭುವೇ, ಮುಕ್ತಾಹಾರ, ಪರಿಚ್ಛದಃ—ಮುತ್ತಿನಹಾರದಂತೆ ಶುಭ್ರವಾದ ರೆಕ್ಕೆಗಳಿಂದ ಸುಂದರವಾಗಿ ಕಾಣುತ್ತ, ಕಾಂತೆ, ಕಸ್ಯ-ಅಂತೆ—ಜಲ ಸಮೀಪದಲ್ಲಿರುವ, ಅಗಂ—ವೃಕ್ಷವನ್ನು,ಯಃ ಸೇವತೇ-ಆಶ್ರಯಿಸಿಕೊಂಡಿರುವ, ಸ ಹಂಸಃ-ಈ ರಾಜಹಂಸವು, ಮೋಕ್ಷಯೋಗ್ಯೋಽಪಿ—ಬಿಡಲ್ಪಡುವುದಕ್ಕೆ ಅರ್ಹವಾದುದಾದರೂ ತ್ವಯಾ—ನಿನ್ನಿಂದ, ಕಿಂ ಬಧ್ಯತೇ—ಏಕೆ ಬಂಧಿಸಲ್ಪಟ್ಟಿರುವುದು? ಎಂದರೆ:—

ಎಲೈ, ಕಂದರ್ಪಪ್ರತಿಮನಾದ ಸ್ವಾಮಿಯೇ ಮುತ್ತಿನಹಾರದಂತೆ ಶುಭ್ರವಾದ ರೆಕ್ಕೆಗಳಿಂದ ಕೂಡಿ ಸುಂದರವಾಗಿ ಕಾಣುತ್ತ ಜಲಸಮೀಪದಲ್ಲಿರುವ ವೃಕ್ಷವನ್ನಾಶ್ರಯಿಸಿಕೊಂಡಿರುವ ಈ ರಾಜಹಂಸವು ತನ್ನಿಷ್ಟಕ್ಕೆ ತಾನು ಎಲ್ಲಿಯೋ ಸುಖವಾಗಿ ಯಾರಿಗೂ ತೊಂದರೆಯನ್ನುಂಟುಮಾಡದೇ ಇರುವುದು. ಅದು ಎಲ್ಲಿಯಾದರೂ ಬಂಧಿತವಾದರೂ ಸಹ ನೀನು ಅದನ್ನು ಬಂಧನದಿಂದ ಅವಶ್ಯವಾಗಿ ಬಿಡಿಸಬೇಕು; ಹೀಗಿದ್ದರೂ ನೀನೇಅದನ್ನು ಬಂಧಿಸಿರುವಿಯಲ್ಲಾ—ಏಕೆ?

**ಆತ್ಮಪರವಾಗಿ:—** ದೇವ—ಎಲೈ ಪ್ರಭುವೇ, ಮುಕ್ತ ಆಹಾರ, ಪರಿಚ್ಛದಃ—ಅಶನ, ವಸನಾದಿಗಳನ್ನು ತೊರೆದು, ಏಕಾಂತೇ—ನಿರ್ಜನಪ್ರದೇಶದಲ್ಲಿದ್ದುಕೊಂಡು, ಕಾಂತೇ—ಪರಮಾನಂದಸ್ವರೂಪನಾದ, ಏ—ಶ್ರೀ ಕೃಷ್ಣಪರಮಾತ್ಮನಲ್ಲಿ, ಯೋಗಂ—ಅಧ್ಯಾತ್ಮಯೋಗವನ್ನು, ಸೇವತೇ—ಮಾಡುತ್ತಾ ಸಮಃ—ಸರ್ವತ್ರ ಸಮದರ್ಶಿಯಾಗಿರುವ, ಹಂಸಃ—ಆತ್ಮನು, ಅಕ್ಷಯೋಗ್ಯೋಽಪಿ—ಇಂದ್ರಿಯಸಂಬದ್ಧನಾಗಿರುವನಾದರೂ, ತ್ವಯಾ—ಆತ್ಮನಿಗೆ ಬೇರೆಯಾದ ಪ್ರಕೃತಿಯಿಂದ, ಬಧ್ಯತೇ ಕಿಂ—ಬದ್ಧನಾಗುವನೇ?

ಎಲೈ ಸ್ವಾಮಿಯೆ! ಅಶನವಸನಾದಿಗಳನ್ನು ತೊರೆದು ನಿರ್ಜನ ಸ್ಥಳದಲ್ಲಿದ್ದುಕೊಂಡು ಪರಮಾನಂದರೂಪನಾದ ಕೃಷ್ಣನಲ್ಲಿ ಅಧ್ಯಾತ್ಮಯೋಗರತನಾಗಿ ಸರ್ವತ್ರಸಮದರ್ಶಿಯಾಗಿರುವ ಆತ್ಮನು ಇಂದ್ರಿಯಾಬದ್ಧನಾಗಿರುವನಾದರೂ ತನಗೆ ಬೇರೆಯಾದ ಪ್ರಕೃತಿಯಿಂದ ಬದ್ಧನಾಗುವನೆ?

"ನೀರಂಜನಪದೇಽತಿಷ್ಮನ್ವಿಶ್ವಸಂಸಾರಸಂಗತಃ |
ಹಂಸಃ ಕಿಂ ಬಧ್ಯತೇ ಕ್ವಾಪಿ, ಯಸ್ಯ ನಾಲಂಬನಂ ಪ್ರಿಯಂ ||" ೨—೧೯

**ಹಂಸಪರವಾಗಿ:—** ಜನಪದೇ—ಪುರಗ್ರಾಮಾದಿ ರೂಪವಾದ ಜನವಸತಿ ಪ್ರದೇಶದಲ್ಲಿ, ಅತಿಷ್ಮನ್—ವಾಸಿಸದೆ, ವಿ+ಶ್ವಸಂ—ಪಕ್ಷಿಗಳು ಮತ್ತು ಪ್ರಾಣಿಗಳು, ಇವುಗಳಿಂದ ಕೂಡಿ ಮನೋಹರವಾದ, ಸಾರಸಂ—ಸರೋ

ವ್ಹರದ, ನೀರಂ—ಜಲವನ್ನು, ಗತಃ—ಹೊಂದಿರುವುದಾಗಿ— ಎಂದರೆ, ಸರೋವರದ ನೀರಿನಲ್ಲಿ ಕ್ರೀಡಿಸುತ್ತಾ, ಯಸ್ಯ—ಯಾವ ಹಂಸಕ್ಕೆ, ನಾಲಂ+ವಸಂ—ಕಮಲದ ದಂಟುಗಳ ವಸವೇ, ಪ್ರಿಯಂ—ಪ್ರಿಯವಾದ ಸ್ಥಾನವಾಗಿರುವುದೋ ಹಂಸಃ—ಅಂತಹ ರಾಜಹಂಸವು, ಕ್ವಾಪಿ— ಎಲ್ಲಿಯಾದರೂ, ಬಧ್ಯತೇ ಕಿಂ—ಬಂಧಿತವಾಗಲು ಯೋಗ್ಯವೇ? ಜನವಸತಿಗೆ ದೂರವಾಗಿ ಜಲಚರವಿಹಂಗಗಳಿಗಾಕರವಾಗಿ ಮನೋಹರವಾಗಿರುವ ಕಾಸಾರದಲ್ಲಿ ಕ್ರೀಡಿಸುತ್ತ ಕೇವಲ ಕಮಲನಾಳಗಳನ್ನೇ ಆಹಾರವಾಗಿ ಉಳ್ಳುದಾದ ರಾಜಹಂಸವು ಎಲ್ಲಿಯಾದರೂ ಬಂಧಿಸಲ್ಪಡಲು ಯೋಗ್ಯವೇ?

**ಆತ್ಮಪರವಾಗಿ:**— ನೀರಂಜನಪದೇ–ವಿರಕ್ತದೆಶೆಯಲ್ಲಿ, ತಿಷ್ಠನ್—ಇರುತ್ತಾ, ವಿಶ್ವ+ಸಂಸಾರ+ಸಂಗತಃ—ಸಮಸ್ತಸಂಸಾರ ಸಹವಾಸದಲ್ಲಿ, ಆಲಂಬನಂ—ಆಸಕ್ತಿಯು, ಯಸ್ಯ—ಯಾವ ಆತ್ಮನಿಗೆ, ನ ಪ್ರಿಯಂ—ಇಷ್ಟವಾಗಿಲ್ಲವೋ, ಹಂಸಃ—ಅಂತಹ ಆತ್ಮನು, ಕ್ವಾಪಿ—ಎಲ್ಲಿಯಾದರೂ, ಬಧ್ಯತೇ ಕಿಂ—ಬಧ್ಯನಾಗುವನೇ? ಭವಸಂಸಾರ ದೂರನಾಗಿ ಯಾವಾಗಲೂ ವಿರಕ್ತತೆಯಿಂದಿರುವ ಆತ್ಮನು ಎಲ್ಲಿಯಾದರೂ ಬಧ್ಯನಾಗುವನೆ?

> "ಅನ್ಯಚ್ಚ,—ರಾಜನ್, ಜಲಪಕ್ಷಿಣೋ ಮುನಯ ಇವ ಯೇ
> ವಿನಾಹಾರಂ ವಾಂಛಂತಿ, ಬಹುಧಾವನವ್ಯಸನಿನಃ, ಬಿಸಾಧಾರಾಃ
> ತದಲಮಾಗ್ರಹೇಣ ||"

ಅನ್ಯಚ್ಚ—ಮತ್ತೂ ಏನಂದರೆ, ರಾಜನ್—ಎಲೈ ರಾಜನೇ! ಜಲಪಕ್ಷಿಣಃ—ಜಲಪಕ್ಷಿಗಳಾದ ಈ ರಾಜಹಂಸಗಳು, ಮುನಯ ಇವ—ಋಷಿಗಳಂತೆ ಇರುವುವು. ಮೀನಾಹಾರಂ–ಮೀನಿನ ಆಹಾರವನ್ನು, ವಾಂಛಂತಿ—ಅಪೇಕ್ಷಿಸುತ್ತವೆ; ಬಹುಧಾ+ವನವ್ಯಸನಿನಃ—ಬಹು+ಧಾವನ+ವ್ಯಸನಿನಃ—ವಿಶೇಷವಾಗಿ ಅರಣ್ಯದಲ್ಲೇ ಸಂಚರಿಸುತ್ತಾ ಜಲಪ್ರಿಯವಾಗಿರುವುವು; ಮತ್ತು, ಬಿಸಾಧಾರಾಃ—ಕಮಲದ ದಂಟುಗಳೇ ಜೀವನಾಧಾರಗಳುಳ್ಳುವಾಗಿವೆ, ಯೇ ಅಮೀ ಮುನಯಃ—ಈ ಋಷಿಗಳು,ಆಹಾರಂ–ಆಹಾರವನ್ನು, ನ ವಾಂಛಂತಿ–ಅಪೇಕ್ಷಿಸುವುದಿಲ್ಲ; ಬಹುಧಾ—ವಿಶೇಷವಾಗಿ, ವನವ್ಯಸನಿನಃ—ವನಪ್ರಿಯರು, ಜಲಾಹಾರಿಗಳು ಮತ್ತು, ವಿ+ಸಾಧಾರಾಃ–ಉತ್ಸವಾದ್ಯುಪಭೋಗರಹಿತರು, ತತ್—ಹೀಗೆ ಮುನಿಸಮಾನ ವೃತ್ತಿಯಲ್ಲಿರುವುದರಿಂದ, ಆಗ್ರಹೇಣ—ಈ ರಾಜಹಂಸವನ್ನು ಬಂಧಿಸುವಪ್ರಯಾಸವನ್ನು, ಅಲಂ–ಬಿಟ್ಟುಬಿಡು.

ಇದಲ್ಲದೆ ಎಲೈ ರಾಜನೇ! ಜಲಪಕ್ಷಿಗಳಾದ ಈ ಹಂಸಗಳು ನಿರಶನವ್ರತಗಳುಳ್ಳವುವೂ ಜಲಾಹಾರಿಗಳೂ ಆಗಿ ವನಸ್ಥರಾದ ಮುನಿಜನದಂತಿರುವುವು. ಆದುದರಿಂದ ಇಂತಹ ಸತ್ವಗುಣೋಪೇತವಾದ ರಾಜಹಂಸವನ್ನು ಬಂಧಿಸಬೇಕೆಂಬುದನ್ನು ಬಿಡುವನಾಗು.

"ರಾಜಾ ತು ತೇನ ತಸ್ಯಾಃ ಶ್ಲೇಷಶ್ಲಾಘಿನಾ ಶ್ಲೋಕೋಕ್ತಿ
ರಸೇನಾಹ್ಲಾದ್ಯಮಾನೋ ನರ್ಮಾಲಾಪಲೀಲಯಾ ತಾಂ ಬಭಾಷೆ"

ರಾಜನಾದರೋ, ಆ ಹಂಸಿಯು ಶ್ಲೇಷಾರ್ಥದಿಂದ ಕೂಡಿ ಮನೋಹರವಾದ ಶ್ಲೋಕೋಕ್ತ್ಯಮೃತರಸದಿಂಡ ಆನಂದಿತನಾಗಿ ಮೃದುವಾದ ಭಾಷಣದಿಂದ ಹಂಸಿಯನ್ನು ಕುರಿತು— (ಇವನೂ ಆತ್ಮಪರವಾಗಿಯೂ, ಯಾವನೋ ಓರ್ವ ದುರಾಚಾರಿಯಪರವಾಗಿಯೂ, ಹಂಸಪರವಾಗಿಯೂ, ಅರ್ಥವಾಗುವಂತೆ ಶ್ಲೇಷಮಧುರವಾಗಿ ಹೇಳುವನು)— ಎಲಾ! ಹಂಸಿ!

"ಅನೇಕಧಾ ಯಃ ಕಿಲ ಪಕ್ಷಪಾತಂ
ಸದಾ ಸದಂಭೋಜಗತಃ ಕರೋತಿ ।
ಸ ಹಂಸಿಕೇದಾರವಿಹಾರಶೀಲೋ
ನ ಬಧ್ಯತೇ ಕಿಂ ಬಹುನಾಶಕುಂತಃ ॥"

**ಆತ್ಮಪರವಾಗಿ:**— ಯಃ—ಯಾವ ಆತ್ಮನು, ಜಗತಃ—ಸರ್ವಾತ್ಮನಾ, ಸದಂಭಃ—ಅಹಂಕಾರಿಯಾಗಿ, ಅನೇಕಧಾ—ಅನೇಕವಿಧಗಳಲ್ಲಿ ಭೋಧಿತನಾದರೂ ಕೇಳದೆ, ಪಕ್ಷಪಾತಂ-ಆತ್ಮಪಕ್ಷಪಾತವನ್ನು,(ಸ್ವಾರ್ಥತೆಯನ್ನೂ, ಮಮತಾಭಿಮಾನವನ್ನೂ,) ಕರೋತಿ—ಮಾಡುತ್ತಾನೆಯೋ, ದಾರವಿಹಾರಶೀಲಃ—ಸ್ತ್ರೀವ್ಯಸನಿಯಾಗಿ (ಬ್ರಹ್ಮಚರ್ಯವ್ರತಕ್ಕೆ ಭಂಗವನ್ನುಂಟುಮಾಡಿಕೊಂಡು,) ಬಹು ನಾಶ ಕುಂತಃ—ಬಹು ಹಿಂಸಾಪಾಪರತನಾಗಿರುವನೋ, ಸಃ ಹಂಸಃ—ಅಂತಹ ಆತ್ಮನು, ಹಂಸಿಕೇ—ಎಲೆ ಹಂಸಿಯೇ! ನ ಬಧ್ಯತೇ ಕಿಂ—ಈ ಸಂಸಾರಕಾರಾಗಾರದಲ್ಲಿ ಬಧ್ಯನಾಗದೇ ಹೋಗುವನೇ?

ನಾನಾ ವಿಧವಾಗಿ ಬೋಧಿತನಾದರೂ ಕೇಳದೆ ಸ್ವಾರ್ಥಾಭಿಮಾನಿಯಾಗಿ ಮಮತಾಹಂಕಾರಗಳಿಂದ ಕೂಡಿ ಆತ್ಮಪಕ್ಷಪಾತವನ್ನು ಮಾಡುತ್ತ ಬ್ರಹ್ಮಚರ್ಯದೂರನೂ, ಸ್ತ್ರೀವ್ಯಸನಿಯೂ ಬಹು ಹಿಂಸಾಪಾಪರತನೂ ಆಗಿರುವ ಆತ್ಮನು ಯಾವನೋ ಅವನು ಈ ಸಂಸಾರಕಾರಾಗಾರದಲ್ಲಿ ಬಧ್ಯನಾಗದೇ ಹೋಗುವನೇ?

**ದುರಾಚಾರಿಯ ಪರವಾಗಿ:**—ಹಂಸಿಕೇ—ಎಲೇ ಹಂಸೀ! ಯಃ—ಯಾವ ಮನುಷ್ಯನು, ಸದಂಭಃ—ದಂಭಶಾಲಿಯಾಗಿ, ಜಗತಃ+ಪಕ್ಷಸ್ಯ+ಪಾತಂ—

ಲೋಕಕ್ಕೇ ಮಿತ್ರನಂತಿರುವ ಸಜ್ಜನರಿಗೆ ನಾಶವನ್ನು, ಅನೇಕಧಾ—ಅನೇಕ ಪ್ರಕಾರವಾಗಿ, ಕರೋತಿ—ಎಸಗುವನೋ, ಮತ್ತು, ದಾರವಿಹಾರ ಶೀಲಃ—ಪರದಾರಲಂಪಟನಾಗಿ, ಬಹು + ನಾಶ + ಕುಂತಃ—ಬಹುಘಾತುಕನಾಗಿರುವನೋ, ಸಃ—ಅಂತಹ ದುಷ್ಟನು, ನ ಬಧ್ಯತೇ ಕಿಂ—ಕ್ಷತ್ರಿಯರಾದ ನಮ್ಮಿಂದ ಬಧ್ಯನಾಗನೇ?

ಎಲೌ ಹಂಸಿ! ಯಾವನು ಅಹಂಕಾರಿಯಾಗಿ ಲೋಕಸಮ್ಮತರಾದ ಸತ್ಪುರುಷರಿಗೆ ಅನೇಕ ವಿಧವಾದ ತೊಂದರೆಗಳನ್ನು ಕೊಡುವನಾಗಿ ಪರದಾರಶೀಲನೂ ಮತ್ತು ಘಾತಕನೂ ಆಗಿರುವನೋ ಅಂತಹ ದುಷ್ಟನು ಕ್ಷತ್ರಿಯರಾದ ನಮ್ಮಿಂದ ಬಧ್ಯನಾಗದೇ ಹೋಗುವನೇ?

**ಹಂಸಪರವಾಗಿ:—** ಹಂಸಿ—ಎಲೆ, ಹಂಸಿಯೇ! ಕಿಂ ಬಹುನಾ—ಹೆಚ್ಚೇಕೆ? ಸದಂಭೋಜಗತಃ—ಮನೋಹರವಾದ ಪದ್ಮವನ್ನು ಹೊಂದಿ, ಸದಾ—ಯಾವಾಗಲೂ, ಯಃ ಪಕ್ಷಪಾತಂ ಅನೇಕಧಾ ಕರೋತಿ—ರೆಕ್ಕೆಗಳನ್ನು ಸುಂದರವಾಗಿ ಆಡಿಸುತ್ತಾ, ಕೇದಾರ+ವಿಹಾರ ಶೀಲಃ—ವನವಿಹಾರಾಸಕ್ತವಾದ, ಶಕುಂತಃ—ಈ ರಾಜಹಂಸ ಪಕ್ಷಿಯು, ಬಧ್ಯತೇ ಕಿಂ—ನನ್ನಿಂದ ಬಂಧಿಸಲ್ಪಡುವುದೆಂದು ಭಾವಿಸಿರುವಿಯೇನು? ನ–ಎಂದಿಗೂ ಇದನ್ನು ನಾನು ಬಂಧಿಸುವುದಿಲ್ಲ; ಈಗಲೇ ಬಿಟ್ಟುಬಿಡುವೆನು.

ಎಲೇ ಹಂಸಿ! ಹೆಚ್ಚೇಕೆ? ಮನೋಹರವಾದ ಪದ್ಮವನ್ನು ಹೊಂದಿ ಯಾವಾಗಲೂ ರೆಕ್ಕೆಗಳನ್ನು ಆಡಿಸುತ್ತಾ ವನವಿಹಾರಾಸಕ್ತವಾದ ಈ ಸುಂದರವಾದ ರಾಜಹಂಸವನ್ನು ಬಂಧಿಸುವೆನೆಂದು ಭಾವಿಸದಿರು, ಈಗಲೇ ಇದನ್ನು ಬಿಟ್ಟುಬಿಡವೆನು.

"ಕಿಂ ಚಾನ್ಯದಪಿ ಶ್ರೂಯತಾಂ ಬಂಧಸ್ಯ ಕಾರಣಂ।"

ಎಲೆ ಹಂಸಿಕೆ! ಈಗ ನಾನು ಈ ರಾಜಹಂಸವನ್ನು ಹಿಡಿದುದರ ಕಾರಣವನ್ನು ಕೇಳು— (ಇಲ್ಲಿ ರಾಜನು ರಾಜಹಂಸದ ಚರ್ಯೆಯನ್ನು ಓರ್ವ ದುಷ್ಟನ ನಡತೆಗೆ ಹೋಲಿಸಿ, ಅವನು ಹೇಗೆ ರಾಜನಿಗ್ರಹಯೋಗ್ಯನೋ, ಹಾಗೆಯೇ ಈ ರಾಜಹಂಸವೂ ಬಂಧಯೋಗ್ಯವಾದುದರಿಂದ, ಹಿಡಿದೆನೆಂದು ತನ್ನ ಕಾರ್ಯವನ್ನು ಸಮರ್ಥಿಸಿಕೊಳ್ಳುವನು.)

"ಅಸ್ತಿ ಮತ್ಪರಿಗ್ರಹೇ ಮೃಣಾಲಿಕಾನಾಮ ವನನಾಯಿಕಾ; ಸಾಪ
ರಾಗಸ್ಥಗಿತಮುಖಕಮಲಾಪಿ ಬಲಾದನೇನ ವಿನಾಶಿತಾ, ವಿನಿಪ

ತ್ಯೋಪರಿ ಜರ್ಜರಿತಾ ನಖೈಃ, ಖಂಡಿತಮಧರದಲಂ, ದಲಿತಮಲಿ
ಕಾಲಕಮಂಡನಂ, ಅಪನೀತಃ ಸುಕುಮಾರಭಾವಃ''

**ದುರಾಚಾರಿಯ ಪರವಾಗಿ:**—ಮತ್ಪರಿಗ್ರಹೇ ಅಸ್ತಿ(ಸ್ಥಿತಾ)—ನನ್ನಿಂದ ಪರಿಗ್ರಹೀತಳಾಗಿ, ಮೃಣಾಲಿಕಾನಾಂ–ಪದ್ಮಗಳನ್ನು, ಅವನನಾಯಿಕಾ–ರಕ್ಷಿಸುವುದರಲ್ಲಿ ಸ್ವಾಮಿನಿಯಾಗಿರುವ, ಸಾ–ಆಕೆಯು, ಎಂದರೆ ಓರ್ವ ಸ್ತ್ರೀಯು ಅಪರಾಗ+ಸ್ಥಗಿತ + ಮುಖಕಮಲಾಪಿ— ಅನುರಾಗವಿಲ್ಲದೇ ಸಂವೃತಮುಖಿಯಾಗಿರುವಳಾದರೂ, ಅನೇನ—ಈ ದುಷ್ಟನಿಂದ, ಬಲಾತ್—ಬಲಾತ್ಕಾರವಾಗಿ, ವಿನಾಶಿತಾ–ಶೀಲಭ್ರಷ್ಟಳಾಗಿ ಮಾಡಲ್ಪಟ್ಟಳು. ಹೇಗೆಂದರೆ:– ಉಪರಿ–ವಿನಿಪತ್ಯ—ಮೇಲೆ ಬಿದ್ದು, ನಖೈಃ—ಉಗುರುಗಳಿಂದ, ಜರ್ಜರಿತಾ—ಜೀರ್ಣಿತಳಾದಳು; ಅಧರದಲಂ—ಅಧರೋಷ್ಠವೂ, ಖಂಡಿತಂ—ಖಂಡಿಸಲ್ಪಟ್ಟಿತು; ಅಲಿಕಾ+ಅಲಕಮಂಡನಂ—ಫಾಲ ಮತ್ತು ಶಿರೋಭೂಷಣಗಳು, ದಲಿತಂ,–ನಾಶಪಡಿಸಲ್ಪಟ್ಟವು; ಸುಕುಮಾರಭಾವಃ—ಸೌಕುಮಾರ್ಯವೂ, ಅಪನೀತಃ—ಹೋಗಲಾಡಿಸಲ್ಪಟ್ಟಿತು.

ಸ್ವಗೃಹೀತಳಾಗಿ ನನ್ನಿಂದ ನಿಯಮಿಸಲ್ಪಟ್ಟ ಮೃಣಾಲಿಕಾನಾಯಕೆಯನ್ನು ಬಲಾತ್ಕಾರದಿಂದ ಮೇಲೆ ಬಿದ್ದು ನಖಕ್ಷತಗಳನ್ನು ಮಾಡಿ ಅಧರಪಾನದಿಂದ ಮತ್ತನಾಗಿ ಶಿರೋಭೂಷಣಗಳನ್ನು ನಾಶಪಡಿಸಿ ಸೌಕುಮಾರ್ಯವನ್ನೂ ದೂರೀಕರಿಸಿ ಅನುರಾಗವಿಲ್ಲದೇ ಸಂವೃತಮುಖಿಯಾಗಿರುವಳಾದರೂ ಅವಳನ್ನು ಬಿಡದೇ ಶೀಲಭ್ರಷ್ಟಳನ್ನಾಗಿ ಮಾಡಿದ ಧೂರ್ತನು ಹೇಗೆ ದಂಡಾರ್ಹನೋ ಹಾಗೆಯೇ.

**ಹಂಸಪರವಾಗಿ:**— ಮತ್ಪರಿಗ್ರಹೇ— ನನ್ನಿಂದ ಪರಿಗೃಹೀತವಾಗಿರುವ ಮೃಣಾಲಿಕಾ+ನಾಮ+ವನ+ನಾಯಿಕಾ—ವನದೇವತೆಯಂತಿರುವ ಪದ್ಮವು ಪರಾಗ+ಸ್ಥಗಿತ+ಮುಖಕಮಲಾಪಿ—ಪರಾಗಾಚ್ಛಾದಿತವಾಗಿದ್ದರೂ, ಅನೇನ ವಿನಾ—ಈ ಪಕ್ಷಿಯಿಂದ, ಬಲಾತ್ ಅಶಿತಾ–ಬಲಾತ್ಕಾರವಾಗಿ ತಿನ್ನಲ್ಪಟ್ಟಿತು; ಉಪರಿ ನಿಪತ್ಯ—ಆ ಕಮಲದ ಮೇಲೆ ಬಿದ್ದು, ನಖೈಃ ಜರ್ಜರಿತಾ—ಉಗುರುಗಳಿಂದ ಜೀರ್ಣವಾಗಮಾಡಲ್ಪಟ್ಟಿತು; ಅಧರ ದಲಂ—ಅಧಃ ಪತ್ರವೂ, ಖಂಡಿತಂ—ಕತ್ತರಿಸಲ್ಪಟ್ಟಿತು; ಅಲಿ+ಕಾಲ+ಕ + ಮಂಡನಂ—ಕಪ್ಪಾಗಿ ಕಂಗೊಳಿಸುತ್ತಾ ಮೇಲ್ಭಾಗದಲ್ಲಿದ್ದ ಮನೋಹರವಾದ ದುಂಬಿಗಳೆಂಬ ಆಭರಣವು, ದಲಿತಂ—ನಾಶಮಾಡಲ್ಪಟ್ಟಿತು; ಮತ್ತೂ, ಸೌಕುಮಾರ್ಯಃ—ಕೋಮಲತ್ವವೂ, ಅಪನೀತಃ—ಹೋಗಲಾಡಿಸಲ್ಪಟ್ಟಿತು. (ಈ ರೀತಿಯಲ್ಲಿ ಈ ಹಂಸವು ನನ್ನ ಕಮಲವನವನ್ನು ಹಾಳುಮಾಡಿತೆಂದು ತಾತ್ಪರ್ಯ.)

ನನ್ನಿಂದ ಗೃಹೀತವಾಗಿರುವ ಈ ವನನಾಯಿಕೆಯಾದ ಪದ್ಮವು ಪರಾಗದಿಂದ ತುಂಬಿ ಕಾಣದಂತಿದ್ದರೂ ಈ ಹಂಸವು ಬಲಾತ್ಕಾರವಾಗಿ ಅದರ ಮೇಲೆ ಬಿದ್ದು ಉಗುರುಗಳಿಂದ ಗೀರಿ ದಳಗಳೆಲ್ಲವನ್ನೂ ತುಂಡರಿಸಿ ಕಮಲದ ಮಕರಂದಕ್ಕಾಗಿ ಮೇಲ್ಮುತ್ತಿಕೊಂಡು ಶಿರೋಭೂಷಣದಂತೆ ರಾರಾಜಿಸುತ್ತಿದ್ದ ಭ್ರಮರಾವಳಿಯನ್ನೋಡಿಸಿ ಪದ್ಮದ ಕೋಮಲತ್ವವನ್ನು ನಾಶಗೊಳಿಸಿತಾದುದರಿಂದ ಈ ಹಂಸವು ದಂಡಾರ್ಹವಾದುದೇ ಸರಿ.

"ಕಿಂ ವಾಪೀವರೇಣಾನೇನ ನ ಕೃತಂ ।"

**ದುಷ್ಟನ ಪರವಾಗಿ:**—ಪೀವರೇಣ—ಕೊಬ್ಬಿರುವ, ಅನೇನ—ಈ ದುಷ್ಟನಿಂದ, ಕಿಂ ನ ಕೃತಂ—ಏನು ತಾನೇ ಮಾಡಲ್ಪಡಲಿಲ್ಲ? ಎಂದರೆ— ಸಕಲ ಅಪರಾಧಗಳನ್ನೂ ಇವನು ಮಾಡಿದಹಾಗಾಯಿತೆಂದು ಭಾವವು.

**ಹಂಸಪರವಾಗಿ:**— ವಾಪೀ ವರೇಣ ಅನೇನ—ಜಲಸ್ಥಾನವಾದ ಬಾವಿಯಲ್ಲಿ ಮನೋಹರವಾಗಿ ಕ್ರೀಡಿಸುವ ಈ ರಾಜಹಂಸದಿಂದ, ಕಿಂ ನ ಕೃತಂ—ಯಾವುದು ತಾನೇ ಮಾಡಲ್ಪಡಲಿಲ್ಲ?

ಅಲ್ಲದೆ ಆ ಧೂರ್ತನಿಂದ ಯಾವ ಅಪರಾಧವು ತಾನೇ ಮಾಡಲ್ಪಟ್ಟಿರುವುದಿಲ್ಲ.! ಸಕಲಾಪರಾಧವೂ ಮಾಡಲ್ಪಟ್ಟಿರುವಂತೆ, ಈ ಕಾಸಾರದಲ್ಲಿ ಸ್ವೇಚ್ಛೆಯಾಗಿ ಕ್ರೀಡಿಸುತ್ತ ಮನೋಹರವಾಗಿ ಕಾಣುತ್ತಿರುವ ಈ ರಾಜಹಂಸವು ಏನನ್ನು ತಾನೇ ಮಾಡಿರುವುದಿಲ್ಲ.

"ತದೇಷ ಯಾವನ್ಮಧ್ಯಂ ಬಹುಧಾಪಾಂಜರನ್ನಾವಗಾಹತೇ ತಾವನ್ಮೇ ಕುತಃ ಸಂತೋಷಃ ।
ನ ಚ ನದೀಕ್ಷಿತೇ ದ್ವಿಜನ್ಮನಿ ನಿಗೃಹೀತೇಪಿ ಗರೀಯಃ ಪಾತಕಮಸ್ತಿ ॥"

**ದುರಾಚಾರಿಯ ಪರವಾಗಿ:**-ತತ್-ಹೀಗೆ ಅವನು ಮಹಾಪರಾಧಿಯಾಗಿರುವ ಕಾರಣ, ಏಷಃ—ಇವನು, ಪಾಂಜರಂ ಮಧ್ಯಂ—ನನ್ನ ಸೆರೆಯಮಧ್ಯವನ್ನು, ಯಾವತ್ ನ ಅವಗಾಹತೇ—ಎಲ್ಲಿಯ ವರೆಗೆ ಪ್ರವೇಶಿಸುವುದಿಲ್ಲವೋ, ತಾವತ್— ಅಲ್ಲಿಯ ವರೆಗೂ, ಮೇ—ನನಗೆ, ಸಂತೋಷಃ ಕುತಃ-ಸಮಾಧಾನವೆಲ್ಲಿ? ನ ದೀಕ್ಷಿತೇ—ಶೈವಾದಿ ಯಾವ ಮತಪರಿಗ್ರಹೀತನೂ ಆಗದವನು, ದ್ವಿಜನ್ಮನಿ ಅಪಿ—ದ್ವಿಜಾತಿಯವನಾದಾಗ್ಯೂ, ನಿಗೃಹೀತೇ—ನಿಗ್ರಹಿಸಲ್ಪಟ್ಟರೆ, (ಅಥವಾ ಅದ್ವಿಜನ್ಮನಿ—ದ್ವಿಜನೂ ಆಗದೇ ಇರುವವನು, ನಿಗೃಹೀತೋಪಿ—ನಿಗ್ರಹಿಸಲ್ಪಟ್ಟರೂ) ಗರೀಯಃ—ಮಹತ್ತಾದ, ಪಾತಕಂ ನಾಸ್ತಿ—ಪಾಪವೇನೂ ಇಲ್ಲವು. ದೀಕ್ಷಿತೇ—ಸನ್ಮತದೀಕ್ಷಿತನೂ, ದ್ವಿಜನ್ಮನಿ—ದ್ವಿಜನೂ ಆಗಿರುವವನು, ನಿಗೃಹೀತೇ ಸತಿ—ನಿಗ್ರಹಿಸಲ್ಪಟ್ಟರೆ, ಆಗ ಮಾತ್ರ, ಗರೀಯಃ ಪಾತಕಂ ನಾಸ್ತೀತಿ ನ—ಮಹಾಪಾತಕವೇ ಸರಿ.

ಆದುದರಿಂದ ಧೂರ್ತನಾದವನನ್ನು ಬಂಧಿಸುವವರೆಗೂ ನನಗೆ ಸಂತೋಷ ವಿರದು. ಧೂರ್ತನಾದವನು ಯಾವ ಜಾತಿಯವನಾದಾಗ್ಯೂ ಅಥವಾ ಒಂದು ವೇಳೆ ಬ್ರಾಹ್ಮಣನೇ ಆಗಿದ್ದಾಗ್ಯೂ ಅವನನ್ನು ಬಂಧಿಸಿ ದಂಡಿಸುವುದರಿಂದ ಯಾವ ಪಾತಕವೂ ಉಂಟಾಗದು; ಯೋಗ್ಯನಾದ ಬ್ರಾಹ್ಮಣನನ್ನು ಬಂಧಿಸುವದು ಮಾತ್ರವೇ ಪಾಪಕರವಾದುದು. ಹೀಗೆಯೇ.

**ಹಂಸಪರವಾಗಿ:**— ತತ್—ಆದಕಾರಣ, ಏಷಃ—ನಿನ್ನ ಪತಿಯಾದ ಈ ಹಂಸವು, ಅಪಾಂ ಮಧ್ಯಂ—ನೀರಿನ ಮಧ್ಯದಲ್ಲಿ, ಚರನ್—ಮುಪ್ಪಾಗುವವರೆಗೂ, ಯಾವನ್ನಾವಗಾಹತೇ-ಎಲ್ಲಿಯುವರೆಗೆ ಕ್ರೀಡಿಸುವುದಿಲ್ಲವೋ, ತಾವನ್ಮೇ ಕುತಃ ಸಂತೋಷಃ—ಅಲ್ಲಿಯು ವರೆಗೂ ನನಗೆಲ್ಲಿಯ ಸಂತೋಷವು? ನದೀ+ಕ್ಷಿತೇ—ನದಿಯಲ್ಲಿ ವಾಸಿಸುವ, ದ್ವಿಜನ್ಮಸಿ-ಈ ಪಕ್ಷಿಯು, ನಿ+ಗೃಹೀತೋಪಿ-ವಿನೋದಕ್ಕಾಗಿ ಹಿಡಿಯಲ್ಪಟ್ಟಿರುವುದರಿಂದ, ನ ಚ ಪಾತಕಮಸ್ತಿ—ಏನೂ ದೋಷವಿಲ್ಲವು.

ಎಲೌ ಹಂಸಿಕೆ! ನಿನ್ನ ಪತಿಯಾದ ಈ ಹಂಸವು ಕಾಸಾರದಲ್ಲಿ ಎಲ್ಲಿಯು ವರೆಗೆ ಕ್ರೀಡಿಸದೋ ಅಲ್ಲಿಯ ವರೆಗೆ ನನಗೆ ಸಂತೋಷವಿರದು; ಕಾಸಾರದಲ್ಲಿ ಕ್ರೀಡಿಸುತ್ತಿರುವ ಈ ಪಕ್ಷಿಯು ವಿನೋದಕ್ಕಾಗಿ ಹಿಡಿಯಲ್ಪಟ್ಟಿತಾದುದರಿಂದ ಯಾವ ವಿಧವಾದ ದೋಷವೂ ಘಟಿಸದು.

> "ಅಯಿ ಮುಗ್ಧೇ ಕಲಹಂಸಿಕೇ! ತ್ವಂ ಪುನಃ ಮಾನಸಂಗತಾಪಿ ವಿಮಾನನಾಂ ಸಹಸೇ ವಿಪರೀತಃ । ಖಲ್ವೇಷಃ ಯತಃ ಸದ್ವಂಶ ಕಾಂತಾರಾಗವಿಮುಖೋ ಮಧುಪಶ್ರೇಣಿಶ್ರಯಣೀಯಾಂ ಸುರಾಜೀವಿನೀಂ ಕಾಂತಾಂ ಕಾಮಯತೇ ತದಲಮನೇನ । ಗಚ್ಛ ವತ್ಸೇ ಯಥಾಪ್ರಿಯಂ" ಇತ್ಯಭಿಹಿತವತಿ ವಸುಂಧರೇಶ್ವರೇ ।

**ದುರ್ಜನನ ಪರವಾಗಿ;**—ಅಯಿ ಮುಗ್ಧೇ ಕಲಹಂಸಿಕೇ!—ಎಲೆ ಮುಗ್ಧೆಯಾದ ಹಂಸಿಯೇ! ತ್ವಂ ಪುನಃ—ನೀನು, ಮಾನ+ಸಂಗತಾಪಿ—ಮಾನವತಿಯಾದಾಗ್ಯೂ, ವಿಮಾನನಾಂ—ಅಪಮಾನವನ್ನು, ಸಹಸೇ—ಸಹಿಸುತ್ತೀಯೇನು? ಏಷಃ—ಇವನು, ವಿಪರೀತಃ ಖಲು—ವಿರುದ್ಧಾಚಾರವುಳ್ಳವನಾಗಿರುವನಲ್ಲಾ! ಯತಃ—ಏಕೆಂದರೆ, ಇವನು, ಸದ್ವಂಶ+ಕಾಂತಾ-ರಾಗ-ವಿಮುಖಃ—ಕುಲೀನೆಯಾದ ಕಾಂತೆಯಲ್ಲಿ ಅನುರಾಗವುಳ್ಳವನಾಗದೆ, ಮಧುಪ ಶ್ರೇಣಿಶ್ರಯಣೀಯಾಂ—ಮದ್ಯ ವ್ಯಸನಿಗಳಿಂದ ಸೇವಿತಳಾದ, ಸುರಾ+ಜೀವಿನೀಂ—ಕುಡುಕಿಯಾದ, ಕಾಂತಾಂ—ಕಾಮಿನಿಯನ್ನು, ಕಾಮಯತೇ-ಕಾಮಿಸುವನು; ತತ್-

ಆದಕಾರಣ, ಅನೇನ ಅಲಂ—ಇವನ ವಿಚಾರವನ್ನು ಬಿಟ್ಟುಬಿಡು. ವತ್ಸೆ—ಎಲೇ ವತ್ಸಳೇ; ಯಥಾಪ್ರಿಯಂ—ನಿನ್ನ ಇಷ್ಟಬಂದಂತೇ, ಗಚ್ಛ—ಎಲ್ಲಿಯಾದರೂ ಹೊರಟುಹೋಗು.

ಆದುದರಿಂದ ಎಲೇ! ಕಲಹಂಸಿಕೆ! ಮುಗ್ಧೇ! ನೀನು ಅಪಮಾನವನ್ನು ಕೊಂಚವೂ ಸಹಿಸದಂತಹ ಮಾನವತಿಯು. ಇವನು ಕೇವಲ ವಿರುದ್ಧಾಚರಣೆಯುಳ್ಳವನು. ನಿನ್ನಂತಹ ಕುಲೀನಳಾದ ಕಾಂತೆಯಲ್ಲಿ ಅನುರಕ್ತನಾಗದೆ ಮಧುಪರುಗಳಿಂದ ಸೇವಿತಳೂ ಕುಡುಕಿಯೂ ಆದ ಕಾಮಿನಿಯನ್ನು ಕಾಮಿಸುವನಾದ ಕಾರಣ ಎಲೇ ಹಂಸಿ! ಇಂತಹನ ವಿಚಾರವನ್ನು ಬಿಟ್ಟು ನಿನ್ನ ಇಷ್ಟಬಂದಂತೆ ಎಲ್ಲಿಗಾದರೂ ಹೊರಟುಹೋಗು.

**ಹಂಸಪರವಾಗಿ:—** ಅಯಿ, ಮುಗ್ಧೇ ಕಲಹಂಸಿಕೇ—ಎಲೆ ಮುಗ್ಧೆಯಾದ ಹಂಸಿಯೇ! ತ್ವಂ ಪುನಃ—ನೀನು, ಮಾನಸಂ-ಗತಾ-ಅಪಿ—ಮಾನಸ ಸರೋವರಗತಳಾದರೂ, ವಿ+ಮಾನನಾಂ—ಇತರ ಪಕ್ಷಿಗಳ ಉಪಚಾರವನ್ನು ಸಹಸೇ—ಸ್ವೀಕರಿಸುವಿ. ಏಷಃ—ಈ ರಾಜಹಂಸವೂ, ವಿ + ಪರೀತಃ ಪಲು ಪಕ್ಷಿಗಳಿಂದ ಸುತ್ತುವರಿಯಲ್ಪಟ್ಟು ಬಹುಮಾನಿತವಾಗಿದೆ. ಯತಃ—ಏಕೆಂದರೆ ಸದ್ವಂಶ+ಕಾಂತಾರ+ಅಗ+ವಿಮುಖಃ—ದೊಡ್ಡ ದೊಡ್ಡ ಬಿದಿರುಮೆಳೆಗಳಿಂದ ಕೂಡಿ ಭಯಂಕರವಾದ ಬೆಟ್ಟ ಪರ್ವತಗಳನ್ನು ಸೇರದೆ, ಮಧುಪಶ್ರೇಣಿಶ್ರಯಣೀಯಾಂ—ದುಂಬಿಗಳ ಗುಂಪುಗಳಿಂದ ಸೇವಿತವಾದ, ಸು+ರಾಜೀವಿನೀಂ—ಮನೋಹರವಾದ ನಳಿನಿಯೆಂಬ, ಕಾಂತಾಂ—ಪ್ರಿಯೆಯನ್ನು, ಕಾಮಯತೆ—ಕಾಮಿಸುವುದು. ತತ್—ಆದಕಾರಣ, ಅನೇನ ಅಲಂ—ಇದರ ವಿಷಯವಾಗಿ ನೀನು ವಿಶೇಷ ವ್ಯಥಿಸಬೇಡ; ಯಥಾ ಪ್ರಿಯಂ— ನಿನ್ನ ಪ್ರಿಯನೊಡನೆ ಇಷ್ಟ ಬಂದಂತೆ ಸುಖವಾಗಿ, ಗಚ್ಛ—ಹೋಗು, ಇತಿ—ಈ ಪ್ರಕಾರವಾಗಿ, ವಸುಂಧರೇಶ್ವರೇ ಅಭಿಹಿತೇ ಸತಿ—ರಾಜನು ಹೇಳಲು—

ಎಲೆ ಹಂಸಿಕೆ! ನೀನು ಮಾನಸ ಸರೋವರವನ್ನು ಹೊಂದಿದರೂ ಇತರ ಪಕ್ಷಿಗಳ ಉಪಚಾರವನ್ನು ಕೈಗೊಳ್ಳುವೆ; ಈ ರಾಜಹಂಸವೂ ಕೂಡಾ ವಿಹಂಗಗಳಿಂದ ಸುತ್ತುವರಿಯಲ್ಪಟ್ಟು ಬಹುಮಾನಿತವಾಗಿರುವುದು; ಏಕೆಂದರೆ—ದೊಡ್ಡ ದೊಡ್ಡ ಬಿದಿರು ಮೆಳೆಗಳಿಂದ ಕೂಡಿ ಭಯಂಕರವಾದ ಬೆಟ್ಟಗಳನ್ನು ಸೇರದೆ ಮಧುಪಶ್ರೇಣಿಗಳಿಂದ ಸೇವಿತವಾದ ನಳಿನಿಯೆಂಬ ಕಾಂತೆಯನ್ನು ಕಾಮಿಸುವನಾದುದರಿಂದ ನೀನು ವ್ಯಥೆಗೊಳ್ಳದೆ ನಿನ್ನ ಪ್ರಿಯನೊಡನೆ ನಿನ್ನ ಇಷ್ಟಬಂದಂತೆ ಸುಖವಾಗಿ ಹೊರಟುಹೋಗುವಳಾಗು.

(ರಾಜನು ಈ ಪ್ರಕಾರವಾಗಿ ಹೇಳಲು ಹಂಸಿಯು ಹಂಸವನ್ನು ಕುರಿತು ತಿರಸ್ಕಾರ ಮತ್ತು ಸ್ತೋತ್ರರೂಪವಾಗಿ ಹೇಳುವುದು.

"ಸಾಪಿ ಸಪರಿಹಾಸಂ ಹಂಸೀ "ಹಂ ಹೋ! ವಿಹಂಗಭುಜಂಗ, ಮೃಣಾಲಿಕಾಂ ತಾಮರಸಾಂತರಸಾನುರಾಗರಂಜಿತಮನಾಃ ಕಾಮಯಸೇ ಕಿಂ ವಾಪೀನದೇಹೇ ನೀರಸೇವಕೇ, ತ್ವಯಿ ನ ಸಂಭಾವ್ಯತೇ" ಇತ್ಯಾಕಲಿತಕಲಹಂ ಕಲಹಂಸಮವಾದೀತ್"

**ನಿಂದಾಪರವಾಗಿ:—** ಸಾ ಪಿ ಸಪರಿಹಾಸಂ ಹಂಸೀ—ಆ ಹಂಸಿಯೂ ದರೋ ಅಪಹಾಸ್ಯಮಾಡುತ್ತಾ, ಹಂಹೋ ವಿಹಂಗಭುಜಂಗ—ಎಲೈ ವಿಹಂಗ ವಿಟನೇ, ತಾಂ— ರಾಜನು ಹೇಳಿದ ಆ, ಮೃಣಾಲಿಕಾಂ—ಕಮಲರಕ್ಷಕಿಯಾದ ಮೃಣಾಲಿಕೆಯನ್ನು, ಅರಸಾಂ—ಅನುರಾಗರಹಿತಳಾದಾಗ್ಯೂ, ತರಸಾ—ಬಲಾತ್ಕಾರದಿಂದ, ರಾಗರಂಜಿತಮನಃ—ಕಾಮಮೋಹಿತನಾಗಿ, ಕಾಮಯಸೇ ಕಿಂ—ಕಾಮಿಸುತ್ತೀಯೇನು? ವಾ—ಅಥವಾ, ಪೀನದೇಹೇ—ಸ್ಥೂಲದೇಹಿಯೂ, ನೀರಸೇ—ನೀರಸಪ್ರಾಯನೂ ಆದ, ಬಕೆ–ಬಕನಂತಿರುವ, ತ್ವಯಿ—ನಿನ್ನಲ್ಲಿ, ಕಿಂ ವಾ ನ ಸಂಭಾವ್ಯತೇ—ಏನು ತಾನೇ ಸಂಭವಿಸುವುದಿಲ್ಲ?

ಈ ರೀತಿ ಹೇಳುತ್ತಿರುವ ರಾಜನ ಮಾತನ್ನು ಕೇಳಿ ಹಂಸಿಯು ಹಂಸನನ್ನು ಕುರಿತು ವ್ಯಾಜನಿಂದಾಸ್ತುತಿಯನ್ನು ಮಾಡತೊಡಗಿ "ಹೋಹೊ! ಎಲೈ ವಿಹಂಗವಿಟ! ರಾಜನು ಹೇಳಿದ ಆ ಮೃಣಾಲಿಕೆಯು ಅನುರಾಗರಹಿತಳಾಗಿದ್ದಾಗ್ಯೂ ಕೂಡ ಗಮನಿಸದೆ ಕಾಮಪೀಡಿತನಾಗಿ ಬಲಾತ್ಕಾರದಿಂದ ಕಾಮಿಸುವೆಯೇನು? ಸ್ಥೂಲದೇಹಿಯೂ ನೀರಸಪ್ರಾಯನೂ ಆದ ಬಕನಂತಿರುವ ನೀನು ಏನು ತಾನೇ ಮಾಡದಿರುವೆ!

**ಸ್ತುತಿಪರವಾಗಿ:—** ತಾಮರಸ + ಅಂತ + ರಸ + ಅನುರಾಗ—ಎಲೈ ಪದ್ಮಾಂತಸ್ಥವಾದ ಮಕರಂದಾಸಕ್ತವಾದ, ವಿಹಂಗಭುಜಂಗ—ವಿಲಾಸಿಯಾದ ಹಂಸವೇ, ಮೃಣಾಲಿಕಾಂ—ಪದ್ಮ, (ಕ್ರೀಡೆ)ಯನ್ನು, ಕಾಮಯಸೇ ಕಿಂ—ಅಪೇಕ್ಷಿಸುವಿಯೇನು? ವಾಪೀ+ನದೇಹೇ—ಬಾವಿಗಳಲ್ಲೂ ನದಿಗಳಲ್ಲೂ ಪ್ರಿಯನಾದ, ನೀರ+ಸೇವತೇ—ಜಲಕೇಳೀರತನಾದ, ತ್ವಯಿ—ನಿನ್ನಲ್ಲಿ, ಕಿಂ ವಾ ನ ಸಂಭಾವ್ಯತೇ—ಯಾವುದು ತಾನೇ ಮನೋಹರವಾಗಿ ಕಾಣುವುದಿಲ್ಲ;—ಎಂಬದಾಗಿ, ಆಕಲಿತಕಲಹಂ—ಜಗಳವನ್ನು ಪ್ರಾರಂಭಿಸುತ್ತಾ, ಕಲಹಂಸಂ–ರಾಜಹಂಸವನ್ನು, ಅವಾದೀತ್—ಮಾತನಾಡಿಸಿತು.

ನೀನು ಪದ್ಮಕ್ರೀಡೆಯನ್ನು ಕೋರುವೆಯೇನು? ವಾಪೀಕೂಪತಟಾಕಾದಿ ಗಳಲ್ಲಿ ಪ್ರೀತಿಯುಳ್ಳವನಾಗಿ ಜಲಕೇಳೀರತನಾದ ನಿನ್ನಲ್ಲಿ ಯಾವುದು ತಾನೇ ಮನೋಹರವಾಗಿರದು! ಎಂದಿತು.

"ಸೋಽಪಿ-'ವೈದಗ್ಧ್ಯಧುರಂಧರ! ಧೂರ್ತಾಲಾಪಪಂಡಿತ! ಪ್ರಜ್ಞಾಪ್ರಾಗ್ಭಾರಗುರೋ! ಚಾತುರ್ಯಾಚಾರ್ಯ! ಮಾ ಮೇ ಪ್ರಿಯಾಂ ಪ್ರಕೋಪಯ । ಸದೃಶಾ ಏವ ಯೂಯಂ ವಯಂ ಚ ರಾಜ ಹಂಸಾಃ । ಸರಸಾಂ ಶ್ರಿಯಮನುಭವಾವಃ । ನದೀನಾಂ ಪಾತ್ರೇ ಷ್ವವಸ್ಥಿತಿಂ ಕುರ್ವಃ । ನ ಚರಣಚರ್ಯಾಯಾಂ ನ ಶ್ಲಾಘ್ಯಾ ವಹೆ । ತತ್ಸಪಕ್ಷೇಷು ವಿಪಕ್ಷೋ ಮಾಭೂಃ ।"

ಆಗ (ಸೋಽಪಿ) ಆ ರಾಜಹಂಸವಾದರೋ, ರಾಜನನ್ನು ಕುರಿತು, ವೈದ ಗ್ಧ್ಯಧುರಂಧರ! ಧೂರ್ತಾಲಾಪಪಂಡಿತ! ಪ್ರಜ್ಞಾಪ್ರಾಗ್ಭಾರ ಗುರು! ಚಾತು ರ್ಯಾಚಾರ್ಯ!— ಎಂಬುದಾಗಿ ರಾಜನನ್ನು ಪ್ರಶಂಸಿಸಿ, ಮೇ ಪ್ರಿಯಾಂ— ನನ್ನ ಪ್ರಿಯೆಯಾದ ಈ ಹಂಸಿಯನ್ನು, ಮಾ ಪ್ರಕೋಪಯ—ಸುಮ್ಮನೇ ಸಿಟ್ಟಿ ಗೇಳಿಸಬೇಡ, ಯೂಯಂ ವಯಂ ಚ—ನಾನೂ ನೀನೂ ಈರ್ವರೂ, ಸದೃಶಾ ಏವ—ಸಮಾನರೇ! ಹೇಗೆಂದರೆ— ಯೂಯಂ ರಾಜಹಂಸಾಃ—ನೀವು ರಾಜ ಶ್ರೇಷ್ಠರು; ನಾವೂ, ರಾಜಹಂಸಾಃ—ಹಂಸಶ್ರೇಷ್ಠರು; ನೀವು, ಸರಸಾಂ— ಜನಾನುರಾಗಕರವಾದ, ಶ್ರಿಯಂ—ಸಂಪತ್ತನ್ನು, ಅನುಭವಥ—ಭೋಗಿಸು ವಿರಿ; ನಾವು, ಸರಸಾಂ—ಸರೋವರಗಳ, ಶ್ರಿಯಂ—ಸೌಂದರ್ಯವನ್ನು, ಅನುಭವಾಮಃ—ಅನುಭವಿಸುವೆವು; ನೀವು, ದೀನಾಂ ಪಾತ್ರೇಷು—ನೀಚಪಾ ತ್ರಗಳಲ್ಲಿ, ಸ್ಥಿತಿಂ ನ ಕುರುಥ—ಸ್ಥಿತಿಯನ್ನು ಮಾಡುವುದಿಲ್ಲ; ನಾವು, ನದೀ ನಾಂ ಪಾತ್ರೇಷು—ನದಿಗಳ ದಡಗಳಲ್ಲಿ, ಸ್ಥಿತಿಂ ಕುರ್ಮಃ—ವಾಸಮಾಡುವೆವು; ನೀವು, ರಣಚರ್ಯಾಯಾಂ—ಯುದ್ಧಚರ್ಯೆಯಲ್ಲಿ, ನ ಚನ ಶ್ಲಾಘ್ಯೌದ್ವೇ— ಶ್ಲಾಘನೀಯರು; ನಾವು, ಚರಣ ಚರ್ಯಾಯಾಂ—ಗಮನಚರ್ಯೆಯಲ್ಲಿ, ನ ನಶ್ಲಾಘ್ಯಾಮಹೇ—ಶ್ಲಾಘ್ಯರು; ತತ್—ಈ ಪ್ರಕಾರವಾಗಿ ಸಮಾನಶೀಲ ರಾದ, ಸ+ಪಕ್ಷೇಷು—ರೆಕ್ಕೆಗಳಿಂದ ಸಹಿತರಾದ ನಮ್ಮಲ್ಲಿಯೂ, ಸ್ವಪಕ್ಷದವ ರಲ್ಲಿಯೂ ಸಹ, ವಿಪಕ್ಷಃ—ಪಕ್ಷರೋಧನರೂಪವಾದ ಬಂಧವಾಗಲಿ, ವಿರೋ ಧವಾಗಲಿ, ಮಾ ಭೂಃ—ಆಗುವದು ಬೇಡ.

**"ಏಷಾ ಮೇ ಹೃದಯಂ ಜೀವ ಉಚ್ಛ್ವಾಸಃ ಪ್ರಾಣ ಏವ ಚ ।**
**ಸಂಸಾರಸುಖಸರ್ವಸ್ವಂ, ಪ್ರಾಣಿನಾಂ ಹಿ ಪ್ರಿಯೋ ಜನಃ ॥**

**ರೂಪಸಂಪನ್ನಮಗ್ರಾಮ್ಯಂ ಪ್ರೇಮಪ್ರಾಯಂ ಪ್ರಿಯಂವದಂ ।**
**ಕುಲೀನಮನುಕೂಲಂ ಚ ಕಲತ್ರಂ ಕುತ್ರ ಲಭ್ಯತೆ ॥**

ತದಲಮಲೀಕಕಲಹಾರಂಭೇಣ। ಭವಾನಪ್ಯೇವಂ ಪ್ರೇಮಪ್ರಪಂಚ
ನಾಟಕನಾಯಕೋ ನಾತಿಚಿರಾದೇವ ಯಥಾ ಭವತಿ ತಥಾ ಕಮ
ಪ್ಯುಪಕಾರಂ ಕರಿಷ್ಯಾಮಿ"—ಇತಿ ರಾಜಾನಮುವಾದೀತ್ ॥

ಈಕೆಯೇ ನನ್ನ ಹೃದಯವೂ, ಜೀವವೂ, ಬಲವೂ, ಉಚ್ಛ್ವಾಸವೂ, ಸಂಸಾರದ ಸುಖಸರ್ವಸ್ವವೂ ಕೂಡ ಆಗಿರುವಳು. ಪ್ರಾಣಿಗಳಿಗೆ ಸ್ವಜನವು ಪ್ರಿಯವಲ್ಲವೆ?

ಸುಂದರಿಯೂ, ನಾಗರಿಕಳೂ, ಪ್ರೇಮಸ್ವರೂಪಳೂ, ಪ್ರಿಯ ಮಧುರ ಭಾಷಿಣಿಯೂ, ಕುಲೀನಳೂ ಮತ್ತು ಅನುಕೂಲವರ್ತಿನಿಯೂ ಆದ (ಈ ನನ್ನ ಪ್ರಿಯೆಯಂತಿರುವ) ಪತ್ನಿಯು ಸುಲಭ ಲಭ್ಯಳೇ?

ಆದಕಾರಣ ಈ ಸುಳ್ಳು ಜಗಳದಿಂದೇನು ಪ್ರಯೋಜನ! ನೀನೂ ಸಹ (ನನ್ನಂತೆ) ಶೀಘ್ರವಾಗಿ ಪ್ರೇಮಪ್ರಪಂಚನಾಟಕನಾಯಕನೇ ಆಗುವಂತೆ ಒಂದಾನೊಂದು ಉಪಕಾರವನ್ನು ನಿನಗೆ ಮಾಡುವೆನು"— ಎಂದು ಆ ರಾಜ ಹಂಸವು ನಳಮಹಾರಾಜನಿಗೆ ಹೇಳಿತು.



## ಶಕ್ತಿಭದ್ರ

ಇವನು ದಕ್ಷಿಣಾಪಥಕೇರಳೀಯನು. ಜನನೀಜನಕರಾರೆಂಬುದು ತಿಳಿಯದು. ಇವನು "**ಆಶ್ಚರ್ಯಚೂಡಾಮಣಿ**" ಎಂಬ ನಾಟಕವನ್ನು ಬರೆದಿರುವನು. ಈ ವಿಚಾರವು ಸೂತ್ರಧಾರನ—

"ಆರ್ಯೇ! ದಕ್ಷಿಣಾಪಥಾದಾಗತಮಾಶ್ಚರ್ಯಚೂಡಾಮಣಿಂ
ನಾಟಕಂ....................."

ಎಂಬ ಹೇಳಿಕೆಯಿಂದಲೂ ನಟಿಯ—

"ಯುಜ್ಯತೇ ರತ್ನಾಕರಃ ಖಲುಪ್ರದೇಶಃ"

ಎಂಬುದರಿಂದಲೂ ನಿಶ್ಚಿತವಾಗುವುದು. ಇವನು ಕೇರಳ ದೇಶೀಯರಿಗೆ ಪರಿಚಿತನಾದ ಪ್ರಖ್ಯಾತ ನಾಟಕಕಾರನೆಂದೂ ಇತರರಿಗೆ ಅಷ್ಟು ಪರಿಚಿತನಾಗಿದ್ದಿಲ್ಲವೆಂದೂ ತಿಳಿಯಬರುತ್ತದೆ.

**ಕಾಲ:—** ಕೇರಳ ದೇಶದ ಕಥೆಗಳಿಂದ ಇವನು ಶ್ರೀ ಶಂಕರಾಚಾರ್ಯರ ಕಾಲದವನೆಂದೂ ಶ್ರೀ ಶಂಕರಾಚಾರ್ಯರವರು ಕ್ರಿ. ಶ. ೭೮೮–೮೨೦ ರಲ್ಲಿದ್ದವರೆಂದೂ ಎಲ್ಲಿಯೋ ಅಕಸ್ಮಾತ್ತಾಗಿ ಬೆಂಕಿಯು ಬಿದ್ದು ನಷ್ಟವಾಗಿ ಹೋದ ಎಷ್ಟೋ ಪದಾರ್ಥಗಳಲ್ಲಿ ಆಶ್ಚರ್ಯಚೂಡಾಮಣಿಯೆಂಬುದು ಕೂಡಾ ದಗ್ಧವಾಗಿ ಹೋಯಿತೆಂದೂ ಶಕ್ತಿಭದ್ರನ ಚೂಡಾಮಣಿಯನ್ನು ನೋಡಿದ್ದ ಶ್ರೀ ಶಂಕರಾಚಾರ್ಯರು ಅದನ್ನು ಜ್ಞಾಪಿಸಿಕೊಂಡು ಹೇಳಿದುದಾಗಿಯೂ ಜನಪ್ರತೀತಿಯಿರುವುದು. ಇವನ ಕಾಲವನ್ನು ನಿರ್ಧರಿಸಿ ಹೇಳುವ ಯಥಾರ್ಥಸಾಧಕಗಳಾವುವೂ ಇಲ್ಲ. ಇಂತಹ ಸುಂದರ ನಾಟಕದ ಉದಾಹರಣೆಗಳನ್ನು ಭಾಮಹನ ಮೊದಲು ಪಂಡಿತರಾಜನ ವರೆಗಿನ ಯಾವ ಲಾಕ್ಷಣಿಕರೂ ತೆಗೆದುಕೊಂಡು ಹೇಳಿರುವುದಿಲ್ಲ.

ತಪತೀಸಂವರಣ, ಸುಭದ್ರಾಧನಂಜಯ, ಆಶ್ಚರ್ಯಮಂಜರೀಕಥಾ ಎಂಬ ಮೂರು ಗ್ರಂಥಗಳ ಕರ್ತನಾದ ಕುಲಶೇಖರವರ್ಮನ ಆಳ್ವಿಕೆಯಲ್ಲಿ 'ಕ್ರಮದೀಪಿಕಾ' ಮತ್ತು 'ಆತ್ತಪ್ರಕಾರಂ' ಎಂಬ ಚಾರಿತ್ರಕಸಂಬಂಧದ ಎರಡು ಪುಸ್ತಕಗಳು ಬರೆಯಲ್ಪಟ್ಟು 'ಆತ್ತಪ್ರಕಾರ'ದಲ್ಲಿ ಕುಲಶೇಖರವರ್ಮನ 'ತಪತೀಸಂವರಣ' ಸುಭದ್ರಾಧನಂಜಯ, ಶ್ರೀಹರ್ಷನ ನಾಗಾನಂದ ಶಕ್ತಿಭದ್ರನ ಆಶ್ಚರ್ಯಚೂಡಾಮಣಿ ನೀಲಕಂಠನ ಕಲ್ಯಾಣಸೌಗಂಧಿಕಾ ಶ್ರೀಕೃಷ್ಣಚರಿತೆ (ಗ್ರಂಥಕರ್ತನಾರೆಂಬುದು ತಿಳಿಯದು) ಇವು ಹೊರತು ಉಳಿದ ಎಂಟು ನಾಟಕಗಳು ಭಾಸನದೆಂದು ಹೇಳಲ್ಪಟ್ಟಿದೆ.

ಈಚಿನ ಶೋಧನದಿಂದ ಕೇರಳದಲ್ಲಿ 'ಕುಲಶೇಖರ'ರೆಂಬ ಹೆಸರಿನವರು ಮೂವರು ದೊರೆಯುವರೆಂತಲೂ ತಪತೀಸಂವರಣಾದಿಗ್ರಂಥಕಾರನಾದ ಕುಲಶೇಖರವರ್ಮನು ಕುಲಶೇಖರಾಳ್ವಾರರಿಂದ ಭಿನ್ನನೆಂತಲೂ ಕುಲಶೇಖರವರ್ಮನು ಕ್ರಿ. ಶ. ೯೩೫–೯೫೫ ರ ವರೆಗೆ ಇದ್ದನೆಂತಲೂ ತಿಳಿಯಬರುವುದರಿಂದ ಆಶ್ಚರ್ಯಚೂಡಾಮಣಿಯು ಕ್ರಿ. ಶ. ಹತ್ತನೆಯ ಶತಮಾನಕ್ಕಿಂತ ಪ್ರಾಚೀನವಾದುದಾಗಿರಬೇಕೆಂಬುದು ಸ್ಪಷ್ಟವಾಗುವುದು. ಮತ್ತು ಭಟ್ಟನಾರಾಯಣನ 'ವೇಣೀಸಂಹಾರ'ದ ಶ್ಲೋಕಾಭಿಪ್ರಾಯಗಳು ಶಕ್ತಿಭದ್ರನ ನಾಟಕದಲ್ಲಿ ಕಂಡು ಬರುವುವು.

**ಉದಾಹರಣೆ:—**

ರಕ್ಷೋವಧಾದ್ವಿರತಕರ್ಮ ವಿಸೃಜ್ಯ ಚಾಪಂ
ಗೋಧಾಙ್ಗುಲಿತ್ರಪದವೀಷು ಧೃತವ್ರಣೇನ ।

ರೇಖಾಕಪತ್ರಕಲಶಾಂಕಿತಲೀನ ರಾಮೋ
　ವೇಣೀಂ ಕರೇಣ ತವ ಮೋಕ್ಷ್ಯತಿ ದೇವಿ ದೇವಃ ॥
　　　　　　　　　　　　ಆಶ್ಚರ್ಯಚೂಡಾಮಣಿ—೬—೨೧.

ಚಂಚದ್ಭುಜಭ್ರಮಿತಚಂಡಗದಾಭಿಘಾತ
　ಸಂಚೂರ್ಣಿತೋರುಯುಗಲಸ್ಯ ಸುಯೋಧನಸ್ಯ ।
ಸ್ತ್ಯಾನಾಪವಿದ್ಧಘನಶೋಣಿತಶೋಣಪಾಣಿ
　ರುತ್ತಂಸಯಿಷ್ಯತಿ ಕಚಾಂಸ್ತವ ದೇವಿ ಭೀಮಃ ॥
　　　　　　　　　　　　—ವೇಣೀಸಂಹಾರ ೧—೨೧.

ಇದರಿಂದ ಶಕ್ತಿಭದ್ರನು ಭಟ್ಟನಾರಾಯಣನಿಗಿಂತ ಈಚಿನವನೆಂಬುದು ಸ್ಪಷ್ಟವಾಗುತ್ತದೆ. ಭಟ್ಟನಾರಾಯಣನು ಕ್ರಿ. ಶ. ೮ ನೆಯ ಶತಮಾನದ ಪೂರ್ವಾರ್ಧದವನು. ಶಕ್ತಿಭದ್ರನು ಕ್ರಿ. ಶ. ೮ ನೆಯ ಶತಮಾನದ ಉತ್ತರಾರ್ಧದವನಾಗಿರಬೇಕು. ಇವನ ಗ್ರಂಥಪ್ರಾಚುರ್ಯವು ಸರ್ವತ್ರವಾಗಿರಲು ಅವಕಾಶ ದೊರೆಯದೆ ಹೋದುದರಿಂದ ಕ್ರಿ. ಶ. ೯ ನೆಯ ಶತಮಾನದ ಮೊದಲುಗೊಂಡು ಪ್ರಸಿದ್ಧರಾದ ಯಾವ ಲಾಕ್ಷಣಿಕರಿಗೂ ಇಂತಹ ಸುಂದರ ನಾಟಕೋದಾಹರಣೆಯು ದೊರೆಯುದಂತಾಗಿರಬೇಕೆಂದು ಬೋಧೆಯಾಗುತ್ತದೆ.

ಸೂತ್ರಧಾರನು "ಆಶ್ಚರ್ಯಚೂಡಾಮಣಿ" ಎಂಬ ನಾಟಕವನ್ನು ಅಭಿನಯಿಸತಕ್ಕುದೆಂದು ಹೇಳಿರುವುದರಿಂದಲೂ ಪ್ರತಿ ಅಂಕದ ಕೊನೆಯಲ್ಲಿ—

"ಇತಿ ಶಕ್ತಿಭದ್ರ ವಿರಚಿತೇ ಚೂಡಾಮಣಿನಾಟಕೇ"

ಎಂದಿರುವುದರಿಂದಲೂ ಚೂಡಾಮಣಿ (ಆಶ್ಚರ್ಯ) ಎಂಬ ನಾಟಕಕಾರನು ಶಕ್ತಿಭದ್ರನೆಂದೂ ಸೂತ್ರಧಾರನು—

"ಆರ್ಯೆ! ಶ್ರೂಯತಾಂ ಉನ್ಮಾದವಾಸವದತ್ತಾಪ್ರಭೃತೀನಾಂ
　ಕಾವ್ಯಾನಾಂ ಕರ್ತುಃ ಕವೇಃ ಶಕ್ತಿಭದ್ರಸ್ಯೇದಂ ಪ್ರಜ್ಞಾವಿಲಸಿತಂ ‡

ಎಂದು ನಟಿಯೊಡನೆ ಹೇಳಿರುವುದರಿಂದ ಶಕ್ತಿಭದ್ರನು 'ಉನ್ಮಾದವಾಸವದತ್ತೆ' ಎಂಬ ಕಾವ್ಯವನ್ನು ಬರೆದಿರುವನೆಂದೂ ವ್ಯಕ್ತವಾಗುತ್ತದೆ. ಈ ಕಾವ್ಯವು ಯಾವುದೆಂಬುದು ಪ್ರಕೃತ ತಿಳಿಯದಾಗಿದೆ. ಡಾ॥ ಕೀತ್‌ರವರು ತಾವು ಬರೆದಿರುವ 'ಸಂಸ್ಕೃತನಾಟಕಗಳು' ಎಂಬ ಪುಸ್ತಕದಲ್ಲಿ ಶಕ್ತಿಭದ್ರನ ಆಶ್ಚರ್ಯಚೂಡಾಮಣಿಯನ್ನು ಕುಲಶೇಖರವರ್ಮನ ಆಶ್ಚರ್ಯಮಂಜರೀಕಥೆಯೆಂದು ಪ್ರಮಾದದಿಂದ ಹೇಳಿರುವರು. *

‡ ಆಶ್ಚರ್ಯಚೂಡಾಮಣಿ ಪುಟ ೧೦

* Sanskrit Drama P 381 Foot Note

ರಾಮಾಯಣಕಥೆಯನ್ನು ತೆಗೆದುಕೊಂಡು ನಾಟಕವನ್ನಾಗಿ ಬರೆದಿರುವ ಕವಿಗಳಲ್ಲಿ ಉತ್ತರರಾಮಚರಿತೆಯನ್ನು ಬರೆದ ಮಹಾಕವಿ ಭವಭೂತಿಯನ್ನು ಬಿಟ್ಟರೆ ಆಶ್ಚರ್ಯಚೂಡಾಮಣಿಕಾರನಾದ ಶಕ್ತಿಭದ್ರನೇ ಮೊದಲನೆಯವನೆನ್ನ ಬೇಕಾಗುತ್ತದೆ. ಇದು ರಾಜಶೇಖರನ ಬಾಲರಾಮಾಯಣದಂತೆ ಮುರಾರಿಯ ಅನರ್ಘರಾಘವದಂತೆ ರಂಗವೇದಿಕೆಯಲ್ಲಿ ಆಡಿತೋರಿಸಲು ಕಷ್ಟವಾಗಿರದೆ ಸುಲಭವೂ, ಚೆಲುವೂ, ಮನೋರಂಜಕವೂ ಆಗಿ ಸಮಂಜಸವಾದ ಅಂಕಾವತರಣ–ವಿಷ್ಕಂಭಕಗಳಿಂದ ಕೂಡಿ ಸುರಸವಾಗಿ ಬರೆಯಲ್ಪಟ್ಟಿರುವುದು. ಇದರಲ್ಲಿ

'ವೀರಕಾರ್ಯಾದದ್ಭುತರಸಭೂಯಿಷ್ಠತ್ವೇನ ಆಶ್ಚರ್ಯಕರಾಣಾಂ ಚೂಡಾಮಣಿರಿತ್ಯಾಶ್ಚರ್ಯಚೂಡಾಮಣಿರಿತಿ ಸಂಜ್ಞಾ'

ಎಂದು ವ್ಯಾಖ್ಯಾನಕಾರನು ಹೇಳಿರುವಂತೆ ಅದ್ಭುತರಸವು ಪ್ರಧಾನವಾದುದಾಗಿ ಕರುಣ, ಶಾಂತ, ಶೃಂಗಾರರಸಮಿಳಿತವಾಗಿ ಪ್ರಸಾದ ಮತ್ತು ಮಾಧುರ್ಯ ಗುಣಗಳಿಂದ ಕೂಡಿ ವೈದರ್ಭೀರೀತಿಯಲ್ಲಿ ಬರೆಯಲ್ಪಟ್ಟಿರುವುದು.

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟದಲ್ಲಿರುವಾಗ ಸಂಭವಿಸಿದ ಶೂರ್ಪಣಖಾಸಮಾಗಮಾರಭ್ಯ ರಾವಣವಧಾನಂತರ ಶ್ರೀರಾಮನು ಅಯೋಧ್ಯೆಗೆ ಹೋದನೆಂಬವರೆಗಿನ ಕಥೆಯನ್ನು ತೆಗೆದುಕೊಂಡು ತನಗೆ ಬೇಕುಬೇಕಾದಂತೆ ಮಾರ್ಪಡಿಸಿ ಏಳು ಅಂಕಗಳುಳ್ಳ ನಾಟಕವನ್ನಾಗಿ ಬರೆದಿರುವನು. ಕವಿಯು ರಾಮಾಯಣವನ್ನು ಶ್ರೀರಾಮನ ವನವಾಸಕಾರಣವಾದ ಕೈಕೇಯೀವೃತ್ತಾಂತವೆಂದೂ ರಾವಣವಧಕಾರಣವಾದ ಶೂರ್ಪಣಖಾವೃತ್ತಾಂತವೆಂದೂ ಮುಖ್ಯವಾದ ಎರಡುಭಾಗಗಳನ್ನು ಮಾಡಿಕೊಂಡು ಆಶ್ಚರ್ಯಚೂಡಾಮಣಿಯನ್ನು ಬರೆದಿರುವಂತೆ ತೋರುತ್ತದೆ. ನಾಟಕದಲ್ಲಿ ಕಾಣುವ ಏಳು ಅಂಕಗಳ ಹೆಸರು ಈ ರೀತಿಯಾಗಿ ಹೇಳಲ್ಪಟ್ಟಿರುವುದು. †

> ಪರ್ಣಶಾಲಾ ಶೂರ್ಪಣಖಾ ಮಾಯಾ ಸೀತಾ ತತಃ ಪರಂ
> ಜಟಾಯುಷೋ ವಧೋಽಶೋಕ ವನಿಕಾಪ್ಯಂಗುಲೀಯಕಂ
> ಸಪ್ತಮೋಽಸಿಕಸ್ತತಶ್ಚೇತ್ಥಂ ಚೂಡಾಮಣ್ಯಂಕಕೀರ್ತನಂ ||

ಕವಿಯು ತನ್ನ ಕಥಾಕಲ್ಪನೆಗೆ ಮುಖ್ಯಾಧಾರವಾದುದು ಚೂಡಾಮಣಿಯಾದುದರಿಂದ ನಾಟಕವನ್ನು ಚೂಡಾಮಣಿನಾಟಕವೆಂದೂ ಆ ಚೂಡಾಮಣಿಯು ಅತ್ಯಂತಕೌತುಕಮಯವಾಗಿದ್ದುದರಿಂದಆಶ್ಚರ್ಯಚೂಡಾಮಣಿಯೆಂದೂ ಕರೆದಿರುವನು. ಈ ವಿಚಾರವು ನಾಟಕಕಥಾಪರ್ಯಾಲೋಚನೆಯಿಂದಲೂ

† ಆಶ್ಚರ್ಯಚೂಡಾಮಣಿ ಪುಟ ೨೩೬

ಚೂಡಾಮಣಿಯು ಪ್ರಾಧಾನ್ಯವು ೩-೪ ಮತ್ತು ೭ ನೆಯ ಅಂಕಗಳಲ್ಲಿನ ವಿಷಯ ಗಳಿಂದಲೂ ಸಮರ್ಥಿತವಾಗುವುದು.

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟದಲ್ಲಿರುವಾಗ ಅಲ್ಲಿನ ಋಷಿಗಳು ರಾಕ್ಷಸಮಾಯೋತ್ಸಾರಣಶಕ್ತಗಳಾದ ಅದ್ಭುತಾಂಗುಲೀಯಕ ಮತ್ತು ಆಶ್ಚರ್ಯಚೂಡಾಮಣಿಯನ್ನೂ ಶರಾದಿಶಸ್ತ್ರಬಾಧಾಪ್ರತಿಬಂಧಕವಾದ ಕವಚವನ್ನೂ ಲಕ್ಷ್ಮಣನ ಮೂಲಕ ಶ್ರೀರಾಮನಿಗೆ ಅರ್ಪಿಸುವ ಸಮಯದಲ್ಲಿ ಶ್ರೀರಾಮನ ಸೌಂದರ್ಯಲುಬ್ಧಳಾದ ಶೂರ್ಪಣಖಿಯು ವೇಷಾಂತರದಿಂದ ಶ್ರೀರಾಮನ ಬಳಿಗೆ ಬಂದು ತನ್ನನ್ನು ವರಿಸಬೇಕೆಂದು ಪ್ರಾರ್ಥಿಸಲು ರಾಮನು ಲಕ್ಷ್ಮಣನ ಬಳಿಗೆ ಹೋಗೆಂದುದನ್ನು ಕೇಳಿ ಅಂತೆಯೇ ಲಕ್ಷ್ಮಣನ ಬಳಿ ಸಾರ್ದು ತಿರಸ್ಕೃತಳಾಗಿ ಅವನಿಂದ ಪ್ರತೀಕಾರವನ್ನು ಹೊಂದಿ ಕಡುದುಃಖದಿಂದ ಖರದೂಷಣಾದಿಗಳಲ್ಲಿ ದೂರು ಹೇಳಲು ಅವರು ಬಂದು ರಾಮನಿಂದ ಹತರಾದುದನ್ನು ತಿಳಿದು ಶೂರ್ಪಣಖಿಯು ನಡೆದ ಸಮಾಚಾರವೆಲ್ಲವನ್ನೂ ರಾವಣನೊಡನೆ ಬಿನ್ನವಿಸಿದಳು. ರಾವಣನು ಇದೆಲ್ಲವನ್ನೂ ಕೇಳಿ ಹೇಗಾದರೂ ಸೀತೆಯನ್ನು ಅಪಹರಿಸಬೇಕೆಂದು ಯೋಚಿಸಿ ಮಾರೀಚನನ್ನು ಹತ್ತಿರ ಕರೆದು ಮಾಯಾಮೃಗವೇಷದಿಂದ ರಾಮಲಕ್ಷ್ಮಣರನ್ನೂ ಸೀತೆಯನ್ನೂ ಅಗಲಿಸುವಂತೆ ನಿರ್ಬಂಧ ಪಡಿಸಿದುದನ್ನು ಉಪಾಯಾಂತರವಿಲ್ಲದೆ ಒಪ್ಪಿ ಹೇಮಮೃಗವೇಷದಿಂದ ಸೀತೆಯ ಮುಂದೆ ಸುಳಿದಾಡಿದನು. ಕಪಟವನ್ನರಿಯದ ಸೀತೆಯು ಇದನ್ನು ಮಾಯಾಮೃಗವೆಂದರಿಯದೆ ತನಗೆ ಅದನ್ನು ತಂದು ಕೊಡಬೇಕೆಂದು ಪ್ರಾರ್ಥಿಸಲಾಗಿ ಶ್ರೀರಾಮನು ಪರ್ಣಶಾಲೆಯೊಳಿದ್ದ ಸೀತೆಯ ಕಾವಲಿಗೆ ಲಕ್ಷ್ಮಣನನ್ನು ನಿಯಮಿಸಿ ತಾನು ಹೇಮಮೃಗವನ್ನು ಬೆನ್ನಟ್ಟಿದನು. ಕೊಂಚಹೊತ್ತಾದ ತರುವಾಯ ಕೇಳಿ ಬಂದ ಆರ್ತಸ್ವರವನ್ನು ಲಾಲಿಸಿ ರಾಮನ ಧ್ವನಿಯಂತಿರುವುದೆಂದು ತತ್ತರಗೊಂಡು ಸಹಾಯಕ್ಕೆ ಲಕ್ಷ್ಮಣನನ್ನು ಹೋಗೆಂದಳು. ಪುನಃಪುನಃ ಕೇಳಿ ಬರುತ್ತಿರುವ ಆರ್ತನಾದ ಪರಂಪರೆಯು ಹೆಚ್ಚಾಗಿ ಸೀತೆಯನ್ನು ಯಾವ ವಿಧದಲ್ಲಿಯೂ ಸಮಾಧಾನಗೊಳಿಸಲಾಗದೆ ಆಕೆಯ ನಿಷ್ಠುರೋಕ್ತಿಯಿಂದ ನೊಂದ ಲಕ್ಷ್ಮಣನು ರಾಮನನ್ನು ಹುಡುಕಿಕೊಂಡು ಹೊರಟನು. ಆದರೂ ಆರ್ತನಾದವು ನಿಲ್ಲಲಿಲ್ಲ. ಆರ್ತಸ್ವರವು ರಾಮನ ಧ್ವನಿಯಂತೆಯೇ ಕೇಳಬರುತ್ತಿತ್ತು. ಇದನ್ನು ಕೇಳಿ ಸೀತೆಯು ಕಡುಕಾತರೆಯಾಗಿ ಶ್ರೀರಾಮನನ್ನು ಹುಡುಕಿಕೊಂಡು ಬರಲು ತಾನೇ ಹೊರಟಳು. ಇದೇ ಸಮಯವನ್ನು ನಿರೀಕ್ಷಿಸುತ್ತಿದ್ದ ರಾವಣನು ಶ್ರೀರಾಮನ ವೇಷದಿಂದ ಸೀತೆಯ ಎದುರಿನಲ್ಲಿ ಬಂದು ಇದುವರೆಗೆ ಕೇಳಿದ ಆರ್ತ

ಸ್ವರವೆಲ್ಲವೂ ರಾಕ್ಷಸರ ಮಾಯೆಯೆಂದೂ ಇದಕ್ಕಾಗಿ ಅಂಜಬೇಡವೆಂದೂ ಸಮಾಧಾನೋಕ್ತಿಗಳಿಂದ ಸಂತೈಸುತ್ತಿರುವಷ್ಟರಲ್ಲಿಯೇ ರಾವಣನ ಸೂತನು ಲಕ್ಷ್ಮಣನ ವೇಷದಿಂದ ರಥವನ್ನು ತೆಗೆದುಕೊಂಡು ಬಂದು ಜೀಯಾ! ಅಯೋಧ್ಯೆಯಲ್ಲಿ ಭರತನಿಗೆ ಪರರಾಯರುಗಳಿಂದ ಮಹಾಭಯವು ಒದಗಿರುವುದೆಂದೂ ಅವನ ಸಹಾಯಕ್ಕಾಗಿ ತಮ್ಮನ್ನು ಕೂಡಲೇ ಕರೆತರಬೇಕೆಂದು ತಮ್ಮಬಳಿಗೆ ರಥವನ್ನು ಕಳುಹಿಸಿರುವನೆಂದೂ ಹೇಳಲು ಸೀತೆಯು ಇದನ್ನು ಕೇಳಿ ಭರತನ ಯೋಗಕ್ಷೇಮವನ್ನು ಮೊದಲು ನೋಡತಕ್ಕದ್ದೆಂದು ಹೇಳಲು ಅವಳ ಅನುಮತಿಯಂತೆ ರಾಮನ ವೇಷದಲ್ಲಿರುವ ರಾವಣನೂ ಸೀತೆಯೂ ರಥಾರೋಹಣಮಾಡಿದರು. ಇತ್ತಲಾಗಿ ಶ್ರೀರಾಮನು ಬಹುದೂರ ಹೋಗಿ ಹೇಮಮೃಗವು ಸಿಕ್ಕದೆ ಹಿಂದಿರುಗಿ ಬರುತ್ತಿರುವಾಗ ಸೀತೆಯಂತೆ ವೇಷಾಂತರವನ್ನು ಹೊಂದಿದ ಶೂರ್ಪಣಖಿಯು ಎದುರಾಗುವಳು. ಶ್ರೀರಾಮನು ಅವಳನ್ನು ನಿಜವಾದ ಸೀತೆಯೆಂದೇ ಭಾವಿಸಿ ಆ ಆರ್ತನಾದಗಳೆಲ್ಲವೂ ರಾಕ್ಷಸಮಾಯೆಯೆಂದು ಹೇಳಿ ಸಮಾಧಾನಗೊಳಿಸುತ್ತಿರುವಾಗ ಅಯೋಧ್ಯೆಗೆಂದು ವಿಮಾನದಲ್ಲಿ ಕುಳಿತು ಆಕಾಶಮಾರ್ಗವಾಗಿ ಹೋಗುತ್ತಿರುವ ರಾವಣಸೀತೆಯರು ಕೆಳಗಡೆ ಕಾಣಬರುತ್ತಿರುವ ರಾಮಸೀತೆಯರನ್ನು ನೋಡಿ ಸೀತೆಯು ಚಕಿತಳಾಗಿ ಇದೇನೆಂದು ಕೇಳಲು ಕಪಟರಾಮನ ವೇಷವನ್ನು ಹೊಂದಿದ್ದ ರಾವಣನು ಅವೆಲ್ಲವೂ ರಾಕ್ಷಸಮಾಯೆಯೆಂದು ಹೇಳಲಾಗಿ ಸೀತೆಯು ಕೆಳಗೆ ಕಾಣುವ ಸೀತೆಯು ಹೇಗೆ ಮಾಯಾವಿಯೋ ಹಾಗೆಯೇ ಆ ರಾಮನೂ–ತನ್ನ ಪತಿಯಾದ ರಾಮನಾಗಿರನು, ಎಂದು ಸಮಾಧಾನಚಿತ್ತಳಾದಳು. ಹಾಗೆಯೇ ಶ್ರೀರಾಮನೂ ಸಹ ವಿಮಾನಸ್ಥರಾದ ರಾಮಸೀತೆಯರನ್ನು ನೋಡಿ ಆ ರಾಮನು ಹೇಗೆ ತಾನಲ್ಲವೋ ಹಾಗೆಯೇ ಆ ಸೀತೆಯೂ ನಿಜವಾದ ಸೀತೆಯಾಗಿರಳೆಂದು ಸಮಾಧಾನಪಟ್ಟುಕೊಳ್ಳುವನು. ರಾವಣನು ಸೀತೆಯೊಂದಿಗೆ ಹೊರಟುಹೋಗುವನು.

ಇಷ್ಟರಲ್ಲಿಯೇ ರಾಮನ ಸಹಾಯಾರ್ಥವಾಗಿ ಹೋದ ಲಕ್ಷ್ಮಣನು ರಾಮನ ರೂಪದಿಂದ ಮೃತನಂತೆ ಬಿದ್ದಿದ್ದ ಮಾರೀಚನನ್ನು ಕಂಡು ನಿಜವಾಗಿಯೂ ಶ್ರೀರಾಮನೇ ಮೃತನಾಗಿರುವನೆಂದು ಪ್ರಲಾಪಿಸುತ್ತಿರಲು ಈ ಪ್ರಲಾಪಧ್ವನಿಯನ್ನು ಕೇಳಿ ಶ್ರೀರಾಮನೂ ಸೀತಾವೇಷಧಾರಿಣಿಯಾದ ಶೂರ್ಪಣಖಿಯೂ ಈರ್ವರೂ ಅಲ್ಲಿಗೆ ಬರಲು ಲಕ್ಷ್ಮಣನು ರಾಮನನ್ನು ನೋಡಿ ಯಾವನೋ ರಾಕ್ಷಸನು ರಾಮರೂಪಿನಿಂದ ತನ್ನನ್ನು ಮೋಸಪಡಿಸಲು ಬಂದಿರುವುದಾಗಿ ಭಾವಿಸಿ ಅವನೊಡನೆ ಯುದ್ಧಸನ್ನದ್ಧನಾಗುವನು. ಇದನ್ನು ನೋಡಿ ಶ್ರೀರಾಮನು ತನ್ನ ಬೆರಳಿನಲ್ಲಿದ್ದ ಅದ್ಭುತಾಂಗುಳೀಯಕವನ್ನು ತೋರಿಸಿ ಲಕ್ಷ್ಮಣ

ನನ್ನು ಸಮಾಧಾನಗೊಳಿಸುವನು. ಇದಲ್ಲದೆ ಆ ಅಂಗುಳೀಯಕಸ್ಪರ್ಶದಿಂದ ಮಾರೀಚನು ತನ್ನ ಸ್ವಸ್ವರೂಪದಿಂದಲೇ ಮೃತನಾದುದನ್ನು ಕಂಡು ಶೂರ್ಪಣಖಿಯು ರೋದಿಸುವುದಕ್ಕುಪಕ್ರಮಿಸಲು ರಾಮನು ಸೀತೆಯನ್ನು ಸಮಾಧಾನಪಡಿಸಬೇಕೆಂದು ಅವಳ ಕಣ್ಣೀರನ್ನೊರೆಸಹೋಗಲು ಆ ಅಂಗುಳೀಯಕ ಸ್ಪರ್ಶದಿಂದ ಆಕೆಯೂ ಸೀತೆಯ ರೂಪನ್ನು ಬಿಟ್ಟು ನಿಜರೂಪನ್ನು ಧರಿಸಿ ಶ್ರೀ ರಾಮನ ನಿರ್ಬಂಧದಿಂದ ರಾವಣನ ಕಪಟವರ್ತನೆಗಳೆಲ್ಲವನ್ನೂ ನಿವೇದನಮಾಡಿ ಹೊರಟುಹೋದಳು.

ಇತ್ತಲಾಗಿ ರಾಮ ವೇಷಧಾರಿಯಾದ ರಾವಣನು ಸೀತೆಯ ಸ್ಪರ್ಶಸುಖಕ್ಕಾಗಿ ತಹತಹಗೊಳ್ಳುತ್ತಾ ಆಕೆಯ ಕೇಶಪಾಶವನ್ನು ಬಂಧಿಸುವ ನೆಪದಿಂದ ಕೈಹಾಕಲು ಸೀತೆಯು ಲಕ್ಷ್ಮಣನಿರುವುದನ್ನು ತಿಳಿದು ಈಗ ಬೇಡವೆಂದು ಕೈಯಿಂದ ನಿವಾರಿಸಲು ಆ ಚೂಡಾಮಣಿಯ ಸ್ಪರ್ಶದಿಂದ ರಾವಣನ ಮಾಯಾರೂಪವು ಹೋಗಿ ನಿಜವಾದ ರಾವಣನಾದುದನ್ನು ತಿಳಿದು ಸೂತನೂ ಕೂಡ ಲಕ್ಷ್ಮಣನ ರೂಪವನ್ನುಳಿದು ನಿಜರೂಪವನ್ನು ಧರಿಸಲು ಸೀತೆಯು ಭಯದಿಂದ ನಡುಗುತ್ತಾ ಗೋಳಿಡುತ್ತಿರುವುದನ್ನು ಜಟಾಯುವು ಕೇಳಿ ರಾವಣನನ್ನೆದುರಿಸಿ ಪರಾಜಿತನಾದನು. ರಾವಣನು ಗೋಳಿಡುತ್ತಿರುವ ಸೀತೆಯೊಡನೆ ನಿಜನಗರಾಭಿಮುಖನಾದನು. ದುಃಸ್ವಪ್ನದಿಂದ ಕಾತರಳಾಗಿರುವ ಮಂಡೋದರಿಯನ್ನು ಸಖಿಯೊಬ್ಬಳು ಸಂತವಿಸುತ್ತ ರಾವಣನು ಅಶೋಕವನದಲ್ಲಿ ತಂದಿಟ್ಟಿರುವ ಸೀತೆಯನ್ನು ನೋಡುವುದಕ್ಕೆ ಬರುವನೆಂದು ತಿಳಿಸಲು ಅವಳು ಅಲ್ಲಿಗೆ ಹೋಗಿ ಎಷ್ಟು ಹೇಳಿದರೂ ಸಾಧ್ಯವಾಗದೆ ಸೀತೆಯ ನಿಷ್ಠುರೋಕ್ತಿಗಳಿಂದ ಕುಪಿತನಾದ ರಾವಣನು ಸೀತೆಯನ್ನು ಕೊಲ್ಲಲೆಳಸಿ ಕತ್ತಿಯನ್ನೆತ್ತಿರುವುದನ್ನು ಕಂಡು ಅವನನ್ನು ಸಮಾಧಾನ ಪಡಿಸಿ ಅಂತಃಪುರಕ್ಕೆ ಕರೆದುಕೊಂಡು ಹೋದಳು. ಇಷ್ಟರಲ್ಲಿಯೇ ಸುಗ್ರೀವ ಪ್ರೇರಿತನಾದ ಆಂಜನೇಯನು ಸಂಪಾತಿಯ ಸಲಹೆಯಿಂದ ಸಮುದ್ರವನ್ನು ದಾಟಿ ಲಂಕೆಯನ್ನು ಪ್ರವೇಶಿಸಿ ಅಶೋಕವನಕ್ಕೆ ಬಂದು ಸೀತೆಯನ್ನು ಹುಡುಕುತ್ತಾ ಸ್ತ್ರೀರೋದನಧ್ವನಿ ಬರುತ್ತಿರುವ ದಿಕ್ಕನ್ನಾಲೈಸಿ ಹಾಗೆಯೇ ಸರೋವರದ ಸಮೀಪಕ್ಕೆ ಬಂದು ಮರಗೋನ್ಮುಖಿಯಾದ ಸೀತೆಯನ್ನು ನೋಡಿ ತಾನು ರಾಮದೂತನೆಂದು ತಿಳಿಸಿ ಅನಂತರ ಸೀತಾನ್ವೇಷಣ, ಜಟಾಯುವಿನಿಂದ ಸೀತಾವಿಚಾರವಾಗಿ ತಿಳಿದುಬಂದ ವಿಷಯ, ಹನುಮತ್ಸಮಾಗಮ, ಸುಗ್ರೀವಸಖ್ಯ, ಸಂಪಾತಿಸಂದರ್ಶನ, ಸಮುದ್ರಲಂಘನವೇ ಮೊದಲಾದ ಸಕಲ ವಿಚಾರಗಳನ್ನೂ ಸಾಂಗೋಪಾಂಗವಾಗಿ ಹೇಳಿ ರಾಮನು ಕೊಟ್ಟಿದ್ದ ಆಶ್ಚರ್ಯ (ಅದ್ಭುತ) ಅಂಗುಳೀಯಕವನ್ನು

ಕೊಟ್ಟು ಆಕೆಗೆ ತನ್ನ ವಿಷಯದಲ್ಲಿ ನಂಬಿಕೆಯು ದೃಢವಾಗುವಂತೆ ನಡೆದ ಒಂದಾನೊಂದು ಸಂದರ್ಭವಿಶೇಷವನ್ನು ಹೇಳಿಅವಳಿಂದ ಕೊಡಲ್ಪಟ್ಟ ಆಶ್ಚರ್ಯ ಚೂಡಾಮಣಿಯನ್ನು ತೆಗೆದುಕೊಂಡು ಹೊರಟು ಶ್ರೀರಾಮನ ಬಳಿಗೆ ಸೇರಿದನು. ಶ್ರೀರಾಮನು ರಾವಣವಧೆಯನ್ನು ನೆರವೇರಿಸಿ ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಟ್ಟು ಪರಗೃಹವಾಸದಲ್ಲಿದ್ದ ಸೀತೆಯು ಪಾತಿವ್ರತ್ಯವಿಷಯದಲ್ಲಿ ಶಂಕಿತನಾಗಿರಲು ಆಗ ಅಗ್ನಿಪರಿಶುದ್ಧಳಾದ ಸೀತೆಯನ್ನು ನೋಡಿ ಅವಳ ಕುಂದದ ಕಂದದ ಲಾವಣ್ಯಾತಿಶಯಗಳಿಗೆ ಅನಸೂಯೆಯ ಅನುಗ್ರಹವೇ ಕಾರಣವೆಂದು ತಿಳಿದನಂತರ ರಾಮನು ಸೀತೆಯನ್ನು ಪರಿಗ್ರಹಿಸಿ ತಮ್ಮ ತಮ್ಮ ಸಮೀಪದಲ್ಲಿದ್ದ ಆಶ್ಚರ್ಯಚೂಡಾಮಣಿ ಮತ್ತು ಅದ್ಭುತಾಂಗುಳೀಯಕಗಳಿಂದ ಪರಸ್ಪರ ಸಂಶಯವು ದೂರವಾಗಲು ಸೀತೆಯೊಡನೆ ಪುಷ್ಪಕವನ್ನೇರಿ ಸಕಲರ ಆಣತಿಯಂತೆ ಅಯೋಧ್ಯೆಗೆ ಹೋದನು.

ಸೀತಾರಾಮಲಕ್ಷ್ಮಣರು ರಾಜಯೋಗ್ಯವಾದ ಸಕಲವಸನಭೂಷಣಾದಿಗಳನ್ನು ತೊರೆದು ಅರಣ್ಯವಾಸಿಗಳಾಗಿ ಮುನಿವೇಷದಿಂದ ಇದ್ದವರಿಗೆ ಅದ್ಭುತಾಂಗುಳೀಯ, ಆಶ್ಚರ್ಯಚೂಡಾಮಣಿ, ಅಭೇದ್ಯಕವಚ ಇವುಗಳು ಎಲ್ಲಿಯವೆಂದು ಸಂಶಯಕ್ಕೆಡೆಗೊಡದಂತೆ ಋಷಿಗಳು ಅನುಗ್ರಹಿಸಿಕೊಟ್ಟುದಾಗಿ ಕವಿಯು ಹೇಳಿರುವನು. ಹಾಗಲ್ಲದಿದ್ದರೆ ರಾವಣ, ಶೂರ್ಪಣಖಿ, ಮಾರೀಚ, ರಾವಣನಸೂತ ಇವರ ಮಾಯಾವಿಚಾರವು ತಿಳಿಯಲವಕಾಶವಿರುತ್ತಿರಲಿಲ್ಲ. ಅದ್ಭುತಾಂಗುಳೀಯಕದಿಂದ ಲಕ್ಷ್ಮಣನಿಗೆ ಶ್ರೀರಾಮನೆಂಬ ನಂಬಿಕೆಯುಂಟಾಗಿ ಮಾರೀಚನ ಕಾಪಟ್ಯವೂ ಶೂರ್ಪಣಖಿಯ ಮೋಸವೂ ವ್ಯಕ್ತವಾದುವು. ಚೂಡಾಮಣಿಯ ಪ್ರಭಾವದಿಂದ ರಾವಣನ ನಿಜಾಂಶವು ವ್ಯಕ್ತವಾಗಿ ಸೀತೆಯು ಜಾಗರೂಕಳಾಗಿರಲು ಅನುಕೂಲಿಸಿತು. ಕೊನೆಯಲ್ಲಿಯೂ ಆಂಜನೇಯನು ರಾಮನ ಅಂಗುಳೀಯಕವನ್ನು ತೋರಿಸಿದುದರಿಂದ ಸೀತೆಯ ನಂಬಿಕೆಗೆ ಕಾರಣವಾದುದೇ ಹೊರತು ಅನ್ಯಥಾ ಅಲ್ಲ. ಸೀತಾರಾಮರ ಪರಸ್ಪರ ವಿಶ್ವಾಸದಾರ್ಢ್ಯಕ್ಕೂ ಕೂಡ ಅವರವರಲ್ಲಿದ್ದ ಅಂಗುಳೀಯಕ, ಚೂಡಾಮಣಿಗಳೇ ಕಾರಣವಾದುವೆಂದರೆ ಹೆಚ್ಚಾಗದು.

ಕಾಳಿದಾಸನ ನಾಟಕಗಳಲ್ಲಿನ ಶ್ಲೋಕಾಭಿಪ್ರಾಯಗಳನೇಕಗಳು ಶಕ್ತಿಭದ್ರನ ನಾಟಕದಲ್ಲಿ ಕಂಡುಬರುವುವು.

ಉದಾಹರಣೆ:—

ಗುಣಾಃ ಪ್ರಮಾಣಂ ನ ದಿಶಾಂ ವಿಭಾಗಃ
ನಿದರ್ಶನಂ ಸನ್ನಿದಮೇವ ತತ್ರ ॥

ಸ್ತನದ್ವಯೇ ತೇ ಹರಿಚಂದನಂ ಚ
ಹಾರಶ್ಚ ನೀಹಾರಮರೀಚಿಗೌರಃ ॥ — ಆಶ್ಚರ್ಯಚೂಡಾಮಣಿ ೧—೩

ಪುರಾಣಮಿತ್ಯೇ ನ ಸಾಧು ಸರ್ವಂ
ನ ಚಾಪಿ ಸರ್ವಂ ನವಮಿತ್ಯವದ್ಯಂ
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ
ಮೂಢಃ ಪರಪ್ರತ್ಯಯನೇಯಬುದ್ಧಿಃ ॥ —ಮಾಳವಿಕಾಗ್ನಿಮಿತ್ರ

ಚರಣನಳಿನಸಾಧ್ಯಂ ಯಾನಮಾಹಾರ್ಯಮಂಭಃ
ಶಯನಮವನಿಪೃಷ್ಠಂ ಮಂಡನಂ ಸ್ನಾನಮಾತ್ರಂ ।
ತವ ತರುಣಿ ತಥಾಪಿ ತ್ವಂ ಶ್ರಿಯಾ ಚಕ್ಷುಷೀ ಮೇ
ಹರಸಿ ಪುರಮಯೋಧ್ಯಾಮಾವಸಂತೀವ ಚಿತ್ರಂ ॥

—ಆಶ್ಚರ್ಯಚೂಡಾಮಣಿ ೨—೪

ಸರಸಿಜಮನುವಿದ್ಧಂ ಶೈವಲೇನಾಪಿರಮ್ಯಂ
ಮಲಿನಮಪಿ ಹಿಮಾಂಶೋರ್ಲಕ್ಷ್ಮಲಕ್ಷ್ಮೀಂ ತನೋತಿ ।
ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ ॥

—ಶಾಕುಂತಲ

ಸಂದರ್ಭಕ್ಕೆ ತಕ್ಕಂತೆ ಸ್ಫೂರ್ತಿದಾಯಕವಾದ ಸುಂದರ ಶ್ಲೋಕಗಳು ಅಲ್ಲಲ್ಲಿ ದೊರೆಯುವುವು. ಮಾದರಿಗಾಗಿ ಒಂದೆರಡನ್ನು ಇಲ್ಲಿಕೊಟ್ಟಿದೆ.

ತನ್ನನ್ನು ವರಿಸಬೇಕೆಂದು ಪ್ರಾರ್ಥಿಸಿಕೊಳ್ಳುವ ಶೂರ್ಪಣಖಿಗೆ ಲಕ್ಷ್ಮಣನು ಹೇಳುವುದು—

ವಾಸೋ ವಲ್ಕಲಮಾಸ್ಪದಂ ವಿಟಪಿನೋ ವನ್ಯಂ ಶರೀರಸ್ಥಿತಿಃ ।
ಶಯ್ಯಾ ದರ್ಭಲತಾ ಪ್ರಸಾದನಮಪಾಂ ವರ್ಷೇ ಜಟಾನಾಂ ಧರಃ ॥
ಬಾಲೇ ಕಿಂ ಬಹುನಾ ವನೇ ವನಮೃಗನ್ಯಾಯಸ್ಯ ನ ತ್ವಂ ಪದಂ ।
ಸಾರಂಗಾಕ್ಷಿ ತಪೋಭೃತಃ ಕ್ವ ತಪಸಾಂ ಶತ್ರುಃ ಕ್ವ ಸಂಕಲ್ಪಜಃ ॥

ಎಲೌ ಕುರಂಗನಯನೆ! ನನಗೆ ಈ ನಾರುಬಟ್ಟೆಯೇ ವಸ್ತ್ರವು, ಮರಗಳ ಬುಡಗಳೇ ವಾಸಸ್ಥಾನ, ಗೆಡ್ಡೆಗೆಣಸುಗಳೇ ಜೀವನಾಧಾರ, ದರ್ಭಲತೆಗಳೇ ಹಾಸಿಗೆ, ಜಡ್ಡುಕಟ್ಟಿರುವ ಜಟೆಯೇ ಆಭರಣ ಈ ಪ್ರಕಾರ ಕೇವಲ ವನಮೃಗದಂತಿರುವ ತಪಃಶೀಲನಾದ ನಾನೆಲ್ಲಿ! ಆ ತಪಸ್ಸಿಗೆ ಶತ್ರುವಾದ ಮನೋಜನೆಲ್ಲಿ; ಪರಸ್ಪರ ಸಂಬಂಧವು ಸರಿಹೋಗದಾದುದರಿಂದ ನಿನಗನುರೂಪನಾದವನನ್ನು ಹೊಂದಲು ಬೇರೆ ಹೊರಟುಹೋಗುವಳಾಗು.

ಕೈಕೇಯಿಯನ್ನುದ್ದೇಶಿಸಿ ಲಕ್ಷ್ಮಣನ ಹೇಳಿಕೆ—

ಆರ್ಯೇಣಾಂಶುಕಮುಜ್ಝಿತಾ ಧೃತಮಭೂದಾಪಾಟಲಂ ವಲ್ಕಲಂ
ವಿನ್ಯಸ್ತಂ ಪದಮಾರ್ಯಯಾ ವೃಕವಧೂಪಾದಾಂಕಪಾಂಸೌ ಪಥಿ ।
ಸಂತಾಪೈಸ್ತನುತಾಮುಪೈತಿ ಭರತಃ ಪರ್ಯಾಕುಲಾಃ ಕೋಸಲಾಃ
ವೈಧವ್ಯಂ ಹತಮಾಸ್ಥಿತಾ ತ್ವಮಪಿ ತೇ ಧಿಕ್ಕರ್ಮ ಸರ್ವಂಕಷಂ ॥ ೧—೧೩

ಅಂಬ ಕೈಕೇಯಿ! ಸಕಲರಿಗೂ ಸಂತಾಪಕಾರಣವಾಗಿರುವ ನಿನ್ನ ಕೆಲಸಕ್ಕೆ ಧಿಕ್ಕಾರವಿರಲಿ, ಅಹಹ! ನೀನು ಎಂತಹ ಕೆಲಸವನ್ನು ಮಾಡಿರುವೆ! ಆರ್ಯನಾದ ಶ್ರೀರಾಮಭದ್ರನು ಥಳಥಳಿಸುವ ಪೀತಾಂಬರವನ್ನುಳಿದು ಪಾಟಲ ವರ್ಣವಲ್ಕಲಗಳನ್ನು ಧರಿಸುವಂತಾದುದು; ಪೂಜ್ಯತಮಳಾದ ಜಾನಕಿಯೂ ಕೂಡ ನರಿಗಳು ಸಂಚರಿಸುವ ತಾಣಗಳಲ್ಲಿ ಸಂಚರಿಸುವಂತಾದುದು; ಭರತನು ಮಹಾದುಃಖದಿಂದ ದಿನದಿನವೂ ಕ್ಷೀಣಿಸಿಹೋಗುತ್ತಿರುವನು. ಪ್ರಜೆಗಳೆಲ್ಲರೂ ಪರ್ಯಾಕುಲರಾಗಿರುವರು; ಇವೆಲ್ಲವೂ ಹಾಗಿರಲಿ, ನೀನಾದರೂ ಪ್ರಯೋಜನವನ್ನು ಹೊಂದಿದೆಯಾ? ಆ ಹತ! ವೈಧವ್ಯವನ್ನೂ ಅನುಭವಿಸುತ್ತಿರುವೆಯಲ್ಲಾ! ಅಯ್ಯೋ!

ಹೀಗೆ ದುಃಖಿಸುತ್ತಿರುವ ಲಕ್ಷ್ಮಣನನ್ನು ನೋಡಿ ಶ್ರೀರಾಮನು ಹೇಳುವುದು—

ಮಾರ್ಗೇ ನಿರ್ವೃತಿಮಾರ್ಗಮಾರ್ಗಣಪರಾನಾರಾಧಯಂತೋ ಮುನೀನ್
ಸ್ವೈರಂ ಸೇವಿತತೀರ್ಥಸಿಂಧುಪಯಸೋ ದೂರಂ ನಿರಸ್ತಾಧಯಃ ।
ಮಾತ್ರಾ ಲಕ್ಷ್ಮಣ! ಕೇಕಯೇಂದ್ರಸುತಯಾ ವ್ಯಾಜೇನ ನೀತಾ ವಯಂ
ಸ್ವಾಮುತ್ಸೃಜ್ಯ ಧುರಂ ಭುವೋ ಮುನಿವನಂ ಯಾತವ್ಯಮಿಕ್ಷ್ವಾಕುಭಿಃ॥ ೧—೧೪

ವತ್ಸ ಲಕ್ಷ್ಮಣ! ನೀನು ಕೈಕೇಯಿಯ ವಿಷಯವಾಗಿ ತಪ್ಪಾಗಿ ತಿಳಿದುಕೊಂಡಿರುವೆ! ಕೈಕೇಯಿಯಿಂದ ನಮಗೆ ಎಷ್ಟು ಉಪಕಾರವಾಗಿರುವುದೆಂಬುದನ್ನು ಬಲ್ಲೆಯಾ! ಆಕೆಯು ನಮಗೆ ಎಂತಹ ಹಿತಕಾಂಕ್ಷಿಣಿಯೆಂಬದನ್ನು ನೀನರಿಯೆ. ಇಗೋ ನೋಡು! ಇಕ್ಷ್ವಾಕ್ವಾದಿ ನಮ್ಮ ಪೂರ್ವಜರಿಂದಲೂ ಅವಿಚ್ಛಿನ್ನವಾಗಿ ಬಂದಿರುವ ಈ ತಪೋವನವಾಸವನ್ನು ವ್ಯಾಜಾಂತರದಿಂದ ನಮಗೆ ಹೊಂದಿಸಿಕೊಟ್ಟಿರುವಳಲ್ಲವೆ! ದಾರಿದಾರಿಯಲ್ಲಿಯೂ ಗಂಗಾಯಮುನಾದಿ ತೀರ್ಥವಾಹಿನಿಗಳಿಂದ ನಿರ್ಧೂತಪಾಪರಾಗಿ, ನಿವೃತ್ತಿಮಾರ್ಗನಿರತರಾದ ಮುನಿಜನಸೇವೆಯಿಂದ ಅಜ್ಞಾನವಿಮುಕ್ತರಾಗಿ ಸಮಸ್ತ ಮನೋವ್ಯಥೆಗಳಿಂದ ಬಿಡಲ್ಪಟ್ಟವರಾಗಿ ಸುಖಸಾಮ್ರಾಜ್ಯಭಾಗಿಗಳಾಗಲು ಅನುಕೂಲಮಾಡಿರುವಳಲ್ಲವೆ! ಇಂತಹ ಉಪಕಾರವನ್ನು ನೀನು ಗಣಿಸದೆ ಮಾತೆಯಾದ ಕೈಕೇಯಿಯಲ್ಲಿ ದೋಷವನ್ನಾರೋಪಿಸುವುದು ಯುಕ್ತವಾದುದಲ್ಲ.

ಹನುಮಂತನು ಅಶೋಕವನದಲ್ಲಿದ್ದ ಸೀತೆಗೆ ತನ್ನಲ್ಲಿ ವಿಶ್ವಾಸದಾರ್ಢ್ಯಕ್ಕಾಗಿ ರಾಮನಿಗೂ ಅವಳಿಗೂ ಹಿಂದೆ ನಡೆದ ಒಂದಾನೊಂದು ಸಂದರ್ಭದಲ್ಲಿ ರಾಮನ ಹೇಳಿಕೆಯನ್ನು ಜ್ಞಾಪಿಸುವಿಕೆ.

> ಆಯಾತಂ ಮಾಮಪರಿಚಿತಯಾ ವೇಳಯಾ ಮಂದಿರಂತೇ
> ಚೋರೋ ದಂಡ್ಯಸ್ತ್ವಮಿತಿ ಮಧುರಂ ವ್ಯಾಹರಂತ್ಯಾ ಭವತ್ಯಾ ।
> ಮಂದೇ ದೀಪೇ ಮಧುಲವಮುಚಾಂ ಮಾಲಯಾ ಮಲ್ಲಿಕಾನಾಂ
> ಬದ್ಧಂ ಚೇತೋ ದೃಢತರಮಿದಂ ಬಾಹುಬಂಧಚ್ಛಲೇನ ॥ ೬—೧೮

ಎಲೌ! ಜಾನಕಿ! ಒಂದಾನೊಂದು ದಿವಸ ಅವೇಳೆಯಲ್ಲಿ ನಿನ್ನ ಮಂದಿರಕ್ಕೆ ಬಂದ ನನ್ನನ್ನು ದೀಪದ ಪ್ರಕಾಶವು ಮಂದವಾಗಿದ್ದುದರಿಂದ ಗುರ್ತಿಸಲಾರದೆ ಚೋರನೆಂದು ಹೇಳುತ್ತಾ ಸುಗಂಧವನ್ನು ಬೀರುತ್ತಿದ್ದ ಮಲ್ಲಿಕಾಹಾರವನ್ನು ತೆಗೆದುಕೊಂಡು ಬಾಹು ಬಂಧನದಿಂದ ದೃಢತರವಾಗಿ ಕಟ್ಟಿಹಾಕಿದುದು ಜ್ಞಾಪಕವಿರುವುದೆ?

ಹನುಮಂತನು ಸೀತೆಯೊಡನೆ ಹೇಳುವ ರಾಮಸಂದೇಶವು ಹೀಗಿರುವುದು.

> ಸದಸಿ ನಮಯತಾ ಧನುರ್ಮಯಾ ತ್ವಂ
> ಗುರುಜಘನೇ ಗುರುಮಂದಿರಾದವಾಪ್ತಾ ।
> ದಶವದನನಿರೋಧನಾದಪಿ ತ್ವಾಂ
> ಯುಧಿ ವಿನಮಯ್ಯ ಶರಾಸನಂ ಹರಾಮಿ ॥ ೬—೨೦

ಎಲೌ! ಜಾನಕಿ! ಜನಕರಾಜನ ಸಭೆಯಲ್ಲಿ ಧನುಸ್ಸನ್ನು ಬಾಗಿಸುವುದರಿಂದಲೇ ಹೇಗೆ ನಿನ್ನನ್ನು ಹೊಂದಿದೆನೋ ಹಾಗೆಯೇ ಈಗಲೂ ರಾವಣನಿರೋಧನದಲ್ಲಿರುವ ನಿನ್ನನ್ನು ಯುದ್ಧದಲ್ಲಿ ಧನುಸ್ಸನ್ನು ಬಾಗಿಸಿಯೇ ಹೊಂದುವೆನು. (ಎಂದರೆ, ದಶಶಿರನನ್ನು ಯುದ್ಧದಲ್ಲಿ ವಧಿಸಿ ನಿನ್ನನ್ನು ಹೊಂದುವೆನು.)



## ಕವಿರಾಜ

ಇವನು **ರಾಘವಪಾಂಡವೀಯ**ವೆಂಬ ಕಾವ್ಯವನ್ನು ಬರೆದಿರುವನು; ಇಷ್ಟು ವಿನಾ ಇವನ ವಿಚಾರವಾಗಿ ಹೆಚ್ಚು ತಿಳಿಯದು. ಇವನು ಕ್ರಿ. ಶ. ೮ ನೆಯ ಶತಮಾನದವನು. * ರಾಘವಪಾಂಡವೀಯದಲ್ಲಿ ಹದಿಮೂರು ಸರ್ಗಗಳಿರುವುವು. ಕಾವ್ಯಾಂತ್ಯದಲ್ಲಿ—

* Macdonell's History of Sanskrit Literature P. 331.

"ಇತಿ ಹಲಧರಣೀಪ್ರಸೂತಕಾದಂಬಕುಲತಿಲಕಚಕ್ರವರ್ತಿವೀರ ಶ್ರೀಕಾಮದೇವಪ್ರೋತ್ಸಾಹಿತಕವಿರಾಜಪಂಡಿತವಿರಚಿತೇ ರಾಘವ ಪಾಂಡವೀಯೇ ಕಾಮದೇವಾಂಕೇ" ಎಂದೂ

"ಇತಿ ಸಮಸ್ತ ಪ್ರಕ್ರಿಯಾವಿರಾಜಮಾನ ರಿಪುರಾಜ ಶಾಸನಾರಾಯಣ ಶ್ರೀ ನಾರಾಯಣಚರಣಪರಾಯಣ ಮಹಾರಾಜಾಧಿರಾಜ ಶ್ರೀ ಅಮರಸಿಂಹ*ಕಾರಿತೇ ಮಹಾ ಶ್ರೀ ಶಶಧರಕೃತೇ ರಾಘವ ಪಾಂಡವೀಯಪ್ರಕಾಶೇ"

ಎಂದಿರುವುದರಿಂದ ಕಾದಂಬಕುಲತಿಲಕಚಕ್ರವರ್ತಿಯಾದ ವೀರಕಾಮದೇವನೆಂಬವನಿಂದ ಪ್ರೋತ್ಸಾಹಿಸಲ್ಪಟ್ಟು ಈ ಕಾವ್ಯವನ್ನು ಬರೆದುದಾಗಿಯೂ ಇದರ ವ್ಯಾಖ್ಯಾನವು ರಾಜಾಧಿರಾಜ ಅಮರಸಿಂಹನಿಂದ ಪ್ರೋತ್ಸಾಹಿಸಲ್ಪಟ್ಟು ಶಶಧರನೆಂಬವನಿಂದ ಬರೆಯಲ್ಪಟ್ಟುದಾಗಿಯೂ ತಿಳಿಯಬರುತ್ತದೆ. ಈ ವೀರ ಕಾಮದೇವನಾರೆಂಬುದಾಗಲಿ ರಾಜಾಧಿರಾಜ ಅಮರಸಿಂಹನಾವನೆಂದಾಗಲಿ ಚರಿತ್ರೆಯಲ್ಲಿ ಎಲ್ಲಿಯೂ ತಿಳಿಯುವಂತಿಲ್ಲ. ಈ ವಿಚಾರವಾದ ಜನಜನಿತ ಕಥೆಗಳೂ ದೊರೆಯವು. ಇವನು ರಾಮಾಯಣ ಭಾರತಕಥೆಗಳನ್ನು ಒಟ್ಟುಗೂಡಿಸಿ ಎರಡರವಿಷಯವೂ ಒಂದೇಶ್ಲೋಕದಲ್ಲಿ ಬರುವ ಹಾಗೆ, ಕಾವ್ಯಸಮಯವು ಕೆಡದಂತೆ, ರಸಾಭಾಸವಾಗದಂತೆ ಅಸಂಬದ್ಧವಾಗದಂತೆ ಕಡು ಜಾಣ್ಮೆಯಿಂದ ಬರೆದಿರುವನು. ಇದರಲ್ಲಿ ಸೀತಾ ಮತ್ತು ದ್ರೌಪದಿ ಸ್ವಯಂವರದೊಡಗೂಡಿದ ಎರಡನೆಯ ಸರ್ಗವು ಚೆಲುವಾಗಿರುವುದು. ಕೆಲವರು ಕವಿರಾಜನೆಂಬುದು ಕವಿಯ ಬಿರುದಾಗಿರಬೇಕೆನ್ನುವರು. ಕವಿರಾಜನೆಂಬುದು ಬಿರುದಾದರೆ ನಿಜವಾದ ಹೆಸರಾವುದೆಂಬ ಪ್ರಶ್ನೆಗೆ ಉತ್ತರ ದೊರೆಯದು. ಇದರ ಮೊದಲಿಯ ಶ್ಲೋಕಗಳೆರಡನ್ನು ಬರೆಯುವೆವು.

ರಾಜೇಂದ್ರವೇಷಾಪಗಮೇಽಪಿ ನೈನಂ
ಸೌಭಾಗ್ಯಲಕ್ಷ್ಮೀಃ ಶ್ಲಥಯಾಂಬಭೂವ ।
ಸುರಾಸುರೈಃ ಸ್ವೀಕೃತರತ್ನರಾಶಿಃ
ತಥಾಪಿ ರತ್ನಾಕರ ಏವ ಸಿಂಧುಃ ॥ ೧—೧೧

ದೇವಾಸುರರಿಂದ ಅಪರಿಮಿತ ರತ್ನರಾಶಿಯು ಅಪಹೃತವಾದುವಾದರೂ ಸಮುದ್ರನು ಈ ವರೆಗೂ ಹೇಗೆ ರತ್ನಾಕರನೇ ಆಗಿರುವನೋ ಹಾಗೆಯೇ ಯುಧಿಷ್ಠಿರನ ಮತ್ತು ರಾಮನ ರಾಜಯೋಗ್ಯಗಳಾದ ಮುಕುಟಾಭರಣಾದಿಗಳು ಅಪಹೃತವಾದುವಾದರೂ ಸೌಭಾಗ್ಯಲಕ್ಷ್ಮಿಯು ಮಾತ್ರ ಕೊಂಚವೂ ಕುಂದಲಿಲ್ಲ.

* ಇವನು ಕೋಶಕಾರನಾದ ಅಮರಸಿಂಹನಲ್ಲ.

# ವಾ ಮ ನ

ಇವನು* ಕಾಶ್ಮೀರರಾಜನಾಗಿದ್ದ ಜಯಾಪೀಡನ ಆಶ್ರಯದಲ್ಲಿದ್ದನೆಂದು ರಾಜತರಂಗಿಣಿಯ (iv) ೪೮೮–೯೭ರ ವರೆಗಿನ ಶ್ಲೋಕಗಳಿಂದ ತಿಳಿಯಬರುವುದು. ಅಲ್ಲದೆ—

ಮನೋರಥಶ್ಶಂಖದತ್ತಶ್ಚಟಕಸ್ಸಂಧಿಮಾಂಸ್ತಥಾ ।
ಬಭೂವುಃ ಕವಯಸ್ತಸ್ಯ ವಾಮನಾದ್ಯಾಶ್ಚ ಪಂಡಿತಾಃ ॥

ಎಂಬ ಶ್ಲೋಕದಿಂದಲೂ ವ್ಯಕ್ತವಾಗುವುದು.

**ಕಾಲ:**— ಜಯಾಪೀಡರಾಜನು ಕ್ರಿ. ಶ. ೭೫೫ರಿಂದ ೭೮೬ರ ವರೆಗೆ ಆಳಿದನಾದುದರಿಂದ ಇವನ ಆಶ್ರಯದಲ್ಲಿದ್ದ ವಾಮನನೂ ಕ್ರಿ. ಶ. ಎಂಟನೆಯ ಶತಮಾನದವನೆಂದು ನಿಶ್ಚಯವಾಗುವುದು.

ಇವನು "**ಕಾವ್ಯಾಲಂಕಾರಸೂತ್ರವೃತ್ತಿ**" ಎಂಬ ಅಲಂಕಾರಗ್ರಂಥವನ್ನು ಬರೆದಿರುವನು. ಇದರಲ್ಲಿ ೫ ಅಧಿಕರಣಗಳಿದ್ದು ಹನ್ನೆರಡು ಅಧ್ಯಾಯಗಳಾಗಿ ವಿಂಗಡಿಸಲ್ಪಟ್ಟಿರುವುದು.

ಅಧ್ಯಾಯೇ ಪ್ರಥಮೇ ಕಾವ್ಯಪ್ರಯೋಜನಪರೀಕ್ಷಣಂ ।
ಅಧಿಕಾರಿವಿಚಾರಶ್ಚ ದ್ವಿತೀಯೇ ರೀತಿನಿಶ್ಚಯಃ ॥

ಕಾವ್ಯಾಂಗಕಾವ್ಯಭೇದಾನಾಂ ತೃತೀಯೇ ಪ್ರತಿಪಾದನಂ ।
ತುರ್ಯೇ ಪದಪದಾರ್ಥಾನಾಂ ದೋಷತತ್ತ್ವವಿವೇಚನಂ ॥

ವಾಕ್ಯವಾಕ್ಯಾರ್ಥದೋಷಾಣಾಂ ಪಂಚಮೇ ತು ಪ್ರಪಂಚನಂ ।
ಗುಣಾಲಂಕಾರಭೇದಾಸ್ತು ಷಷ್ಠೇ ಶಬ್ದಗುಣಾಸ್ತಥಾ ॥

ಸಪ್ತಮೇಽರ್ಥಗುಣಾಃ ಶಬ್ದಾಲಂಕಾರಾಃ ಪುನರಷ್ಟಮೇ ।
ಉಪಮಾ ನವಮೇ ತಸ್ಯಾಃ ಪ್ರಪಂಚೋ ದಶಮೇ ಭವೇತ್ ॥

ಕಾವ್ಯಸ್ಯೈಕಾದಶೇ ಸಂವಿದ್ದ್ವಾದಶೇ ಶಬ್ದಶೋಧನಂ ।
ಇತ್ಯೇಷ ದ್ವಾದಶಾಧ್ಯಾಯಿಪ್ರಮೇಯಾಣಾಮನುಕ್ರಮಃ ॥

ಇವನು ತನ್ನ ಗ್ರಂಥದ ವಿಚಾರವಾಗಿ—

ಪಾವನೀ ವಾಮನಸ್ಯೇಯಂ ಪದೋನ್ನತಿಪರಿಷ್ಕೃತಾ ।
ಗಂಭೀರಾ ರಾಜತೇ ವೃತ್ತಿರ್ಗಂಗೇವ ಕವಿಹರ್ಷಿಣೀ ।

ಎಂದು ಹೇಳಿಕೊಂಡಿರುವನು.

* ಕಾಶಿಕಾವೃತ್ತಿಯನ್ನು ಬರೆದಿರುವ ವಾಮನನು ಇವನಲ್ಲ.

ಇವನ ಗ್ರಂಥಕ್ಕೆ ಗೋಪೇಂದ್ರತಿಪ್ಪಭೂಪಾಲನೆಂಬವನು ‘ಕಾಮಧೇನು’ ಎಂಬ ವ್ಯಾಖ್ಯಾನವನ್ನು ಬರೆದಿರುವನು.

ಪಾವನಪದವಿನ್ಯಾಸಾ
　ಸಮಗ್ರರಸದೋಹಶಾಲಿನೀ ಭಜತಾಂ ।
ಘಟಯತಿ ಕಾಮಿತಮರ್ಥಂ
　ಕಾವ್ಯಾಲಂಕಾರಕಾಮಧೇನುರಿಯಂ ॥

ಎಂದು ವ್ಯಾಖ್ಯಾನಕಾರನು ಒಕ್ಕಣಿಸಿಕೊಂಡಿರುವನು. ಗ್ರಂಥಾಂತ್ಯದಲ್ಲಿ—

‘ಕಾವ್ಯಾಲಂಕಾರಸೂತ್ರವೃತ್ತಿಃ ವಾಮನ ವಿರಚಿತಾ’ ಎಂದಿರುವುದು.



# ಪರಿಶಿಷ್ಟ

## ಎರಡನೆಯ ಶತಮಾನ

### ಪ್ರವರಸೇನ (೨)

ಇವನು ಕಾಶ್ಮೀರದವನು. ತೋರಮಾಣನ ಮಗನು. ಇವನು ಕುರು ಪಾಂಡವವಂಶೀಯನೆಂದು ರಾಜತರಂಗಿಣಿಯಿಂದ ತಿಳಿಯಬರುತ್ತದೆ.

**ಶತೇಷು ಷಟ್ಸು ಸಾರ್ಧೇಷು | ತ್ರ್ಯಧಿಕೇಷು ಚ ಭೂತಲೇ ||**
**ಕಲೇರ್ಗತೇಷು ವರ್ಷಾಣಾಂ |ಅಭೂವನ್ ಕುರು ಪಾಂಡವಾಃ ||**
**ರಾಜತರಂಗಿಣಿ ೧. ೫೧.**

ಕುರುಪಾಂಡವವಂಶೀಕರು ಕಲಿಯುಗಪ್ರಾರಂಭದಿಂದ ೬೫೩ ವರ್ಷಗಳವರೆಗೆ ಆಳಿದರು.

**'ವರ್ಷಾಣಾಂ ದ್ವಾದಶ ಶತೀ | ಷಷ್ಟಿಃ ಷಡ್ಭಿಶ್ಚ ಸಂಯುತಾ ||**
**ಭೂಭುಜಾಂ ಕಾಲಸಂಖ್ಯಾಯಾಂ | ತದ್ವಾ ಪಂಚಾಶತೋ ಮತಾ ||'**
**ರಾ. ತ. ೧. ೫೪.**

ಅನಂತರ ಹೆಸರು ತಿಳಿಯದ ಸುಮಾರು ೩೫ ಜನರು ೧೨೬೬ ವರ್ಷಗಳು ರಾಜ್ಯವಾಳಿದರು.

**ಚತುರ್ದಶಾಧಿಕಂ ವರ್ಷ | ಸಹಸ್ರಂ ನವ ವಾಸರಾಃ ||**
**ಮಾಸಾಶ್ಚ ವಿಗತಾಹ್ನಸ್ಮಿನ್ | ಅಷ್ಟಾವಿಂಶತಿ ರಾಜಸು ||**
**ರಾ. ತ. ಪ್ರಥಮತರಂಗ—ಸಾರಶ್ಲೋಕ.**

ಅನಂತರ ಲವಮಹಾರಾಜನಿಂದ ೩೮ ಜನರು ೧೧೧೪ ವರ್ಷಗಳು ಆಳಿದರು.

ಶತದ್ವಯೀ ವತ್ಸರಾಣಾಮಷ್ಟಭಿಃ ಪರಿವರ್ಜಿತೆ ||
ಅಸ್ಮಿನ್ ದ್ವಿತೀಯೇ ವ್ಯಾಖ್ಯಾತಾಃ | ಷಟ್‌ಪ್ರಖ್ಯಾತ ಗುಣಾನೃಪಾಃ ||
ರಾ. ತ. ಎರಡನೆಯತರಂಗ ಸಾರಶ್ಲೋಕ

ಅನಂತರ ೬ ಜನರು (೨೦೦–೮) ೧೯೨ ವರ್ಷಗಳು ರಾಜ್ಯವಾಳಿದರು. ಎಂದರೆ ೭೯ ಜನ ರಾಜರು ಕಲಿಯುಗಾದಿಯಿಂದ ೩೧೨೫ ವರ್ಷಗಳು ಆಳಿದರು.

'ಅಥೋಲ್ಲಸತ್ಸ್ವಪುಶ್ಲಾಘ | ಮಾನಿನ್ಯುರ್ಮೇಘವಾಹನಂ||' ರಾ. ತ. ೩-೨
'ತಸ್ಮಿನ್ನಸ್ತಂಗತೇ ಭುಕ್ತ್ವಾ ಕ್ಷ್ಮಾಂ ಚತುಸ್ತ್ರಿಂಶತಂ ಸಮಾಃ ||'
ರಾ. ತ. ೩-೯೬

ಅನಂತರ ೮೦ನೆಯವನಾದ ಮೇಘವಾಹನನು ರಾಜ್ಯಕ್ಕೆ ಬಂದು ೩೪ ವರ್ಷಗಳು (೩೧೨೫–೩೧೫೯) ಆಳಿದನು.

ಅಥ ಕ್ಷ್ಮಾಭೃದ್ರರಕ್ಷ ಕ್ಷ್ಮಾಂ | ಶ್ರೇಷ್ಠಸೇನಸ್ತದಾತ್ಮಜಃ ||
ಪ್ರಾಹುಃ ಪ್ರವರಸೇನಂ ಯಂ | ತುಂಜೀನಂ ಚಾಂದಸಾ ಜನಾಃ ||
ರಾ. ತ. ೩-೯೭

ಅನಂತರ ಮೇಘವಾಹನನ ಮಗ ಶ್ರೇಷ್ಠಸೇನನೆಂಬುವನು ರಾಜ್ಯಕ್ಕೆ ಬಂದನು. ಇವನೇ ಪ್ರಥಮ ಪ್ರವರಸೇನನು (Pravarasena I). ಇವನಿಗೆ ತುಂಜೀನನೆಂದೂ ಹೆಸರು. ಇವನು ರಾಜ್ಯವನ್ನು ೩೦ ವರ್ಷಗಳಕಾಲ (೩೧೫೯–೩೧೮೯) ಆಳಿದನು.

ಸ ಸಮಾಸ್ತ್ರಿಂಶತಂ ಭೂಭೃದನಿ ಸ್ತ್ರಿಂಶಾಶಯೋಽಭವತ್–ರಾ. ತ. ೩–೧೦೧

ಇವನಿಗೆ ಹಿರಣ್ಯ ಮತ್ತು ತೋರಮಾಣರೆಂಬ ಇಬ್ಬರು ಸುತರಿದ್ದರು.

'ಹಿರಣ್ಯತೋರಮಾಣಾಖ್ಯೌ ವ್ಯಧತ್ತಾಮಥ ತತ್ಸುತೌ'

ಹಿರಣ್ಯನು ಮಕ್ಕಳಿಲ್ಲದೆ ೩೧ ವರ್ಷಗಳು ರಾಜ್ಯವಾಳಿ ಸತ್ತನು.

ರಕ್ಷಿತಾ ದಶಮಾಸೋನಾಃ | ಕ್ಷ್ಮಾಮೇಕತ್ರಿಂಶತಿಂ ಸಮಾಃ ||
ತಸ್ಮಿನ್ ಕ್ಷಣೇ ಹಿರಣ್ಯೋಽಪಿ |ಶಾಂತಿ ನಿಸ್ಸಂತತಿರ್ಯಯೌ || ರಾ. ತ. ೩–೧೨೪

ಎಂದರೆ ಹಿರಣ್ಯನು ಸಾಯುವಾಗ ಕಲಿಯುಗದಲ್ಲಿ (೩೧೮೯+೩೧) ೩೨೨೦ ವರ್ಷಗಳು ಸಂದಿದ್ದವು. ಅನಂತರ ತೋರಮಾಣನ ಮಗನಾದ ಎರಡನೆಯ

ಪ್ರವರಸೇನನು (Pravarasena II) ರಾಜ್ಯಕ್ಕೆ ಬಂದನು. ಈ ಮಧ್ಯೆ ಎರಡ ನೆಯ ಪ್ರವರಸೇನನು ತೀರ್ಥಯಾತ್ರಾಟನಕ್ಕೆ ಹೊರಟುಹೋಗಿದ್ದನು.

"ಯಯೌ ಪ್ರವರಸೇನೋಽಥ ತೀರ್ಥಯಾತ್ರಾದ್ದಿಗಂತರಂ" ರಾ. ತ. ೩–೧೨೩.

ಆಗ ಏಕಚ್ಛತ್ರಾಧಿಪತ್ಯವನ್ನು ಮಾಡುತ್ತ ಉಜ್ಜಯಿನಿಯಲ್ಲಿ ಆಳುತ್ತಿದ್ದ ಶ್ರೀ ಹರ್ಷವಿಕ್ರಮಾದಿತ್ಯನು * ಹೀಗೆ ಅನಾಯಕವಾಗಿದ್ದ ಕಾಶ್ಮೀರ ರಾಜ್ಯಕ್ಕೆ ತನ್ನ ಬಳಿಯಿದ್ದ ಮಾತೃಗುಪ್ತನನ್ನು ನೇಮಿಸಿದನು.

ತತ್ರಾನೇಹಸ್ಯುಜ್ಜಯಿನ್ಯಾಂ । ಶ್ರೀಮಾನ್ ಹರ್ಷಪರಾಭಿಧಃ ॥
ಏಕಚ್ಛತ್ರಶ್ಚಕ್ರವರ್ತೀ । ವಿಕ್ರಮಾದಿತ್ಯ ಇತ್ಯಭೂತ್ ॥ ರಾ. ತ. ೩–೧೨೫
ಮಾತೃಗುಪ್ತಾಭಿದೋ ರಾಜ್ಯೇ । ನಿಶ್ಶಂಕಂ ಸೋಽಭಿಷಿಚ್ಯತಾಂ ॥
ರಾ. ತ. ೩–೧೮೯

ಮಾತೃಗುಪ್ತನು ಕಾಶ್ಮೀರವನ್ನು ೪ ವರ್ಷ ೯ ತಿಂಗಳುಗಳು ಆಳಿದನು.

ತ್ರಿಮಾಸೋನಾ ಯುಯುಸ್ತಸ್ಯ । ನೃಕಾಹಾಪಂಚವತ್ಸರಾಃ ॥

ಅನಂತರ ಎರಡನೆಯ ಪ್ರವರಸೇನನು ರಾಜ್ಯಕ್ಕೆ ಬಂದು ೬೦ ವರ್ಷಗಳ ಕಾಲ ರಾಜ್ಯಭಾರಮಾಡಿದನು.

ಶನೈಃ ಸಾಮ್ರಾಜ್ಯ ಲಾಭಸ್ಯ ।
ಷಷ್ಟಿಃ ಸಂವತ್ಸರಾ ಯಯುಃ ॥ ರಾ. ತ. ೩–೩೬೪

ಈ ಪ್ರವರಸೇನನು ರಾಜ್ಯಕ್ಕೆ ಬರುವ ಮೊದಲೇ ಉಜ್ಜಯಿನಿಯ ಶ್ರೀಹರ್ಷ ವಿಕ್ರಮಾದಿತ್ಯನು ಸತ್ತುಹೋಗಿದ್ದನು. ಈಪ್ರಕಾರ ರಾಜತರಂಗಿಣಿಯು ಹೇಳಿ ಕೆಯಂತೆ ಎರಡನೆಯ ಪ್ರವರಸೇನನು ಕಲಿಯುಗಾದಿ ೩೨೨೫ ರಿಂದ ೩೨೮೫ರ ವರೆಗೆ ಅಥವಾ ಕ್ರಿ. ಶ. ೧೨೩–೧೮೩ರ ವರೆಗೆ ರಾಜ್ಯವಾಳಿದನೆಂದು ಸ್ಪಷ್ಟವಾ ಗುತ್ತದೆ. ಮೇಘವಾಹನನು ಮೊದಲುಗೊಂಡು ಪ್ರವರಸೇನನ ವಂಶಾವಳಿ ಯನ್ನು ಹೀಗೆ ಸಂಕ್ಷೇಪಿಸಿ ಕಾಲನಿರ್ಣಯದೊಂದಿಗೆ ಬರೆಯಬಹುದಾಗಿದೆ.

---

* ಈ ಹರ್ಷವಿಕ್ರಮಾದಿತ್ಯನು ಯಾರೆಂಬುದು ಚಾರಿತ್ರಕದೃಷ್ಟಿಯಿಂದ ಸರಿಯಾಗಿ ತಿಳಿಯು ವಂತಿಲ್ಲ.




ಗೀರ್ವಾಣವಾಙ್ಮಯದಲ್ಲಿ ನಾಲ್ಕು ಜನ ಪ್ರವರಸೇನರು ದೊರೆಯು ವರೆಂದು ಹೇಳಲ್ಪಟ್ಟಿರುವದು. † ಆದರೆ ರಾಜತರಂಗಿಣಿಯು ಇಬ್ಬರನ್ನು ಮಾತ್ರವೇ ಹೇಳಿರುವುದಾಗಿ ಕಂಡುಬರುತ್ತದೆ. ಉಳಿದ ಇಬ್ಬರಾರೆಂಬುದು ತಿಳಿಯುವಂತಿಲ್ಲ. ಡಾ|| ಬುಹಲರವರು ಮೊದಲನೆಯ ಪ್ರವರಸೇನನು ಕ್ರಿ. ಶ. ೪ನೆಯ ಶತಮಾನದಲ್ಲಿ ಆಳಿರಬೇಕೆಂದೂ, ಎರಡನೆಯ ಪ್ರವರಸೇನನು ಕ್ರಿ. ಶ. ೫ನೆಯ ಶತಮಾನದಲ್ಲಿ ಆಳಿರಬೇಕೆಂದೂ ಹೇಳುವರೇ ಹೊರತು ಹೇಗೆಂಬು ದನ್ನು ಸಮರ್ಥಿಸಿಲ್ಲ. ‡ ಆದರೆ ರಾಜತರಂಗಿಣಿಯ ಹೇಳಿಕೆಯ ಪ್ರಕಾರ ಒಂದ ನೆಯ ಪ್ರವರಸೇನನ ಕಾಲವು ಕ್ರಿ. ಶ. ೫೭–೮೭ ರ ವರೆಗೆ ಎರಡನೆಯ ಪ್ರವರಸೇನನ ಕಾಲವು ಕ್ರಿ. ಶ. ೧೨೩–೧೮೩ ರ ವರೆಗೆ ಎಂದು ಸಮರ್ಥಿತವಾಗು ವುದು. ಮತ್ತೊಂದೆಡೆಯಲ್ಲಿ ಎರಡನೆಯ ಪ್ರವರಸೇನನು ಕಾಶ್ಮೀರದಲ್ಲಿ ಕ್ರಿ. ಪೂ. ೫೨೭–೪೬೭ ರ ವರೆಗೆ ಆಳಿದ ಮೂರನೇ ಗೋನಂದೀಯವಂಶೀಯ ನೆಂದೂ ಇವನೂ ಉಜ್ಜಯಿನಿಯ ಶ್ರೀಹರ್ಷವಿಕ್ರಮಾದಿತ್ಯನೂ ಸಮಕಾಲಿಕ ರೆಂದೂ ಕಲ್ಹಣನ ರಾಜತರಂಗಿಣಿಯು ಹೇಳುವುದಾಗಿ ಒಕ್ಕಣಿಸಲ್ಪಟ್ಟಿರು ವುದು § ಆದರೆ ಇದು ಸಮಂಜಸವಾಗಿರದು.

* ಕ್ರಿ. ಶ. ೧೧೮–೧೨೩ ರ ವರೆಗಿನ ಮಧ್ಯಕಾಲದಲ್ಲಿ ಕಾಶ್ಮೀರವನ್ನು ಮಾತೃಗುಪ್ತನು ಆಳಿದನು.

† Preface to Setubandha Kavya P. 1.

‡ The Indian Antiquary. Vol, XII P. 243

§ ಹೈಡಿಂಬವೈದಗ್ಧ್ಯ. ಮುನ್ನುಡಿ ಪುಟ ೧೦–೧೧.

ಈ ಕಾರಣಗಳಿಂದ ಶ್ರೀಹರ್ಷವಿಕ್ರಮಾದಿತ್ಯ, ಎರಡನೆಯ ಪ್ರವರಸೇನ ಮತ್ತು ಮಾತೃಗುಪ್ತ ಈ ಮೂವರೂ ಸಮಕಾಲಿಕರೆಂದೂ ಕ್ರಿ. ಶ. ೨ ನೆಯ ಶತಮಾನದವರೆಂದೂ ಹೇಳಬಹುದಾಗಿದೆ. ಇವನು **'ಸೇತುಬಂಧ'** ವೆಂಬ ಮಹಾಕಾವ್ಯವನ್ನು ಪ್ರಾಕೃತಭಾಷೆಯಲ್ಲಿ ಬರೆದಿರುವನು. ಆದರೆ ಈ ಕಾವ್ಯದ ಕೊನೆಯ ಶ್ಲೋಕದಲ್ಲಿ 'ರಾವಣವಧ' ಎಂದು ಹೇಳಲ್ಪಟ್ಟಿರುವುದು. ಪ್ರತಿ ಆಶ್ವಾಸದ ಕೊನೆಯಲ್ಲಿ ದಶಮುಖವಧವೆಂದು ವ್ಯವಹರಿಸಲ್ಪಟ್ಟಿರುವುದು. ಕಾವ್ಯಾದರ್ಶಕಾರನಾದ ದಂಡಿಯು ತನ್ನ ಕಾವ್ಯಾದರ್ಶದಲ್ಲಿ ಇದನ್ನು

ಮಹಾರಾಷ್ಟ್ರಾಶ್ರಯಾಂ ಭಾಷಾಂ |
ಪ್ರಕೃಷ್ಟಂ ಪ್ರಾಕೃತಂ ವಿದುಃ ||
ಸಾಗರಃ ಸೂಕ್ತಿರತ್ನಾನಾಂ |
ಸೇತುಬಂಧಾದಿಯನ್ಮಯಂ || ಕಾವ್ಯಾದರ್ಶ ೧—೩೪.

'ಸೇತುಬಂಧ'ವೆಂದೇ ಕರೆದಿರುವನು. ಸೇತುಬಂಧಕಾವ್ಯದ ಪ್ರಥಮಾಶ್ವಾಸದ ಕೊನೆಯಲ್ಲಿ ಗ್ರಂಥಕಾರನು ಪ್ರವರಸೇನನೆಂದು ಹೇಳಲ್ಪಟ್ಟಿರುವುದು. ಮಹಾಕವಿ ಬಾಣನುಗ್ರಂಥಕಾರನು ಪ್ರವರಸೇನನೆಂದೇ ಹೇಳಿರುವನು.

ಕೀರ್ತಿಃ ಪ್ರವರಸೇನಸ್ಯ | ಪ್ರಯಾತಾ ಕುಮುದೋಜ್ಜ್ವಲಾ ||
ಸಾಗರಸ್ಯ ಪರಂ ಪಾರಂ | ಕಪಿಸೇನೇವ ಸೇತುನಾ ||

ಮಹಾಕವಿ ಕ್ಷೇಮೇಂದ್ರನು ಸೇತುಬಂಧ ಕಾವ್ಯದ ಮೊದಲನೆಯ ಮತ್ತು ಎರಡನೆಯ ಶ್ಲೋಕಗಳನ್ನುದಹರಿಸಿ ಇವು ಪ್ರವರಸೇನನದೆಂದು ಹೇಳಿರುವನು. ಇವುಗಳೆಲ್ಲದರ ಪರಿಶೀಲನದಿಂದ ಕಾವ್ಯದ ಹೆಸರು 'ಸೇತುಬಂಧ'ವೆಂದೂ ರಾವಣವಧ ಮತ್ತು ದಶಮುಖವಧ ಎಂಬುವು ಪರ್ಯಾಯನಾಮಗಳೆಂದೂ ಗ್ರಂಥಕಾರನು ಪ್ರವರಸೇನನೆಂದೂ ಸ್ಪಷ್ಟಪಡುವುದು. ಆದರೆ ಈ ಕಾವ್ಯದ ಮೊದಲನೆಯ ಅಧ್ಯಾಯದ ೯ ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ವ್ಯಾಖ್ಯಾನಕಾರನು 'ಪ್ರವರಸೇನೋ ಭೋಜದೇವಃ' ಇತಿ ಕಶ್ಚಿತ್ ಎಂದು ಹೇಳಿರುವನು. ಭೋಜನೆಂಬ ಹೆಸರು ಬಾಣನ ಅನಂತರವೇ ದೊರೆಯುವುದಾಗಿದೆ. ಇದರ ವ್ಯಾಖ್ಯಾನವಾದ 'ರಾಮಸೇತು ಪ್ರದೀಪ' ವೆಂಬುದರ ಮೊದಲನೆಯ ಶ್ಲೋಕದ ವ್ಯಾಖ್ಯಾನದಲ್ಲಿ ವ್ಯಾಖ್ಯಾನಕಾರನು

'ಧೀರಾಣಾಂ ಕಾವ್ಯಚರ್ಚಾಚತುರಿಮವಿಷಯೇ ವಿಕ್ರಮಾದಿತ್ಯವಾಚಾ |
ಯಂ ಚಕ್ರೇ ಕಾಳಿದಾಸಃ ಕವಿಕುಮುದವಿಧುಃ ಸೇತುನಾಮಪ್ರಬಂಧಂ ||'

ಎಂದೂ ತನ್ನ ವ್ಯಾಖ್ಯಾನ ಪ್ರಾರಂಭದಲ್ಲಿ

"ಇಹ ತಾವನ್ಮಹಾರಾಜಪ್ರವರಸೇನನಿಮಿತ್ತಂ ಮಹಾರಾಜಾಧಿರಾಜವಿಕ್ರಮಾದಿತ್ಯಾಜ್ಞಯಾ ನಿಖಿಲಕವಿಚಕ್ರಚೂಡಾಮಣಿಃ, ಕಾಳಿದಾಸಮಹಾಶಯಃ ಸೇತುಬಂಧಪ್ರಬಂಧಂ ಚಿಕೀರ್ಷುಃ"

ಎಂದೂ ಹೇಳಿರುವುದಲ್ಲದೆ ಈ ಕಾವ್ಯದ ಮೊದಲನೆಯ ಮತ್ತು ಎರಡನೆಯ ಸರ್ಗಾಂತ್ಯಗಳಲ್ಲಿ 'ಇತಿ ಪ್ರವರಸೇನವಿರಚಿತೇ (ಕಾರಿತೇ) ಕಾಳಿದಾಸರಚಿತೇ (ಕೃತೇ) ದಶಮುಖವಧೇ ಮಹಾಕಾವ್ಯೇ' ಎಂದೂ ಹೇಳಲ್ಪಟ್ಟಿರುವುದು. ಈ ಕಾಳಿದಾಸನೇ ಮಾತೃಗುಪ್ತನೆಂದು ಡಾ|| ಭೌದಾಜೀಯವರ ಮತವಿರುವುದು.* ಕಲ್ಹಣನು ರಾಜತರಂಗಿಣಿಯಲ್ಲಿ ಮಾತೃಗುಪ್ತನ ವಿಚಾರವನ್ನು ಹೇಳಿರುವನೇ ಹೊರತು ಮಾತೃಗುಪ್ತನು ಕಾಳಿದಾಸನೆಂದಾಗಲಿ ಅಥವಾ ಅವನ ಸೇತುಬಂಧದ ವಿಚಾರವಾಗಿಯಾಗಲಿ ಯಾವುದನ್ನೂ ಹೇಳಿರುವುದಿಲ್ಲ. ಬಾಣನಿಗಿಂತ ಪ್ರಾಚೀನರಾದ ಮೂರುಜನ ಕಾಳಿದಾಸರಲ್ಲಿ ಯಾವನಾದರೂ ಈ ಕಾವ್ಯವನ್ನು ಬರೆದುದಾಗಿದ್ದರೆ ಬಾಣನೇ ಮೊದಲಾದ ಕವಿಗಳು ಆವಿಚಾರವನ್ನು ಹೇಳದೆ ಬಿಡುತ್ತಿರಲಿಲ್ಲ. ಮಾತೃಗುಪ್ತನೂ ಮತ್ತು ಕಾಳಿದಾಸನೂ ಬೇರೆಬೇರೆಯೆಂದು ತೋರ್ಪಡಿಸುವಂತೆ ಅವರ ಶ್ಲೋಕಗಳನ್ನು ಕ್ಷೇಮೇಂದ್ರನು ಬೇರೆಬೇರೆಯಾಗಿಯೇ ಹೇಳಿರುವನು.

ವ್ಯಾಖ್ಯಾನಕಾರನ ಹೇಳಿಕೆಯಾದ "ಇಹ ತಾವನ್ಮಹಾರಾಜ – – – – ಚಿಕೀರ್ಷುಃ" ಎಂಬುದರಿಂದ ಮಹಾರಾಜಪ್ರವರಸೇನನಿಗೋಸ್ಕರ ರಾಜಾಧಿರಾಜವಿಕ್ರಮಾದಿತ್ಯನ ಅಪ್ಪಣೆಯಂತೆ ಕವಿಚಕ್ರಚೂಡಾಮಣಿಯಾದ ಕಾಳಿದಾಸನು ಸೇತುಬಂಧವೆಂಬ ಗ್ರಂಥವನ್ನು ಬರೆದುದಾಗಿ ಅರ್ಥವನ್ನು ಹೇಳಬೇಕಾಗುವುದು. ಇಲ್ಲಿ ಕಾಳಿದಾಸನಿಗೆ ಗ್ರಂಥರಚನೆಯ ಪ್ರಾಶಸ್ತ್ಯವನ್ನು ಕೊಟ್ಟಿರುವುದೇಹೊರತು ಪ್ರವರಸೇನನಿಗಲ್ಲ. ಪ್ರವರಸೇನನಿಗೋಸ್ಕರ ಕಾಳಿದಾಸನು ಸೇತುಬಂಧವೆಂಬ ಕಾವ್ಯವನ್ನು ಬರೆಯಬೇಕಾದ ಮತ್ತು ಕಾಳಿದಾಸನು ಬರೆದ ಗ್ರಂಥವನ್ನು ಪ್ರವರಸೇನನು ತನ್ನ ಹೆಸರಿನಲ್ಲಿ ಪ್ರಚುರಪಡಿಸಿಕೊಳ್ಳಬೇಕಾದ ಕಾರಣಗಳೇನಿರಬಹುದೆಂಬುದು ತಿಳಿಯವಾಗಿವೆ. ಇದು

* Dr. Bhaudaji's Literary Remains

ವ್ಯಾಖ್ಯಾನಕಾರನ ದೋಷವಾಗಿರಬೇಕೆಂದು ಬೋಧೆಯಾಗುತ್ತದೆ. ಪ್ರವರ ಸೇನನೇ ಬರೆದುದೆಂಬುದಕ್ಕೆ ಬಾಣ ಕ್ಷೇಮೇಂದ್ರ ಮತ್ತು ದಂಡಿ ಇವರ ಹೇಳಿಕೆಗಳೂ ಈಕಾವ್ಯದ ಮೊದಲನೆಯ ಮತ್ತು ಎರಡನೆಯ ಸರ್ಗಗಳಲ್ಲಿ 'ಇತಿ ಶ್ರೀ ಪ್ರವರಸೇನ ವಿರಚಿತೇ ದಶಮುಖವಧೇ ಎಂದೂ ಉಳಿದಿರುವ ಹದಿಮೂರು ಸರ್ಗಾಂತ್ಯಗಳಲ್ಲಿ ಇತಿ ಶ್ರೀ ಪ್ರವರಸೇನ ವಿರಚಿತೇ (ಕಾಳಿದಾಸ ಕೃತೇ) ದಶ ಮುಖವಧೇ ಮಹಾಕಾವ್ಯೇ' ಎಂದೂ ಮುಖಪತ್ರದಲ್ಲಿ 'ಶ್ರೀ ಪ್ರವರಸೇನ ವಿರಚಿತಂ ಸೇತುಬಂಧಂ' ಎಂದೂ ಇರುವವುಗಳೇ ಸಾಕಾಗಿತೋರುವುವು.

ಇದರಲ್ಲಿ ರಾಮನು ಸೇತುಬಂಧದ ಮೂಲಕ ರಾವಣನನ್ನು ಕೊಂದು ಹೇಗೆ ಸೀತೆಯೊಡನೆ ಹಿಂದಿರುಗಿದನೆಂಬ ರಾಮಾಯಣಕಥೆಯು ವರ್ಣಿತವಾಗಿದೆ. ಈ ಕಾವ್ಯವು ಪ್ರಾಕೃತದಲ್ಲಿ ಬರೆಯಲ್ಪಟ್ಟು ೧೫ ಆಶ್ವಾಸಗಳುಳ್ಳದಾಗಿದೆ. ಪ್ರಾಯಿಕವಾಗಿ ಪ್ರಾಕೃತದಲ್ಲಿ ಬರೆಯಲ್ಪಟ್ಟ ಗ್ರಂಥಗಳು ಕಾಠಿಣ್ಯದಿಂದ ನೀರ ಸವಾಗಿರುವುವಾದರೂ ಇದು ಹಾಗಿರದೆ ಲಲಿತವೂ ಶ್ರಾವ್ಯವೂ ಆಗಿರುವುದು. ಈ ಕಾವ್ಯಕ್ಕೆ ಕುಲನಾಥ, ರಾಮದಾಸ ಮತ್ತು ಶ್ರೀಕೃಷ್ಣನೆಂಬ ಮೂವರು ವ್ಯಾಖ್ಯಾನವನ್ನು ಬರೆದಿರುವರು. ಇವುಗಳಲ್ಲಿ ರಾಮದಾಸನು ಬರೆದಿರುವ 'ರಾಮಸೇತುಪ್ರದೀಪ' ವೆಂಬ ವ್ಯಾಖ್ಯಾನವು ಮಾತ್ರ ದೊರೆಯುವುದಾಗಿದೆ. ಮಾದರಿಗಾಗಿ ಎರಡು ಶ್ಲೋಕಗಳನ್ನು ಬರೆಯುವೆವು.

ಸುಗ್ರೀವ ಪ್ರತಿಜ್ಞೆ:—

ಓ - ಭಗ್ಗರಕ್ಖಸದುಮಂ ಣಿಹಅದಸಾಣಣಮಇಂದಸುಹಸಂಚಾರಂ ।
ರಾಮಾಣುರಾಅಮತ್ತೋ ಮಲೇಮಿ ಲಂಕಂ ವಣತ್ಥಲಿಂ ವ ವಣಗಓ ॥

[ಉತ-ಭಗ್ನ('ಅವಭಗ್ನ'-ವಾ) ರಾಕ್ಷಸದ್ರುಮಾಂ ನಿಹತದಶಾನನಮೃಗೇಂದ್ರಸುಖಸಂಚಾರಾಂ ।
ರಾಮಾನುರಾಗಮತ್ತೋ ಮೃದ್ನಾಮಿ ಲಂಕಾಂ ವನಸ್ಥಲೀಮಿವ ವನಗಜಃ] ೪—೬೩.

ಚೆನ್ನಾಗಿ ಮದಿಸಿದ ವನಗಜವು ದಾರಿಗೆ ಅಡ್ಡವಾಗಿರುವ ಮಹಾದ್ರುಮವನ್ನು ಮುರಿದುಹಾಕಿ ಕ್ರೂರವಾದ ಸಿಂಹವನ್ನು ನಾಶಪಡಿಸಿ ಅರಣ್ಯವನ್ನು ಸುಖಸಂ ಚಾರಾರ್ಹವಾದುದನ್ನಾಗಿ ಮಾಡುವಂತೆ ನಾನೂ ಶ್ರೀರಾಮನ ಭಕ್ತಿಯಿಂದ ಮತ್ತನಾಗಿ ರಾಕ್ಷಸರೆಂಬ ವೃಕ್ಷಗಳನ್ನು ಕಿತ್ತುಹಾಕಿ ದಶಾನನನೆಂಬ ಕ್ರೂರ ಸಿಂಹವನ್ನು ವಧಿಸಿ ಲಂಕಾರಣ್ಯವನ್ನು ಸರ್ವಸುಲಭವಾಗುವಂತೆ ಮಾಡುತ್ತೇನೆ.

ಮಲಅಚಂದಣಲಆಹರೇ ಸಂಭರಮಾಣಓ
ಣೆಅಅಮಹಣದುಸ್ಸಂ ಮಿವ ಸಂಭರಮಾಣಓ
ರಸಇಸೇಲಸಿಹರಾಹಿಹಓ ಸರಿ ಆವಈ
ದಹಮುಹಸ್ಸ-ದೋಸೇಣ-ಸಮೋಸರಿ ಆವಈ

[ಮಲಯಚಂದನಲತಾಗೃಹಾನ್ಸಂಬಿಭ್ರಾಣೋ
ನಿಜಕಮಥನದುಃಖಮಿವ ಸಂಸ್ಮರನ್
ರಸತಿ ಶೈಲಶಿಖರಾಭಿಹತಃ ಸರಿತ್ಪತಿ
ರ್ದಶಮುಖಸ್ಯ ದೋಷೇಣ ಸಮವಸ್ತೃತಾಪತ್] ೭–೪೧

ಕಪಿಗಳು ಸೇತುವೆಯನ್ನು ಕಟ್ಟುವ ಉದ್ದೇಶದಿಂದ ಮಲಯಾದಿ ಪರ್ವತಗಳನ್ನು ತಂದು ತಂದು ಸಮುದ್ರದಲ್ಲಿ ಹಾಕುತ್ತಿದ್ದುದನ್ನು ಕಂಡು ಸಮುದ್ರವು ತಾನು ಪೂರ್ವದಲ್ಲಿ ಅನುಭವಿಸಿದ (ಸಮುದ್ರ) ಮಥನ ದುಃಖವನ್ನು ನೆನೆಸಿಕೊಂಡು ಪುನಃ ಈಗಲೂ ಮಥನಉಂಟಾಗುವುದೋ ಏನೋ ಎಂಬ ಭಯದಿಂದ (ರಾವಣನು ಮಾಡಿದ ಸೀತಾಪಹರಣ ದೋಷಕ್ಕಾಗಿ ತನಗೆ ಬಂದ ವಿಪತ್ತನ್ನು ನೆನೆಸಿಕೊಂಡು) ರಾವಣನನ್ನು ದೂಷಿಸುತ್ತಿರುವುದೋ ಎಂಬಂತೆ ಘೋರ್ಗರೆಯುತ್ತಿರುವುದು.



# ಮಾತೃಗುಪ್ತ



ಇವನು ಉಜ್ಜಯಿನಿಯವನೆಂದೂ ಇವನದೆಂದು ಉದಹರಿಸಲ್ಪಟ್ಟಿರುವ ಕೆಲವು ಶ್ಲೋಕಗಳಿಂದ ಮಹಾಕವಿಯಾಗಿರಬೇಕೆಂದೂ ಉಜ್ಜಯಿನಿಯಲ್ಲಿ ಕ್ರಿ. ಪೂ. ಸುಮಾರು ಆರನೆಯ ಶತಮಾನದಲ್ಲಿ ಆಳುತ್ತಿದ್ದ ಚಕ್ರೇಶ್ವರ ಶ್ರೀಹರ್ಷವಿಕ್ರಮಾದಿತ್ಯನು ಹಿರಣ್ಯನ ಅನಂತರ ಅರಾಜಕವಾದ ಕಾಶ್ಮೀರವನ್ನು ಆಳಲು ಇವನನ್ನು ಕಳುಹಿಸಿಕೊಟ್ಟಂತೆಯೂ ಇವನು ತನ್ನ ಆಶ್ರಯದಾತನಾದ ಶ್ರೀಹರ್ಷ ವಿಕ್ರಮಾದಿತ್ಯನು ಮೃತನಾದ ಅನಂತರ ಕಾಶ್ಮೀರದ ಸಿಂಹಾಸನವನ್ನು ಹಿರಣ್ಯನ ಅಣ್ಣನ ಮಗನಾದ ಎರಡನೆಯ ಪ್ರವರಸೇನನಿಗೆ

ಬಿಟ್ಟುಕೊಟ್ಟು ಸನ್ಯಾಸಾಶ್ರಮವನ್ನು ವಹಿಸಿ ಉಳಿದಾಯುಷ್ಯವನ್ನು ಕಾಶಿಯಲ್ಲಿ ಕಳೆದಂತೆಯೂ ಹೇಳಲ್ಪಟ್ಟಿದೆ. *

ಶಾಕುಂತಲನಾಟಕ ವ್ಯಾಖ್ಯಾನಕಾರನಾದ ರಾಘವಭಟ್ಟನು ಇವನನ್ನು ಮಾತೃಗುಪ್ತಾಚಾರ್ಯನೆಂದು ಹೆಚ್ಚು ವಿಶೇಷಣದಿಂದ ಕರೆದಿರುವುದಲ್ಲದೆ ಇವನು ಒಂದು ಅಲಂಕಾರಶಾಸ್ತ್ರವನ್ನು ಬರೆದಿರುವುದಾಗಿಯೂ ಅದು ಪ್ರಕೃತ ಉಪಲಬ್ಧವಿಲ್ಲವೆಂದೂ ಹೇಳಿರುವನು. †

ಇವನು ಶ್ರೀಹರ್ಷವಿಕ್ರಮಾದಿತ್ಯನ ಬಳಿಯಲ್ಲಿ ಕ್ರಿ. ಶ. ಎರಡನೆಯ ಶತಮಾನದಲ್ಲಿದ್ದವನು. ಇವನು ಬರೆದಿರುವುದಾದ ಗ್ರಂಥಗಳೊಂದೂ ದೊರೆಯದೆ ಕೇವಲ ಅಲ್ಲಲ್ಲಿ ಮಾತೃಗುಪ್ತನದೆಂದು ಹೇಳುವ ಕೆಲವು ಶ್ಲೋಕಗಳಿಂದಲೇ ತೃಪ್ತಿಗೊಳ್ಳಬೇಕಾಗಿದೆ.

ಕ್ಷೇಮೇಂದ್ರಕೃತ ಔಚಿತ್ಯವಿಚಾರಚರ್ಚಾ ಎಂಬ ಗ್ರಂಥದಲ್ಲಿ..

ನಾಯಂ ನಿಶಾಮುಖಸರೋರುಹರಾಜಹಂಸಃ |
    ಕೀರೀಕಪೋಲ ತಲಕಾಂತತನುಃ ಶಶಾಂಕಃ ||
ಆಭಾತಿ ನಾಥ ತದಿದಂ ದಿವಿ ದುಗ್ಧಸಿಂಧು |
    ಡಿಂಡೀರ ಪಿಂಡಪರಿಪಾಂಡು ಯಶಸ್ತ್ವದೀಯಂ|| (ಮಾತೃಗುಪ್ತಸ್ಯ) ಎಂದೂ

ವಲ್ಲಭದೇವನ ಸುಭಾಷಿತಾವಳಿಯಲ್ಲಿ:—

ನಾಕಾರ[illegible]ಮುದ್ವಹಸಿ ನೈ[illegible]ಸೇ ತ್ವಂ |
    ದಿತ[illegible]ಸ್ಪಂ ನ ಸೂಚ[illegible]ಮುಂಚಸಿ ಸತ್ಫಲಾನಿ ||
ನಿಃಶಬ್[illegible]ಪ್ರವರ್ಷಣಮಿವಾ[illegible]ರಸ್ಯ ರಾಜ[illegible] |
    ಸಂಲಕ್ಷ್ಯ[illegible]ತ್ತೇ[illegible]ಏವ ತವ ಪ್ರಸಾದಃ ||
(ಅಯಂ ಮಾತೃಗುಪ್ತಸ್ಯ) ಎಂದೂ

ಶೀತೇನೋದ್ಧೃಷಿ[illegible]ಮಾಷಶಿಮಿವಚ್ಚಿಂತಾರ್ಣವೇ ಮಜ್ಜತಃ |
    ಶಾಂತಾಗ್ನಿಂ ಸ್ಫುಟಿತಾಧರಸ್ಯ ಧಮತಃ ಕ್ಷುತ್ಕ್ಷಾಮಕಂಠಸ್ಯ ಮೇ ||
ನಿದ್ರಾ ಕ್ವಾಪ್ಯವಮಾನಿತೇವ ದಯಿತಾ ಸಂತ್ಯಜ್ಯ ದೂರಂ ಗತಾ |
    ಸತ್ಪಾತ್ರಪ್ರತಿಪಾದಿತೇವ ವಸುಧಾ ನ ಕ್ಷೀಯತೇ ಶರ್ವರೀ || ‡
(ಮಾತೃಗುಪ್ತಸ್ಯ) ಎಂದೂ ಹೇಳಲ್ಪಟ್ಟಿದೆ.

---

* ರಾಜತರಂಗಿಣಿ ೩. ೧೨೫–೨೫೨.

† ವಲ್ಲಭದೇವನ ಸುಭಾಷಿತಾವಳಿ ಪು. ೮೯.

‡ ಈ ಶ್ಲೋಕವು ಬಲ್ಲಾಳಕೃತ ಭೋಜಪ್ರಬಂಧದಲ್ಲಿ ಮಾಘಕವಿಯದೆಂದು ವರ್ಣಿತವಾಗಿರುವುದು.

# ಗ್ರಂಥಶುದ್ಧಿ



## ಕ್ರಿಸ್ತಪೂರ್ವ

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 2 | 27 | ಪತಿವ್ರತೆ॥ | ಪತಿವ್ರತೇ॥ |
| 8 | 1 | ಪುರುಷಾಕ್ವಚಿತ್। | ಪುರುಷಾಃ ಕ್ವಚಿತ್। |
| 9 | 6 | ಯತ್ಕಿಂಚಿದತ್ಯನೇನ | ಯತ್ಕಿಂಚಿದಿತ್ಯನೇನ |
| 13 | 26 | 'ಸಿತೆ' | 'ಸೀತಾ' |
| 19 | 5 | ರಕ್ಷಿತವಾದ ಅಯೋಧ್ಯೆಯನ್ನೂ ಅರಣ್ಯವನ್ನೂ | ಹೀನವಾದ (ರಹಿತವಾದ) ಅಯೋಧ್ಯೆಯನ್ನೂ ಸೀತಾರಾಮರಿಂದ ಸನಾಥವಾದ ಅರಣ್ಯವನ್ನೂ |
| 25 | 8 | ಮಿಮಾಂಸ | ಮೀಮಾಂಸಾ |
| 26 | F.N. 6 | ಸಮಾಗತ್ಯಂ | ಸಮಾಗತ್ಯ |
| 29 | 14 | ಐತ್ತರೇಯ | ಐತರೇಯ |
| 30 | 10 | ....ತ್ಥಿತಂ।.... | ಸ್ಥಿತಂ। |
| 32 | 10 | ಪುರಾಣದಲ್ಲಿ | ಪುರಾಣದಿಂದ |
| 32 | F.N. 3 | ಚಾಪ್ಯತಿಃ ॥ | ಚಾಪ್ಯತಃ ॥ |
| 33 | 21 | ತಥೋ ಪರಿಚರಾದ್ಯನ್ಯೇ | ತಥೋಽಪರಿಚರಾದ್ಯನ್ಯೇ |
| 34 | 22 | ರಾಜೋ ಪರಿಚರೋನಾಮ | ರಾಜೋಽಪರಿಚರೋ ನಾಮ |
| 35 | 25 | ಏಕಂಶತ ಸಹಸ್ರಂ | ಏಕಂ ಶತಸಹಸ್ರಂ |
| 35–36 | 28–1 | ವೈಶಂಪಾಯನ | ಸೂತ |
| 37 | 9 | ....ಸ್ತತಃಪರ್ವ....ಖಿಲ ಸಂಜ್ಞಿಕಂ। | ತತಃ ಪರ್ವಂ....ಖಿಲಸಂಜ್ಞಿಕಂ। |
| 37 | 10 | ಏತತ್ಪಪರ್ವಶತಂ | ಏತತ್ಪರ್ವಶತಂ |
| 37 | 13 | ರಾವಣನ | ರಾಮನ |
| 38 | 4 | ಕೃಷ್ಣನು ಕಥಾನಾಯಕನೆನ್ನುವುದಾದರೆ ಇವನು | ಕೃಷ್ಣನು |
| 38 | 9 | ಅನುಶಾಸನೀಕ | ಅನುಶಾಸನಿಕ |
| 38 | 16 | ಬರುವುದಾದುದರಿಂದ ಹಾಗೆ | ಬರುವುದಾದುದರಿಂದಲೂ, ಯುದ್ಧದಲ್ಲಿಯೂ ಇವನ ಪಾತ್ರವು ಗೌಣವಾಗಿ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| | | | ಯೋ ಇರುವುದರಿಂದಲೂ ಯುಧಿಷ್ಠಿರನು ಕಥಾನಾಯಕನೆಂದು.... |
| 39 | 10 | ಕಂಡುಬರುವುವಾದುದರಿಂದ | ಕಂಡುಬರುವುವಾದುದರಿಂದಲೂ |
| 39 | 25 | ಶಕುನಿಯು | ಶಕುನಿಯ |
| 43 | F.N. 2 | ....Simth's | ....Smith's |
| 52 | 12 | ....ದುರ್ಬಲೈರ್ಗಹ್ಯತೇ | ....ದುರ್ಬಲೈರ್ಗೃಹ್ಯತೇ |
| 54 | 9 | ಭಾಸನದೆಂದು | ಭಾಸನಿಂದ |
| 56 | 2 | ಸಂಭೃತೋ | ಸಂವೃತೋ |
| 61 | F.N. 1 | ನಾಟಕವನ್ನು | ನಾಟಕವನ್ನು |
| 62 | 16 | ಾಜಾ ವಿದೂಷಕರ | ರಾಜಾ ವಿದೂಷಕರ |
| 64 | 8 | ಸದ್ಯ | ಸದ್ಯಃ |
| 64 | 25 | ಕೋಶದಲ್ಲಿ | ಕೋಶಗಳಲ್ಲಿ |
| 65 | 13 | ....ವಿಸ್ಲವಯುತಿ ‖ | ....ವಿಭ್ರಮಯುತಿ ‖ |
| 67 | 19 | ಭೋಧೆಯಾಗುವುದು | ಬೋಧೆಯಾಗುವುದು |
| 68 | 5 | ಆ ಜ್ಞಾತಂ | ಆ! ಜ್ಞಾತಂ |
| 70 | 23 | ಯಾ ಸೃಷ್ಟಿಸ್ರಷ್ಟುರಾದ್ಯಾ | ಯಾ ಸೃಷ್ಟಿಃಸ್ರಷ್ಟುರಾದ್ಯಾ |
| 70 | 25 | ಏಕೈಶ್ವರ್ಯಾ | ಏಕೈಶ್ವರ್ಯೇ |
| 70 | F.N. 1 | Jaurnal | Journal |
| 73 | 11 | 'ಬಿಟ' | 'ಭಿಟ' |
| 80 | 5 | ಶಾಕುಂತಲಾ | ಶಕುಂತಲಾ |
| 81 | ಪುಟ ಸಂಖ್ಯೆ | ೧ | ೮೧ |
| 81 | 3 | ಶಕುಂಲೆಯು | ಶಕುಂತಲೆಯು |
| 81 | 26 | ಇನನು | ಇವನು |
| 82 | 29 | ವ್ಯಾಜವನ್ನ | ವ್ಯಾಜವನ್ನು |
| ೮4 | 12 | ಈಗಣ | Omit |
| 84 | 29 | ಬ್ರಹ್ಮಚಾರಿಯಂತೆ | ಬ್ರಹ್ಮಚಾರಿಣಿಯಂತೆ |
| 85 | 14 | ವರೆಂಬ | ಹೇಳುವರೆಂಬ |
| 85 | 14 | ಅವನಿಗೆ ಹೇಳು | ಅವನಿಗೆ |
| 85 | 24 | ನಾಟಕಾದ್ಯಂತದಲ್ಲಿಯೂ | ನಾಟಕಾಂತ್ಯದವರೆಗೂ |
| 86 | 25 | ಪಣಯರಸ | ಪ್ರಣಯರಸ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 87 | 27 | ಸುರಸುಂರಿಯೂ | ಸುರಸುಂದರಿಯೂ |
| 88 | 3 | ಸಾಕಾಗಿರುವುವು | ಸಾಕಾಗಿರುವುದು |
| 88 | 9 | ಕುಲರಮಣಿಗಳಿಗೆ | ಕುಲರಮಣಿಯರಿಗೆ |
| 88 | 14 | ಬೌದ್ಧಮತತತ್ವ | ವೇದಾಂತಮತತತ್ವ |
| 88 | 22 | ಶಾಕುಂತಲೆಯು | ಶಕುಂತಲೆಯು |
| 88 | 26 | ಮೂರ್ಛೆಹೋಗುವಿಕೆ | ಅನುಶೋಚಿಸುವಿಕೆ |
| 88 | 30 | Goeלhe | Goethe |
| 89 | 21 | Sakuntala O ! | O, Sakuntala ! |
| 90 | 18 | ಇಲ್ಲದಿರಲಿಲ್ಲ | ಇಲ್ಲದೇ ಇಲ್ಲ |
| 94 | 11 | ಕುಂಭೋ ದರಂ | ಕುಂಭೋಧರಂ |
| 94 | 17 | ಜ್ಯೋತಿರ್ವಿದಾಭರಣದ | ಕಾಲ:—ಜ್ಯೋತಿರ್ವಿದಾಭರಣದ |
| 94 | 19 | ಮಾಘವ | ಮಾಧವ |
| 96 | 18 | ರಘುಪಂಜಿಕಾ | ರಘುಪಂಚಿಕಾ |
| 96 | 30 | ಕಾವ್ಯಪ್ರೌಢಕಾ ಶಬ್ದಸೌಷ್ಠವತ | ಕಾವ್ಯಪ್ರೌಢತೆ, ಶಬ್ದಸೌಷ್ಠವ ಮತ್ತು |
| 97 | 18 | ಮೇಷವನ್ನು | ಮೇಘವನ್ನು |
| 97 | 20 | ದೂತನಾಗಿ | ದೂತನನ್ನಾಗಿ |
| 97 | 26 | ಸ್ವಗೃಹವರ್ಣನೆ | ಯಕ್ಷಗೃಹವರ್ಣನೆ |
| 98<br>99 | 29–30<br>1–3 | ಈ ಪಙ್ಕ್ತಿಗಳನ್ನು ಬಿಟ್ಟು ಓದತಕ್ಕದ್ದು. | |
| 99 | 7 | ಮಂಗಳಮಧ್ಯಾನಿ ಶಾಸ್ತ್ರಾಣಿ | ಮಂಗಳಮಧ್ಯಾನಿ ಮಂಗಳಾಂತಾನಿ ಶಾಸ್ತ್ರಾಣಿ |
| 99 | 27 | ಸಮವಿವಸ | ಸಮದಿವಸ |
| 102 | 27 | ಕಾಲಹರಣಮಾಡುತ್ತಿದ್ದರೆಂದು | ಕಾಲಹರಣಮಾಡುತ್ತಿದ್ದರೆಂದೂ |
| 102 | 29 | ಕೈಬಿಟ್ಟಿರುವನು. | ಕೈಬಿಟ್ಟಿರುವನು. ಈ ಕಾರಣಗಳಿಂದ ಕಾವ್ಯಕಾರಕಾಳಿದಾಸನೂ ನಾಟಕಕಾರ ಕಾಳಿದಾಸನೂ ಭಿನ್ನಭಿನ್ನ ವ್ಯಕ್ತಿಗಳೆಂದು ವ್ಯಕ್ತಪಡುವುದು. |
| 103 | .... | ................ | ಇವನ ಕಾವ್ಯಗಳ ಒಂದೆರಡು ಶ್ಲೋಕಗಳ ಉದಾಹರಣೆ. |
| 103 | 24 | ವಿದ್ಯುಕ್ತಿನಿಂದ | ವಿದ್ಯುತ್ತಿನಿಂದ |
| 103 | 29 | ಮೃದಂಗಗಳ | ಮೃದಂಗಗಳಿಂದ |

## ಕ್ರಿಸ್ತಶಕ

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 1 | 14 | ಯತ್ಸಭಾಂ | ಯತ್ಸಭಾಯಾಂ |
| 2 | 13 | ಸಾತವಾಸಕೃತ | ಸಾತವಾಹನಕೃತ |
| 2 | 16 | ಷಾತ್ರಯುಸ್ವೀಕೃತ-ಪೈ ಶಾಚಕ | ಷಾತ್ರಯು—ಸ್ವೀಕೃತಪೈಶಾಚಕ |
| 4 | 13 | ಕಶ್ಚನ ಗಾಥಾ | ಕಾಚನ ಗಾಥಾ |
| 5 | 19 | ಅವಿನಾಶಿನಿ | ಅವಿನಾಶಿನ |
| 8 | 9 | ಜಲಕೇಳಿಯಲ್ಲಿ | ಜಲಕೇಳಿಯುಲ್ಲಿ |
| 13 | 1 | ಪ್ರಥಮಶಕ | ಪ್ರಥಮಶತಕ |
| 15 | 28 | ಛಿಃ, | ಚಿಃ, |
| 16 | 12 | ಬಳಿ | ಬಳಿಯುಂ |
| 19 | 18 | ಸಮಕಾಲೀಕನೆಂದು | ಸಮಕಾಲಿಕನೆಂದು |
| 20 | 10 | ವರಹಮೂಲ | ವರಾಹಮೂಲ |
| 21 | 27 | ಭೂಪಾ ಕುಲಜಾ | ಭೂಪಾಃ ಕುಲಜಾ |
| 22 | 24 | ಅರಿಷ್ಠಶಯ್ಯಾಂ | ಅರಿಷ್ಟಶಯ್ಯಾಂ |
| 23 | 14 | ಕೊಂಚಕೊಂಚ | ಸ್ವಲ್ಪಸ್ವಲ್ಪ |
| 25 | 1–4 | ಎಂಬಲ್ಲಿ........ಓಡಿದರೆಂದು | ರಾಜಕುಮಾರನನ್ನು ನೋಡುವ ಸಮಾರಂಭದಲ್ಲಿ ಸ್ತ್ರೀಯರು ಆಭರಣಗಳನ್ನು ಅಸ್ತವ್ಯಸ್ತವಾಗಿ ಅಲಂಕರಿಸಿಕೊಂಡು ಒಡ್ಯಾಣವು ಜಾರಿಹೋದುದನ್ನು ಸಹ ಗಮನಿಸದೇ ಕೌತೂಹಲಾವಿಶಿಷ್ಟರಾಗಿ ಓಡಿದರೆಂದು |
| 26 | 10 | ಕೌತೂಹಲಾತ್ಸ್ಖಲೀತ | ಕೌತೂಹಲಾತ್ಸ್ಖಲಿತ |
| 27 | 15 | ಸಿತ್ಯೆಯರ್ಜುಷ್ಠಿ | ಸಿತ್ಯೆಯರ್ಜುಷ್ಟಿ |
| 27 | 28–30 | ಮಹಾರಾಜ !........ ಮಾಡಿಬಿಡುತ್ತದೆ. | ಮಹಾರಾಜ ! ರೂಪವನ್ನು ನಾಶಮಾಡುವಂಥದೂ ಬಲವನ್ನು ಕುಗ್ಗಿಸುವಂಥದೂ ದುಃಖಕ್ಕೆ ಮೂಲವೂ ಸುಖಕ್ಕೆ ಮೃತ್ಯುಪ್ರಾಯವೂ, ಸ್ಮೃತಿಗೆ ನಾಶಕರವೂ ಇಂದ್ರಿಯಗಳಿಗೆ ಪರಮವಿರೋಧಿಯೂ ಆಗಿರುವ 'ಜರಾ' (ಮುಪ್ಪು) |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| | | | ಎಂಬುದೊಂದುಂಟಲ್ಲ ! ಅದರಿಂದ ಇವನು ಭಗ್ನನಾಗಿರುವನು. |
| 28 | 5 | ಅವನೂ | ಇವನೂ |
| 30 | 21 | ತೋಲನಮಾಡಿ | ತೂಲನಮಾಡಿ |
| 30 | 28 | ನತಂ | ನ ತಂ |
| 31 | 7 | ಸೋನಿಶ್ಚಯಾನ್ನಾಪಿ | ಸೋಽನಿಶ್ಚಯಾನ್ನಾಪಿ |
| 32 | 16–20 | ಲೋಕವೆಲ್ಲವೂ .......... ಅನುರಕ್ತನಾಗುವುದಿಲ್ಲ | ನಾನು ವಿಷಯಗಳನ್ನೇನೂ ತಿರಸ್ಕರಿಸುವವನಲ್ಲ. ಏಕೆಂದರೆ ಲೋಕವೇ ತದಾತ್ಮಕವಾಗಿರುವುದೆಂಬುದನ್ನು ನಾನು ಬಲ್ಲೆ. ಹಾಗಾದರೆ ವಿಷಯಪರಾಙ್ಮುಖನಾಗಿರುವುದೇಕೆಂದರೆ, ವಿಷಯಾತ್ಮಕವಾಗಿರುವ ಈ ಜಗತ್ತೆಲ್ಲವೂ ನಶ್ವರವಾಗಿರುವುದರಿಂದ ಇವುಗಳಲ್ಲಿ ನನ್ನ ಮನವು ಒಡಂಬಡದು. ಇಷ್ಟೆ (ಅದಿಲ್ಲದೆ ಲೋಕವು ಶಾಶ್ವತವಾಗಿರುವ ಪಕ್ಷದಲ್ಲಿ ತಾನು ಈ ವಿಷಯೋಪಭೋಗವನ್ನು ಸ್ವೀಕರಿಸುವೆನೆಂದು ಭಾವವು) |
| 33 | 20–24 | ಋಗ್ವೇದಂ .......... ಶೂದ್ರಕೋಽಗ್ನಿಂ ಪ್ರವಿಷ್ಟಃ | ಈ ಶ್ಲೋಕದ ನಂತರ ಈ ಟಿಪ್ಪಣಿಯನ್ನು ಓದತಕ್ಕದ್ದು ‹‹ಈಶ್ಲೋಕವನ್ನು ಕವಿಯೇ ಬರೆದನೆ ? ಹಾಗಾದರೆ ತಾನು ಅಗ್ನಿಪ್ರವೇಶಮಾಡಿದುದನ್ನು ತಾನೇ ಬರೆಯುವುದೆಂತು? ಅಥವಾ ಕವಿಯು ತಾನು ಮುಂದೆ ಅಗ್ನಿಪ್ರವೇಶವನ್ನು ಮಾಡಿಯೇ ಮಾಡುವೆನೆಂದು ನಿಶ್ಚಯಿಸುವ ಮುಂಚೆಯೇ ನಾಟಕದಲ್ಲಿ ಬರೆದನೆ ? ಇದೂ ಅಲ್ಲದೆ ಕವಿಯು ನಾಟಕವನ್ನು ಬರೆದು ಅಗ್ನಿಪ್ರವೇಶ ಮಾಡಿದ ನಂತರ ಬೇರೆಯಾರಾದರೂ ಇವನ ಕೀರ್ತಿದ್ಯೋತನೆಗಾಗಿ ಈ ಶ್ಲೋಕವನ್ನು ರಚಿಸಿ ಇವನ ನಾಟಕದಲ್ಲಿ ಸೇರಿಸಿದರೆ ? ಹೇಗೆಂಬುದು ತಿಳಿಯದಾಗಿದೆ. |
| 35 | 21 | ಯುವನಾಶ್ವ | ಯವನಾಶ್ವ |
| 37 | 20 | ಸರಿಯಲ್ಲವೆಂದು | ಕ್ಷೇಮವಲ್ಲವೆಂದು |

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 38 | 18–21 | ಮೃಚ್ಛಕಟಿಕವು........ ........ಬರೆದಿರುವನು | ಮೃಚ್ಛಕಟಿಕವು "ದರಿದ್ರಚಾರುದತ್ತ"ವೆಂಬ ನಾಟಕವನ್ನು ಹೋಲುವುದು |
| 38<br>39 | 28<br>6 | ಈ ಪಂಙ್ತಿಗಳಲ್ಲಿ 'ಭಾಸನ' ಎಂಬುದನ್ನು ಬಿಟ್ಟು ಓದತಕ್ಕದ್ದು | |
| 39 | 25 | ವಾಯುಸ್ಥಲೀ | ವಾಯುಃ ಸ್ಥಲೀ |
| 41 | 8 | ತನ್ನ ರತ್ನದ | ತನ್ನ ಹೆಂಡತಿಯು ರತ್ನದ |
| 41 | 21 | ಹೂವು | ಕೂ |
| 42 | 1 | ಮದನಿಕೆ | ಮದನಿಕಾ |
| 43 | 15 | ದಿವೋ ಶ್ರುಧಾರಾಃ | ದಿವೋಽಶ್ರುಧಾರಾಃ |
| 44 | 13–15 | ಮಾರ್ಗದಲ್ಲಿರುವ........ ನೋಡತಕ್ಕದ್ದು | ನೀನು ಕೇವಲ ದ್ರವ್ಯಕ್ಕಾಗಿ ದೇಹವನ್ನು ಮಾರುವಂಥ ವೇಶ್ಯೆಯಾದುದರಿಂದ ಮಾರ್ಗದಲ್ಲಿರುವ ಪೂಬಳ್ಳಿಯಂತೆ ಪ್ರಿಯರನ್ನೂ ಅಪ್ರಿಯರನ್ನೂ ಸಮವಾಗಿಯೇ ಭಜಿಸತಕ್ಕದು. |
| 45 | 2 | ನಿರ್ಬುದ್ಧಿಕ್ಷಯು ಮೇತ್ಯಹೋ ! | ನಿರ್ಬುದ್ಧಿಃ ಕ್ಷಯಮೇತ್ಯಹೋ ! |
| 45 | 21 | ಚಂದ್ರಕೋ ಭವೇತ್ | ಚಂದ್ರಕೋಽಭವತ್ |
| 46 | 21 | ಕ್ಷಣಾತತ್ತ | ಕ್ಷಣಾತ್ತತ್ತ |
| 47 | 18 | ನಿಶ್ಚೇಷ್ಟಃ | ನಿಶ್ಚೇಷ್ಟಃ |
| 49 | 2 | ಅಂದರೆ | ಎಂದರೆ |
| 49 | 16–19 | ಈ ಪಂಙ್ತಿಗಳನ್ನು ಬಿಟ್ಟು ಓದತಕ್ಕದ್ದು. | |
| 52 | 14 | ಪಿತ | ಪೀತ |
| 53 | Foot note | Antequary | Antiquary |
| 56 | 8 | ಚೇಷ್ಠಾ | ಚೇಷ್ಟಾ |
| 59 | 4 | ಅಣ್ಣನೆಂದು | ತಮ್ಮನೆಂದು |
| 60 | 23 | ಪರಿತುಷ್ಯತಿ | ಪರಿಶುಷ್ಯತಿ |
| 63 | 20 | ಮುಮುಕ್ಷತ್ವ | ಮುಮುಕ್ಷುತ್ವ |
| 66 | 1 | ವಲ್ಲಭಿಭಾಷೆಯಲ್ಲಿ | ವಲ್ಲಭಿಯಲ್ಲಿ |
| 66 | 7 | ಜಕಾರ | ಚಕಾರ |
| 68 | 25 | ಸ ಯೇವ | ಸ ಏವ |

| ಪುಟ. | ಪಂಙ್ತಿ. | ಅಶುದ್ಧ | ಶುದ್ಧ |
|---|---|---|---|
| 68 | 29 | ಮುಗದ್ಯಶಾಮಾಸಂದ | ಮೃಗದ್ಯಶಾಮಾನಂದ |
| 72 | 8 | ನ ರಂಜಯಂತಿ | ನ ರಂಜಯಿತಿ |
| 74 | 16 | ಪತಿನ್ನೃಪತಯೋ | ಪತಿನ್ನೃ್ಪತಯೋ |
| 75 | foot note | Bubdaghosha | Buddaghosha |
| 76 | 21 | ಛಿಃ | ಚಿಃ |
| 84 | 20 | ವಿ ತ್ರಭೇದ | ಮಿತ್ರಭೇದ |
| 87 | 11 | ದ್ಯೂತಕಾರೇ | ದ್ಯೂತಕಾಲೇ (ರ್ಯೇ) |
| 89 | 25 | ಕಾಳಿದಾನನ್ನೂ | ಕಾಳಿದಾಸನನ್ನೂ |
| 95 | 9 | ಪವನಸ್ಸುಗಂಧಿಃ | ಪವನಸ್ಸುಗಂಧಃ |
| 95 | 12 | ಹೂವುಗಳಿಂದ | ಹೂಗಳಿಂದ |
| 98 | 25 | ಕ್ಷಾಳನಂ | ಕ್ಷಾಲನಂ |
| 100 | 21 | ಚತುಷ್ಷಷ್ಟಿ | ಚತುಷ್ಷಷ್ಠಿ |
| 101 | 2 | ಪರಿತಶ್ಚತುವರ್ಣ | ಪರಿತಶ್ಚತುರ್ವರ್ಣ |
| 106 | 7 | ಪರಿಹಿತ | ಪರಿಹತ |
| 109 | 28 | ನಿರಪರಾಧಿಯಾದ | ನಿರಪರಾಧಿನಿಯಾದ |
| 114 | 5 | ಕನ್ಯಕಾಮಷ್ಟಾದಶ | ಕನ್ಯಕಾಮಷ್ಟಾದಶ |
| 116 | 12 | ....ವಿಷ್ಠೇಷು ಶಿಷ್ಠೇಷು | ....ವಿಷ್ಟೇಷು ಶಿಷ್ಟೇಷು |
| 116 | 14 | ಶಿಷ್ಠರು | ಶಿಷ್ಟರು |
| 117 | 19 | ದೃಶಮ್ಮಾಲತೀ ಮಾಲಾ | ದೃಶಂ ಮಾಲತೀಮಾಲಾ |
| 117 | 22 | ನವಕಾವಿಲಸಂತಿ | ನ ವಕಾ ವಿಲಸಂತಿ |
| 118 | 2 | (ದೃಷ್ಠಿಃ) | (ದೃಷ್ಟಿಃ) |
| 118 | 15 | ಶೀಕರಛ್ಭಠಾ | ಶೀಕರಚ್ಛಟಾ |
| 120 | 5 | ನೈಪುಣ್ಯತೆಯನ್ನು | ನೈಪುಣ್ಯವನ್ನು |
| 121 | 15–18 | ಶ್ವಶುರಗೃಹ........ ........ಪ್ರವಾಹಃ. | ಶ್ವಶುರಗೃಹನಿವಾಸಃ ಸ್ವರ್ಗತುಲ್ಯೋ ನರಾಣಾಂ। ಯದಿಭವತಿವಿವೇಕೀಪಂಚ ಷಡ್ವಾದಿನಾನಿ ‖ ದಧಿಮಧುಘೃತಲೋಭಾನ್ಮಾಸಮೇಕಂವಸೇಚ್ಛೇತ್ । ಭವತಿ ವಿಗತಲಜ್ಜೋ ಮಾನವೋ ಮಾನಹೀನಃ ‖ |
| 123 | 6 | ರುಷ್ಠನಾಗಿ | ರುಷ್ಟನಾಗಿ |

| ಪುಟ. | ಪಂಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 124 | 18 | ಕೀರಾತಾರ್ಜುನೀಯವು | ಕಿರಾತಾರ್ಜುನೀಯವು |
| 125 | 12 | ಪ್ರವೇಶ ಮಿಹಭಾರವಿ ಕಾವ್ಯಬಂಧೇ | ಪ್ರವೇಶಮಿಹ ಭಾರವಿಕಾವ್ಯಬಂಧೇ |
| 128 | 18 | ಇಷ್ಟರ, ಮಿತ್ರರೂ, | ಇಷ್ಟರೂ, ಮಿತ್ರರೂ, |
| 131 | 2 | ಚೇಷ್ಠಾವರ್ಣನೆ | ಚೇಷ್ಟಾವರ್ಣನೆ |
| 135 | 7 | ತೇಧುನಾ ಪುನಃ | ತೇಽಧುನಾ ಪುನಃ |
| 135 | 31 | ರಕ್ಷಣಾರ್ಥವನ್ನೊಳ ಕೊಂಡಿರುವ | ರಕ್ಷಣಾರ್ಥಗಳನ್ನೊಳಕೊಂಡಿರುವ |
| 136 | 4 | ಪ್ರಯೋಗೋಹಂ | ಪ್ರಯೋಗೋಽಹಂ |
| 142 | 22 | ತಾಮ್ರದದುಡ್ಡು, ಬೆಳ್ಳಿ ಭಂಗಾರದ | ತಾಮ್ರದ ದುಡ್ಡು, ಬೆಳ್ಳಿಭಂಗಾರದ |
| 144 | 9 | ರತ್ನಾವಳಿ | ರತ್ನಾವಳೀ |
| 148 | 10 | ಬುದ್ಧೋಜಿನಃ ಪಾತುವಃ | ಬುದ್ಧೋ ಜಿನಃ ಪಾತು ವಃ |
| 149 | 9–10 | ಬುದ್ಧ | ಬೌದ್ಧ |
| 149 | 12–17 | ಅದು....ತೋರುವುದಿಲ್ಲ | ಈ ಪಂಙ್ಕ್ತಿಗಳನ್ನು ಬಿಟ್ಟು ಓದತಕ್ಕದ್ದು |
| 149 | 27–28 | ಈ ನಾಟಕವು ಹಿಂದೂ ಮತಾನುಸಾರವಾಗಿರುವುದೆಂದು ಸ್ಪಷ್ಟವಾಗುವುದು.... | ಶ್ರೀಹರ್ಷನು ಬೌದ್ಧಮತಾವಲಂಬಿಯಾದ ನಂತರ ಹಿಂದೂ ಬೌದ್ಧಮತಗಳೆರಡರ ಭಾವವನ್ನೂ ಬೆರೆಸಿ ಈ ನಾಗಾನಂದ ನಾಟಕವನ್ನು ಬರೆದಿರಬೇಕೆಂದು ಬೋಧೆಯಾಗುತ್ತದೆ. |
| 151 | 9 | ರತ್ನಾವಳೀನಾಮ್ನಿಂ | ರತ್ನಾವಳೀನಾಮ್ನೀಂ |
| 151 | 13 | ಯಶಸೇರ್ಥ | ಯಶಸೇಽರ್ಥ |
| 151 | 28 | ತಸ್ಯ ನಾಟಿಕಸ್ಯ | ತಸ್ಯಾಃ ನಾಟಿಕಾಯಾಃ |
| 151 | 29 | ಖ್ಯಾಪಿತತ್ವೇತಪಿ | ಖ್ಯಾಪಿತತ್ವೇಽಪಿ |
| 152 | 2 | ಪ್ರಸಂಗೇ ಭಿಹಿತ | ಪ್ರಸಂಗೇಽಭಿಹಿತ |
| 152 | 15 | ಭಾಸಕವಿಯ ರೂಪಕಗಳನ್ನು | ಭಾಸನಾಮಾಂಕಿತ ರೂಪಕಗಳನ್ನು |
| 152 | 17 | ಭಾಸರೂಪಕ | ಭಾಸನಾಮಾಂಕಿತರೂಪಕ |
| 152 | 20–21 | ಈ ಪಂಙ್ಕ್ತಿಗಳನ್ನು ಬಿಟ್ಟು ಓದತಕ್ಕದ್ದು. | |
| 155 | 2 | ನಾಯಿಕಿಯನ್ನು | ನಾಯಕಿಯನ್ನು |
| 155 | 18 | ಸುಸಂಗತೆಯು | ತನ್ನ ಸಖಿಯಾದ ಸುಸಂಗತೆಯು |

| ಪುಟ. | ಪಂಕ್ತಿ. | ಅಶುದ್ಧ | ಶುದ್ಧ. |
|---|---|---|---|
| 156 | 8 | ಮಲಯುವತಿ.... | ಮಲಯುವತೀ........ |
| 157 | 4 | ಕಥಾನಾಯಿಕಿ. | ಕಥಾನಾಯಕೆ. |
| 157 | 14, 21, 27 | ರತ್ನಾವಳಿ | ರತ್ನಾವಳೀ |
| 157 | foot note | ಇಷ್ಟುಮಟ್ಟಿಗಾದರೂ | ಇಷ್ಟರಮಟ್ಟಿಗಾದರೂ |
| 159 | 12 | ರೇಖಾ ಪಿ | ರೇಖಾಪಿ |
| 160–1 | 28–1 | ಯೌವನನಾರಂಭದಿಂದ | ಯೌವನಾರಂಭದಿಂದ |
| 162 | 7 | ಹೃದಯುವ ಸತಿಃ | ಹೃದಯು ವಸತಿಃ |
| 162 | 9 | ಬಾಣೋಚ್ಚಿಷ್ಟಂ | ಬಾಣೋಚ್ಛಿಷ್ಟಂ |
| 162 | foot note | ಕಶ್ಚಿಛ್ಛ್ರೀ | ಕಶ್ಚಿಚ್ಛ್ರೀ |
| 164 | 11 | ಪ್ರಾಗ್ಜ್ಯೋತಿಷ | ಪ್ರಾಜ್ಜ್ಯೋತಿಷ |
| 167 | 24 | ಅವುಗಳ ಬಳಿಗೆ ಹೋಗಬೇಕೆಂಬಾಸೆಯಿಂದ | ಅವುಗಳನ್ನು ಹಿಡಿಯಬೇಕೆಂಬಾಸೆಯಿಂದ |
| 167 | 29 | ಅಚ್ಛೋದಕ | ಅಚ್ಛೋದ |
| 169 | 18 | ಸತಿಯನ್ನು | ಸಖಿಯನ್ನು |
| 170 | 10 | ಹೊರಡಬಹುದಾಗಿ | ಹೊರಡಬಹುದಾಗಿಯೂ |
| 170 | 28 | ವಿರಹದರೋಗಿ | ವಿರಹರೋಗಿ |
| 171 | 30 | ಅಚ್ಛೋದಕ | ಅಚ್ಛೋದ |
| 172 | 8 | ತೋರಿರುವನು | ತೋರಿಸಿರುವನು |
| 173 | 10 | "ಬಾಣೋಚ್ಚಿಷ್ಟಂ | "ಬಾಣೋಚ್ಛಿಷ್ಟಂ, |
| 173 | 13 | ಕಲ್ಕು | ಕಲ್ಲು. |
| 173 | 18 | ಮನೋವಲ್ಲಭನನ್ನೋಡುವುದ | ಮನೋವಲ್ಲಭನನ್ನು ನೋಡುವುದ |
| 173 | 20 | ದಾರಣ | ದಾರುಣ |
| 174 | 15 | ಸ್ತಂಭೀಭೂತವನ್ನಾಗಿ | ಸ್ತಂಭೀಭೂತರನ್ನಾಗಿ |
| 174 | 21 | ಮುಗ್ಧಸ್ತ್ರೀಯೋಚಿತವಾದ | ಮುಗ್ಧಸ್ತ್ರೀಯುಚಿತವಾದ |
| 174 | 28 | ಜನೋ ಯಂ | ಜನೋಽಯಂ |
| 175 | 14 | ಮಹಾರಣ್ಯದಂತೆ | ಮಹಾ ಅರಣ್ಯದಂತೆ |
| 179 | 19 | ಅಚಿರಮುದಿತ | ಅಚಿರಮ್ಯುದಿತ |
| 181 | 14 | ಪಾದಾಂಗುಷ್ಠ ವಿಚಾರವು | ಪಾದಾಂಗುಷ್ಠವು |

| ಪುಟ. | ಪಂಙ್ತಿ. | ಅಶುದ್ಧ | ಶುದ್ಧ |
|---|---|---|---|
| 182 | 5 | ತೋಲನಮಾಡಿ | ತೂಲನಮಾಡಿ |
| 184 | foot note | ತಂದೆಯು ಇಷ್ಟದಂತೆ ಕಥೆಯನ್ನು ಬರೆದುದಾಗಿ ಮಾತ್ರ ತಿಳಿಯಬರುತ್ತತೆ | ಇದನ್ನು ಬಿಟ್ಟು ಓದತಕ್ಕದ್ದು |
| 184 | ,, 9 | ಎಂಬಾಶಂ ಯಿಂದ | ಎಂಬಾಶಂಕೆಯಿಂದ |
| 184 | ,, 15 | ವಿನಯಪಾಶಾಬದ್ಧನಾಗಿ | ವಿನಯಪಾಶಬದ್ಧನಾಗಿ |
| 185 | 12 | ಕವಿತ್ವಛ್ಛಾಯಾ | ಕವಿತ್ವಚ್ಛಾಯಾ |
| 185 | 16–22 | ಈ ಪಂಙ್ತಿಗಳನ್ನು ಬಿಟ್ಟು ಓದತಕ್ಕದ್ದು | |
| 186 | 10 | ಅಚ್ಛೋದಕ | ಅಚ್ಛೋದ |
| 186 | 20 | ,, | ,, |
| 188 | 17 | ದಯಾವಿಷ್ಟನಾದ | ದಯಾವಿಶಿಷ್ಟನಾದ |
| 189 | 11 | ಅಚ್ಛೋದಕ | ಅಚ್ಛೋದ |
| 192 | 10 | ಕಾದಂಬರೀ ರಸಜ್ಞಾನಮಾಹಾರೋಽಪಿ | ಕಾದಂಬರೀರಸಜ್ಞಾನಾದಾಹಾರೋಽಪಿ |
| 192 | 23 | ಗತಾ | ಗತಂ |
| 195 | ಈ ಪುಟದ 25ನೆಯ ಪಂಙ್ತಿಯನ್ನು ಒಂದನೆಯ ಪಂಙ್ತಿಯಾಗಿ ಓದಿಕೊಳ್ಳತಕ್ಕದ್ದು | | |
| 196 | 3 | ಕುಷ್ಟಾ | ಕುಷ್ಠಾ |
| 196 | 5 | ಕುಷ್ಟ | ಕುಷ್ಠ |
| 196 | 8 | ಕುಷ್ಟಿ | ಕುಷ್ಠಿ |
| 198 | 5 | ದಲ್ಲಿ ಸಾಕ್ಷಾದೀಶ್ವರನೆಂದು | ದಲ್ಲಿ ಸೂರ್ಯನು ಸಾಕ್ಷಾದೀಶ್ವರನೆಂದು |
| 201 | 5 | ಉದ್ಯನ್ಬಾಲ.... | ಉದ್ಯದ್ಬಾಲ |
| 203 | 10 | ಪೆರಂಕುಂಬಾಸಿರತ | ಪೆರಕುಂಬಾಸಿರತ |
| 210 | foot note | ಭರ್ತರ್ವಿ | ಭರ್ತುರ್ವಿ |
| 211 | 1 | ಅಸದ್ವಾರ್ತೆಯು | ಅಸದ್ವಾರ್ತೆಯೂ |
| 214 | 13–14 | ಹದಿಮೂರನೆಯ | ಹದಿಮೂರು |
| 214 | 27 | ಸುತಾ ದದೇ | ಸುತಾದದೇ |
| 216 | 9 | ಇದ್ದಂತೆ | ಇದ್ದಂತೆಯೂ |
| 217 | 28 | ಮಾರ್ಗವನ್ನು | ಮೋಕ್ಷಮಾರ್ಗವನ್ನು |
| 218 | ಪೇಜ್‌ಹೆಡ್ಡಿಂಗ್ | ಎಂಟನೆಯ | ಏಳನೆಯ |

| ಪುಟ. | ಪಂಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 220 | 8 | ಆಪಸ್ತಂಭ | ಆಪಸ್ತಂಬ |
| 220 | 9 | ಗತೋ ವಸ್ಥಾಂ | ಗತೋಽವಸ್ಥಾಂ |
| 222 | Page | ಏಎಂಟಿಯು | ಎಂಟನೆಯು |
| 222 | 17 | ಎಂದು | ಎಂದೂ |
| 223 | Page | ಭವವಭೂತಿ | ಭವಭೂತಿ |
| 223 | 24 | ಹೇಳಲ್ಪಟ್ಟಿರುವುದರಿಂದ | ಹೇಳಿರುವುದರಿಂದಲೂ |
| 225 | 4 | ತಿಳಿಯುಬರುವುದು | ತಿಳಿಯಬರುವುದು. |
| 226 | 1 | ಪಾಲನವನ್ನು | ಪ್ರಜಾಪಾಲನವನ್ನು |
| 226 | 23 | ಅತ್ಯಂತೋಭ್ಛ್ರಾಯ | ಅತ್ಯಂತೋಚ್ಛ್ರಾಯ |
| 227 | 4 | ಬೇಕೆಂತ | ಬೇಕೆಂದು |
| 227 | 10–17 | ಈ ಪಂಙ್ಕ್ತಿಗಳನ್ನು ಬಿಟ್ಟು ಓದಬೇಕು | |
| 230 | 3 | ಮಕರಂದನ | ಮಕರಂದರ |
| 230 | 11 | ಕಂಠಿಯಾದ | ಕಂಠೆಯಾದ |
| 231 | 8 | ಮೊದಲಾದವರು | ಮೊದಲಾದವರೂ |
| 234 | 30 | ಮಾಧವನುಗೆಳೆಯು! ಉದ್ಯಾನ | ಮಾಧವನು ಉದ್ಯಾನ |
| 235 | 4 | ಹಾಯ್ ! ಗೆಳೆಯ ! | ಇದನ್ನು ಬಿಟ್ಟು ಓದತಕ್ಕದ್ದು |
| 235 | 22 | ಪುಳುಕಿತ | ಪುಲಕಿತ |
| 237 | 18 | ಇಲ್ಲವೆಂತ | ಇಲ್ಲವೆಂದು |
| 238 | 12 | ಮಾಲತಿಸಮೇತನಾಗಿ | ಮಾಲತೀಸಮೇತನಾಗಿ |
| 240 | 19 | ಸ್ತ್ರಿಯೋಚಿತ | ಸ್ತ್ರೀಯುಚಿತ |
| 240 | 24 | ಭೂರಿವಸುವು | ಭೂರಿವಸುವೂ |
| 243 | 22 | ವರ್ಣನವು | ವರ್ಣನೆಯು |
| 244 | 5 | ಕಾಮಂದಕಿ | ಕಾಮಂದಕೀ |
| 246 | 9 | ಸೌಂದರ್ಯೋನ್ಮದಾವಸ್ಥೆ | ಸೌಂದರ್ಯೋನ್ಮಾದಾವಸ್ಥೆ. |
| 246 | 16–18 | ಜನಕನು........ ನೋಡಬೇಕೆಂದಿದ್ದ ಸೀತೆಯ | ಇದನ್ನು ಬಿಟ್ಟು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು:—ಸೀತೆಯು ಗರ್ಭಿಣಿಯಾಗಿದ್ದ ಕಾರಣ ಅವಳನ್ನು ಮನೆಯಲ್ಲಿಯೇ ಬಿಡಬೇಕಾಯಿತು. ರಾಮನು ಅವಳಸಲುವಾಗಿಯೇ ಯಾಗಕ್ಕೆ ಹೋಗಲಾಗಲಿಲ್ಲ. ಹೀಗೆ ಏಕಾಕಿನಿಯಾದ ಸೀತೆಯ |

| ಪುಟ. | ಪಂಙ್ತ್ತಿ. | ಅಶುದ್ಧ, | ಶುದ್ಧ |
|---|---|---|---|
| 253 | 16 | ಯಂ ಬ್ರಹ್ಮಾಣಮಿಯಂ ದೇವೀ ವಾಗ್ವಶ್ಯೈವಾ.... | ಯಂ ಬ್ರಾಹ್ಮಣಮಿಯಂ ದೇವೀವಾಗ್ವಶ್ಯೇವಾ |
| 254 | 2 | ದೇವಸ್ತೋತ್ರ | ದೇವತಾಸ್ತೋತ್ರ |
| 254 | 8 | ನಾಯಕ ನಾಯುಕಿ | ನಾಯಕ ನಾಯುಕೆ |
| 263 | 29 | ಅಧ್ವರ್ಯ | ಅಧ್ವರ್ಯು |
| 264 | 21 | ಭುಜಪಂಜರಸ್ತ | ಭುಜಪಂಜರಸ್ಯ |
| 268 | 1 | ಮುರಾನಂದನಿಗೆ | ಮುರಾನಂದನನಿಗೆ |
| 268 | 24 | ....ಸ್ತತಃ \| | ....ತತಃ \| |
| 269 | 13 | ಪಾತ್ರಗಳಲ್ಲಿ ಮುಖ್ಯವಾದ | ಈ ಪದಗಳನ್ನು ಬಿಟ್ಟು ಓದತಕ್ಕದ್ದು |
| 276 | 5 | ....ದ್ಧಿಕ್ತಬ್ದ | ದಿಕ್ಛಬ್ದ |
| 276 | 6 | ....ದೃಷ್ಠ | ದೃಷ್ಟ |
| 281 | 7 | ....ಸವೇ \| | ....ಸಮೇ |
| 289 | 4 | ತಾವದ್ವಾಬಾರವೇ | ತಾವದ್ವಾಭಾರವೇ |
| 294 | 19–20 | ....ಭೇರೀ ನಿನಾದದಿಂದ ಪುಲಕಿತವಾಗದಿದ್ದರೂ | ....ಭೇರೀ ನಿನಾದದಿಂದಲೇ ಪುಲಕಿತವಾಗಿದ್ದರೂ |
| 298 | foot note | ....ಪರಿಚಯಾವಿಷ್ಟನಾದ | ಪರಿಚಯಾವಿಶಿಷ್ಟನಾದ. |
| 303 | 28 | ಸೌಕುಮಾರ್ಯಃ | ಸುಕುಮಾರಭಾವಃ |
| 305 | 18 | ಸಹಸೇ ವಿಪರೀತಃ \| | ಸಹಸೇ \| ವಿಪರೀತಃ |
| 312 | 24 | ....ಸಪ್ತಮೋಸಿಕ | ....ಸಪ್ತಮೋಂಽಕ |
| 313 | 21 | ಕೊಂಚ.... | ಸ್ವಲ್ಪ.... |
| 314 | 8–9 | ಹೇಮಮೃಗವು ಸಿಕ್ಕದೆ | ಹೇಮಮೃಗವನ್ನುಕೊಂದು |
| 317 | 3 | ಪುರಾಣಮಿತ್ಯೇ ನ.... | ಪುರಾಣಮಿತ್ಯೇವ ನ.... |
| 318 | 10 | ಭರತನು | ಭರತನೂ |
| 320 | 21 | ಶ್ಲೋಕಗಳೆರಡನ್ನು | ಶ್ಲೋಕ ಒಂದನ್ನು |

